ಶಿವಗಣಸಮೂಹವು ಭಕ್ತರನ್ನು ಸಂರಕ್ಷಿಸಲಿ

ಓಂ

# ತ್ರಿಷಷ್ಠಿ ಪುರಾತನ ವಿಲಾಸವೆಂಬ ನೂತನ ಗದ್ಯಾತ್ಮಕವಾದ ಅರುವತ್ತುಮೂವರು ಪುರಾತನರ ಗ್ರಂಥವು.

**ಶರಣೆ ಕಮಲಾಯಿಯ ಆಖ್ಯಾಯಿಕೆಯು ಇಲ್ಲಿ ಅಡಕವಾಗಿದೆ.**

ಲೇಖಕ

**ಮಹಾರುದ್ರಪ್ಪ, ಮಹಾಲಿಂಗಪ್ಪ, ಮಿರ್ಜಿ.**

ಹುಬ್ಬಳ್ಳಿ.

ಪ್ರಕಾಶಕರು

**ಗುರುಸಿದ್ಧಪ್ಪ, ಮಹಾಲಿಂಗಪ್ಪ, ಮಿರ್ಜಿ.** ಬಿ ಎ ಎಲ್ ಎಲ್. ಬಿ

ಅಡ್ವೋಕೇಟ್ ಹುಬ್ಬಳ್ಳಿ

ಮೊದಲನೇ ಮುದ್ರಣ ೧೦೦೦ ಪ್ರತಿಗಳು

ಬೆಂಗಳೂರು ಯೂನಿವರ್ಸಲ್ ಪವರ್ ಪ್ರೆಸ್ಸಿನಲ್ಲಿ ಅಚ್ಚಾದುದು

ಸನ್ ೧೯೩೧ ಇಸ್ವಿ    ಬೆಲೆ ೨-೦-೦ ರೂ.    ಶಕ ೧೮೫೩

## The Late Shree Jagadguru Gangadhara Maha-Swami Moorsavirmath, Hubli.



ಅಪ್ರಾರ್ಥಿತರಾಗಿ ಯಾರು ಲೇಖಕನಿಗೆ ತಮ್ಮ ನೇತೃತ್ವದಲ್ಲಿ
(ಸೋಮವಾರ ವೈ. ಶು. ೧೦ ಶಕೆ ೧೮೪೦ ತಾ. ೨೦-೫-೧೯೧೮)
ದೀಕ್ಷೆಯನ್ನು ಕರುಣಿಸಿದರೋ ಆ ಲಿಂಗಕಾಯರಾದ ಶ್ರೀ
ಶೂನ್ಯ ಸಿಂಹಾಸನಾಧೀಶ ಶ್ರೀಮನ್ನಿರಂಜನ ಜಗದ್ಗುರು
ಮೂರುಸಾವಿರಮಠದ

**ಗಂಗಾಧರ ಮಹಾಸ್ವಾಮಿಗಳವರು, ಹುಬ್ಬಳ್ಳಿ.**

ಶ್ರೀ ಶೂನ್ಯ ಸಿಂಹಾಸನಾಧೀಶ ಶ್ರೀ ಮನ್ನಿರಂಜನ ಜಗದ್ಗುರು ಮೂರುಸಾವಿರಮಠದ

**ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು, ಹುಬ್ಬಳ್ಳಿ**



**Shree Jagadguru Gurushidha Rajayogendra Maha Yateeshwar Moorusavirmath, Hubli.**

# ಅರ್ಪಣ ಪತ್ರಿಕೆ



ಭಗವತ್ಕಟಾಕ್ಷಕ್ಕೆ ಪಾತ್ರರಾದ
ಶಿವಭಕ್ತಿ ರಂಜಿತರಾದ ಅಂತೆಯೇ ಶಿವಜ್ಞಾನ-
ಪ್ರದೀಪ್ತರಾದ ಪ್ರಾಚೀನ, ಅರ್ವಾಚೀನ, ನೂತನ
ಶರಣಗಣಾವಳಿಗೆ, ಈಶಪ್ರೇರಣೆಯಾಗಿ
ಈ ಪುರಾತನರ ಗದ್ಯ ಗ್ರಂಥವನ್ನು
ಸವಿನಯವಾಗಿ ಅಭಿವಂದಿಸಿ
ಸಮರ್ಪಿಸಿದೆ.

ಶಿವಕಿಂಕರನಾದ

ಲೇಖಕನು

**ವಾಠಕಮಹಾಶಯರಲ್ಲಿ ವಿಜ್ಞಾಪ್ತಿಯೆಂಬ ಬಿನ್ನವತ್ತಳೆಯು.**

**ಬ**ರೆಹಗಾರನು ವ್ಯಾಕರಣ ಸೂತ್ರಗಳನ್ನು ಪಠಿಸಿದವನಲ್ಲ ; ಛಂದಸ್ಸನ್ನು ಕಲಿತವನಲ್ಲ ; ಭಾಷಾಭಿಜ್ಞನಲ್ಲ ; ಶಿವಾನುಭವವನ್ನರಿತವನಲ್ಲ ; ಲೋಕವ್ಯವಹಾರವನ್ನರಿತು ನುರಿತವನಲ್ಲ ; ಲೇಖನಕಲಾಕುಶಲನಲ್ಲ ; ಆದರೆ ತಾಯ್ನುಡಿಯ ಸೇವೆಯೊಡನೆ ಶಿವಕೈಂಕರ್ಯವು ನಡೆಯಬೇಕೆಂಬ ಕಾಂಕ್ಷೆಯುಳ್ಳವನು. ವರ್ಷದಲ್ಲಿ ಸರಾಸರಿ ೮ ತಿಂಗಳು ಪ್ರಬಂಧ ಬರೆಯಲನುವಾಗುವದಿಲ್ಲ ; ಉಳಿದ ೪ ತಿಂಗಳಲ್ಲಿ ಅಲ್ಪಸ್ವಲ್ಪ ಸವಡು ದೊರೆತಾಗ ಭಗವಂತನನ್ನು ನೆನೆದು ಸಾಧಿಸಿದಷ್ಟು ವೇಳೆಯಲ್ಲಿ ಶಿವಾಜ್ಞೆಯಿಂದ ಪ್ರಯತ್ನ ಮಾಡಿರುವ ಈ ಚಿಕ್ಕಕೃತಿಯನ್ನು ಗುಣಜ್ಞರು ಹಂಸಕ್ಷೀರನ್ಯಾಯದಿಂದ ಪರಾಮರಿಸಲಿ.

ಶಿವಸೇವಾನಿರತರಾದ ಭಕ್ತರತೊತ್ತು.

**ಮ. ಮ. ಮಿರ್ಜಿ.**

ಓಂ.

# ಉಪೋದ್ಘಾತವು.



**ಈ** ಗ್ರಂಥವನ್ನು ಬರೆಯಲುಪಕ್ರಮಿಸಿದುದು ಸನ್ ೧೯೨೭ ರಲ್ಲಿ; ಭಗವತ್ಕಟಾಕ್ಷದಿಂದ ೧೯೩೦ನೇ ಇಸ್ವಿ ನವಂಬರ ತಿಂಗಳಲ್ಲಿ ಮುಗಿಯಿತು. ತರುವಾಯ ಡಿಶೆಂಬರ ಕೊನೆಯ ವಾರದಲ್ಲಿ ಬೆಂಗಳೂರ ಪವರ ಪ್ರೆಸ್ಸಿಗೆ ಅಚ್ಚಿಗೆ ಕೊಟ್ಟ ಬಳಿಕ ೧೯೩೧ನೆಯ ಮಾರ್ಚ ತಿಂಗಳಲ್ಲಿ ಶ್ರೀಯುತ ಎಸ್. ಸಿ. ಚನ್ನವೀರಪ್ಪನವರಿಂದ ವಚನರೂಪವಾಗಿ ರಚಿಸಲ್ಪಟ್ಟು ಮದ್ರಾಸ ಗುರುಬಸವೆ ಆ್ಯಂಡ ಕಂಪನಿಯವರಿಂದ ಮುದ್ರಿಸಲ್ಪಟ್ಟ ಅರುವತ್ತು ಮೂರು ಪುರಾತನರ ಚರಿತ್ರೆ ಎಂಬುವ ಪುರಾತನ ಭಕ್ತವಿಲಾಸ ಪ್ರತಿಯು ನನಗೆ ದೃಷ್ಟಿಗೆ ಬಿತ್ತು. ಇವರು ಅಗಸ್ತ್ಯಋಷಿಗಳಿಂದ ರಚಿತವಾದ ಅಗಸ್ತ್ಯಭಕ್ತವಿಲಾಸ ಹಾಗೂ ಉಪಮನ್ಯು ಮುನಿಗಳಿಂದ ಪ್ರಣೀತವಾದ ಉಪಮನ್ಯು ಭಕ್ತವಿಲಾಸ ಮತ್ತು ತಮಿಳಿನಲ್ಲಿ ಶಕ್ಕಿಳಾರನಾಯನಾರ ಇವರಿಂದ ರಚಿತವಾದ ಪೆರಿಯಪುರಾಣ ಎಂಬ ಮೂರು ಗ್ರಂಥಗಳ ಆಧಾರದಿಂದ ಬರೆದಿರುವದಾಗಿ ಸೂಚಿಸಿರುವರು.

**ಪ್ರ**ಸ್ತುತ ಲೇಖಕನು ಸುರಂಗಮಹಾಕವಿಗಳನ್ನೇ ಆಧಾರವಾಗಿಟ್ಟುಕೊಂಡು, ಶಿವಕವಿ ಬೊಮ್ಮರಸನನ್ನು ಉಪೇಕ್ಷಿಸದೆ (ನಿಗಮಾಗಮೋಪನಿಷದ್ವಿಶಾರದರಾದ ಸಕಲ ವಿದ್ವಜ್ಜನರಿಂದ ಕೊಂಡಾಡಲ್ಪಟ್ಟ) ನಿಜಗುಣಶಿವಯೋಗಿಗಳ ಸೂತ್ರರೂಪವಾದ ೬೩ ಪುರಾತನರ ಸ್ತುತಿಪರವಾದ ಪದ್ಯಗಳನ್ನು ಮನನ ಮಾಡಿ ಸದ್ಯದ ಪ್ರಬಂಧವನ್ನು ಕೈಕೊಂಡಿರುವನು. ನಿಜಗುಣರು ವಿವರಿಸುವ ಪುರಾತನರ ಹೆಸರುಗಳು ಸುರಂಗಕವಿಗಳು ವಿವೇಚನೆ ಮಾಡಿದ ನಾಮಗಳಿಗೆ ಭಿನ್ನವಾಗಿರುವದಿಲ್ಲ ; ಆದರೆ ಮೇಲ್ಕಾಣಿಸಿದ ಮಾನ್ಯರಾದ ಚನ್ನವೀರಪ್ಪನವರಿಂದ ಬರೆದ ಪುರಾತನರ ಅಭಿಧಾನಗಳು. ಅವರು ಹುಟ್ಟಿದ ಹಾಗೂ ಅಭಿವೃದ್ಧಿಯಾದ ಸ್ಥಳಗಳು, ಅವರವರ ವಿಶೇಷಸಂಗತಿಗಳು ಇವೆಲ್ಲ ವಿಷಯಗಳು ಎಷ್ಟೋ ಸಂದರ್ಭದಲ್ಲಿ ಹೊಂದಿಕೆಯಾಗಿರದೆ ಭಿನ್ನತೆಯು ಕಾಣಬರುವದು.

**ಪೆ**ರಿಯಪುರಾಣವನ್ನು ಬರೆದ ಕಾಲವು ಸುಮಾರು ಕ್ರಿ. ಶಕ ೧೧೦೦ ಇರುವದರಿಂದ ಸುರಂಗಕವಿಗಳಿಗಿಂತ ಸುಮಾರು ೪೦೦ ವರ್ಷಗಳ ಪೂರ್ವದಲ್ಲಿ ಬರೆದ ಗ್ರಂಥವಾದುದರಿಂದ ಮುಂಚಿತವಾಗಿ ಬರೆದ ಕಾವ್ಯವೇ ವಿಶ್ವಸನೀಯವೆಂದು ಭಾವಿಸಬೇಕೆಂದರೆ (ಪುರಾಣ ಮಿತ್ಯೇವ ನ ಸಾಧುಸರ್ವಂ. . . . .) ಎಂಬ ಮಹಾಕವಿ ಕಾಲಿದಾಸನ ಉಕ್ತಿಯು ನೆನಪಿಗೆ ಬರುವದು.

ಬಹು ಸಮರ್ಥನಾದ ಸುರಂಗ ಸೂರಿಯು ಪುರಾತನರ ವಿಶೇಷಸಂಗತಿಗಳನ್ನು ಲಕ್ಷಿಸದೆ, ಸಾಕಷ್ಟು ವಿಮರ್ಶೆಮಾಡದೆ ಬರೆದಿರುವನೆಂದು ಹೇಳುವದು ನನ್ನಂತೆ ಇತರರಿಗೂ ಸಮಂಜಸವೆನಿಸದು ; ಇದಿರಲಿ ; ಜಗನ್ಮಾನ್ಯರಾದ ನಿಜಗುಣರ ಬಹು ಸ್ವಾರಸ್ಯವಾಗಿ ಅವರ ಸೂತ್ರರೂಪದಲ್ಲಿರುವ ಪದ್ಯದಲ್ಲಿ ಗರ್ಭಿತವಾದ ಸಂಗತಿಯು ಸುರಂಗಮಹಾಕವಿಗಳ ಲೇಖನಕ್ಕೆ ಸರ್ವತೋಪರಿಯಾಗಿ ತಿಲಮಾತ್ರವಾದರೂ ಬಿಡದೆ ಏಕರೂಪವಾಗಿರುವದು. ಸುಪ್ರಸಿದ್ಧರಾದ ನಿಜಗುಣಾರ್ಯರ ಪುರಾತನರ ಪದ್ಯದ ಭಾವಕ್ಕೂ ಪುರಾತನ ಭಕ್ತವಿಲಾಸದ ಭಾವಕ್ಕೂ ಅನೇಕ ಕಡೆ ವ್ಯತ್ಯಸ್ತವಾಗಿರುವದು. ನಿಜಗುಣಶಿವಯೋಗಿವರೇಣ್ಯರ ಪಕ್ಷಪಾತಿಯಂತೆ ಕಾಣಬಹುದಾದ ಈ ಲೇಖಕನು ಅವರಿಂದ ಪ್ರತಿಪಾದಿತವಾದ ಅರುವತ್ತುಮೂವರ ಹೆಸರು ಹಾಗೂ ವಿಷಯ ತಪ್ಪೆಂದು ಒಪ್ಪಲಿಕ್ಕೆ ಹಿಂಜರಿಯುತ್ತಾನೆ.

ಪುರಾತನ ಭಕ್ತವಿಲಾಸಕ್ಕೂ ಸುರಂಗಕವಿಗಳ ಚಂಪೂಗ್ರಂಥಕ್ಕೂ, ಇರುವ ಮುಖ್ಯವಾದ ವ್ಯತ್ಯಾಸಗಳಲ್ಲಿ ಕೆಲವು ಇಲ್ಲಿ ವಿವರಿಸುವದು ಅಪ್ರಸ್ತುತವಾಗಲಾರದು. —

(೧) ಪುರಾತನ ಭಕ್ತವಿಲಾಸ ಪ್ರಕಾರ ರುದ್ರಪಶುಪತಿ ಭಕ್ತರಕಥೆ :— ಇವರು ರುದ್ರಸೂಕ್ತ ಜಪಿಸುತ್ತಿದ್ದುದರಿಂದ ರುದ್ರಪಶುಪತಿ ಹೆಸರು ಪ್ರಖ್ಯಾತವಾಯಿತೆಂದು ಮತ್ತು ಅವರು ತಾಮರಸ ತಟಾಕದಲ್ಲಿ ಕಂಠಗತ ಜಲದಲ್ಲಿ ನಿಂತುಕೊಂಡು ಶ್ರೀ ರುದ್ರಸೂಕ್ತವನ್ನು ಪಠಿಸುತ್ತಾ ಇದ್ದು ಕೆಲಕಾಲಕ್ಕೆ ಶಿವಾನುಗ್ರಹದಿಂದ ಶಿವಪದವನ್ನು ಪಡೆದರು. ನಿಜಗುಣರ ಪದ್ಯ ಹಾಗೂ ಸುರಂಗಕವಿಗಳ ವಿವೇಚನೆಯ ಪ್ರಕಾರ ರುದ್ರಪಶುಪತಿಯು ಚಂದ್ರಾಭರಣನು ಕಂಠದಲ್ಲಿ ವಿಷವನ್ನು ಇಟ್ಟುಕೊಂಡಿರುವದನ್ನು ಕೇಳಿದೊಡನೆ ಬಹಳನೊಂದು ತತ್ಪರಿಹಾರಾರ್ಥವಾಗಿ ರುದ್ರಜಪದಿಂದ ಶಂಕರನನ್ನು ಮೆಚ್ಚಿಸಿ ಗರಳವನ್ನು ಬಿಟ್ಟುಬಿಡಬೇಕೆಂದು ಆತನನ್ನು ಪ್ರಾರ್ಥಿಸಿದನು.

(೨) ಪುರಾತನ ಭಕ್ತವಿಲಾಸ ಪ್ರಕಾರ ಸುಂದರಭಕ್ತನು (**ಸೌಂದರನು**) ಪರವಿನಾಚಿ ಮತ್ತು ಸಂಕಿಲೆಯ (ಶೃಂಖಲೆ) ರೊಡನೆ ವಿಲಾಸಪಟ್ಟದ್ದಲ್ಲದೆ ಪಾಂಡ್ಯರಾಜನ ಪುತ್ರಿಯನ್ನು ವಿವಾಹಮಾಡಿಕೊಂಡನು. ಆದರೆ ಸುರಂಗಕವಿಗಳು ಪಾಂಡ್ಯರಾಜನ ಮಗಳನ್ನು ನಂಬೆಣ್ಣನು ಲಗ್ನವಾದ ಬಗ್ಗೆ ಎಳ್ಳಷ್ಟು ಕೊಟ್ಟಿರುವದಿಲ್ಲ ; ಇಲ್ಲಿ ಸೂಕ್ಷ್ಮವಾಗಿ ವಿಚಾರಮಾಡಬೇಕಾದ ಸಂಗತಿಯೆಂದರೆ ಪುರಾತನ ಭಕ್ತವಿಲಾಸ ಮತ್ತು ಸುರಂಗಕವಿಗಳ ವಿವೇಚನೆಯಂತೆ ಪರಶಿವನ ಸೇವೆಗಾಗಿ ಪುಷ್ಪಗಳನ್ನು ತರಲಿಕ್ಕೆ ನಿಯಮಿಸಲ್ಪಟ್ಟ ಸೌಂದರನು ಹಾಗೂ ರುದ್ರಕನ್ಯೆಯರೀರ್ವರು ಹೂವುಗಳನ್ನು ಎತ್ತಲಿಕ್ಕೆ ಹೋದಾಗ ಆ ಮೂವರು

ಒಬ್ಬರೊನ್ನಬ್ಬರು ನೋಡಿ ಮನಸೋತದ್ದರಿಂದ ಪರಮಾತ್ಮನು ಆ ಇಬ್ಬರು ಸಖಿಯರೊಡನೆ ಭೂಲೋಕದಲ್ಲಿ ರಮಿಸುವಂತೆ ಸೌಂದರನಿಗೆ ಆಜ್ಞಾಪಿಸಿದನು, ಸಂದರ್ಭವು ಹೀಗಿರುತ್ತಿರಲು ಪಾಂಡ್ಯರಾಜನು ತನ್ನ ಪುತ್ರಿಯನ್ನು ಸುಂದರನಿಗೆ ಕೊಟ್ಟು ವಿವಾಹ ಮಾಡಿದ ಸಂಗತಿಯು ನಂಬಲಿಕ್ಕೆ ಅರ್ಹವಾಗುವದೋ ?

(೩) ಪುರಾತನ ಭಕ್ತವಿಲಾಸ ಪ್ರಕಾರ ಮಾನವಿಕ್ರಮ ಭಕ್ತರು (ಮಾನಕಂಜರರು) ತಮ್ಮ ಮಗಳನ್ನು ಕಲಿಕಾಮರಿಗೆ ಕೊಟ್ಟು ವಿವಾಹ ಮಾಡಿದರು ; ಆದರೆ ಸುರಂಗಕವಿಗಳು ಪಗಲ್ಕ್ಯೋಳನಿಗೆ ಕೊಟ್ಟಿರುವದಾಗಿ ತಿಳಿಸಿರುವರು.

(೪) ಪುರಾತನ ಭಕ್ತವಿಲಾಸ ಪ್ರಕಾರ ಜ್ಞಾನಸಂಬಂಧಭಕ್ತರು (ಪಿಳ್ಳೆನಾಯನಾರು) ೧೬ ವರ್ಷ ಪ್ರಾಯದಲ್ಲಿ ವಿವಾಹವನ್ನು ಮಾಡಿಕೊಂಡ ವಿಷಯವನ್ನು ಬರೆದಿರುವರು ಆದರೆ ಸುರಂಗಕವಿಗಳು ವರ್ಣಿಸಿರುವ ವಿಧಾನವು ಬೇರೆ ಇರುವದು :—ಮಹಾದೇವನು ಗುಹನಿಗೆ ಪಾಂಡ್ಯರಾಜನ ಸೀಮೆಯಲ್ಲಿ ಜೈನರ ಪ್ರಾಬಲ್ಯವನ್ನು ತಡೆಯುವದಕ್ಕಾಗಿ ಅವತರಿಸಲಿಕ್ಕೆ ಅಪ್ಪಣೆ ಮಾಡಿದನು. ಆಗ ಷಣ್ಮುಖನು ನಿನ್ನ ಸನ್ನಿಧಿಯನ್ನು ಬಿಟ್ಟಿರಲಾರನೆಂದು ನಿವೇದಿಸಲು ಏಳು ವರ್ಷಕ್ಕೆ ನಿನ್ನನ್ನು ಕರಿಸಿಕೊಳ್ಳುವೆನೆಂದು ವಚನವಿತ್ತು ಶಂಕರನು ತನ್ನ ವತ್ಸನನ್ನು ಭೂಮಿಗೆ ಕಳಿಸಿದನು ಶಿವಾಜ್ಞೆಯ ಮೇರೆಗೆ ಅವತರಿಸಿದ ಜ್ಞಾನಸಂಬಂಧಾಚಾರ್ಯನು ಏಳು ವರ್ಷ ತುಂಬುತ್ತಲೆ ಶಿವಕಾರುಣ್ಯದಿಂದ ಶರ್ವನನ್ನು ಹೊಂದಿದನು.

ಪುರಾತನರು ಜನ್ಮವೆತ್ತಿದ ಸ್ಥಳಗಳನ್ನು ವಿಚಾರಿಸಿ ವಿಶೇಷ ಸಂಗತಿಗಳನ್ನು ಅರಿತುಕೊಳ್ಳಬೇಕೆಂದರೆ ಅದರಲ್ಲಿಯೂ ಕೆಲವೆಡೆಯಲ್ಲಿ ವ್ಯತ್ಯಾಸವು ಕಂಡು ಬರುವದು. ಪುರಾತನಭಕ್ತವಿಲಾಸ ಪ್ರಕಾರ ಹಾಗೂ ಸುರಂಗಕವಿಗಳು ವರ್ಣಿಸಿರುವ ಪ್ರಕಾರ ತಿರುನಾವಲೂರು (ಪಾಠಾಂತರ ತಿರುವಾವಲೂರು) ಸೌಂದರನು ಅವತರಿಸಿ ಅಲ್ಲಿಯ ವಲ್ಮೀಕಿನಾಥನಿಂದ ಊರ್ಜಿತನಾದುದು ; ಆದರೆ ಉತ್ತರ ಕರ್ನಾಟಕದಲ್ಲಿರುವ ಹುಬ್ಬಳ್ಳಿಯ ಹತ್ತಿರ ಇರುವ ಮಂಟೂರ ಗ್ರಾಮದಲ್ಲಿ ವಲ್ಮೀಕಿನಾಥ ಶಿವಾಲಯವು ಪ್ರಕಾಶಿಸುವದು ; ಇಲ್ಲಿಯೇ ಸೌಂದರನಿಗೆ ಪರಮಾತ್ಮನು ಅನುಗ್ರಹಿಸುತ್ತಿದ್ದನೆಂದು ಅಲ್ಲಿಯ ನಿವಾಸಿಗಳ ಪ್ರಬಲವಾದ ನಂಬಿಕೆಯುಂಟು.

ವಾಚಕ ವೃಂದಕ್ಕೆ ವಿಜ್ಞಾಪಿಸಬೇಕಾದ ಇತರ ಸಂಗತಿಗಳನ್ನು ಪೀಠಿಕೆ, ಬಿನ್ನವತ್ತಳೆ, ಮುನ್ನುಡಿಯಲ್ಲಿ ನಿವೇದಿಸಿರುತ್ತದೆ. ಪಾಠಕರು ಅತ್ತ ಗಮನಿಸಲಿ.

ಶಿವಭಕ್ತರ ಅಡಿಯಾಳು.

**ಮ. ಮ. ಮಿರ್ಜಿ.**

ಓಂ.

# ಪೀಠಿಕೆ.

---

**ಕ**ರ್ನಾಟಕ ಕವಿಚಕ್ರವರ್ತಿಯೆಂಬ ಬಿರುದಾಂಕಿತರಾದ ತ್ರಿಷಷ್ಠಿ ಪುರಾತನ ವಿಲಾಸವೆಂಬ ಚಂಪೂಪ್ರಬಂಧಕಾರರಾದ ಸುರಂಗಮಹಾಕವಿಗಳೆತ್ತ ಅಜ್ಞನಾದ ಪ್ರಸ್ತುತ ಬರೆಹಗಾರನೆತ್ತ ಭೂಮ್ಯಾಕಾಶದಷ್ಟು ಅಂತರವೆಂದರೂ ಸಲ್ಲುವದು. ಹರಚರಣಧ್ಯಾನವೆಂಬ ಬಲವತ್ತರವಾದ ನಿಚ್ಚಣಿಕೆಯ ಬಲದಿಂದ ಶಿವಭಕ್ತಿಧುರೀಣರಾದ ಆ ಪುರಾತನರ ಉಪಾಸನೆಯನ್ನು ಮಾಡಿ ಯತ್ನಿಸಿದ ಈ ಪುಟ್ಟಕೃತಿಯು ಶಿವಾನುಭವಿಗಳ, ಪ್ರೌಢರ ಸ್ನೇಹವನ್ನು ಹೊಂದಿ ಆ ಶಿವಾನುರಾಗಿಗಳ ಶುಭಾಶೀರ್ವಾದವನ್ನು ಹೊಂದಲಿ; ವಿದ್ವನ್ಮಣಿಗಳ ನೆರೆಯನ್ನು ಸಂಪಾದಿಸಿ ತನ್ನ ದೋಷವನ್ನು ಕ್ರಮವಾಗಿ ಕಳೆದು ಶಿವೋಪಾಸಕರ ಆದರವನ್ನು ಪಡೆಯಲಿ; ಇವೆಲ್ಲವೂ ಆ ದಯಾ ಘನಮೂರ್ತಿಯಾದ ಪರಮಾತ್ಮನ ಕಟಾಕ್ಷದಿಂದ ಲಭಿಸಲೆಂಬುದೇ ಈ ಅಲ್ಪನ ಹಂಬಲವು.

**ಲ**ಲಿತವಾದ ನುಡಿ ಅಂದರೆ ಪದಲಾಲಿತ್ಯ, ಬಂಧುರವಾದ ಶೈಲಿ, ಭಾಷಾಸೌಷ್ಠವ, ಗಾಂಭೀರ್ಯಯುಕ್ತವಾದ ಲೇಖನ ಸರಣಿ, ಪ್ರತಿಭಾಯುಕ್ತವಾದ ಬರವಣಿಗೆ ಈಪರಿಯಾದ ರಸವತ್ತಾದ ಬರೆಹ, ವಿಷಯ ವಿವೇಚನಾಪ್ರೌಢಿಮೆ ಮೊದಲಾದ ಮೇಲೆನಿಸುವ ಅಂಗಗಳಾವೂ ಪ್ರಸ್ತುತಕೃತಿಯಲ್ಲಿ ದೊರೆಯಲಾರವು. ಕನ್ನಡಿಯಂತಹ ಕನ್ನಡಭಾಷಾಸೇವೆಯು ಸ್ವಲ್ಪಾದರೂ ಆಗಲೆಂಬ ಹವಣಿಕೆಯು ಬಹಳ ದಿವಸಗಳಿಂದಿತ್ತು. ಅಜರಾಮರ ಕೀರ್ತಿಯನ್ನು ಸಂಪಾದಿಸಿದ ಷಡಕ್ಷರಕವಿಯ ಪ್ರತಿಜ್ಞೆಯು ಶಿವನನ್ನು ಹಾಗೂ ಆತನ ಭಕ್ತರನ್ನು ಮಾತ್ರ ಸ್ತುತಿಸುವದು; ಅದರಂತೆಯೇ ನಮ್ಮ ಸುಪ್ರಸಿದ್ಧ ಸುರಂಗಕವಿಯಾದರೂ ಗಿರೀಶನಿಗೆ ತಾನು ತನ್ನ ನಾಲಗೆಯನ್ನು ಮಾರಿಕೊಂಡ ಹಾಗೆ ಸಾರಿರುವನು. ನನ್ನ ಕೈಲಾಗದಿದ್ದರೂ ಸಂಕೋಚಪಡದೆ ಆ ಶಿವಕವಿಗಳ ಮೇಲ್ಪಜ್ತಿಯನ್ನೇ ತೀಡಬೇಕೆಂಬುದು ನನ್ನ ಕುತೂಹಲವು.

**ಈ**ಗ ಇಲ್ಲಿಯ ಶ್ರೀ............ಮೂರು ಸಾವಿರ ಮಠದಲ್ಲಿ ಶೋಭಿಸುವ ಶಿವಯೋಗಿಗಳ ಪ್ರಥಮ ಶೂನ್ಯ ಸಿಂಹಾಸನಾರೋಹಣ ಸಮಯದಲ್ಲಿ ಪುರನಿವಾಸಿ

ಗಳ ವತಿಯಿಂದ ಸಮರ್ಪಿಸಿದ ವಿಜ್ಞಾಪನಾಪತ್ರಿಕೆಯು ಈಶಪ್ರೇರಣೆಯಿಂದ ಬರೆದ ಮೊದಲಿನ ಬರೆಹವು. ಬಳಿಕ ಶರಣೆ ಕಮಲಾಯಿಯ ಆಖ್ಯಾಯಿಕೆಯನ್ನು ಬರೆಯುವ ಬಯಕೆಯೂಯಿತು. ಇದನ್ನು ನಾನು ಬರೆದ ಪ್ರತಿಯನ್ನು ನನ್ನ ಅನುಜರಾದ ಶ್ರೀಯುತ ಗುರುಸಿದ್ಧಪ್ಪ, ಮಹಾಲಿಂಗಪ್ಪ, ಮಿರ್ಜಿ, ಬಿ.ಎ., ಎಲ್‌ಎಲ್.ಬಿ., ಅಡ್ವೋಕೇಟ ಇವರು ನೋಡಿ ಪುನಃ ಇದರಂತೆಯೇ ಪ್ರಬಂಧಗಳನ್ನು ಬರೆಯಬೇಕೆಂದು ಪ್ರೋತ್ಸಾಹಿಸಿದರು. ಕೆಲವು ಪೂಜ್ಯರು ಕಮಲಾಯಿಯ ನಿಬಂಧವನ್ನು ನೋಡಿ ಯತ್ಕಿಂಚಿತ್ ತೃಪ್ತಿಯಾದ ಭಾವವನ್ನು ತಳೆದರು. ಕೆಲವು ತಿಂಗಳಾದ ಮೇಲೆ ಕಲಿಗಣನಾಥನ ವಿಷಯವನ್ನು ಬರೆಯಬೇಕೆಂಬ ಅಪೇಕ್ಷೆಯಾಯಿತು. ಬರಬರುತ್ತ ಅಂತರಾತ್ಮನು ೬೩ ಪುರಾತನರ ಸೇವೆಯನ್ನು ಮಾಡಬೇಕೆಂದು ಆಜ್ಞಾಪಿಸಿದನು. ಆಗ "ಯತ್ನೆ ಕೃತೆ ಯದಿ ನ ಸಿಧ್ಯತಿ ಕೋsತ್ರದೋಷಃ" ಎಂಬ ಸುಭಾಷಿತವು ನೆನಪಾಗಿ ನಂದಿವಾಹನನ ಅಪ್ಪಣೆಗೆ ಒಪ್ಪುವ ಭಾಗ ಬಿದ್ದಿತು. ಈ ಕೃತಿಯಲ್ಲಿ ಅನುಕೂಲವಾದಂತೆ ಚಿಕ್ಕವರು ತಿಳಿದುಕೊಳ್ಳಬೇಕಾದ ಕೆಲಕೆಲವು ಸಂಗತಿಗಳನ್ನು ಅಲ್ಲಲ್ಲಿ ಜೋಡಿಸಿರುತ್ತದೆ. ಇನ್ನುಳಿದ ವಿಷಯಗಳು ಗ್ರಂಥವನ್ನು ಸಾದ್ಯಂತವಾಗಿ ಓದಿದ ಹಾಗೆಲ್ಲ ಗೊತ್ತಾಗುವವು.

**ಪು**ರಾತನರ ಚರಿತ್ರೆಯು ಲಿಂಗ ಪುರಾಣದಲ್ಲಿ ಬಂದಿರುವದಾಗಿ ಲಿಂಗದೊಳಗಾದ ದಾನಪ್ಪಶಾಸ್ತ್ರಿಗಳು ತಾವು ಪ್ರಸಿದ್ಧಿಸಿದ ಗ್ರಂಥದ ಪೀಠಿಕೆಯಲ್ಲಿ ಕಾಣಿಸಿರುವರು. ಉಪಮನ್ಯು ಮುನಿಯು ಕಣಾದ ಋಷಿಗೆ ಪುರಾತನರ ಸಂಗತಿಯನ್ನು ಹೇಳಿರುವದಾಗಿ ಸುರಂಗಕವಿಗಳು ತಿಳಿಸಿರುವರು. ಸುರಂಗಕವಿಗಳು ಸುಮಾರು ೧೫೦೦ರಲ್ಲಿ ಇದ್ದರೆಂದು ಕರ್ನಾಟ ಕವಿಚರಿತೆಕಾರರು ಬರೆದಿರುವರು.

**ಪು**ರಾತನರ ಕಾಲವನ್ನು ನಿರ್ಧರಿಸುವದು ಸುಲಭವಾದುದಲ್ಲ ; ಇದರಲ್ಲಿ ಬಹಳ ಜನರು ಸುಮಾರು ೬—೭—೮ ನೇಯ ಶತಮಾನದಲ್ಲಿ ವಿರಾಜಿಸಿದರೆಂದು ತೋರುವದು. ಚೋಳ, ಚೇರ, ಪಾಂಡ್ಯಭೂಪತಿಗಳಲ್ಲಿ ಕೆಲವರು ಪುರಾತನರ ಮಾಲಿಕೆಯಲ್ಲಿ ಪ್ರಕಾಶಿಸುವರು.

**ಚೋ**ಳರಾಜರು ಕ್ರಿಸ್ತಶಕ ೨೦೦ ವರ್ಷ ಪೂರ್ವದಲ್ಲಿ ಸಹಾ ಇದ್ದಹಾಗೆಯೂ ಮತ್ತು ದಂತಿದುರ್ಗನ ಸುಮಾರು ೮ ನೇಯ ಶತಮಾನದ ಮಧ್ಯದಲ್ಲಿ ಹುಟ್ಟಿದ ಒಂದು ಶಾಸನದಲ್ಲಿ ಪಾಂಡ್ಯ ಚೋಳರಾಜರ ಉಲ್ಲೇಖವಿರುವ ಹಾಗೆಯೂ ಪಾಂಡ್ಯರಾಜನಾದ ಶಡ್ಯೈಯನ್ ಪರಾಂತಕನ ವೇಳ್ವಿಕುಡಿ ತಾಮ್ರಶಾಸನದ (ಕಾಲ ೭೭೦) ಪ್ರಸ್ತಾಪವನ್ನು ಕರ್ನಾಟಕ ಕವಿಚರಿತೆಕಾರರು ತಮ್ಮ ೩ನೇ ಸಂಪುಟದ ಕನ್ನಡ ಅವಕರಣಿಕೆಯಲ್ಲಿ ಕೊಟ್ಟಿರುವರು (ಪುಟ XXII).

**ಪ್ರಾ**ಚೀನ ಶಿಲಾಲಿಪಿ ಹಾಗೂ ತಾಮ್ರಶಾಸನ ಮುಂತಾದ ಪ್ರಾಕ್ತನ ವಿಷಯಗಳನ್ನು ಬೆಳಕಿಗೆ ತರುವ ಕಾರ್ಯದಲ್ಲಿ ಪ್ರಯತ್ನಿಸುತ್ತಿರುವ ಡಾಕ್ಟರ ನಂದೀ

ಮಠ M.A., Phd, (London). ಇವರು ನಮ್ಮ ಪುರಾತನರು ೬ನೇ ಶತಮಾನದಿಂದ ೮ ೯ ವರೆಗೆ ಇದ್ದರೆಂದು ಹಾಗೂ ಆ ಪುರಾತನರು ಐತಿಹಾಸಿಕ ಪುರುಷರಿದ್ದು ಅರ್ಕಿಯೊಲೊಜಿಕಲ್ ರಿಪೋರ್ಟುಗಳಲ್ಲಿ ಅವರ ಸಂಗತಿಗಳನ್ನು ಕಂಡಿರುವದಾಗಿಯೂ ಆ ಮೇರೆಗೆ ವಿಶ್ವಸನೀಯವಾದ ಆಧಾರಗಳಿರುವದಾಗಿಯೂ ಅಭಿಪ್ರಾಯಪಡುವರು.

ಶ್ರೀಮಾನ್ ರಾ. ನರಸಿಂಹಾಚಾರ್ಯರು (M.A., M.R.A.S.) ಶಿರಿಯಾಳನ ತಂದೆಯಾದ ಶಿರುತ್ತೊಂಡನಾಯಿನಾರ ಈತನು ನರಸಿಂಹವರ್ಮ ಎಂಬ ಪಲ್ಲವರಾಜನ ಸೇನಾನಿಯಾಗಿ ಸುಮಾರು ೬೪೦ ರಲ್ಲಿ ಚಾಲುಕ್ಯರ ರಾಜಧಾನಿಯಾದ ವಾತಾಪಿ ನಗರವನ್ನು ಸುಟ್ಟಂತೆ ತಿಳಿಯುತ್ತದೆ ಎಂಬದಾಗಿಯೂ, ಕೂನಪಾಂಡ್ಯ ಅಥವಾ ಸುಂದರಪಾಂಡ್ಯನ ಕಾಲವು ಸುಮಾರು ೭೮೦ ಎಂಬದಾಗಿಯೂ ಸುಂದರನಾಯಿನಾರ ಅಥವಾ ನಂಬಿಯಣ್ಣ ಎಂಬವರೂ ಚೇರಮರಾಜನೂ ಸಮಕಾಲದವರಾಗಿದ್ದು ಸುಮಾರು ೯೦೦ ರಲ್ಲಿ ಬಾಳಿದಂತೆ ಸೋಮದೇವ ಸೂರಿಯ "ಯಶಸ್ತಿಲಕ" ವೆಂಬ ಗ್ರಂಥದ ಕೊನೆಯ ಗದ್ಯದಿಂದ ವ್ಯಕ್ತವಾಗುವದಾಗಿ ಈ ಲೇಖಕನಿಗೆ ತಿಳಿಸಿರುವರು.

ಪುರಾತನರ ನನ್ನ ಲೇಖನಗಳಿಗೆ ಸ್ಥಳಕೊಟ್ಟ ಧರ್ಮಸಂಜೀವಿನಿ, ದೇವಭೂಜ, ನವಜೀವನ, ಸದ್ಬೋಧಚಂದ್ರಿಕೆ, ಜಯಕರ್ನಾಟಕ, ಮಾಲತೀಶವಿಜಯ ಪತ್ರಿಕೆಗಳ ಸಂಪಾದಕ ಮಹಾಶಯರಿಗೆ ನಾನು ಋಣಿಯಾಗಿರುವೆನು.

ಪಾಠಕ ಮಹಾಶಯರು ಮುನ್ನುಡಿಯನ್ನು ಹಾಗೂ ಬಿನ್ನವತ್ತಳೆಯನ್ನು ಅವಲೋಕಿಸಬೇಕೆಂದು ನನ್ನ ವಿನಂತಿಯು.

**ಮ: ಮ. ಮಿರ್ಜಿ.**

ಹುಬ್ಬಳ್ಳಿ.

# ಲೇಖಕನ ಮುನ್ನುಡಿ.

---

**ಶ**ರಣರ ಆಚಾರ-ವಿಚಾರ, ನಡೆ ನುಡಿ, ಆದರಣೀಯ ನೀತಿಮಾರ್ಗ, ಪ್ರಾಣಿಗಳಲ್ಲಿರುವ ನಿಷ್ಕಲಂಕವಾದ ಪ್ರೀತಿ, ಪರಿಶುದ್ಧವಾದ ಸದ್ವಾಸನೆ, ನಿಸರ್ಗವಾದ ಸರಳಸ್ವಭಾವ, ಕಾಯಕಕ್ಕನುಗುಣವಾದ ದೃಢಸಾಹಸ, ನಿಶ್ಚಲವಾದ ಚಿತ್ತ, ಅಖಂಡವಾದ ಧೈರ್ಯ, ಪ್ರಸಂಗಾವಧಾನ, ವಿನಯ-ಶಾಂತಿ-ಕ್ಷಮಾದಿ ಸದ್ಗುಣಗಳ ಮೇಲಿನ ಕಕ್ಕುಲತೆ, ಎಡರುಕವಿದರೂ ಅಂಜದಿರುವ ಛಲ, ಈಶ್ವರನಲ್ಲಿರುವ ಅವರ ಅಕುಟಿಲವಾದ, ಸಹಜವಾದ, ಅನುಪಮವಾದ, ಅನವರತವಾದ, ಅಭೇದ್ಯವಾದ, ಅತುಲವಾದ ಪ್ರೇಮವಿಲಾಸ, ಶಿವಯೋಗಸಂಭ್ರಮದ ನಿಜಾನಂದ, ಪ್ರಜ್ವಲಿತವಾದ ಶಿವಭಕ್ತಿ ಇವೆಲ್ಲವೂ ಜನಸಮುದಾಯದಲ್ಲಿ ಒಡಮೂಡಿ ಇಹಪರ ಸಾರ್ಥಕಮಾಡಿಕೊಳ್ಳಲನುವಾಗುವಂತೆ ಮಹನೀಯರ ಚರಿತ್ರವನ್ನು ಎಷ್ಟೋ ಕಾಲದಿಂದ ಬರೆದಿಡುವ ಪರಂಪರೆಯು ಆರ್ಯರಲ್ಲಿ ಹೊಸದಲ್ಲ. ಪ್ರಸ್ತುತ ಲೇಖಕನು ಅದೇ ಹೆಜ್ಜೆಯಲ್ಲಿಯೆ ಅಡಿಇಡಲು ವಾಚಕವೃಂದದ ಅಪ್ಪಣೆಯನ್ನು ಬೇಡಿಕೊಳ್ಳುತ್ತಾನೆ.

ಮಾನವರಿಗೆ ಮಾಯಾರೂಪವಾದ ಅಜ್ಞಾನವು ಮುಸುಕದಂತೆ ಸತ್ವಶಾಲಿಗಳ ಜೀವನ ಚರಿತ್ರವನ್ನವಲೋಕಿಸುವದು ಬಲವಾದ ಸಾಧನವಾದುದೆಂದು ಸಕಲರು ತಿಳಿದ ಮಾತೇ ಸರಿ.

ಸುಜನ ವಿಧೇಯ,

**ಲೇಖಕ.**

## — ಪ್ರಕಾಶಕರ ಮುನ್ನುಡಿ —

ಶಿವಶರಣರ ಮಹಿಮೆಯನ್ನು ತಿಳಿಸುವ ಪವಿತ್ರ ಚರಿತ್ರವುಳ್ಳ ಈ ಗದ್ಯ ಗ್ರಂಥವನ್ನು ಮೊದಲಿನಿಂದ ಕಡೆಯುವರಿಗೂ ಬರೆದವರು ಪ್ರಕಾಶಕರ ಪ್ರಿಯ ಅಣ್ಣಂದಿರೂ ಪರನಾರೀ ಸಹೋದರರೂ ಒಳ್ಳೇ ಶಿವಭಕ್ತರೂ ಮೇಲಾದ ಕನ್ನಡ ಭಾಷಾಭಿಮಾನಿಗಳೂ ಆಗಿರುವರೆಂದು ತಿಳಿಸಲಿಕ್ಕೆ ಆನಂದವೂ ಅಭಿಮಾನವೂ ಅನಿಸುತ್ತದೆ. ೬೩ ಪುರಾತನರ ಚರಿತ್ರೆಯನ್ನು ರಚಿಸುವದರಲ್ಲಿ ಗ್ರಂಥವನ್ನು ಬರೆಬರೆದಂತೆ ಓದಿನೋಡುವದರಾಚೆಗೆ ಹೆಚ್ಚಿನ ಕೆಲಸವೇನೂ ಪ್ರಕಾಶಕರದಿಲ್ಲವೆಂದು ಇಲ್ಲಿ ಹೇಳದೇ ಇರಲಾರೆನು. ಕೇವಲ ಶಿವಭಕ್ತಿ ಬಲದಿಂದಲೇ ಈ ಗ್ರಂಥವು ಭಾಷಾವಿಶೇಷ ಪ್ರೌಢಿಮೆಯಿಂದಲೂ ಶಿವಭಕ್ತಿಭಾಂಡಾರದಿಂದಲೂ ಶಿವಭಕ್ತರ ವಿಶಿಷ್ಟ ಆಚಾರ ವಿಚಾರಗಳಿಂದಲೂ ಸ್ವತಂತ್ರವಾಗಿಯೂ ಬಹು ಸುಂದರವಾಗಿಯೂ ಸ್ವಾರಸ್ಯವಾಗಿಯೂ ಮತ್ತು ಸಹಜವಾಗಿಯೂ ಬರೆದು ಮುಗಿಸಲ್ಪಟ್ಟಿದೆ. ಅಲ್ಲದೇ ಭಗವದ್ಭಕ್ತರಾದ ಯಾವ ಹಿಂದುವಿಗೂ ಇದು ನೀತಿಬೋಧಕವಾಗದೇ ಇರಲಾರದು. ಇಂಥ ಪ್ರೌಢಗ್ರಂಥಕ್ಕೆ ಪ್ರಕಾಶಕರೆಂಬ ಬಹುಮಾನವನ್ನು ಶಿವಭಕ್ತಿಯ ತಿರುಳನ್ನರಿಯದವನಿಗೆ ಕೊಟ್ಟಿದ್ದು ಕೇವಲ ಗ್ರಂಥಕರ್ತರ ಅನುಪಮ, ಬಂಧುಪ್ರೇಮವನ್ನು ತೋರಿಸುತ್ತದೆ. ಇದಕ್ಕಾಗಿ ಗ್ರಂಥಕರ್ತರಾದ ಪ್ರಿಯ ಅಣ್ಣಂದಿರಿಗೆ ಪ್ರಕಾಶಕರ ಸಹಸ್ರವಂದನೆಗಳು. ನಿರಂತರವೂ ಗ್ರಂಥಕರ್ತರ ಮಂಗಲಾಶೀರ್ವಾದವನ್ನೇ ಕೋರುವ—

**ಗುರುಸಿದ್ದಪ್ಪ ಮಹಾಲಿಂಗಪ್ಪ ಮಿರ್ಜಿ.**

ಶುಕ್ರವಾರ ಶ್ರಾವಣ ಶು॥ ೧॥ ಶಕೆ ೧೮೫೩, ಪ್ರಜೋತ್ಪತ್ತಿಸಂವತ್ಸರ

ತಾ॥೧೪-೮-೧೯೩೧.

ಹುಬ್ಬಳ್ಳಿ.

# ಅನುಕ್ರಮಣಿಕೆ.



## ಪುರಾತನರು

ಪುರಾತನರ ಈ ಕೃತಿಗೆ ವಿಮರ್ಶೆಯನ್ನಿತ್ತ ವಿದ್ವಸ್ಮಣಿಗಳಿಂದ ಲೇಖಕನು ಉಪಕೃತನಾಗಿರುವನು.

ಕಾ॥ ಶು॥ ೫ ಶಕೆ ೧೮೫೩, ವಿದ್ವಜ್ಜನ ವಿಧೇಯ,

ತಾ॥ ೧೮—೧೧—೧೯೩೧. **ಮ. ಮ. ಮಿರ್ಜಿ.**

---

# ಅಭಿಪ್ರಾಯಗಳು.

ಗ್ರಂಥ ಕರ್ತೃಗಳಾದ ಶ್ರೀಯುತ ಮಹಾರುದ್ರಪ್ಪ, ಮಹಾಲಿಂಗಪ್ಪ, ಮಿರ್ಜಿ ಇವರು ತಮ್ಮ ಅವ್ಯಾಜ ಪ್ರೇಮದಿಂದ ಅಭಿಪ್ರಾಯಕ್ಕಾಗಿ ನನಗೆ ಕಳುಹಿಸಿದ್ದ ತ್ರಿಷಷ್ಟಿ ಪುರಾತನರ ಗ್ರಂಥದ ವಿಷಯದಲ್ಲಿ ನನ್ನ ಬಗೆಗೆ ಹೊಳೆದ ಒಂದೆರಡು ಮಾತುಗಳನ್ನು ವಾಚಕರ ಮುಂದಿಟ್ಟಿರುವೆನು.

ಮಹಾತ್ಮರ ಚರಿತ್ರಗಳು ಪರಮಾತ್ಮ-ಸ್ವರೂಪದ ಆದರ್ಶಗಳು, ಅಂದರೆ—ಭವಿತ್ವವನ್ನು ನೀಗಿ ಶಿವತ್ವವನ್ನು ಪಡೆದವರೇ ಮಹಾತ್ಮರು; ಅವರು ಯಾವ ಮಾರ್ಗಾವಲಂಬನದಿಂದ ಪರಮಾತ್ಮ-ಸ್ವರೂಪವನ್ನು ಪಡೆದರೆಂಬುದನ್ನು ಅವರ ಚರಿತ್ರಗಳು ತೋರಿಸುವದರಿಂದ ಅವು ಮಾನವಕೋಟಿಯು ಪಡೆಯಲೆಳಿಸುವ ಪರಮಾತ್ಮ-ಸ್ವರೂಪದ ಆದರ್ಶಗಳಾಗಿರುವವು. ಅಂತಹ ಮಹಾತ್ಮರಲ್ಲಿ ಅಗ್ರಸ್ಥಾನವನ್ನು ಹೊಂದಿದವರೇ ಅರುವತ್ತುಮೂವರು ಪುರಾತನರೆಂಬ ಶಿವಶರಣರು. ಅವರಿಗಿರುವ ಪುರಾತನತ್ವವು ಕಾಲದಿಂದುಂಟಾದುದೆಂದು ಹೇಳಿದರೆ ಮುಗಿಯದು. ಅವರು ತಮ್ಮ ಶಿವಭಕ್ತಿಯೇ ಮೊದಲಾದ ಅಸಾಧಾರಣ ಗುಣಗಳಿಂದ ಜಗತ್ತಿಗೆ ಅತಿ ಪುರಾತನವಾದ ಪರಮಾತ್ಮನ ಸ್ವರೂಪವನ್ನು ಪಡೆದಿರುವದರಿಂದ ಅವರಲ್ಲಿ ಪುರಾತನತ್ವವು ಅಬಾಧಿತವಾಗಿರುವದೆಂದು ಹೇಳಬೇಕಾಗುವದು.

ಇಂತಹ ಶಿವಶರಣರ ಚರಿತ್ರವನ್ನು ಬರೆಯುವ ಪವಿತ್ರೋದ್ಯಮವನ್ನು ಗ್ರಂಥ ಕರ್ತೃಗಳು ಕೈಕೊಂಡುದು ಸರ್ವಸ್ತುತ್ಯವಾಗಿರುವದು. ಆತ್ಮವಿಕಾಸಕ್ಕೆ ಸಾಧನಭೂತವಾದ ಪುರಾತನರ ಆಚಾರ ವಿಚಾರಗಳು ವಾಚಕಜನತೆಯ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಅಚ್ಚಳಿಯದೆ ನಿಲ್ಲಲಿಕ್ಕೆ ಅನುಕೂಲವಾಗುವಂತೆ ಸುಲಭ ಶೈಲಿಯಲ್ಲಿ ಸರಳ ಶಬ್ದಗಳಿಂದ ಸರಸವಾಗಿ ಈ ಗ್ರಂಥವು ಬರೆಯಲ್ಪಟ್ಟಿರುವದು.

ಗ್ರಂಥ ಕರ್ತೃಗಳು ವರ್ತಕರಾಗಿರುವದರಿಂದ ಅವರು ತಮ್ಮ ವಿಜ್ಞಪ್ತಿಯ ಲೇಖನದಲ್ಲಿ ಸೂಚಿಸಿದಂತೆ ಅವರಿಗೆ ವಾಙ್ಮಯದ ಸೇವೆಗೆ ಸಮಯವು ಸಿಗದಿರುವದು ಸಹಜವು. ಹೀಗಿದ್ದರೂ, ಅವರಿಗೆ ಈ ತರದ ಗ್ರಂಥರಚನಾ ಶಕ್ತಿಯು ಹೇಗೆ ಉಂಟಾಯಿತೆಂಬ ವಿಷಯದಲ್ಲಿ ಪರನಾರೀ ಸಹೋದರರೂ ಒಳ್ಳೆಯ ಶಿವಭಕ್ತರೂ ಮೇಲಾದ ಕನ್ನಡ ಭಾಷಾಭಿಮಾನಿಗಳೂ ಆಗಿರುವ ಗ್ರಂಥ ಕರ್ತೃಗಳ ಕೇವಲ ಶಿವಭಕ್ತಿಯ ಬಲದಿಂದಲೇ ಅವರಿಗೆ ಈ ತರದ ಶಕ್ತಿಯುಂಟಾಗಿರುವದೆಂಬ ಈ ಗ್ರಂಥ ಪ್ರಕಾಶಕರ ಅಭಿಪ್ರಾಯದಲ್ಲಿಯೇ ನಾನೂ ಏಕೀಭವಿಸದಿರಲಾರೆನು.

ಶಿವನನ್ನು ಮತ್ತು ಶಿವಭಕ್ತರನ್ನು ಮಾತ್ರ ಸ್ತುತಿಸುವೆವೆಂಬ ಶಿವಕವಿಗಳ ದೃಢ ಪ್ರತಿಜ್ಞೆಯ ಮಾರ್ಗದಲ್ಲಿ ಹೆಜ್ಜೆ ಇಡಲು ಮುಂದುವರಿದಿರುವ ಈ ಗ್ರಂಥ ಕರ್ತೃಗಳು ಶಿವಕವಿಗಳಂತೆ ಕೀರ್ತಿಭಾಗಿಗಳಾಗುವದಲ್ಲದೆ, ಶಿವಕೃಪೆಯನ್ನು ಸಂಪಾದಿಸಿ ಚಿರುಸುಖಿಗಳಾಗದಿರಲಾರರೆಂದು ನಾನು ನಂಬಿರುವೆನು.

**ವಿದ್ವಾನ್ ವೈ. ನಾಗೇಶ ಶಾಸ್ತ್ರಿ,**

ತಾ॥ ೧೭—೧೦—೧೯೩೧. ಸರ್ವದರ್ಶನ ತೀರ್ಥ,

ಬಳ್ಳಾರಿ.

---

ಅರುವತ್ತುಮೂವರು ಪುರಾತನರ ಗ್ರಂಥವನ್ನು ಇಲ್ಲಿಯ ನನ್ನ ಸ್ವಮತ ಬಂಧುಗಳಾದ ಶಿವಕಥಾ - ಶಿವನುತಿ - ಶಿವಾರ್ಚನಾಪರರಾದ ಮ॥ ರಾ॥ ರಾ॥ ಮಹಾರುದ್ರಪ್ಪ ಮಿರ್ಜಿ ಇವರು ರಚಿಸಿ ಅದರ ಅಭಿಪ್ರಾಯಕ್ಕಾಗಿ ಅದರ ಪ್ರತಿಯೊಂದನ್ನು ನನಗೆ ಬಹುಮಾನಾರ್ಥವಾಗಿ ಕಳಿಸಿರುವರು. ಅದನ್ನು ನಾನು ಓದಿ ನೋಡಿದೆನು. ಗ್ರಂಥವು ಶಿವಭಕ್ತರಿಗೆ ಅತ್ಯಂತ ಉಪಯುಕ್ತವಾಗಿದೆ. ಭಾಷಾಶೈಲಿಯು ಸುಗಮವಾಗಿಯೂ ಸುಲಲಿತವಾಗಿಯೂ ಇದೆ. ಶಿವೋಪಾಸಕರಿಗೆ ಇದೊಂದು ಕೈಪಿಡಿಯಾಗಿರಬೇಕೆಂದು ನನ್ನ ಆಶೆ ಈಗಿನ ನಾಸ್ತಿಕ ವಾತಾವರಣದಲ್ಲಿ ಆಸ್ತಿಕ್ಯ ಬುದ್ಧಿಯನ್ನುಂಟು ಮಾಡುವದರಲ್ಲಿ ಈ ಗ್ರಂಥವು ಮೇಲಾದ ಸಾಧನವೆಂದರೆ ಅತಿಶಯೋಕ್ತಿಯೆನಿಸದು ಶಿವನ ಒಲುಮೆಯನ್ನು ತಮ್ಮ ಅಸಾಧಾರಣ ಶಿವಭಕ್ತಿಯಿಂದ ದೊರಕಿಸಿ ಶಿವನನ್ನು ತಮ್ಮ ಸಂಗಡಿಗನಾಗಿಯೂ ತಮ್ಮ ಇಷ್ಟಾಪೂರ್ತಿಯನ್ನು ಮಾಡಿಕೊಡುವ ಒಬ್ಬ ಮಹಾನುಭಾವನಾಗಿಯೂ ಮಾಡಿಕೊಂಡ ಅರುವತ್ತುಮೂವರು ಪುರಾತನರ ಚರಿತ್ರವಲ್ಲದೆ ಇನ್ನಾವ ಗ್ರಂಥವು ಇದಕ್ಕೆ ಪರಿಪೋಷಕವಾಗುವದು? ಅಂದವಾದ ಮುದ್ರಣವು ಗ್ರಂಥಕ್ಕೆ ಹೆಚ್ಚು ಶೋಭೆಯನ್ನುಂಟುಮಾಡಿದೆ. ಇದು ನನ್ನ

ಕೈಸೇರಿದಂದಿನಿಂದ ದಿನಾಲು ಒಬ್ಬ ಶರಣನ ಕಥೆಯನ್ನು ಓದಹತ್ತಿರುವೆನು. ಶಿವೋಪಾಸಕರಿಗೂ ಮುಖ್ಯವಾಗಿ ವೀರಶೈವರಿಗೂ ಈ ಗ್ರಂಥವು ಸಂಗ್ರಹಿಸಲು ಯೋಗ್ಯವಾಗಿದೆ ಮತ್ತು ನೈತಿಕ ಶಿಕ್ಷಣಕ್ಕೂ ಇದು ಬಹು ಅನುಕೂಲವಿರುವದು. ಕಲಿತ ವೀರಶೈವ ಸ್ತ್ರೀಯರಂತೂ ಈ ಗ್ರಂಥವನ್ನು ದಿನಾಲು ಪಾರಾಯಣ ಮಾಡ ತಕ್ಕದ್ದು. ಗ್ರಂಥಕರ್ತರು ಅರುವತ್ತು ಮೂವರು ಪುರಾತನರ ವಿಷಯವಾಗಿ ಬರೆದ ಇತರ ಗ್ರಂಥಗಳನ್ನು ಶೋಧಿಸಿ ಕಥಾಸಂವಿಧಾನಕ್ಕೆ ತಪ್ಪೆ ಬಾರದಂತೆ ಸಂದರ್ಭಾನುಸಾರವಾಗಿ ಪಾಠಾಂತರವನ್ನು ಕೊಟ್ಟು ಪುಸ್ತಕದ ಉಪಯುಕ್ತತೆ ಯನ್ನು ಹೆಚ್ಚಿಸಿರುವರು. ಇದಲ್ಲದೆ ಮತ್ತೊಂದು ವೈಶಿಷ್ಟ್ಯವು ಈ ಗ್ರಂಥದಲ್ಲಿ ಕಂಡು ಬರುವದೇನಂದರೆ—ಅಡಿಯಲ್ಲಿ ಕೆಲವು ಟಿಪ್ಪಣಿಗಳನ್ನು ಉದಾಹರಣೆ ಬಿಲ್ವ ಪತ್ರದ ಮೂಲ—ಗಯಾಕ್ಷೇತ್ರದ ಉತ್ಪತ್ತಿ ಮುಂತಾದವುಗಳನ್ನು ಕೊಟ್ಟು ತಮ್ಮ ಪುಸ್ತಕದ ಮಹತ್ವವನ್ನು ಬೆಳಿಸಿರುವರು ಪುಸ್ತಕದ ಬೆಲೆ ಎರಡು ರೂಪಾಯಿ ಇಟ್ಟದ್ದು ಯೋಗ್ಯವಿದ್ದರೂ, ಇಂಥ ಪುಸ್ತಕಗಳನ್ನು ಕೊಳ್ಳಲು ಓದಲು ರುಚಿಯಿಲ್ಲದ ವೀರಶೈವ ಸಮಾಜ ಬಾಂಧವರಲ್ಲಿ ಕೊಳ್ಳಲೆಂಬ ಅಭಿರುಚಿಯನ್ನುಂಟು ಮಾಡುವದಕ್ಕಾಗಿ ಗ್ರಂಥಕರ್ತರು ಇದರ ಬೆಲೆಯನ್ನು ಸ್ವಲ್ಪ ಕಡಿಮೆ ಮಾಡಬೇಕೆಂದು ನನ್ನ ನಮ್ರ ಸೂಚನೆ. ಗ್ರಂಥಕರ್ತರ ಈ ಪ್ರಥಮ ಪ್ರಯತ್ನಕ್ಕೆ ಸರ್ವರೂ ಉದಾರಾಶ್ರಯ ಕೊಡಬೇಕೆಂದು ನನ್ನ ಆಗ್ರಹ. ಗ್ರಂಥಕರ್ತರು ವ್ಯಾಪಾರಿಗಳಾಗಿ ಅದರಲ್ಲಿ ವಿರಾಮವನ್ನು ದೊರಕಿಸಿ ಈ ಅಪೂರ್ವ ಗ್ರಂಥವನ್ನು ಪ್ರಸಿದ್ಧಮಾಡಿ ಕನ್ನಡ ಸಾಹಿತ್ಯವನ್ನು ಬೆಳಿಸಿದ್ದರಿಂದ ಕರ್ನಾಟಕವು ಗ್ರಂಥಕರ್ತರಿಗೆ ಋಣಿಯಾಗಿದೆ ಗ್ರಂಥಕರ್ತರಿಗೆ ಸದಾಶಿವನು ಆಯುರಾರೋಗ್ಯವನ್ನಿತ್ತು ಅವರಿಂದ ಮುಂದೆ ಇದಕ್ಕೂ ಹೆಚ್ಚಿನ ಗ್ರಂಥ ಗಳನ್ನು ಮಾಡಿಸಲೆಂದು ಬಯಸುವ,

ಹುಬ್ಬಳ್ಳಿ,
ತಾ॥ ೨೦—೧೦—೧೯೩೧

**ವೀರಪ್ಪ ಬಸವಪ್ಪ ಬಿಳಿಅಂಗಡಿ,**
ಬಿ ಎ ,ಎಲ್ ಎಲ್ ಬಿ , ವಕೀಲ.

---

ಶ್ರೀ ಗುರುಭ್ಯೋನಮಃ

ಮ॥ ರಾ॥ ರಾ॥ ಮಹಾರುದ್ರಪ್ಪ, ಮಹಾಲಿಂಗಪ್ಪ ಮಿರ್ಜಿ ಮುಕ್ಕಾಮು ಹುಬ್ಬಳ್ಳಿ ಇವರಿಗೆ.

ತಾವು ವಿಮರ್ಶಕ್ಕಾಗಿ ನಮ್ಮ ಕಡಿಗೆ, ಕಳುಹಿಸಿದ ಅರುವತ್ತುಮೂವರ ಪುರಾತನರ ಗದ್ಯಾತ್ಮಕವಾದ ಅಪೂರ್ವ ಗ್ರಂಥವನ್ನು ಆದಷ್ಟು ಆಮೂಲಾಗ್ರ

ವಾಗಿ ಅವಲೋಕಿಸೋಣವಾಯಿತು. ಗ್ರಂಥವು ಪುರಾತನರಲ್ಲಿದ್ದ, ತಮ್ಮ ಅತುಲ ಅವ್ಯಾಜವಾದ ಭಕ್ತಿಯನ್ನೂ ಅನಿತರ ಸಾಧಾರಣವಾದ ಗ್ರಂಥರಚನ ಚಾತುರ್ಯವನ್ನೂ, ಕರ್ನಾಟಕ ಭಾಷಾ ನೈಪುಣ್ಯವನ್ನೂ ವ್ಯಕ್ತಗೊಳಿಸುವ ದಾಗಿದೆ; ಸುಸಂಸ್ಕೃತಗಳಾದ ವಾಕ್ಯ ಸಂಘಟನೆಗಳಿಂದಲೂ, ಸುಲಲಿತಗಳಾದ ಶಬ್ದರತ್ನ ರಾಶಿಗಳಿಂದಲೂ ಗರ್ಭಿತವಾಗಿರುವದರಿಂದ ವಾಚಕರಿಗೆ ಮನೋರಂಜಕವಾಗಿದೆ; ಸಹೃದಯ ಹೃದಯಾಲ್ಹಾದಕವಾಗಿದೆ; ಪುರಾತನರ ಚರಿತ್ರವನ್ನು ತಿಳಿಯಲಿಕ್ಕೆ ತಮ್ಮಾ ಗ್ರಂಥವು ಆದರ್ಶಭೂತವಾಗಿದೆ, ಈ ಅಪೂರ್ವ ಗ್ರಂಥವು ಪುರಾತನರಾಚಾರ ಮಾರ್ಗವರ್ತಿಗಳಾದ ವೀರಶೈವರಿಗೆ ಸಂಗ್ರಹಿಸಲಿಕ್ಕೆ ಅತ್ಯಂತ ಯೋಗ್ಯವಾಗಿದೆ ಎಂದು ನಾವು ತ್ರಿಕರಣಪೂರ್ವಕವಾಗಿ ಅಭಿಪ್ರಾಯಪಡುತ್ತೇವೆ ಹಾಗೂ ಈ ಪವಿತ್ರವಾದ ಗ್ರಂಥವನ್ನು ರಚಿಸಿ ಜನ್ಮಸಾಫಲ್ಯವನ್ನು ಮಾಡಿಕೊಂಡದ್ದಕ್ಕಾಗಿ ಧನ್ಯವಾದವನ್ನು ವ್ಯಕ್ತಮಾಡುತ್ತೇವೆ ........... . ......ಪ್ರೇಮವಿರಲಿ.

ಇತಿ ಮಂಗಲಂಭವತು

ತಮ್ಮ

**ಪಂ॥ ಕಲಿಗಣನಾಥ ಶಾಸ್ತ್ರಿಗಳು,**

ತಾ॥ ೨೦—೧೦—೧೯೩೧

ತರ್ಕತೀರ್ಥ,

ಪಗಡದಿನಿ ಬೃ॥ ಮಠ,

ಮುಕ್ಕಾಮ ಬಾಗಲಕೋಟೆ.

---

ಈ ಮಹತ್ವದ ಗ್ರಂಥವು ಸುರಂಗ ಕವಿ ವಿರಚಿತವಾದ ಅರುವತ್ತುಮೂವರು ಪುರಾತನರ ಚರಿತ್ರೆ ಎಂಬ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಬರೆದದ್ದಾಗಿದೆ. ಪುರಾತನರ ಚರಿತ್ರೆಗಳು ಭಕ್ತಿರಸ ಪೂರ್ಣವಾಗಿ ಜನರಿಗೆ ಬಹು ಬೋಧಪ್ರದವಾಗಿರುವವು. ಇವರೆಲ್ಲರೂ ಬಹುತರ ದ್ರಾವಿಡ ದೇಶದವರು ಮತ್ತು ಅಲ್ಲಿಯ ರಾಜರಿಂದ ಮನ್ನಣೆಯನ್ನು ಹೊಂದಿ ಅನೇಕ ರೀತಿಯಿಂದ ತಮ್ಮ ಈಶ ಭಕ್ತಿಯನ್ನು ತೋರಿಸುತ್ತ ಬಹುಜನ ಸಮಾಜವನ್ನು ಉದ್ಧಾರಮಾಡಲು ಪ್ರಯತ್ನಿಸಿದವರು. ಇವರ ಚರಿತ್ರೆಗಳು ಪೆರಿಯ ಪುರಾಣವೆಂಬ ಪುರಾತನ ತಮಿಳು ಗ್ರಂಥದಲ್ಲಿ ಪ್ರಸಿದ್ಧವಾಗಿವೆ. ಈ ಪುರಾತನರು ವೀರಶೈವರಿಗೂ ಬಹಳ ವಂದ್ಯರಾಗಿರುವರು ಇವರ ಚರಿತ್ರಾಂಶಗಳು ಶಿವಶರಣರ ಚರಿತ್ರ ಗ್ರಂಥಗಳಲ್ಲಿ ಮೇಲಿಂದ ಮೇಲೆ ಉಲ್ಲೇಖಿಸಲ್ಪಡುತ್ತಿವೆ.

ಬಸವೇಶ್ವರನೂ ವಚನಕಾರರೂ ಇವರನ್ನು ಬಹಳವಾಗಿ ಸ್ತುತಿಸಿರುವರು. ಇಂಥವರ ಚರಿತ್ರೆಗಳನ್ನು ಶ್ರೀಯುತ ಮಹಾರುದ್ರಪ್ಪ ಮಿರ್ಜಿ ಇವರು ಕನ್ನಡಿಗರಿಗೋಸ್ಕರ ಗದ್ಯದಲ್ಲಿ ಬರೆದು ಪ್ರಕಾಶಗೊಳಿಸಿದ್ದು ಬಹಳ ಅಭಿನಂದನೀಯವಾಗಿದೆ. ಇದು ಸುಮಾರು ೩೦೦ ಪುಟದ ದೊಡ್ಡ ಗ್ರಂಥವಾಗಿದೆ. ಗ್ರಂಥಕಾರರು ಚರಿತ್ರೆಗಳನ್ನು ಬಹು ಮನೋಹರವಾಗಿ ಬರೆದಿರುವರು. ಭಾಷೆಯು ಪ್ರೌಢತರವಾಗಿರುವದು. ಪ್ರೌಢವಾಗಿದ್ದರೂ ಕಥಾಭಾಗಗಳು ಎಲ್ಲರಿಗೆ ತಿಳಿಯುವಂತೆ ಸಮಿಾಚೀನವಾಗಿ ಬರೆದಿರುವರು ಇದರಿಂದ ಗ್ರಂಥದಲ್ಲಿಯ ಭಕ್ತಿರಸದ ಪ್ರವಾಹವನ್ನು ಆಸ್ವಾದಿಸಲು ಓದುವವರ ಮನಸ್ಸು ಮುಗ್ನವಾಗುವಂತೆ ಚರಿತ್ರೆಗಳು ಬಹುತರ ಸಣ್ಣವಿದ್ದದರಿಂದ ಬಾಲಕರೂ, ಸ್ತ್ರೀಯರೂ ಇವನ್ನು ಓದಲಿಕ್ಕೆ ಎಂದೂ ಬೇಸರಿಯಲಾರರು. ಮೊದಲು ಬಸವಪುರಾಣ ಮತ್ತು ಚನ್ನಬಸವ ಪುರಾಣ ಇವುಗಳು ಮೊದಲು ಗದ್ಯದಲ್ಲಿ ಬರೆಯಲ್ಪಟ್ಟದ್ದರಿಂದ ಈ ಮಹತ್ವದ ಗ್ರಂಥಗಳ ವಿಷಯಗಳು ಜನರಿಗೆ ತಿಳಿಯಲಿಕ್ಕೆ ಅನುಕೂಲವಾಯಿತು. ಅದೇ ಪ್ರಕಾರ ಶ್ರೀಯುತ ಮಹಾರುದ್ರಪ್ಪನವರು ಈ ಪುರಾತನರ ಗ್ರಂಥವನ್ನು ಬರೆದು ಒಂದು ಮಹತ್ವದ ವಾಙ್ಮಯ ಕಾರ್ಯ ಮಾಡಿದವರೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ. ಗ್ರಂಥದ ಬಲೆಯು ೨ ರೂ. ಮಾತ್ರವಿದ್ದು ಎಲ್ಲರೂ ಈ ಗ್ರಂಥವನ್ನು ಅವಶ್ಯವಾಗಿ ಸಂಗ್ರಹಿಸಬೇಕೆಂದು ನಮ್ಮ ಸೂಚನೆ ಇದೆ.

**ರಾವ್‌ಸಾಹೇಬ್ ಫ. ಗು. ಹಳಕಟ್ಟಿ,**

ತಾ॥ ೨೯—೧೦—೧೯೩೧ ಬಿ.ಎ., ಎಲ್‌ಎಲ್ ಬಿ.,

ಸಂ॥ ನವಕರ್ನಾಟಕ, ಬಿಜಾಪುರ.

---

**ಎಸ್. ಎಸ್. ಬಸವನಾಳ,** ಎಂ.ಎ., ಧಾರವಾಡ,

ಪ್ರಿನ್ಸಿಪಾಲ, ರಾಜಾ ಲಖಮಗೌಡ ಸರ್ದೇಸಾಯಿ ಹಾಯಸ್ಕೂಲ. ತಾ॥ ೩೧-೧೦-೧೯೩೧

ಶ್ರೀ॥ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರಜಿ ಇವರು ರಚಿಸಿದ ಅರುವತ್ತುಮೂವರು ಪುರಾತನರ ಚರಿತ್ರೆಯನ್ನು ಓದಿನೋಡಿದೆನು. ಗ್ರಂಥವು ಗದ್ಯರೂಪವಾಗಿದ್ದು ಸರಳವಾಗಿಯೂ ಸರಸವಾಗಿಯೂ ಬರೆಯಲ್ಪಟ್ಟಿದೆ. ದಕ್ಷಿಣ ಹಿಂದೂಸ್ಥಾನದ ವಾಙ್ಮಯ ಹಾಗೂ ಧರ್ಮಗಳಲ್ಲಿ ಅರುವತ್ತುಮೂವರು ಪುರಾತನರ ಮಹತ್ವವು ಬಹಳವಾಗಿದೆಯೆಂದು ಬೇರೆ ಹೇಳಬೇಕಾಗಿಲ್ಲ. ಆದರೆ ಕನ್ನಡದಲ್ಲಿ ಇದುವರೆಗೆ ಇವರ ಚರಿತ್ರೆಗಳೆಲ್ಲ ಬಸವಪುರಾಣ, ತ್ರಿಷಷ್ಟಿಪುರಾತನ ಚರಿತ್ರೆ ಮೊದಲಾದ ಪದ್ಯಗ್ರಂಥಗಳಲ್ಲಿಯೇ ಅಡಕವಾಗಿದ್ದವು. ಅವುಗಳನ್ನೆಲ್ಲ

ಒಂದೆಡೆಯಲ್ಲಿ ಸುಲಭವಾಗಿ ದೊರೆಯುವಂತೆ ಸಂಕ್ಷಿಪ್ತವಾಗಿ ರಚಿಸುದುದಕ್ಕಾಗಿ ಶ್ರೀ ಮಿರಜಿಯವರಿಗೆ ಕನ್ನಡಿಗರೆಲ್ಲರೂ, ವಿಶೇಷವಾಗಿ ಶೈವಮಾರ್ಗಾನುಯಾಯಿಗಳೂ ಸಂಪೂರ್ಣ ಆಭಾರಿಯಾಗಿರತಕ್ಕುದು. ಮುನ್ನೂರಕ್ಕಿಂತಲೂ ಹೆಚ್ಚಿಗೆ ಪುಟಗಳನ್ನೊಳಗೊಂಡ ಈ ಗ್ರಂಥವು ಸುಂದರವಾಗಿ ಮುದ್ರಾಪಿತವಾಗಿರುವುದರಿಂದ ಕನ್ನಡ ಪುಸ್ತಕಗಳಲ್ಲಿ ಸಾಮಾನ್ಯವಾಗಿದ್ದ ಕುಂದೊಂದು ಇದಕ್ಕಿಲ್ಲವೆಂಬುದು ತಾನೇ ಕಾಣುತ್ತದೆ. ಐತಿಹಾಸಿಕ ದೃಷ್ಟಿಯಿಂದ ಬರೆದ ಉಪೋದ್ಘಾತವೂ ಕೊನೆಗೆ ಸೇರಿಸಿದ ಅನುಕ್ರಮಣಿಕೆಯೂ ಪುಸ್ತಕದ ಉಪಯುಕ್ತತೆಯನ್ನು ಇನ್ನೂ ಹೆಚ್ಚಿಸುತ್ತವೆ. ಈ ಎಲ್ಲ ದೃಷ್ಟಿಯಿಂದ ನೋಡಿದರೆ ಗ್ರಂಥಕ್ಕೆ ಇಟ್ಟ ಬೆಲೆಯು ಕಡಿಮೆಯೆಂದೇ ಹೇಳಬಹುದು. ಆದುದರಿಂದ ಕನ್ನಡಿಗರೂ ಸಾಹಿತ್ಯ ಪ್ರೇಮಿಗಳೂ ಇದಕ್ಕೆ ಯೋಗ್ಯ ಪ್ರೋತ್ಸಾಹವನ್ನೀಯುವರೆಂದು ಆಶೆ.

**ಶಿ. ಶಿ. ಬಸವನಾಳ.**

---

**ವ್ಹಿ. ಬಿ. ಹಾಲಭಾವಿ,** ಬಿ ಎ ,ಎಲ್ ಎಲ್ ಬಿ , ಧಾರವಾಡ,
ಫರ್ಸ್ಟ ಕ್ಲಾಸ ಸಬ್ ಜಡ್ಜ. ತಾ॥ ೧-೧೧-೧೯೩೧.

ತಾವು ಕಳುಹಿದ ಅರುವತ್ತುಮೂವರು ಪುರಾತನರ ಗ್ರಂಥದ ಕೆಲವು ಭಾಗಗಳನ್ನು ಓದಿ ನೋಡಿದೆನು.

ಪುರಾತನ ಶರಣರಲ್ಲಿ ತುಸುಜನರು ಮಾತ್ರ ವೀರಶೈವರಿದ್ದಂತೆ ಕಂಡು ಬರುತ್ತದೆ. ಎಲ್ಲರೂ ಶಿವೋಪಾಸಕರೇ ಶೈವರೆಲ್ಲರಿಗೆ ಈ ಶರಣರು ಪೂಜ್ಯರು. ಅವರ ಚರಿತ್ರೆಗಳು ಪಠನಕ್ಕೆ ಯೋಗ್ಯವು. ಹಿಂದಿನಕಾಲದಲ್ಲಿ ಗದ್ಯಗ್ರಂಥಗಳು ಕಡಿಮೆ. ಪದ್ಯಗ್ರಂಥಗಳೇ ವಿಶೇಷ; ಆಗಿನ ಪರಿಸ್ಥಿತಿಯಲ್ಲಿ ಕಾವ್ಯಾವಲೋಕನವೂ ಕಾವ್ಯಶ್ರವಣವೂ ವಿಶೇಷ ಪ್ರಾಚೀನದಲ್ಲಿದ್ದವೆಂಬದಕ್ಕೆ ಬೇರೆ ಪ್ರಮಾಣಗಳು ಬೇಡ. ಸದ್ಯದ ಜೀವನ ಕಲಹದ ಕಾಲದಲ್ಲಿ ಗದ್ಯಗ್ರಂಥಗಳ ಅವಶ್ಯಕತೆಯು ಹೆಚ್ಚು. ಈ ಗ್ರಂಥಗಳ ಸಂಖ್ಯೆಯನ್ನು ಬೆಳಿಸಲಿಕ್ಕೆ ನೀವು ಸಹಾಯಕಾರಿಯಾದದ್ದು ಭೂಷಣವೇ ಸರಿ.

ಮೋಕ್ಷ ಸಾಧನಗಳಲ್ಲಿ ಭಕ್ತಿಯು ಒಂದು. ಶರಣರೆಲ್ಲ ಭಕ್ತಿಮಾರ್ಗದವರೇ. ಆದರೂ ಪ್ರತಿಯೊಬ್ಬ ಶರಣನ ಭಕ್ತಿಯಲ್ಲಿ ಒಂದೊಂದು ವೈಶಿಷ್ಟವಿದೆ. ಆದುದರಿಂದ ಈ ಚರಿತ್ರೆಗಳು ಓದುವವರ ಕುತೂಹಲವನ್ನು ಹೆಚ್ಚಿಸುವಂತಹವಿರುವವು.

ಇಂಥ ಚರಿತ್ರಗಳ ಸಂಗ್ರಹವನ್ನು ಕನ್ನಡ ವಾಚಕರೆದುರಿಗೆ ಇಟ್ಟು ಅವರ ಮೇಲೆ ಒಂದು ಉಪಕಾರವನ್ನು ಮಾಡಿದಂತಾಗಿರುವದು.

ಭಾಷಾಶೈಲಿಯು ಸರಳವೂ ಮನೋಹರವೂ ಇದ್ದು ಗ್ರಂಥವು ಸಂಗ್ರಹಕ್ಕೆ ಯೋಗ್ಯವಾಗಿರುವುದು.

**ವಿ. ಬ. ಹಾಲಭಾವಿ.**

---

**ವೆಂಕಟರಾವ ಆಲೂರ,** ಬಿ ಎ, ಎಲ್‌ಎಲ್ ಬಿ,
ಸಂಸ್ಥಾಪಕರು
'ಜಯಕರ್ನಾಟಕ'

ಧಾರವಾಡ,
ತಾ॥ ೧೩—೧೧—೧೯೩೧.

ಈ ಗ್ರಂಥವನ್ನೋದಿದರೆ, ಭಕ್ತಿಯ ಉದ್ರೇಕದಿಂದ ಭಾಷೆಗೆ ಹೇಗೆ ಒಂದು ಬಗೆಯ ಒಪ್ಪು ಉಂಟಾಗುತ್ತದೆಂಬುದು ಗೊತ್ತಾಗುವುದು. ಈ ಪುರಾತನರಲ್ಲಿ, ಅರಸರಿರುವರು ವೀರರಿರುವರು; ಪಂಡಿತರಿರುವರು ಪಾಮರರಿರುವರು; ಬ್ರಾಹ್ಮಣರಿರುವರು ಶೂದ್ರರಿರುವರು ಅಸ್ಪೃಶ್ಯರಿರುವರು; ರೈತರಿರುವರು ಅಗಸರಿರುವರು ನೇಕಾರರಿರುವರು; ಸ್ತ್ರೀಯರಿರುವರು ಬಾಲಕರಿರುವರು; ಧನಿಕರಿರುವರು ದರಿದ್ರರಿರುವರು. ಭಕ್ತಿಯೊಂದಿದ್ದರೆ ಮುಕ್ತಿದ್ವಾರವು ಎಲ್ಲರಿಗೂ ತೆರದಿಟ್ಟದೇ ಎಂಬುದೇ ಈ ಗ್ರಂಥದ ತಾತ್ಪರ್ಯ. ಪರಶಿವನಲ್ಲಿಯ ವೀರಭಕ್ತಿ, ಶೀಲ-ಆಚಾರಗಳಲ್ಲಿಯ ವೀರನಿಷ್ಠೆ ಇವುಗಳನ್ನು ವರ್ಣಿಸುವದೇ ಈ ಚರಿತ್ರೆಗಳ ಮುಖ್ಯ ಉದ್ದೇಶ. ಈ ಗ್ರಂಥಕ್ಕೆ ಕೇವಲ ಚರಿತ್ರೆಯನ್ನುವದಕ್ಕಿಂತಲೂ ಶೈವ ಸಿದ್ಧಾಂತಗಳನ್ನೂ ಆಚಾರಗಳನ್ನೂ ಉದಾಹರಣೆ ಸಹಿತವಾಗಿ ವಿಶದಪಡಿಸಿದ ತತ್ವಗ್ರಂಥವೆಂದೇ ಅನ್ನಬಹುದು. ಈ ಗ್ರಂಥದಲ್ಲಿ ಈಗಿನ ಕಾಲಕ್ಕೆ ಸಾಮಾನ್ಯತಃ ನಂಬಲಶಕ್ಯವಾದ ಅದ್ಭುತ ಚಮತ್ಕಾರದ ಕಥೆಗಳೇ ಅನೇಕವಾಗಿದ್ದರೂ ಆಗಿನ ಜನರು ತಮ್ಮ ಧ್ಯೇಯವಾದ ಧರ್ಮಕ್ಕೋಸ್ಕರ ಎಷ್ಟು ವೀರಭಕ್ತಿಯುಳ್ಳವರಾಗಿದ್ದರೆಂಬುದೂ ತಮ್ಮ ಪ್ರಾಣಗಳನ್ನು ಹೇಗೆ ತೃಣಪ್ರಾಯವಾಗಿ ಗಣಿಸುತ್ತಿದ್ದರೆಂಬುದೂ ಮಾತ್ರ ಸ್ಪಷ್ಟವಾಗದಿರದು. ಸತ್ಯನಾರಾಯಣ ಕಥೆ, ಸಾಧುಸಂತರ ಚರಿತ್ರೆ ಮುಂತಾದ ನಮ್ಮ ಹಿಂದೂ ಧರ್ಮದ ಇಂಥ ಕಥೆಗಳಲ್ಲಿಯ ಅಸ್ವಾಭಾವಿಕವಾಗಿ ತೋರುವ ವರ್ಣನೆಗಳ ಗೂಢವನ್ನರಿಯುವದೊಂದು ಕಠಿಣವಾದ ಪ್ರಶ್ನೆ. ಇರಲಿ.

ವಿಕ್ರಮಚೋಳ, ಸುಂದರಪಾಂಡ್ಯ ಮುಂತಾದ ಅನೇಕ ಐತಿಹಾಸಿಕ ಪುರುಷರ ಹೆಸರುಗಳು ಇದರಲ್ಲಿ ಅಡಕವಾಗಿರುವದರಿಂದ, ಚೋಳ ಚೇರ ಪಾಂಡ್ಯ

ಮನೆತನಗಳ ಇತಿಹಾಸದಿಂದ ಈ ಪುರಾತನರಲ್ಲಿ ಅನೇಕರ ಕಾಲ ಮುಂತಾದವು ಗಳನ್ನು ನಿರ್ಣಯಿಸಬಹುದು.

ವರ್ಣಾಶ್ರಮ ಧರ್ಮವುಳ್ಳ ಸಮಾಜವು ಏಕವರ್ಣ ವೀರಶೈವ ಸಮಾಜ ವಾಗಿ ಎಂದಿನಿಂದ ಪಿಂಗಡಿಸಲ್ಪಟ್ಟಿರುವುದೆಂಬ ಪ್ರಶ್ನೆಯನ್ನು ಬಿಡಿಸಲಿಕ್ಕೂ ಈ ಗ್ರಂಥವು ಅನುಕೂಲವಾಗಿದೆ. ಅಲ್ಲದೆ ತೋರಲಿಕ್ಕೆ ತೀರ ವಿರುದ್ಧವಾಗಿ ತೋ ರುವ ವೀರ ವೈಷ್ಣವ ವೀರಶೈವ ಮುಂತಾದ ಪಂಥಗಳಲ್ಲಿ ಸನಾತನ ಧರ್ಮದ ಅನೇಕ ತತ್ವಗಳು ಹೇಗೆ ಸಾಮಾನ್ಯವಾಗಿರುವವೆಂಬುದೂ ಈ ಗ್ರಂಥದಿಂದ ಗೊತ್ತಾಗುವದು. ಜೈನರಲ್ಲಿಯೂ ಅರುವತ್ತುಮೂವರು ವೀರ ಜಿನಭಕ್ತರಿರು ವರು. ಶೈವರಲ್ಲಿಯೂ ಇರುವರು. ಇದರ ಮರ್ಮವೇನೆಂಬುದೂ ವಿಚಾರ ಮಾಡತಕ್ಕ ಪ್ರಶ್ನೆಯಾಗಿದೆ. ಇರಲಿ. ಶ್ರೀ ಮಹಾರುದ್ರಪ್ಪ ಮಹಾಲಿಂಗಪ್ಪ ಮಿರ್ಜಿಯವರು ಈ ಗ್ರಂಥವನ್ನು ಬರೆದು ಮತ್ತು ಶ್ರೀ ಗುರುಸಿದ್ಧಪ್ಪನವರು ಇವನ್ನು ಪ್ರಕಾಶಿಸಿ ವೀರಶೈವ ಸಮಾಜದ ಮೇಲೆ ಮಾತ್ರವೇ ಅಲ್ಲ ಇಡೀ ಕರ್ನಾಟಕದ ಮೇಲೆ ಉಪಕಾರ ಮಾಡಿರುವರು. ಏಕೆಂದರೆ, ವೀರಶೈವ ಮತದ ವಿಷಯವಾಗಿ ಜನತೆಯಲ್ಲಿ ಬಹಳ ಅಜ್ಞಾನವಿರುವುದರಿಂದ ಇಂಥ ಅನೇಕ ಗ್ರಂಥಗಳು ಹೊರಡುವುದು ಅವಶ್ಯವಿದೆ.

ತಾ॥ ೧೩—೧೧—೧೯೩೧

**ಆಲೂರ ವೆಂಕಟರಾವ.**

ಓಂ



# ಕಮಲಾಯಿ.

---




ವಶರಣೆಯಾದ ಈ ಮಹಾ ಮಹಿಮಳನ್ನು ವರಕವಿ ಗುರುರಾಜನ ಗಣಸಹಸ್ರದಲ್ಲಿಯೂ, ಸುಪ್ರಸಿದ್ಧನಾದ ಪಾಲ್ಕುರಿಕೆಯ ಸೋಮಾರಾಧ್ಯನ ಗ್ರಂಥದಲ್ಲಿಯೂ, ಸಮಯ ಭೇದವನ್ನು ಅಳಿದ ಶ್ರೀ ಬಾಲಲೀಲಾಮಹಾಂತ ಶಿವಯೋಗಿಗಳ ಕೈವಲ್ಯದರ್ಪಣದಲ್ಲಿಯೂ ಕಾಣಬಹುದು. ಪುಣ್ಯಪ್ರದಳಾದ ಈ ಶಿವಭಕ್ತಳ ಪರಮಪಾವನ ಚರಿತ್ರವನ್ನು ಸವಿಸ್ತಾರವಾಗಿ ನೋಡಬೇಕೆಂಬ ಲವಲವಿಕೆಯುಳ್ಳವರು ಉದ್ದಾಮ ಕವಿಯಾದ ಚಿಕ್ಕನಂಜಾಚಾರ್ಯರ 'ರಾಘವಾಂಕರಕಾವ್ಯ'ವನ್ನು ಪರಾಮರಿಸಬಹುದು.

ಧನಧಾನ್ಯಸಂಪತ್ಸಮೃದ್ಧವಾದ ನಮ್ಮಾ ಸಾರವತ್ತಾದ ಫಲವತ್ತಾದ ಕರ್ನಾಟಕದಲ್ಲಿ ಬಿಜ್ಜಳಭೂಪಾಲನ ಕಾಲದಲ್ಲಿ ಶ್ರೀ ನಂದೀಶ್ವರನ ಅಪರಾವತಾರಿಯಾದ ಮಂಗಲವಾದ ಬಸವನೆಂಬ ಅಭಿದಾನವನ್ನು ತಳೆದ ವಿಭೂತಿಯು ಮಾದರಸನ ಸಹ ಧರ್ಮಚಾರಣಿಯಾದ ಮಾದಲಾಂಬಿಕೆಯ ಪುಣ್ಯಗರ್ಭದಿಂ ಶಿವಪ್ರಸಾದದ ಮಹಿಮಾತಿಶಯದಿಂದ ಉದಯಿಸಿದನೆಂಬುದು ಸರ್ವಶ್ರುತವು. ದುರ್ದೆಶೆಗೆ ಈಡಾದ ವೀರಶೈವ ಧರ್ಮದ ಉದ್ಧಾರ ಉತ್ಕರ್ಷಕ್ಕಾಗಿಯೇ ಕಲ್ಯಾಣಕಾರಿಯಾದ ಬಸವನು ಬಾಗೇವಾಡಿಯಲ್ಲಿ ಪ್ರಾದುರ್ಭವಿಸಿದನು. ಈ ಧರ್ಮ ಮೂರ್ತಿಯ ಜತೆಗೆ ಐಮೊಗಸಾದ ಕಪ್ಪುಗೊರಳನಾದ ಆ ಅಭವನ ಅಪ್ಪಣೆಯ ಮೇರೆಗೆ ಬಲಶಾಲಿಗಳಾದ ಅನೇಕ ಪುರಾತನ ಪುಂಗವರು ಅಲ್ಲಲ್ಲಿ ಮಾನವರೂಪದಿಂದ ತೇಜೋಮಯರಾಗಿ ವಿರಾಜಿಸಿದರು.

ಬಿಜ್ಜಳರಾಯನು ರಾಜ್ಯಸೂತ್ರವು ಚನ್ನಾಗಿ ಸಾಗಬೇಕೆಂದು ಬಹು ಬುದ್ಧಿಶಾಲಿಯಾದ ಬಲದೇವನೆಂಬ ಮಂತ್ರಿಯನ್ನು ನಿಯಮಿಸಿದ್ದನು. ಮಂಗಲಾಂಗಿ

ಯಾದ ತನ್ನ ಪುತ್ರಿಯನ್ನು ಯೋಗ್ಯವರನಿಗೆ ಕೊಡಬೇಕೆಂದು ಹಂಬಲಿಸುವ ಸುವಿಚಾರಿಯಾದ ಬಲದೇವನು ಸದಾಚಾರ ನಿಧಿಯಾದ ಬಸವೇಶನಿಗೆ ಕೊಡಬೇಕೆಂದು ಭಗವತ್ಕಟಾಕ್ಷದಿಂದ ಅರಿತನು. ಕನ್ಯಾದಾನ ಮಾಡಿದ ಸ್ವಲ್ಪ ಕಾಲದಲ್ಲಿ ಸತ್ಪುರುಷ ಬಲದೇವನು ಶಿವೈಕ್ಯನಾದಾಗ, ವಿಶ್ವಕುಟುಂಬಿಯಾದ ಪರಶಿವನ ಸಂಕಲ್ಪ ಮಾತ್ರದಿಂದ ಶಿಲಾಲಿಪಿಯು ಬಿಜ್ಜಳನ ಓಲಗದಲ್ಲಿ ಬಿದ್ದುದನ್ನು ಯಾರಿಂದಲೂ ಓದಲಿಕ್ಕೆ ಬಾರದ್ದರಿಂದ ಶಿವಾಚಾರಪ್ರವರ್ತಕನಾದ ಬಸವೇಶನು ತಟ್ಟನೆ ಎದ್ದು ಆ ಅರಸನ ವಿನಂತಿಯನ್ನು ಮನ್ನಣೆಮಾಡಿ ಆ ಶಿಲಾಲಿಪಿಯನ್ನು ನೋಡಿ ಅದರ ಭಾವವನ್ನು ಸಭೆಯ ಮುಂದಿರಿಸಿದನು. ಅಸಮ ಪ್ರಜ್ಞಾಶಾಲಿಯಾದ ಬಸವನ ಅಪ್ರತಿಮ ಜಾಣ್ಮೆಗೆ ಮೆಚ್ಚಿ ಭಯ-ಭಕ್ತಿ-ಆದರವನ್ನು ತಾಳಿದ ಆ ನೃಪೋತ್ತಮನು ಆತನನ್ನು ಮುಖ್ಯ ಮಂತ್ರಿಯನ್ನಾಗಿ ನಿಯಮಿಸಿ ಸಮಸ್ತ ಅಧಿಕಾರವನ್ನು ವಹಿಸಿಕೊಟ್ಟದ್ದು ಚೋದ್ಯವಲ್ಲ, ಸಹಜವು.

ಐಶ್ವರ್ಯದ ನೆಲೆಯಾದ ಕಲ್ಯಾಣಪಟ್ಟಣವು ಬಿಜ್ಜಳನ ರಾಜಧಾನಿಯು. ಈ ಮನೋಹರವಾದ ನಗರದಲ್ಲಿ ವಿಶಿಷ್ಟ ಜಂಗಮರ ವಿಲಾಸಯೋಗ್ಯಳಾದ, ವಾರನಾರಿಯರ ಸೀಮಂತಮಣಿಯಂತೊಪ್ಪುವ, ಸೌಂದರ್ಯದ ಪರಮಾವಧಿಯನ್ನು ಮೀರಿಸುವ, ಕಂದರ್ಪನೆಂದು ಖ್ಯಾತಿಗೊಂಡಿರುವ, ಮೀನಕೇತುವಿನ ರಾಣಿಯಾದ ರತಿದೇವಿಯ ಚೆಲ್ವಿಕೆಯನ್ನು ಅತಿಗಳೆಯುವ, ಶರೀರದ ಮುಖ್ಯಾಂಗನಾದ ಶಿರಸ್ಸಿನಲ್ಲಿ ಶಿವಜ್ಞಾನ ಸಂಪತ್ತಿನ ಸುಳಿಯಿಂದ ಯುಕ್ತಳಾದ, ಲಿಂಗಪ್ರಾಣಿಯಾದ ಕಮಲಾಯಿ ಎಂಬ ನಾರೀರತ್ನದ ಪ್ರಕಾಶವು ಸೊಗಸಾಗಿ ಬೆಳಗುತ್ತಿತ್ತು. ಈ ಪುಣ್ಯವತಿಯು ಎಣೆ ಇಲ್ಲದ ನಿತ್ಯಸುಖವನ್ನೀಯುವ ಶಿವಾನುಭವ, ಶಿವಾನುಷ್ಠಾನ, ಶಿವಾಗಾರದ ಬೀಡಾಗಿ ಆತ್ಮವಿಕಾಸ-ಆತ್ಮಜ್ಞಾನ-ಆತ್ಮವಿಲಾಸಭರಿತಳಾಗಿ ರಂಜಿಸುತ್ತಿದ್ದಳು. ಅಕ್ಷರನಾದ ಅಪಾರಮಹಿಮನಾದ, ಜಗತ್ಕುಟುಂಬಿಯಾದ, ನಿಜವಾದ ಜಿತೇಂದ್ರಿಯರೆಂಬ ಘನಯೋಗಿಗಳಲ್ಲಿ ಸಾರ್ವಭೌಮಸ್ವರೂಪನಾದ, ಸರ್ವಮಂಗಲಳಾದ ಮೃಡಾಣಿಯೊಡನೆ ಅವಿನಾಭಾವದಿಂದ ಕೂಡಿರುವ ಪರಶಿವನು **"ಶರಣಸತಿ ಲಿಂಗಪತಿ"** ಎಂಬುದನ್ನು ಜಗತ್ತಿನಲ್ಲಿ ಉತ್ಕೃಷ್ಟವಾಗಿ ಹರಡಿ, ಶ್ರೀ ಕಮಳಾಯಿಯ ಶಿವಯೋಗಾತಿಶಯವನ್ನು ಜಗತ್ತಿಗೆ ತೋರ್ಪಡಿಸಬೇಕೆಂದು ಮಾನವಾಕಾರವನ್ನು ತಾಳಿ, ಮಿಗಿಲಾದ ಸೂರುಪವುಳ್ಳವನಾಗಿ, ಕಲ್ಯಾಣಪಲ್ಲಿಯ ಕೇರಿಗಳನ್ನು ಪಾದನ್ಯಾಸದಿಂದ ಪವಿತ್ರಗೊಳಿಸುತ್ತ ನಮ್ಮ ಚರಿತ್ರನಾಯಕಳಾದ, ಪ್ರಮಥ ಸಮೂಹಕ್ಕೆ ಪರಮಾನಂದ ಕಾರಣಳಾದ ಕಮಳಾಯಿಯ ರಮ್ಯ ಮಂದಿರವನ್ನು ಹೊಕ್ಕು ಆ ಭಕ್ತಾಗ್ರಣಿಯ ನಿರರ್ಗಳವಾದ, ಅಪ್ರತಿಹತವಾದ, ನೈಸರ್ಗಿಕ ಶಿವಧರ್ಮರತಿಯೊಡನೆ ಸಂತುಷ್ಟನಾಗಿ ಅವಳ ಅಂಗದ ಮೇಲಿರುವ ಇಷ್ಟಲಿಂಗವನ್ನು ನಿದ್ರಾಪರವಶಳಾ

ದಾಗ ಸಾವಕಾಶವಾಗಿ ಮೆಲ್ಲನೆ ತೆಗೆದುಕೊಂಡು ಬೇರೊಂದು ತಾಣದಲ್ಲಿರಿಸಿ, ಲೀಲಾಮೂರ್ತಿಯಾದ ಸಾಂಬನು ಇಚ್ಛಾನುಸಾರವಾಗಿ ದಯಮಾಡಿಸಿದನು.

ಬ್ರಾಹ್ಮೀ ಮುಹೂರ್ತದಲ್ಲಿ ದಿನವಹಿಯಂತೆ ತಮ್ಮ ಒಡತಿಯು ಏಳಲಿಲ್ಲವೆಂದು ನಮ್ಮ ಕಥಾನಾಯಕಳ ಸಖಿಯರು ಅಚ್ಚರಿಗೊಂಡರು. ಅರಣೋದಯವಾಗಿ ನಂತರ ಜಗಚ್ಚಕ್ಷುವಾದ ರವಿರಾಜನು ಉದಯಿಸಿದರೂ ಕೂಡಾ, ಇನ್ನೂ ಯಜಮಾನಳು ಏಳಲಿಲ್ಲವೆಂದು ಪರಿಚಾರಿಕೆಯರು ಕಾತುರಪಟ್ಟು ನೆರೆಯಲ್ಲಿರುವವರಿಗೆ ವಿದ್ಯಮಾನವನ್ನರುಹಿದರು. ಆಗಲವರು ಬಂದು ನೋಡುತ್ತಾರೆ. ಸಾನಂದಳಾಗಿ ಮಲಗಿದಲ್ಲಿಯೇ ಕಮಳಾಯಿಯು ಗತಪ್ರಾಣಳಾದದ್ದನ್ನು ಕಂಡು ಹೌಹಾರಿ ಎದೆಎದೆ ಎಡಿದುಕೊಂಡರು.

ಶೋಭನಾಂಗಿಯೊಬ್ಬಳು ಬಂದು-ಅಸಾಧಾರಣವಾದ ವಿಲಾಸವತಿಯೇ, ಮಹತ್ತರವಾದ ವೀರಶೈವಾಚಾರವನ್ನು ಆಮೂಲಾಗ್ರವಾಗಿ ಅರಿತು ಸರಿಯಾಗಿ ವರ್ತಿಸುವವಳೇ ಎಂದು ಬಿಸುಸುಯ್ದಳು. ಓರ್ವ ಸಖಿಯಳು ಬಂದು-ಗೆಳತೀ, ಏಳು ; ನೀನು ತ್ರಿಕಾಲಲಿಂಗಪೂಜಾಸಕ್ತಳು ; ಪ್ರಾತರ್ವಿಧಿಗಳನ್ನು ತೀರಿಸು ; ಮಿಂದು ಶುಚಿಯಾಗಿ ಮೃಡನ ಪೂಜೆ ಮಾಡಲಿಕ್ಕೆ ಏಳು ಎಂದು ಕಣ್ಣಲ್ಲಿ ನೀರ ತಂದಳು. ಮತ್ತೋರ್ವ ಕಲಕೀರವಾಣಿಯು ಬಂದು-ಮುಂಜಾವಿನಲ್ಲಿ ಸ್ಪಷ್ಟವಾಗಿ ಶಿವಪಂಚಸ್ತವವನ್ನು ಪಠಿಸುತ್ತಿದ್ದೆಯಲ್ಲಾ, ಏಳವ್ವಾ ಏಳು ಎಂದು; ಕಾಳಾಹಿವೇಣಿಯು ಬಂದು-ತಾಯಿ ಮಂಗಲಮಯವಾದ ಪ್ರಭಾತ ಸಮಯದಲ್ಲಿ ಶಿವಸಹಸ್ರ, ಗಣಸಹಸ್ರ, ಬಸವಸಹಸ್ರವನ್ನು ತಪ್ಪದೆ ದಿನಾಲು ಅನ್ನುತ್ತಿದ್ದೆಯಲ್ಲಾ ಇಂದು ಸೂರ್ಯೋದಯವಾದರೂ ಏಕೇಳಲೊಲ್ಲೆ ಎಂದು ; ಕಲಶಕುಚಯುಗಳೆಯು ಬಂದು-ಅವ್ವಾ, ರಾತ್ರಿ ಮಲಗುವಾಗ ಶಿವಕವಚವನ್ನು, ಶಿವರಕ್ಷಾ-ಸ್ತೋತ್ರವನ್ನು, ರುದ್ರಕವಚವನ್ನು ಪಠಿಸುವದನ್ನು ಮರೆತದ್ದಕ್ಕೆ ಭ್ರಮಿಷ್ಟಳಾಗಿ ಇನ್ನೂ ಹಾಸಿಗೆಯನ್ನು ಹಿಡಿದಿಯೋ ಹೇಗೆ? ಮಾತಾಡು ಎಂದು; ಚಂದಿರವದನೆಯು ಬಂದು-ಮಲಗುವ ಅವಸರದಲ್ಲಿ ಶಿವಾಷ್ಟಕಗಳನ್ನೂ, ಚಂಡೀಕವಚವನ್ನೂ ಸ್ತುತಿಸಲಿಲ್ಲವೆಂದು ಮಧ್ಯರಾತ್ರಿ ಎಚ್ಚತ್ತಾಗ ತಿಳಿದು ಖಿನ್ನಮನಸ್ಕಳಾಗಿ ಹೊತ್ತೇರಿದರೂ ಇನ್ನೂ ಮಲಗಿರುವೆಯೋ? ಎಂದು; ಒಬ್ಬ ಮೃಗನೇತ್ರೆಯು ಬಂದು-ಸ್ನಾನಮಾಡುವ ವೇಳೆಯಾಯಿತು, ಏಳಮ್ಮಾ, ಎಂದು, ಒಬ್ಬ ಚಂಪಕನಾಸಿನಿಯು ಬಂದು-ಸ್ನಾನಗೃಹವು ಸಿದ್ಧವಾಗಿದೆ, ಏಳಕ್ಕಾ, ಎಂದು; ಒಬ್ಬ ಗಜಗಮನೆಯು ಬಂದು-ಶಿವಪೂಜಾ ಉಪಕರಣಗಳನ್ನು ಕ್ರಮವಾಗಿ ಇಟ್ಟಿರುತ್ತದೆ, ಏಳು ಎಂದು; ಇಂದೀವರಾಕ್ಷಿಯೊಬ್ಬಳು ಬಂದು-ಶಿವಾರ್ಚನೆಗೆ ತಡಮಾಡಬೇಡಾ ಏಳು ಎಂದು ; ಒಬ್ಬ ಕನಕಾಂಗಿಯು ಬಂದು-ವಸ್ತ್ರಾಭರಣಗಳನ್ನು ಸಜ್ಜುಮಾಡಿರುವೆನು ಏಳು ಎಂದು ; ಒಬ್ಬ ಚದುರೆಯು ಬಂದು.

ಗಂಧಾಕ್ಷತೆಗಳನ್ನು ಇರಿಸಿದ್ದೇನೆ, ಏಳು ಎಂದು; ಒಬ್ಬ ಲಲನೆಯು ಬಂದು, ಸುಗಂಧವಾದ ಹೂ-ಪತ್ರಗಳನ್ನು ತಂದಿರುತ್ತೇನೆ, ಏಳು ಎಂದು ; ಒಬ್ಬ ಬಡ - ನಡುವಿನವಳು ಬಂದು-ಶಿವಪೂಜಾಯೋಗ್ಯವಾದ ಮೃದು ಮಧುರವಾದ ಪಲ್ಲವಗಳನ್ನು ಮನೋಹರವಾದ ದ್ರೋಣಪುಷ್ಪಗಳೊಂದಿಗೆ ತಂದಿರುವೆನು, ಏಳು ಎಂದು ; ಒಬ್ಬ ಕೋಮಲಾಂಗಿಯು ಬಂದು-ಅಂದವಾದ ಪೂಮಾಲೆಗಳನ್ನು ಅಣಿ ಮಾಡಿದ್ದೇನೆ, ಏಳು ಎಂದು ; ಒಬ್ಬ ನಿತಂಬಿನಿಯು ಬಂದು :—ಶಿವ ಪೂಜಾಗಾರದಲ್ಲಿ ರಂಗವಲ್ಲಿಯನ್ನು ಹಾಕಿರುವೆನು ಏಳು, ಎಂದು ; ಒಬ್ಬ ವನಿತೆಯು ಬಂದು-ಗದ್ದುಗೆಯನ್ನು ಹಾಕಿರುವೆನು ಏಳು, ಎಂದು ; ಒಬ್ಬ ಲಲಿತಾಂಗಿಯು, ಬಂದು-ಧೂಪ, ದೀಪ, ನೈವೇದ್ಯಗಳನ್ನು ಇಟ್ಟಿರುವೆನು, ಏಳು, ಎಂದು ; ಒಬ್ಬ ಅಬಲೆಯು ಬಂದು-ತಾಂಬೂಲವು ಸಿದ್ಧವಾಗಿದೆ, ಅಷ್ಟವಿಧಾರ್ಚನೆಗೆ ಸಲಕರಣೆಗಳು ಸನ್ನಿಹಿತವಾಗಿವೆ ಏಳು, ಎಂದು ; ಸಚ್ಚರಿತ್ರಳೇ ಉಪಕಲ್ಪ ಅಕಲ್ಪ ಭಸ್ಮ ನನಗೆ

---

ಶಿವಾಗಮಜ್ಞರು ಭಸ್ಮವನ್ನು ಮಾಡುವ ಕ್ರಮವನ್ನು ೪ ವಿಧವಾಗಿ ತಿಳಿಸುತ್ತಾರೆ.— ಗುಣ ತಾರತಮ್ಯದಿಂದ ಹೇಳಬೇಕಾದರೆ ಕಲ್ಪವು ಉತ್ತಮೋತ್ತಮವು, ಅನುಕಲ್ಪವು ಉತ್ತಮವು, ಉಪಕಲ್ಪವು ಮಧ್ಯಮ ತರಗತಿಯು, ಅಕಲ್ಪವು ಕನಿಷ್ಠವರ್ಗದ್ದು ಆದ್ದರಿಂದ ಕಲ್ಪಭಸ್ಮವೇ ಸರ್ವೋತ್ಕೃಷ್ಟವೆಂದು ತಂತ್ರಜ್ಞರು ನಿರ್ಣೈಸಿರುವರು. ಈ ಭಸ್ಮವು ದೊರೆಯದ ಪಕ್ಷದಲ್ಲಿ ಅನುಕಲ್ಪಾದಿ ಸಿದ್ಧವಾದ ಭಸ್ಮಗಳನ್ನು ಅಂಗೀಕರಿಸಬೇಕು "ಶಾಸ್ತ್ರೋಕ್ತಪ್ರಕಾರದಿಂದ ನಂದಾದಿಧೇನುಗಳಿಂದ ಉತ್ಪನ್ನವಾದ ನೂತನವಾದ ಗೋಮಯವನ್ನು ಸದ್ಯೋಜಾತ ಮಂತ್ರದಿಂದ ತೆಗೆದುಕೊಂಡು ವಾಮದೇವ ಮಂತ್ರದಿಂದ ಉಂಡೆಯನ್ನು ಮಾಡಿ, ತತ್ಪುರುಷ ಮಂತ್ರದಿಂದ ಒಣಗಿಸಿ, ಶಿವಮಂತ್ರದಿಂದ ಸಂಸ್ಕರಿಸಲ್ಪಟ್ಟ ವಿರಹಾಗ್ನಿಯಲ್ಲಿ ಅಘೋರಮಂತ್ರದಿಂದ ದಹಿಸಿದ ಭಸ್ಮವೇ ಕಲ್ಪಭಸ್ಮವು.

ಅರಣ್ಯದಲ್ಲಿ ಒಣಗಿದ ಗೋಮಯವನ್ನು ತಂದು ಚೂರ್ಣವಂ ಮಾಡಿ ಮಂತ್ರ ಸಂಸ್ಕೃತಾಗ್ನಿಯಲ್ಲಿಟ್ಟು, ಅಘೋರ ಮಂತ್ರದಿಂದ ಸುಟ್ಟ ಭಸ್ಮವೇ ಅನುಕಲ್ಪವೆನಿಸುವದು. ಅಂಗಡಿ ಮೊದಲಾದ ಕಡೆಯಲ್ಲಿ ದೊರೆಯುವ ಭಸ್ಮವನ್ನು ತಂದು ಅದನ್ನು ಪುಡಿಮಾಡಿ ವಸ್ತ್ರದಿಂದ ಶೋಧಿಸಿ ಗೋಮೂತ್ರದಿಂದ ತೋಯಿಸಿ ಮಂತ್ರಪೂರ್ವಕವಾಗಿ ಒಣಗಿಸಿ ಸುಟ್ಟು ತಯಾರಿಸಿದ ಭಸ್ಮವೇ ಉಪಕಲ್ಪವೆನಿಸುತ್ತದೆ. ಮಂತ್ರಜ್ಞರಲ್ಲದ ಜನರು ಅಮಂತ್ರಕವಾಗಿ ಮಾಡಿಟ್ಟ ಭಸ್ಮವೆಲ್ಲವೂ ಅಕಲ್ಪವೆಂದು ನಿಶ್ಚಿತವಾಗಿರುವದು ಶಿವನ ಸದ್ಯೋಜಾತ ಮುಖದಿಂದ ಜನಿಸಿದ ನಂದಿ ಎಂಬ ಧೇನುವಿನಿಂದ ವಿಭೂತಿಯೂ, ವಾಮದೇವ ಮುಖದಿಂದ ಹುಟ್ಟಿದ ಭದ್ರೆ ಎಂಬ ಗೋವಿನಿಂದ ಭಸಿತವೂ, ಅಘೋರ ಮುಖದಿಂದ ಉಂಟಾದ ಸುರಭಿ ಎಂಬ ಹಸುವಿನಿಂದ ಭಸ್ಮವೂ, ತತ್ಪುರುಷ ಮುಖದಿಂದ ಹುಟ್ಟಿದ ಸುಶೀಲೆ ಎಂಬ ಆಕಳಿನಿಂದ ಕ್ಷಾರವೂ, ಈಶಾನ ಮುಖದಿಂದ ಉದ್ಭವಿಸಿದ ಸುಮನೆ ಎಂಬ ಧೇನುವಿನಿಂದ ರಕ್ಷೆಯೂ ಆದವು.

ಶಿವಪೂಜಾದಿ ನಿತ್ಯಕಾರ್ಯದಲ್ಲಿ ವಿಭೂತಿಯನ್ನು, ಜಂಗಮ ಪಾದಪೂಜಾದಿ ನೈಮಿತ್ತಿಕ ಕರ್ಮಗಳಲ್ಲಿ ಭಸಿತವನ್ನು, ಸಕಲಕಾರ್ಯಗಳಲ್ಲಿ ಕ್ಷಾರವನ್ನು, ಸರ್ವವಿಧ ಪ್ರಾಯಶ್ಚಿತ್ತ ಕರ್ಮಗಳಲ್ಲಿ ಭಸ್ಮವನ್ನು ಮುಕ್ತಿ ವಿಷಯಕ ಕರ್ಮಗಳಲ್ಲಿ ರಕ್ಷೆಯನ್ನು ಶಾಸ್ತ್ರೋಕ್ತ ಪ್ರಕಾರ ಉಪಯೋಗಿಸಬೇಕು

ಬೇಡಾ. ಕಲ್ಪಭಸ್ಮವು ತೀರಿದ್ದರೆ ಅನುಕಲ್ಪಭಸ್ಮವನ್ನು ಮಾತ್ರ ನನಗೆ ಕೊಡು ಎಂದು ನಿನ್ನ ಬೇಡುತ್ತಿದ್ದಿಯಲ್ಲವೇ ಶ್ರೇಷ್ಠವಾದ ಕಲ್ಪಭಸ್ಮವನ್ನು ತಂದಿರುವೆನು ಏಳು, ಎಂದು, ಒಬ್ಬ ಸುಮಂಗಲೆಯು; ಸುವಾಸಿನಿಯೇ! ಅಹರ್ನಿಶಿಯೂ ಅರ್ಚನಾಯ ಸಮಯಕ್ಕೆ ಬೇಕಾಗುವ ಶಿವಾಗಮಜ್ಞರು ಸ್ತುತಿಸುವ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆಗಳು ಹತ್ತಿರದಲ್ಲಿಯೇ ಇವೆ, ಏಳು ಎಂದು, ಒಬ್ಬ ಸಂಪನ್ನೆಯು; ಶಿವಮಾನಸ ಪೂಜಾನಿರತಳೇ ಎಂದು, ಒಬ್ಬ ಸೀಮಂತಿನಿಯು; ಪರಾ, ಪಶ್ಯಂತಿ, ಮಧ್ಯಮಾ, ವೈಖರಿ ಎಂಬ ಶಿವಲಿಂಗಸ್ಮರಣೆ ದರ್ಶನ-ಸ್ತುತಿ-ಪೂಜಾಸಕ್ತಳೇ, ಎಂದು, ಒಬ್ಬ ಸೌಭಾಗ್ಯವತಿಯು: ನವವಿಧವಾದ ಭಕ್ತಿಯುಳ್ಳಾಕೆಯೇ ಎಂದು, ಒಬ್ಬ ಸೌಂದರ್ಯವತಿಯು; ಶಿವಾನುಭವರಸಪಾನಚಿತ್ತಳಾದ, ಸ್ವಾನಂದಳಾದ ಮನೋಹರಗಾತ್ರಳೇ, ಎಂದು, ಒಬ್ಬ ಲಾವಣ್ಯವತಿಯಾದ ತಾರುಣ್ಯವತಿಯು, ಲಿಂಗರಮಣನ ಪ್ರಾಣವಲ್ಲಭಳೇ, ಎಂದು, ಒಬ್ಬ ನೂತನ ಯುವತಿಯು; ಅಷ್ಟಾವರಣನಿಷ್ಠಳಾದ ಸುಶೀಲೆಯೇ ಎಂದು, ಒಬ್ಬ ಚಾರುಗಾತ್ರಳು; ಪಂಚಾಚಾರನಿರತಳೇ, ಮನೋರಮೆಯೇ, ಎಂದು, ಒಬ್ಬ ಪ್ರೌಢೆಯು: ಷಟ್ಸ್ಥಲವನ್ನರಿತ ಮನೋಹರಗಾತ್ರಳೇ, ಎಂದು, ಒಬ್ಬ ವಿದಗ್ಧೆಯು; ಸದಾಚಾರಮನೋಹರಳೇ ಎಂದು, ಒಬ್ಬ ಮನೋಭಿಜ್ಞಳು; ಶಿವಭಕ್ತಿರಸದೊಡನೆ ಬೆರೆದ ರಕ್ತವಾಹಿನಿಯುಳ್ಳವಳೇ, ನಿನ್ನ ಚಿಂತಾಮಣಿಯನ್ನು ಯಾರಾದರೂ ಎತ್ತಿಕೊಂಡು ಹೋದರೋ? ಎಂದು, ಶಂಕಿಸುವ ಆಗಮಜ್ಞಳೊಬ್ಬಳು: ಶಿವಭಕ್ತಿ ದರ್ಪಣವೆಂಬ ರನ್ನಗನ್ನಡಿಯೇ ಎಂದು, ಒಬ್ಬ ರಸಿಕಳು; ಲಿಂಗೋಪಭೋಗಿಯಾದ ಸದ್ಗುಣಾಲಂಕಾರ ಮಂಡಿತಳೇ ಎಂದು, ಒಬ್ಬ ಸುಗುಣಾಭರಣಭೂಷಿತಳು; ಶಿವಜೀವೈಕ್ಯವನ್ನು ತಿಳಿದು ಮುಕ್ತಿಪ್ರದವಾದ ಲಿಂಗಾಂಗ ಸಾಮರಸ್ಯದಿಂದ ಶೋಭಾಯಮಾನಳಾದವಳೇ, ಎಂದು, ಶಿವಮಂತ್ರಾಧಿಕಾರಿಯೊಬ್ಬಳು: ಶಿವಾಧೀನವಾದ ಈ ಪ್ರಪಂಚದಲ್ಲಿ ಸರ್ವರೂ ದೈವಾಧೀನರೆಂದು ಒಬ್ಬ ವಿದುಷಿಯಾದ ಮುದುಕಿಯು; ಈ ಪ್ರಕಾರ ಕರುಣಾಶ್ಚರ್ಯ ಭಯಚಕಿತರಾದ ನಾರಿಯರು ಅಶ್ರುಗಳನ್ನು ಸುರಿಸಿದರು.

ಇತ್ತ ಬಸವರಾಜೇಂದ್ರನೊಡನೆ ಮಡಿವಾಳಯ್ಯ, ಕಿನ್ನರಯ್ಯ, ಭಾಚರಸ, ಹಡಪದ-ಅಪ್ಪಣ್ಣ, ಹೊನ್ನಿ ತಂದೆಗಳು, ಪಡಿಹಾರಿವುತ್ತಣ್ಣ, ಕೋಲಶಾಂತಯ್ಯ, ಮೋದರ ಕೇತಯ್ಯ, ಚನ್ನಬಸವ, ಎಡೆಮಠದ ನಾಗಯ್ಯ, ಸಿದ್ಧರಸ, ಪಡಿಹಾರಿ ಬಸವಯ್ಯ, ನಾಚಯ್ಯ, ಕೊಡ್ಡಳ, ಹೊಡೆಹುಲ್ಲ ಬಂಕಯ್ಯ, ಮೋಳಿಗೆಯ ಮಾರಯ್ಯ ಮೊದಲಾದ ಶಿವಗಣರು ಶಿವಗೋಷ್ಠಿಯಲ್ಲಿ ಸಂಭ್ರಮದಿಂದ ಇರುತ್ತಿರುವ ಸಮಯದಲ್ಲಿ ಪರಿಚಪ್ಪಳಾದ ಕಮಳಾಯಿಯ ವಾರ್ತೆಯು ಕಿವಿಗೆ ಬಿದ್ದು ಅಚ್ಚರಿಗೊಂಡವರಾಗಿ ಅಂತರ್ಮ್ಯಾತದಲ್ಲಿ ವಿಚಾರಿಸಿ ನಿಜವನ್ನು ತಿಳಿದು ಮುದವನಾಳ್ದರು.

ಪವಿತ್ರಳಾದ ಕಮಲಾಯಿಯ ಸಂಗತಿಯು ಚಾಡಿಕೋರರಲ್ಲಿ ಮುಖ್ಯನಾದ ಮಂಚರಸನಿಗೆ ಗೊತ್ತಾಗಲು, ಉಬ್ಬಿದವನಾಗಿ ಹಿಗ್ಗುತ್ತ ಆನಂದಿಸುತ್ತ ಅವನಿಪನಾದ ಬಿಜ್ಜಳನ ಗೃಹವನ್ನು ಪೊಕ್ಕು-ಜೀಯಾ, ಚಿತ್ತೈಸಬೇಕು; ಶಿವಶರಣರ ಉಪಟಳವು ಹೆಚ್ಚಿತು; ನೀನು ಮೆಚ್ಚಿನಂಬಿದ ಬಸವಣ್ಣನ ಅಮಾನುಷ ಕೃತ್ಯಕ್ಕಂತೂ ಪಾರವೇ ಇಲ್ಲಾ. ಹೀಗೆನ್ನುವ ಮಂಚರಸನನ್ನು ಉಚಿತಾಸನವಲ್ಲಿ ಕುಳ್ಳಿರಿಸಿ ಧರಿಣಿಪನಾದ ಬಿಜ್ಜಳನು ಉತ್ಸುಕತೆಯಿಂದ-ಮಂಚಣ್ಣನೇ, ಏನಾಯಿತು ? ಬಸವಣ್ಣನಿಂದ ಯಾವ ವಿಪತ್ತಿಗೊಳಗಾದೆವು ಹೇಳು, ಬೇಗನೆ ತಿಳಿಸು, ಎಂದು ಆತನನ್ನು ವಿಚಾರಿಸತೊಡಗಿದನು. ಮಂಚರಸನು ಉಸುರ್ಗರೆಯುತ್ತಾ-ದೊರೆಯೇ, ಶ್ರೀಮಂತರಲ್ಲಿ ಅಗ್ರಗಣ್ಯಳಾದ ಕಮಲಾಯಿ ಎಂಬ ಪುಣ್ಯಾಂಗನೆಯನ್ನು ಧನದಾಸೆಗೋಸುಗ ಬಸವನು ಕೊಲ್ಲಿಸಿರುವನು. ನಿನ್ನ ರಾಜ್ಯದಲ್ಲಿ ದುಷ್ಟನಿಗ್ರಹವೇ ಇಲ್ಲದಂತಾಯಿತು ಎಂದು ಹೇಳಿ ಮೌನವಾಗಿ ಕುಳಿತುಕೊಂಡನು. ಈ ಸಮಾಚಾರವನ್ನು ಕೇಳಿದೊಡನೆಯೇ ಸಾರಾಸಾರವಿಚಾರವಿಲ್ಲದ ಬಿಜ್ಜಳನು ಅತಿರೋಷಗೊಂಡವನಾಗಿ, ಸಂತಪ್ತಹೃದಯವುಳ್ಳವನಾಗಿ-ಈಗಲೇ ಆ ಬಸವನನ್ನು ಕರೆಸೆಂದನು. ಆಹ್ವಾನಿಸಲ್ಪಟ್ಟ ಬಸವೇಶನು ಚರಲಿಂಗ ಸಮೂಹದೊಡನೆ ರಾಜಸಭೆಗೆ ಬಂದು, ದೇದೀಪ್ಯಮಾನನಾಗಿ ತನ್ನ ದಿವ್ಯಾಸನದಲ್ಲಿ ಅಲಂಕೃತನಾದನು. ಬಿಜ್ಜಳನಿಂದ ಕಮಲಾಯಿಯ ವೃತ್ತಾಂತವನ್ನು ಬಸವೇಶನು ಕೇಳಿ-ದೊರೆಯೇ, ಚಾರುಶೀಲೆಯಾದ ಕಮಲಾಯಿಯ ಮಂದಿರಕ್ಕೆ ಹೋಗಿ ವಿಚಾರಿಸುವ ನಡೆ, ಎಂದು ಆತನನ್ನು ಕರೆದುಕೊಂಡು ಎಲ್ಲರೂ ಅಲ್ಲಿಗೆ ನಡೆದರು. ಆಗ ಬಸವದೇವನು ಸುತ್ತಲೂನೋಡಿ ಹಡಪದಪ್ಪಣ್ಣನೇ, ಹೋಗು; ಸುಜ್ಞಾನಿಯಾದ ಶಿವಯೋಗದ ನೆಲೆಯಾದ ಸತ್ಯನಾಥನನ್ನು ಕರೆದುಕೊಂಡು ಬಾ ; ಆ ಚಿನ್ಮೂರ್ತಿ ಯಾದ ಜೀವನ್ಮುಕ್ತನು ಯಾವತ್ತೂ ವಿಷಯವನ್ನು ಯಥಾವತ್ತಾಗಿ ವಿವರಿಸುವನು ಎಂದನು.

ಶಿವಾಕಾರ ಮೂರ್ತಿಯಾದ ಸತ್ಯನಾಥನು ಅಲ್ಲಿಗೆ ಬಂದು, ನೆರೆದ ಸಮಸ್ತ ಶರಣಗಣಾವಳಿಗೆ ವಂದಿಸಿ—ಏನಪ್ಪಣೆ ಎಂದು ವಿಜ್ಞಾಪಿಸಿದನು. ಬಸವಪ್ರಭುವು ಅತಿ ವಿನಯವಾಗಿ—ಚಿತ್ಕಲಾಮೂರ್ತಿಯಾದ ಸತ್ಯಣ್ಣನೇ, ಈ ಕಮಲಾಯಿಯ ಸ್ಥಿತಿ ಹೀಗೇಕೆ ಆಯಿತು? ಎಂದು ಕೇಳಿದನು. ಆಗ ಮಹಾ ಸತ್ಯಮೂರ್ತಿಯಾದಸತ್ಯಣ್ಣನು ತನ್ನ ಜ್ಞಾನದೃಷ್ಟಿಯಿಂದ ತಿಳಿದು ನೋಡಿ-ಪ್ರೀತಿಯುತನಾಗಿ ಬಸವೇಶನೇ, ಆಲಿಸು-ನಿನ್ನೆರಾತ್ರಿ ನಿತ್ಯತೃಪ್ತನಾದ ಪರಶಿವನು ನಿಮಿಷಾರ್ಧವೂ ಬಿಡದೆ ಶಿವಧ್ಯಾನಾಸಕ್ತಳಾದ ಕಮಲಾಯಿಯ ಲೋಕೋತ್ತರವಾದ ಆಚರಣೆಗೂ, ಅಲೌಕಿಕ ಗುಣಗಳಿಗೂ ಹರ್ಷಪಟ್ಟು, ಶಿವಭಾವದ ರಹಸ್ಯವು ಪಸರಿಸಲಿ ಎಂದು ವಿನೋದಕ್ಕಾಗಿ ಅವಳ ಇಷ್ಟಲಿಂಗವನ್ನು ತ್ರಿಪುರಹರನಾಲಯದಲ್ಲಿರಿಸಿರುವನು.

ಅದನ್ನು ತಂದು ಧರಿಸಿದರೆ ಮುಂಚಿನಂತೆ ಆ ಮಹಾತಾಯಿಯು ಎಚ್ಚತ್ತು ಆನಂದಿಸುವಳು ಎಂದನು.

ಆಗ ಆ ಲಿಂಗವನ್ನು ತಂದು ಆ ಸಂಪನ್ನೆಗೆ ಧರಿಸಲು ಮಲಗಿದವಳು ಏಳುವಂತೆ ಎದ್ದು, ಮಿಲಿತರಾದ ಎಲ್ಲ ಚರಪುಂಗವರಿಗೂ ಸಾಷ್ಟಾಂಗವಾಗಿ ಎರಗಿದಳು. ಬಸವಮಂತ್ರೀಶನು-ಜಯಜಯ ಎಂದನು; ಸುರರು ಪೂವಿನ ಮಳೆಯನ್ನು ಕರೆದರು; ಕಾರುಣ್ಯನಿಧಿಯಾದ, ಭಕ್ತವತ್ಸಲನಾದ ಉಮಾವರನು ಆಗಲೇ ಪ್ರತ್ಯಕ್ಷನಿಜರೂಪವನ್ನು ತೋರಿ ಪ್ರಸನ್ನನಾದನು ಝುಗಝುಗಿಸುವ ಪುಷ್ಪಕ ವಿಮಾನವು ಒಡನೆಯೇ ಬಂದಿತು. ಆದರ್ಶಪ್ರಾಯಳಾದ ಆ ಮಹಾಸತಿಗೆ ರುದ್ರ, ಕನ್ಯಾಧಿಪತ್ಯವನ್ನು ದಯಪಾಲಿಸಿ ಮಹಾಸ್ವಾಮಿಯು ಬಯಲಾದನು.

ಇದೆಲ್ಲವನ್ನು ಬಿಜ್ಜಳನು ಕಂಡು ಬೆದರಿ ಬೆಂಡಾಗಿ ನನ್ನ ಅಪರಾಧವನ್ನು ಮನ್ನಿಸಬೇಕೆಂದು ಬಸವೇಶ್ವರನಿಗೆ ಶರಣಾಗತನಾಗಿ ಪ್ರಾರ್ಥಿಸಿದನು.

ಶಿವಶರಣರ ಪ್ರಭಾವವನ್ನು ವರ್ಣಿಸಲು ಯಾರುತಾನೆ ಸಮರ್ಥರು? ಶಿವಶರಣರ ಅಳವನ್ನು ಶಿವಶರಣರೇ ಬಲ್ಲರು!

---

ವಿಚಾರಪರರಾದ ವಾಚಕರಿಗೂ, ಸದಮಲಾಂತಃಕರಣಿ
ಗಳಾದ ಗುಣಜ್ಞರಿಗೂ ಆದರದೊಡನೆ ಈ ಚಿಕ್ಕ
ಕಾವ್ಯವನ್ನು ಒಪ್ಪಿಸಿರುತ್ತೇನೆ.



# ಶ್ರೀ ನಿಜಗುಣ ಶಿವಯೋಗಿಕೃತ ಪುರಾತನರ ತ್ರಿವಿಧಿಯ ಪ್ರಾರಂಭದ ಪದ್ಯಗಳು.

ಶ್ರೀಗುರುವೇ ನಿಜಸುಖದ ಸಾಗರವೆ ತೆರಮಸಗು । ತಾಗಳುಂ ಬೆಳಗುತಿಹ ನಿನ್ನ ಕಡೆಗಣ್ಣ । ಳೀಗೆ ಸಂತಸವ ನಖಿಳರ್ಗೆ ॥ ೧ ॥

ಶರಣಜನ ಸಹಿತಂಗೆ ಕರುಣರಸ ಭರಿತಂಗೆ । ದುರಿತ ದೂರಂಗೆ ಗಿರಿಸುತೆಯ ರಮಣಂಗೆ । ಗುರುಶಂಭುವಿಂಗೆನತ ನಪ್ಪೆ ॥ ೨ ॥

ಇಂಗಡಲೊಳಿಂಪು ಬೆಳದಿಂಗಳೊಳು ತಂಪು ಕುಸು । ಮಂಗಳೊಳು ಕಂಪು ಬೆರೆದಂತೆ ಪರಮನೊಳು । ಪಿಂಗದಗಸುತೆಗೆನತ ನಪ್ಪೆ ॥ ೩ ॥

ಮಿಸುನಿತೊಡವೆನಿಸಿ ಬಹು ಪೆಸರು ದಳೆದಂತೆ ಭಾ । ವಿಸಿ ನೋಡಲಭವ ನಖಿಳರೆಂದೆನಿಪಗಣ । ವಿಸರ ವೆಲ್ಲಕ್ಕೆ ನತನಪ್ಪೆ ॥ ೪ ॥

ಉತ್ತಮ ಗಣೇಶ್ವರರ ಮೊತ್ತದೊಳು ನಿಜಕೀರ್ತಿ । ವೆತ್ತ ಮಹಿಮೆಗಳ ನೊಳಕೊಂಡ ಶರಣರದು । ವತ್ತು ಮೂವರಸೆ ಪೊಗಳುವೆನು ॥ ೫ ॥

ಶರಣರಂ ಪಾರ್ವತೀಶ್ವರನಿಗಿಂತಧಿಕ ವೆಂ । ದೊರೆವಾಗಮವನು ತಿಳಿದು ಸಾನವರ ಪದ । ಸರಸಿಜಂಗಳನೆ ನುತಿಗೈವೆ ॥ ೬ ॥

ಶೃತಿಯೊಳೀಶಾರ್ಚನೆಗೆ ನುತಿಕೋಟಿ ಮಿಗಿಲೆಂದು । ಪತಿಕರಿಸಿ ಪೊಗಳುತಿಹುದಾಗಿ ಶರಣ ಸಂ । ತತಿಯನೇ ಹಾಡಿ ಹರಸುವೆನು ॥ ೭ ॥

ಹರಗಣೆಯ ಕಳವಳದೊಳಿರುತ ಲಳಿದೋರ್ವಂಗೆ ಪರಲೋಕವಾದುದವರಿಂದೆ ನುತಿಪೆ ನೀ । ಶ್ವರಗಣ ಕುಲವ ನೊಲಿದಿಂತು ॥ ೮ ॥

ಮುದವಲರೆ ಹೃದಯಾಂಬುಜದೊಳು ಶಿವಭಕ್ತಿಯಿಂ । ಸದಮಳಾನಂದ ರಸವಾದ ಶರಣಾಳಿ । ಪದವ ಮನವೊಲಿದು ನುತಿಸುವೆನು ॥ ೯ ॥



ಓಂ

# ಅರುವತ್ತುಮೂವರು ಪುರಾತನರು.

# ೧. ಕಲಿಗಣನಾಥ.

ಅಣಿಯೊರದ ಭಕ್ತಿ ಧಾರುಣಿಗೆ ಪೊಸತಾಗಿ ಮ ।
ನ್ನಣೆಯೊಳೀಶಂಗೆ ಶಿವಲಿಂಗಮಿತ್ತ ಕಲಿ । ಗಣನಾಥನೆನ್ನ ಕುಲಗುರುವು

[ಶ್ರೀ ನಿಜಗುಣಶಿವಯೋಗಿ



ಣ್ಯಭೂಮಿಯಾದ ಈ ಭರತವರ್ಷವು ಆಸ್ತಿಕ್ಯದ ತವರು ಮನೆಯು; ಜಗದ್ವಿಖ್ಯಾತರಾದ ಧರ್ಮಸಂಸ್ಥಾಪಕರ ಆಗರವು; ಭಕ್ತೋದ್ಧಾರಕ್ಕಾಗಿಯೇ ಜನ್ಮವೆತ್ತುವ ಮುನಿಜನಗಳ ಬೀಡು. ಸುಹೃದಯ ವಾಚಕ ವರ್ಗಕ್ಕೆ ಇದೆಲ್ಲವು ವೇದ್ಯವಾದ ಸಂಗತಿಯೆಂದಬಳಿಕ ಹೆಚ್ಚು ವರ್ಣನೆಯು ಅವಶ್ಯವಿಲ್ಲವೆಂಬುವದು ಒಡೆದುಕಾಣಿಸುವುದು.

ಈ ಭರತಖಂಡದ ದಕ್ಷಿಣಪ್ರದೇಶದಲ್ಲಿ ತಪೋಧನರಿಂದ ನಿಬಿಡೀಕೃತವಾದ ತಪೋವನವು ಕಂಗೊಳಿಸುತ್ತಿತ್ತು. ಇಲ್ಲಿ ಸಕಾಲಕ್ಕೆ ಮಳೆ ಬೆಳೆಗಳು ಸಮೃದ್ಧಿಯಾಗಿದ್ದವೆಂದು ವಿವರಿಸುವದೇ ಬೇಡ. ಸಕಲ ಪ್ರಾಣಿಗಳು ತಮ್ಮ ಸಹಜವಾದ ಜಾತಿ ವೈರವನ್ನು ತೊರೆದು, ಪರಸ್ಪರ ಮೈತ್ರಿಭಾವದಿಂದ ನಡೆದುಕೊಳ್ಳುತ್ತಿದ್ದವು. ಎಲ್ಲಿ ನೋಡಿದರೂ ಕೆರೆಗಳು ತುಂಬಿ, ಹೊಳೆ ಹಳ್ಳಗಳು ತೆರೆಗಳಿಂದ ಯುಕ್ತವಾಗಿ ನೋಡುವವರಿಗೆ ದಯಾಘನನಾದ ಪರಮೇಶ್ವರನ ಅಗಾಧ ಮಹಿಮೆಯನ್ನೂ ಆತನಕರುಣಾರಸದ ಕೋಡಿಯನ್ನೂ ನೆನಪಿಗೆತರುತ್ತಿದ್ದವು. ಬಳ್ಳಿಗಳು ಹೂವುಗಳಿಂದಲೂ, ಗಿಡಗಳು ಫಲಗಳಿಂದಲೂ ಜಗ್ಗಿದ್ದವು. ನೆರೆಯಲ್ಲಿಯೆ ಶ್ರೀ ಬಿಲ್ವವೃಕ್ಷಗಳ ವನವು ನೇತ್ರಾನಂದಕರವಾಗಿತ್ತು. ಮಗ್ಗುಲಲ್ಲಿಯೇ ಗೋಶಾಲೆಯು ಪ್ರೇಕ್ಷಕರ ಮನಸ್ಸನ್ನು ಆಕರ್ಷಿಸುತ್ತಿತ್ತು. ನಿಜಧರ್ಮಾಚರಣೆಯಿಂದ ದೂರವಾದ ಒಂದು ಪ್ರಾಣಿಯಾದರೂ ಇಲ್ಲಿ ದೊರೆಯುವ್ರುದು ದುರ್ಲಭವೆಂದ ಬಳಿಕ ಇದು ಶಿವಧರ್ಮರತಿಯಿಂದೊಪ್ಪುವ ಶಿವಯೋಗಿಗಳಆಶ್ರಮವೆಂದು ಯಾರಿಗೆತಾನೆ

ತಪ್ಪನೆ ಹೊಳೆಯದು? ಸ್ವಸ್ವರೂಪಜ್ಞಾನಯುತರಾದ ಈ ಯತಿಕುಲತಿಲಕರು ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಪದವಿಗಳನ್ನು ಧಿಕ್ಕರಿಸಿ. ತಮ್ಮ ಶಿವಯೋಗಪದದಲ್ಲಿ ಬಲ್ಲಿದರಾಗಿ ದ್ವಿತೀಯ ಶಂಭುವಿನಂತೆ ವಿರಾಜಿಸುತ್ತಿದ್ದರು. ನಿಜಶಿವಾನಂದಯುತರಾದ ಮುನಿಗಳ ಆವಾಸಸ್ಥಾನವೆಂದಬಳಿಕ ಷಡ್ರಿಪುಗಳಸುಳಿದಾಟವೇ ಅಲ್ಲಿ ಇದ್ದಿಲ್ಲವೆಂಬುವದು ಆಶ್ಚರ್ಯವಲ್ಲವು. ಶಿವತತ್ವವಿವೇಚನೆ, ಶಿವಾಗಮಗಳ ಅವಲೋಕನೆ, ಎಡಬಿಡದೆ ನಿಜಪತಿಯಾದ ಭಗವಂತನ ಸ್ಮರಣೆ ಮುಂತಾದುವೇ ಅವರ ನಿತ್ಯ ವ್ಯವಸಾಯಗಳು.

ತಪೋವನದ ಸಮೀಪದಲ್ಲಿಯೇ ಒಂದು ನಗರವು ಸಕಲ ಜನಾನಂದಕರವಾಗಿ ಸಂಶೋಭಿಸುತ್ತಿತ್ತು. ಈ ಪಟ್ಟಣವು ಮನೋಹರವಾಗಿದ್ದಿತೆಂದು ಬಣ್ಣಿಸಲು ಯಾರಿಗೆ ಸಂತೋಷವಾಗಲಿಕ್ಕಿಲ್ಲವು? ಯಾಕಂದರೆ ಆ ಪುರವು ಆಶ್ರಮಧರ್ಮವನ್ನರಿತು ನಡೆಯುವ ಜನರಿಂದಲೂ, ಸ್ವಧರ್ಮನಿಷ್ಠೆಯುಳ್ಳ ಗೃಹಸ್ಥರಿಂದಲೂ, ಉದ್ಯೋಗತತ್ಪರರಾದ, ಸದಾಚಾರನಿರತರಾದ, ನರನಾರಿಯರಿಂದಲೂ ಪ್ರಕಾಶಿಸುತ್ತಿತ್ತು. ಇನ್ನೊಂದು ವಿಶೇಷವೇನಂದರೆ ಹದಿಬದೆಯ ಧರ್ಮವನ್ನರಿತು ಸರಿಯಾಗಿ ವರ್ತಿಸುವ ವಿವೇಕ ಸಂಪನ್ನೆಯರಾದ ಕುಲಸ್ತ್ರೀಯರಿಂದ ಆ ಗ್ರಾಮವು ಅಲಂಕೃತವಾಗಿದ್ದಿತು. ಇಂತಪ್ಪ ಸೌಂದರ್ಯಯುಕ್ತವಾದ ಸ್ಥಾನದಲ್ಲಿ ನಮ್ಮ ಕಥಾನಾಯಕನ ಜನನೀ ಜನಕರಾಗಿ ಪರಿಣಮಿಸುವ ವ್ಯಕ್ತಿಗಳು ಪ್ರೌಢವಯಸ್ಸಿನವರಾಗಿ, ಕರ್ತವ್ಯತತ್ಪರರಾಗಿ ಧರ್ಮಾಚರಣೆಯಿಂದ ನಡೆಯುತ್ತಿದ್ದರು.

ಜಗತ್ಸೂತ್ರಧಾರಿಯಾದ, ಅಚ್ಯುತನಾದ, ಮೃತ್ಯುಂಜಯನಾದ ಪರಶಿವನ ಅಪ್ಪಣೆಯಂತೆ ನಮ್ಮ ಚರಿತ್ರನಾಯಕನ ಜನನೀಜನಕರ ವಿವಾಹವು ಸುಯೋಗ ಶುಭ ಮುಹೂರ್ತದಲ್ಲಿ ನಿಶ್ಚೈಸಲ್ಪಟ್ಟಿತು. ಈ ಲಗ್ನದಲ್ಲಿ ಪೂಜ್ಯಗುರುಗಳು ಅಷ್ಟಾವರಣ ಮಹಿಮೆಯಿಂದ ಗರ್ಭಿತವಾದ ಮಂಗಲಾಷ್ಟಕವನ್ನು ಹೇಳುತ್ತ ಅಕ್ಷತಾರೋಪಣಮಾಡುವ ದಿವ್ಯ ಕಾಲಕ್ಕೆ ಮೇಲೆ ವಿವೇಚಿಸಲ್ಪಟ್ಟ ಶಿವಯೋಗಿಪುಂಗವರು ತೇಜೋವಂತರಾಗಿ ಶಿವತೇಜಸ್ಸಿನಿಂದ ವಿಜೃಂಭಿಸುತ್ತ ದೃಷ್ಟಿಮಾತ್ರದಿಂದಲೆ ಸದ್ಭಕ್ತಿಯಿಂದ ನೋಡುವವರನ್ನು ಆಶೀರ್ವದಿಸುತ್ತ ಲಗ್ನಮಂಟಪಕ್ಕೆ ಬಂದು ವಧುವರರನ್ನು ಕಂಡು ಆನಂದತುಂದಿಲರಾಗಿ-ಪ್ರಮಥಶ್ರೇಷ್ಠನೊಬ್ಬನು ನಿಮಗೆ ಮಗನಾಗಿ ಹುಟ್ಟುವನು ಎಂದು ಆಶೀರ್ವದಿಸಿ ತೆರಳಿದರು.

ಲಿಂಗೋಪಭೋಗಿಗಳಾದ ನಮ್ಮ ಕಥಾನಾಯಕನ ಮಾತಾಪಿತರು ಶಿವಾನುಭವಶಾಸ್ತ್ರವನ್ನು ಹೃದಯಪಟಲದಲ್ಲಿ ಸಂಗ್ರಹಿಸುತ್ತ, ಶಿವಧ್ಯಾನಾಸಕ್ತರಾಗಿ, ಶಿವಾನುಭವ ರಸಪಾನಚಿತ್ತರಾಗಿ, ಅಘಟಿತಘಟನಾಸಮರ್ಥರಾದ ಪ್ರಮಥರನ್ನು ಬಾರಿಬಾರಿಗೂ ನೆನೆಯುತ್ತ, ಮಾಂಗಲ್ಯಧಾರಣಕಾಲಕ್ಕೆ ಆಶೀರ್ವದಿಸಿದ ಜೀವನ್ಮುಕ್ತರಾದ ಶಿವಯೋಗಿಗಳನ್ನು ಸ್ಮರಿಸುತ್ತ ಪ್ರೇಮಾನಂದ ರಸದೊಡನೆ ಜಾಯಾ

ಪತಿಗಳು ಸಮರಸವನ್ನು ಹೊಂದಿದರು. ಈ ಪವಿತ್ರ ದಂಪತಿಗಳ ದೃಢವಾದ ಶಿವಭಕ್ತಿರಸವೇ ಪಿಂಡವಾಗಿ ಪರಿಣಮಿಸಿ, ಕ್ರಮೇಣ ಬಲಿತು ಗರ್ಭವು ಪೂರ್ಣತೆಯನ್ನು ಹೊಂದಿತು.

ಪುಣ್ಯವತಿಯಾದ ಈ ಲಲನಾಮಣಿಯು ಗರ್ಭವತಿಯಾದಾಗ ಆ ಮನೋರಮೆಗೆ ಅನುಗುಣವಾಗಿ ಶಿವಕಥಾ, ಶಿವಪುರಾಣ, ಪ್ರವಚನ, ಶಿವಕೀರ್ತನಾಶ್ರವಣ, ಶಿವಶರಣರ ಮಹಿಮೆಯನ್ನೊಳಗೊಂಡ ಸಚ್ಚರಿತ್ರವನ್ನು ಆಲಿಸೋಣ, ಮಾಹೇಶ್ವರರ ಪೂಜೆ ಮುಂತಾದ ಮುಕ್ತಿಪ್ರದಾಯಕವಾದ ಕ್ರಿಯೆಗಳು ಸಹಜವಾಗಿ ಲಭಿಸಿದ್ದುದು ಆಕೆಯ ಪೂರ್ವ ಸುಕೃತವೋ ಅಥವಾ ಶಾಂತಿಮಯರಾದ ಸುಗಣಾತಿಶಯದ ರಾಶಿಯಂತೊಪ್ಪುವ ತಪೋನಿಷ್ಠರಾದ ಶಿವಯೋಗಿಗಳ ಆಶೀರ್ವಾದವೂ ಎಂಬದನ್ನು ನಿರ್ಣೈಸಲಿಕ್ಕೆ ಪಾಠಕ ಮಹಾಶಯರಿಗೆ ಒಪ್ಪಿಸಿರುತ್ತದೆ.

ಶಿವಾಗಮಜ್ಞರು ನಿರ್ಣೈಸಿದಂತೆ ವಿಧ್ಯುಕ್ತವಾಗಿ ಸುಶೀಲೆಯಾದ ಗರ್ಭವತಿಗೆ ಎನೇಯ ತಿಂಗಳಲ್ಲಿ ತಂತ್ರಜ್ಞರಾದ ಪೂಜ್ಯಗುರುಗಳಿಂದ ಗರ್ಭದಲ್ಲಿಯ ಶಿಶುವಿಗೆ ಅನುಸಂಧಾನಪೂರ್ವಕವಾಗಿ ಲಿಂಗಧಾರಣೆಯನ್ನು ಮಾಡಿದರು.

ನವಮಾಸ ತುಂಬಿದ ಬಳಿಕ ನಮ್ಮ ಮಹಾಪ್ರಮಥನು ಶುಭ ಮುಹೂರ್ತದಲ್ಲಿ ಅಮೃತಕಾಲದಲ್ಲಿ ಭೂಮಿಯಲ್ಲಿ ಅವತರಿಸಿದನು. ಶಿವಜ್ಞಾನಿಗಳಾದ ಶಿವಯೋಗಿಗಳ ಅನುಜ್ಞೆಯ ಪ್ರಕಾರ ಈ ಅರ್ಭಕನಿಗೆ **ಕಲಿಗಣನಾಥ** ನೆಂಬ ನಾಮಕರಣವನ್ನು ಮಾಡಿದರು. ಈ ಮಹಾಪುರುಷನು ಪ್ರಾದುರ್ಭವಿಸಿದೊಡನೆ ಪಟ್ಟಣದ ಸೌಭಾಗ್ಯವು ಹೆಚ್ಚಿತು. ಕೃಷಿ, ವಾಣಿಜ್ಯ, ಕೈಗಾರಿಕೆಗಳು ಅಭಿವೃದ್ಧಿ ಹೊಂದಿದವು. ಜನತೆಯಲ್ಲಿ ಆರೋಗ್ಯವು ಹೆಚ್ಚಿತು; ಎಲ್ಲರಲ್ಲಿಯೂ ಗುರುದೇವತಾ ಭಕ್ತಿಯು ಮಿಗೆ ವೆಗ್ಗಳವಾಯಿತು; ಜನರಲ್ಲಿ ಶಿವಭಕ್ತಿಯು ಹೆಚ್ಚಾಯಿತು; ಮಕ್ಕಳಲ್ಲಿ ಮಾತಾಪಿತೃಭಕ್ತಿಯು ವರ್ಧಿಸಿತು; ಶಿಷ್ಯರ ಪ್ರೇಮವು ಗುರುಗಳಲ್ಲಿ ಅಧಿಕವಾಯಿತು; ಚಿಕ್ಕವರ ಮೇಲೆ ಗುರುಜನರ ವಾತ್ಸಲ್ಯವು ವಿಸ್ತೃತವಾಯಿತು; ಸುರಭಿಗಳು ಹೆಚ್ಚಾಗಿ ಹಾಲು ಕರೆಯಹತ್ತಿದವು. ವಿದ್ಯಾಧಿದೇವತೆಯಾದ ಶರ್ವಾಣಿಯು ಕವಿಜನರಿಗೆ ಶ್ರೇಯಸ್ಸನ್ನಪೇಕ್ಷಿಸಿದಳು; ಸಿರಿಗೆ ಅಧಿದೇವತೆಯಾದ ಜಗನ್ಮಾತೆಯಾದ ಭವಾನಿಯು ತ್ಯಾಗಿಗಳಾದ ಧರ್ಮಾತ್ಮರಿಗೆ ಪ್ರಸನ್ನಳಾದಳು; ಶಿವಾಲಯಗಳಲ್ಲಿ ಆರ್ಯರ ಶಿವಭಜನೆಯು ಸುಶ್ರಾವ್ಯವಾಗಿ ನಡೆಯಿತು; ಮಠಗಳಲ್ಲಿ ಶ್ರೀ ರುದ್ರಪಠನ, ಗಣಸಹಸ್ರಗಳೊಂದಿಗೆ ಪಾದ ಪೂಜೆಯು ಪ್ರತಿನಿತ್ಯವು ಪ್ರಾರಂಭವಾಯಿತು; ಕಾಮಿಜನರಿಗೆ ವಿವೇಕವು ಅಂಕುರಿಸಿ ಗ್ರಾಮ್ಯವಾದ ವಿಷಯವಾಸನೆಯು ಅಗ್ರಾಹ್ಯವೆಂದರಿತು ಮನಗಂಡು, ಯೋಗಿಗಳು ತಮ್ಮ ವೀರ್ಯವನ್ನು ಊರ್ಧ್ವಮುಖವನ್ನಾಗಿ ಮಾಡುವುದನ್ನು ತಿಳಿದು ಆ ಜಿತೇಂದ್ರಿಯರನ್ನು ಕೊಂಡಾಡಿ ಶಿವನಾಮಪೂರ್ವಕವಾಗಿ ಉದ್ಘೋಷಿಸಿದರು.

ಬಹಳ ಹೇಳುವದೇನು ? ಪ್ರಜರಿಗೆ ಪರಬ್ರಹ್ಮವಿದ್ಯೆಯೇ ವಿದ್ಯೆಯು ಎಂದು ಅನಿಸಹತ್ತಿತು. ಉತ್ಸಾಹಯುತರಾದ ವಿಮರ್ಶಾಶಕ್ತಿಯುಳ್ಳ ಪರೀಕ್ಷಕರು ಈಗ ನಡೆಯುವ ಯುಗವು ಕಲಿಯುಗವೋ ಅಥವಾ ಧರ್ಮಯುಗವೋ ಎಂದು ತೊಡರಿನಲ್ಲಿ ಬಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಪರಿಸ್ಥಿತಿಯು ಹೀಗಿರಲು ವಸುಧೆಯು ಸಂತೋಷವನ್ನು ಹೊಂದಿತು. ಶಿವೋಪಾಸಕರಾದ ಯೋಗಿಗಳು ಸಂತಸಪಟ್ಟರು ; ಶಿವಭಕ್ತರು ನಲಿದಾಡಿದರು ; ಶ್ರೀಗೌರೀಪತಿಯು ಪ್ರೀತಿಯುತನಾದನು. ಆದರೆ ಕಲಿಪುರುಷನು ಮಾತ್ರ ಕಲಿಗಣನಾಥನೆಂಬ ಹೆಸರನ್ನು ಕೇಳಿದೊಡನೆ ಬೆದರಿದನು. ಪ್ರಭುಸಂಕಲ್ಪಕ್ಕೆ ಬೇರೆ ವಿರೋಧವುಂಟೆ ? ಆತನ ಅಪ್ಪಣೆಯು ನಿರಾತಂಕವಾದುದು ; ಯಾರಿಂದಲೂ ಉಲ್ಲಂಘನೀಯವಾದದ್ದಲ್ಲ.

ಶಿವಕುಮಾರನಾದ ಷಣ್ಮುಖನಂತೊಪ್ಪುವ ಕಲಿಗಣನಾಥನು ಬಾಲ್ಯದಲ್ಲಿಯೇ ಓಂಕಾರಾದಿಯಾಗಿ ಅಕ್ಷರಾಭ್ಯಾಸವನ್ನು ಹೊಂದಿ ಶಿವತತ್ವ ಸಿದ್ಧಾಂತ ರಹಸ್ಯವಿಶಾರದನಾಗಿ, ಶಿವಾಗಮಕೋವಿದನಾಗಿ, ಯೋಗ್ಯಸಮಯದಲ್ಲಿ ಶಿವಮಂತ್ರಾಧಿಕಾರವನ್ನು ಹೊಂದಿ, ಮಾಂಸಪಿಂಡವನ್ನಳಿದು ಶಿವಮಂತ್ರಮಯ ಶರೀರಿಯಾಗಿ, ದೇದೀಪ್ಯಮಾನನಾಗಿ ಶಿವಾನಂದದಲ್ಲಿ ಮೆರೆಯುತ್ತಿದ್ದನು.

ಅನಾದ್ಯನಂತನಾದ ಧೂರ್ಜಟಿಯ ಸಂಕಲ್ಪಾನುಸಾರವಾಗಿ ನಮ್ಮ ಕಥಾನಾಯಕನಿಗೆ ಅರಸೊತ್ತಿಗೆಯು ಪ್ರಾಪ್ತವಾಯಿತು. ಈ ಧರ್ಮವ್ರತನಾದ ರಾಜನು ಪ್ರಜರಿಗೆ ಹಿತವಾಗುವಂತೆ ಸಮೀಚೀನವಾದ ಏರ್ಪಾಡುಗಳಿಂದ ಸುಜ್ಞರು ಒಪ್ಪುವಂತೆ ರಾಜ್ಯಸೂತ್ರವನ್ನು ನಿರ್ವಹಿಸುತ್ತಿದ್ದನು. ಈ ಭೂಪಾಲನು ತನ್ನ ರಾಜಧಾನಿಯಲ್ಲಿ ಎಲ್ಲರೂ ಲಿಂಗಧಾರಣೆಮಾಡಬೇಕೆಂದು ಸಮಸ್ತ ಜನರಿಗೆ ಆಜ್ಞಾಪಿಸಿ, ಸಕಲ ವೇದಾಗಮೋಪನಿಷತ್ಪ್ರಮಾಣಗಳಿಂದ ಪ್ರಜರನ್ನೊಡಂಬಡಿಸಿ ಯಾವತ್ತರನ್ನು ಲಿಂಗಾಂಗಿಗಳನ್ನಾಗಿ ಮಾಡಿದನು.

ಧೀರೋದಾತ್ತನಾದ ಸತ್ಯವ್ರತನಾದ ಈ ಧರಣೀಶನ ಆಳಿಕೆಯಲ್ಲಿ ಬೊಕ್ಕಸವು ಚನ್ನಾಗಿದ್ದಿತು. ಅಕಾಲಮೃತ್ಯುವೆಂಬ ಶಬ್ದವು ಕೇಳಬರುತ್ತಿರಲಿಲ್ಲ. ದುರ್ಭಿಕ್ಷವೆಂಬ ಶಬ್ದವು ನಿಘಂಟುಗಳಲ್ಲಿ ಮಾತ್ರ ಹೊರಡುತ್ತಿತ್ತು. ಸದಾಚಾರವು ಮನೆ ಮಾಡಿಕೊಂಡಿತ್ತು. 'ಶರಣ ಸತಿ ಲಿಂಗ ಪತಿ' ಎಂಬ ಭಾವವು ಪುರವಾಸಿಗಳ ಮನೋವೃತ್ತಿ ಮತ್ತು ಅವರ ನಡತೆಯ ಮೇಲಿಂದಲೆ ಒಡೆದು ಕಾಣುತ್ತಿತ್ತು. ಸರ್ವವ್ಯಾಪಕನಾದ ಜಗತ್ಪ್ರಭುವು ಅನುಕೂಲಿಸುವಾಗ ಯಾವದು ತಾನೆ ಅಸಾಧ್ಯವಾದೀತು ?

ಲಿಂಗಧರಿಸದವರ ಮುಖವನ್ನು ನಾನು ಈಕ್ಷಿಸಲು ಅಪೇಕ್ಷಿಸುವದಿಲ್ಲವೆಂದು ನಮ್ಮ ದೊರೆಯು ಕಟ್ಟು ಮಾಡಿದ್ದನು. ಆದರೆ ವಿಶ್ವಸೂತ್ರಧಾರಿಯಾದ ಆ ತ್ರಿಭವನ ಸಂಕೇತದಂತೆ ವಿಚಿತ್ರವಾದ ಸಂಗತಿಯು ಸಂಭವಿಸಿತು.

ಜಗದೊಡೆಯನಾದ ಶಂಭುವು ತಾನು ಲಿಂಗವಿಲ್ಲದ ಒಕ್ಕಲಿಗನ ವೇಷವನ್ನು ತಾಳಿ ಒಮ್ಮಿಂದೊಮ್ಮೆಲೆ ಯಾರಿಗೂ ಗೋಚರಿಸದಂತೆ ರಾಜನು ಇರುವ ಮಂದಿರದ ಹೊರಬಾಗಿಲಲ್ಲಿ ಪ್ರಾಪ್ತನಾದನು! ಅದನ್ನು ದ್ವಾರಪಾಲಕನು ನೋಡಿ— ಎಲೈ ಒಕ್ಕಲಿಗನೇ, ಇದೇನು? ಅಲಿಂಗಿಯಾದ ನೀನು ಇಲ್ಲಿಗೆ ಹೇಗೆ ಬಂದಿರುವಿ? ನಡೆ ಲಿಂಗರಹಿತರು ಈ ಪಟ್ಟಣದಲ್ಲಿ ಇರಕೂಡದೆಂದು ರಾಜಶಾಸನವಿದೆ; ಬೇಗನೆ ಇಲ್ಲಿಂದ ತೆರಳು ಎಂದು ದ್ವಾರಪಾಲಕನು ಗದರಿಸಿದನು. ಅದಕ್ಕೆ ಕಪಟವೇಷಧಾರಿಯು:—ಎಲೈ ದ್ವಾರಪಾಲಕ, ನನ್ನೊಡನೆ ನಿನಗೆ ಕಲಹವೇಕೆ? ನಾನು ನಿಮ್ಮ ರಾಜನನ್ನು ಕಾಣಬೇಕಾಗಿರುವದು. ಯಾಕಂದರೆ, ನನಗೆ ಭೂಮಿಯ ತೆರಿಗೆಯನ್ನು ಹೆಚ್ಚು ಹಾಕಿರುವರು.

ನೀತಿಶಾಸ್ತ್ರ ವಿಶಾರದನಾದ ನಮ್ಮ ಭೂಪತಿಯು ಸ್ವಲ್ಪ ಕಾಲದ ಮುಂಚೆ ತಜ್ಞರಿಂದ ಬರೆಯಲ್ಪಟ್ಟ ಶಿವಪರವಾದ ಪ್ರಬಂಧವನ್ನು ಪರೀಕ್ಷಿಸಲಿಕ್ಕೆ ಶಿವಾನುಭವಮಂದಿರಕ್ಕೆ ದಯಮಾಡಿಸಿದ್ದನು. ದ್ವಾರಪಾಲಕನು ಶಿವಾನುಭವ ಮಂಟಪದಲ್ಲಿ ಪ್ರವೇಶಿಸಿ ಒಕ್ಕಲಿಗನ ಸಮಾಚಾರವನ್ನು ನಿವೇದಿಸಿದನು. ಅದಕ್ಕೆ ರಾಜನು ಅಪ್ಪಣೆ ಮಾಡಿದ್ದು—ದ್ವಾರಪಾಲಕಾ, ಹೋಗು; ತೆರಿಗೆಯನ್ನು ವಾಸ್ತವವಾಗಿ ಹಾಕಿರುತ್ತದೆ. ಆ ಅಲಿಂಗಿಗೆ ರಾಜಧಾನಿಯನ್ನು ಬಿಟ್ಟು ತಕ್ಷಣ ಹೋಗೆಂದು ಹೇಳು. ರಾಜನ ಈ ಅಪ್ಪಣೆಯು ಒಕ್ಕಲಿಗನ ಕಿವಿಗೆ ಬೀಳೋಣ ಆತನು ದ್ವಾರಪಾಲಕಾ, ನಾವು ಪೂರ್ವದಿಂದಲೂ ತೆರಿಗೆಯನ್ನು ಕಡಿಮೆ ಕೊಡುತ್ತಿದ್ದೆವು. ನಮಗೆ ಈಗ ಹೊಸದಾಗಿ ತೆರಿಗೆ ಹೆಚ್ಚಾಗಿ ಹಾಕಿರುತ್ತಾರೆ. ಮಹಾಸನ್ನಿಧಿಗೆ ವಿಜ್ಞಾಪಿಸು; ಇಲ್ಲವೆ ಪ್ರಭುಗಳ ದರ್ಶನವನ್ನಾದರೂ ಮಾಡಿಸು. ಇದಕ್ಕೆ ಪ್ರತಿಯಾಗಿ ರಾಜನು ನಿರೂಪ ಕಳಿಸಿದ ವಿವರವು—ಒಕ್ಕಲಿಗನೇ, ಲಿಂಗಧಾರಣೆಯನ್ನು ಹೊಂದು, ಅಂದರೆ ನಿನ್ನ ಮನೋರಥವನ್ನು ಪೂರೈಸುವೆನು. ಅದಕ್ಕೆ ಒಕ್ಕಲಿಗನು ತಿಳಿಸಿದ್ದು—ನಮ್ಮ ಹಿರಿಯರು ಲಿಂಗ ಧರಿಸಿರಲಿಲ್ಲವು; ಆದ್ದರಿಂದ ನಾನೂ ಕೂಡ ಲಿಂಗ ಧರಿಸುವದಿಲ್ಲ. ಕಲಿಗಣನಾಥ ಮಹಾರಾಜನು ಒಕ್ಕಲಿಗನ ಮಾತನ್ನು ಕೇಳಿ ಅಸಹ್ಯಪಟ್ಟು ಆತನನ್ನು ಸಂಹರಿಸುವೆನೆಂದು ಖಡ್ಗವನ್ನು ಹಿರಿದು ಶಿವಾನುಭವ ಮಂದಿರದ ಹೊರಗೆ ಬಂದನು. ಕಪಟವೇಷಧಾರಿಯಾದ ಕಪರ್ದಿಯು ನಿಜರೂಪವನ್ನು ತೋರಿ ಪ್ರಸನ್ನನಾಗಿ ಬೇಕಾದ ವರವನ್ನು ಬೇಡೆಂದು ಹೇಳಿದನು. ನನಗೆ ಯಾವ ವರವೂ ಬೇಡ; ನಿನ್ನಲ್ಲಿ ಲಿಂಗಧಾರಣೆ ನನಗೆ ಕಾಣಿಸುವದಿಲ್ಲ; ಶಿವಲಿಂಗವನ್ನು ಧರಿಸಿಕೊಂಡರೆ ನನಗೆ ಅದೇ ವರವು ಸಾಕೆಂದು ಕಲಿಗಣನಾಥನು ಮಹಾಸ್ವಾಮಿಗೆ ನಿವೇದಿಸಿದನು. ಭಕ್ತಾಧೀನನಾದ ಶ್ರೀ ಶಂಕರನು ನಿರುಪಾಯನಾಗಿ ಲಿಂಗವನ್ನು ಧರಿಸಿಕೊಂಡು ನಮ್ಮ

ಚರಿತ್ರನಾಯಕನಿಗೆ ನಿರಂಜನ ಗಣಪದವಿಯನ್ನು ಅನುಗ್ರಹಿಸಿ ಲೀಲೆಯಿಂದ ದಯಮಾಡಿಸಿದನು.

ಪಾಠಾಂತರವು.—ಮಿಗಿಲಾದ ಚೋಳಸೀಮೆಯಲ್ಲಿ ಮೆರೆಯುವ ಶಿವಪುರ ವೆಂಬ ಪುರದಲ್ಲಿ ಗಣನಾಥನೆಂಬ ಉಗ್ರಶಿವಾಚಾರದ ಭಕ್ತನು ಧನಪತಿಯಾಗಿ ರುತ್ತ ಆ ಊರಲ್ಲಿರುವ ಭವಿಗಳಿಗೆ (ಅಂದರೆ ಲಿಂಗರಹಿತರಿಗೆ) ಬೇಡಿದಷ್ಟು ಧನ ಕನಕಾದಿಗಳನ್ನು ಕೊಟ್ಟು ಅವರನ್ನು ಶಿವಭಕ್ತರನ್ನಾಗಿ ಮಾಡುವ ಛಲದವ ನಾಗಿದ್ದನು. ಆತನ ಛಲಕ್ಕೊಪ್ಪದ ಭವಿಗಳನ್ನು ವರೆಯೊಳಗಿಂದ ಹಿರಿದ ಖಡ್ಗ ದಲಗನ್ನು ತೋರಿಸಿ ಅವರಿಗೆ ವಿಭೂತಿಯನ್ನು ಪೂಸಿ ಈಶ್ವರಭಕ್ತರನ್ನಾಗಿ ಮಾಡುತ್ತ ಈ ರೀತಿಯಾಗಿ ತಪ್ಪದೆ ದಿನಾಲು ಐವರನ್ನು ಶಿವಪಥಕ್ಕೆ ತರು ತ್ತಿದ್ದನು. ಈ ವಿಷಯವನ್ನು ತಿಳಿದು ಕೆಲವರು ಹಣದಾಶೆಗೆ, ಕೆಲವರು ಅಂಜಿಕೆಯಿಂದ, ಕೆಲವರು ಭಕ್ತಿಯನ್ನು ತಳೆದು, ಕೆಲವರು ಮುಕ್ತಿಯ ಅಭಿ ಲಾಷೆಯಿಂದ ಶಿವಭಕ್ತರಾಗಿ ಊರ್ಜಿತರಾಗುತ್ತಿದ್ದರು. ಈ ಮೇರೆಗೆ ಕೆಲವು ವರ್ಷಗಳಾದ ಬಳಿಕ ಒಂದುದಿನ ಆತನಿಗೆ ನಾಲ್ವರೇ ಭವಿಗಳು ದೊರೆತರು. ಆಗ ಗಣನಾಥನು ಇನ್ನೊಬ್ಬನು ದೊರೆಯಲಿಲ್ಲವೆಂದು ಬಹಳ ಚಿಂತೆಮಾಡು ತ್ತಿರಲು (ಆತನ ಸತ್ಸಂಕಲ್ಪಕ್ಕನುಗುಣವಾಗಿಯೋ ಏನೋ ಎಂಬಂತೆ) ಪರ ಮಾತ್ಮನು ತಾನೇ ಮಾನವಾಕೃತಿಯನ್ನು ತಾಳಿ ಕೈಯಲ್ಲಿ ಡಮರುಗವನ್ನು ಪಿಡಿದು ಶಕುನಗಳನ್ನು ಹೇಳುವ ವೇಷದಿಂದ ಆತನ ಮಂದಿರಕ್ಕೆ ಬಂದನು. ಪರಿಜನರಿಂದ ಕಥಾನಾಯಕನು ಇದನ್ನು ಕೇಳಿ ಸಂತೋಷದಿಂದ ಭಸಿತಹಸ್ತ ನಾಗಿ ಬಂದು ಉಜ್ವಲಭಕ್ತ್ಯಾವೇಶಯುತನಾಗಿ ಬಲುಮೆಯಿಂದ ನೂತನ ವ್ಯಕ್ತಿ ಯನ್ನು ಹಿಡಿದು ವಿಭೂತಿಯನ್ನು ಧರಿಸಬೇಕೆಂದು ಹವಣಿಸುವಷ್ಟರಲ್ಲಿ ಎಲವೋ ಬೇಡ ಬೇಡ ಎಂದು ಡಮರುಗವನ್ನು ಧರಿಸಿದವನು ಹೇಳುತ್ತ ವರಭಕ್ತನ ನಿಷ್ಠೆಗೆ ಮೆಚ್ಚಿ ತನ್ನ ಲಲಾಟದಲ್ಲಿರುವ ನೇತ್ರವನ್ನು ಪ್ರಕಟಗೊಳಿಸಿ ನಾನೇ ಶಂಭುವು ನನ್ನನ್ನು ಬಿಡು ತೆಗೆ ಎಂದರೂ ಕೇಳದೆ ಚರಿತ್ರನಾಯಕನು ಆತನಿಗೆ ತ್ರಿಪುಂಡ್ರ ವನ್ನು ಧರಿಸಿ ಹರ್ಷಪಟ್ಟು ಪುನಃ ಪುನಃ ನಮಸ್ಕರಿಸಿದನು. ಭಯಭಕ್ತಿಯಿಂದ ಪಾದಕ್ಕೆರಗಿದ ಭಕ್ತನಿಗೊಲಿದು ದೇವದೇವನು ತನ್ನ ನಿಜರೂಪವನ್ನು ತೋರಿ ಆತನಿಗೆ ಗಣಪದವಿಯನ್ನು ಕರುಣಿಸಿದನು.—

ಗುಣೈಕಪಕ್ಷಪಾತಿಗಳಾದ ವಿದ್ವಜ್ಜನ ಸಮೂಹಕ್ಕೆ ತಲೆಬಾಗಿ, ಪ್ರೀತಿಪುರ ಸ್ಸರವಾಗಿ ಶಿವಕಥೆಯನ್ನೋದುವವರಿಗೆ ಮಣಿದು, ಸರ್ವಜ್ಞಮೂರ್ತಿಯಾದ ಶಿವಮೂರ್ತಿಗೆ ಅನಂತ ಪ್ರಣಾಮಗಳನ್ನು ನೀಡಿ, ಶಿವಾಭಿನ್ನರಾದ ಮಹಾ ಪ್ರಮಥರನ್ನು ವಂದಿಸಿ, ಶಿವಯೋಗಿಗಳಿಗೆ ನಮಿಸಿ, ವಾಚಕರ ಶುಭವನ್ನು ಲೇಖಕನು ಕೋರುವನು.

"ಜಯಜಯ ರುದ್ರ ಭದ್ರ ಜಯಮಂಗಲಮೂರ್ತಿಯನಾಥಬಂಧುವೇ ।
ಜಯಜಯ ಜಾಹ್ನವೀಧರ ಜಯಜಯಸಿದ್ಧಶಿವಾತ್ಮಬಂಧುವೇ ॥
ಜಯಜಯ ಯೆಂದು ಕೀರ್ತಿಸುವ ಮಂಗಲಪಾತಕಕೋಟಿಯಿಂ ನಿರಾ ।
ಮಯಕರ ಸೀತದೋಳ್ಕಲಸಿ ಪಾಲಿಸು ನೀಂ ಗುರುಶಂಕರೇಶ್ವರಾ" ॥

' ವ್ಯಾಸೋಕ್ತ ಬಸವಪುರಾಣದಲ್ಲಿ ಕಲಿಗಣನಾಥ ಎಂಬುವದಕ್ಕೆ ಪ್ರತಿಯಾಗಿ ಗಣಪಾಲ ಹೀಗೆ ಪಾಠಾಂತರವಿದೆ.



ಓಂ.

# ೨. ರುದ್ರಪಶುಪತಿ.

ಕೊರಳವಿಷಮಂ ಕಂಡು ಮರಣವಹುದೆಂದು ಭವ । ಹರನ ಸಾಧ್ಯೈವುತಿಹ
ರುದ್ರಪಶುಪತಿಗೆ । ಶರಣೆಂದು ಸಿದ್ಧಿಪಡೆಯುವೆನು ॥

[ಶ್ರೀ ನಿಜಗುಣ ಶಿವಯೋಗಿ]



ಈ ಭೂಮಂಡಲದಲ್ಲಿ ಹೆಸರ್ವಡೆದ ನಮ್ಮಾ ಆರ್ಯಾವರ್ತದ, ತೆಂಕಣ ನಾಡಿನಲ್ಲಿ, "ಶಿವೋಪಾಸಕರಿಂದ ಶಿವಪುರಿ ಎಂಬ ಪೆಸರುಳ್ಳ ಪತ್ತನವು ಕಂಗೊಳಿಸುತ್ತಿತ್ತು. ಆ ಗ್ರಾಮದಲ್ಲಿ ಮಲತ್ರಯಗಳನ್ನು ನಿವಾರಿಸಿ," ಜ್ಞಾನಪರಿಗೆ ಸದ್ಗತಿಯನ್ನುಂಟುಮಾಡುವದಕ್ಕಾಗಿ ಉದ್ಭವಿಸಿದ ಪವಿತ್ರವಾದ ಮಂದಿರಕ್ಕೆ ಅಲ್ಲಿಯ ಭಾವಿಕ ಮಹಾಶಯರು ಶಿವಸಮಯದ ಮಠವೆಂದು ಕರೆಯುತ್ತಿ

ದ್ದರು. ಈ ಪರಮಪಾವನವಾದ, ಮಠದಲ್ಲಿ ಮಾಯಾವಿದೂರನಾದ, ಷಟ್ಸ್ಥಲ ಬ್ರಹ್ಮಿಯಾದ, ಶಿವಧರ್ಮರತಿಯೊಡನೆ ಅನವರತವೂ ಕ್ರೀಡಿಸುವ ನಿರಾಭಾರಿ ದೇಶಿಕೋತ್ತಮನು ನಿಜಭಕ್ತರನ್ನು ನಿರಾಯಾಸವಾಗಿ ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುತ್ತ, ಅವರ ನಿತ್ಯಸುಖಪ್ರಾಪ್ತಿಗೆ ಶಿವಾನುಭವ ತತ್ವವನ್ನು ಮತ್ತು ಶಿವಮಂತ್ರಪ್ರಭಾವವನ್ನು ಅತ್ಯಾಶ್ಚರ್ಯಕರವಾಗಿ, ತನ್ನ ಅಗಾಧವಾದ ಶಕ್ತಿಯಿಂದ, ಲೀಲಾಮಾತ್ರನಾಗಿ ಬೋಧಿಸುತ್ತಿದ್ದನು. ಸಕಲ ಭಕ್ತರಿಗೆ ಅವರವರ, ಗ್ರಾಹಕ ಶಕ್ತಿಗನುಗುಣವಾಗಿ, ಲಿಂಗಾಂಗ ಸಾಮರಸ್ಯವನ್ನು ಬಹು ಸುಲಭವಾಗಿ ಪಾಠಕರ ಹೃದಯ ಕಮಲದಲ್ಲಿ ಅಚ್ಚೊತ್ತಿದಂತೆ ಆಗುವ ಮೇರೆಗೆ ಕೃಪೆ ಮಾಡುತ್ತಿದ್ದನು. ಹೀಗಿರಲು ಈ ಪೂಜ್ಯ ಮಹಸೀಯರಲ್ಲಿ ಪುರಜನರು ನಿರ್ವಂಚನೆಯಿಂದ, ಸರಳವಾದ ಸಮಸರಭಕ್ತಿಯುತರಾದುದು ಸ್ವಾಭಾವಿಕವು. ಈ ಸರ್ವಲಕ್ಷಣ ಸಂಪನ್ನರಾದ, ನಿರ್ಮಲಹೃದಯರಾದ, ಚರವರ್ಯರಿಗೆ ಶಿವಾಗಮಕೋವಿದನು ಮತ್ತು ಉಪನಿಷದ್ವಿಶಾರದನು, ಬ್ರಹ್ಮಾನುಸಂಧಾನಿಯು, ನಡೆನುಡಿಯಲ್ಲಿ ಭೇದವಿಲ್ಲದೆ ಆಚರಿಸುವ ' ಪುರಾಣಿಕ'ನು ಚರಪುಂಗವರ ತಪಃಪ್ರಭಾವಾನುಸಾರವಾಗಿ ದೊರತುದು ಚೋದ್ಯವಲ್ಲವು. ಆದ್ದರಿಂದ ಮೇಲೆ ವರ್ಣಿಸಿದ ಆದರ್ಶಪ್ರಾಯವಾದ ಮಠದಲ್ಲಿ ದಿನಾಲು ಶಿವಸ್ತುತಿ, ಶಿವಾನುಭವ, ಶಿವಪುರಾಣಶ್ರವಣ, ಆಗಾಗ್ಗೆ ರುದ್ರಾಭಿಷೇಕ, ಮೇಲಿಂದ ಮೇಲೆ ಶಿವತತ್ವವನ್ನು ಕರತಲಾಮಲಕವಾಗುವಂತೆ ವಿವರಿಸುವ ವ್ಯಾಖ್ಯಾನಗಳು, ಶಿವಕಥಾಮೃತವನ್ನು ನಿರರ್ಗಳವಾಗಿ, ಬೀರುವ ಕೀರ್ತನೆಗಳು ಅಪ್ರತಿಹತವಾಗಿ, ಎಡಬಿಡದೆ ಜರಗುತ್ತಿದ್ದವೆಂದು ಪಾಠಕಮಹಾಶಯರಿಗೆ ಹೊಳೆಯದೇ ಇರದು.

ವಾಡಿಕೆಯಂತೆ ಒಂದು ದಿನ ಪುರಾಣ ಸಮಯದಲ್ಲಿ ಶ್ರೋತ್ರೀಯರ ಸಮೂಹವು ವಿಶೇಷವಾಗಿತ್ತು. ಆ ದಿವಸ ಪುರಾಣ ಹೇಳುವ ಶಾಸ್ತ್ರಿಗಳವರು ಸಮಸ್ತ ಜನ್ಮಗಳಲ್ಲಿ ಕರ್ತೃತ್ವ ಹಾಗೂ ಭೋಕ್ತೃತ್ವವುಳ್ಳ ಮನುಷ್ಯ ಜನ್ಮವೇ ಶ್ರೇಷ್ಠವೆಂದು ಸೊಗಸಾಗಿ ಬಣ್ಣಿಸಿದರು. ನಂತರ ಎಲ್ಲರು ಧರ್ಮವನ್ನು ಆಚರಿಸಬೇಕಾಗಿ ವಿವರಿಸಿದರು. ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ಸಕಲ ಪ್ರಾಣಿಗಳ ಮತ್ತು ಯಾವತ್ತು ವಸ್ತುಸ್ಥಿತಿಗಳ ಚಲನ ವಲನ ವ್ಯಾಪಾರವು ಅವಲಂಬಿಸಿರುವದೋ ಅಂದರೆ ಎತ್ತಿ ಹಿಡಿಯಲ್ಪಟ್ಟಿರುವದೋ ಮತ್ತು ಪೋಷಣೆಯಾಗುವದೋ ಆ ವಿಶಿಷ್ಟಗತಿಗೆ ಶಾಸ್ತ್ರಜ್ಞರು ಧರ್ಮ ಎಂಬದಾಗಿ ಸಂಜ್ಞೆಯನ್ನು ಇಟ್ಟಿರುವುದಾಗಿ ಸರ್ವರೂ ತಿಳಿದಿರುವ ಸಂಗತಿಯು ಅಹುದು.

ಮೊದಲು ಸಾಮಾನ್ಯ ಧರ್ಮದ ಬಗ್ಗೆ ತಿಳಿಸಿದರು:—ಸರ್ವರು ದಿಟವನ್ನೇ ಹೇಳತಕ್ಕದ್ದೆಂದೂ ಸಟೆಯನ್ನಾಡಬಾರದೆಂದೂ, ಎಂಥ ಎಡರಿಗೀಡಾದರೂ ನಿಜವನ್ನೇ ನುಡಿದ ಹರಿಶ್ಚಂದ್ರನ ಕಥೆಯನ್ನು ವಿವರಿಸಿ, ತರುವಾಯ ಹುಸಿಯನ್ನು

ಹೇಳಿದ ಕೇತಗಿರಾಜ, ಮತ್ತು ಬ್ರಹ್ಮನು ಶಿಕ್ಷೆಯನ್ನು ಅನುಭವಿಸಿದ ಸ
ಯನ್ನು ವರ್ಣಿಸಿದರು. ತರುವಾಯ ಮಾನವರಿಗೆ ಸ್ಥೈರಣೆಯು, ದಯೆ
ತಾಳ್ಮೆಯು, ಕ್ಷಮೆಯು, ನಮ್ರತೆ, ಧೀರತೆ, ಸತ್ಸಂಗ, ಪರಧನ-ಪರಸತಿ ಬ
ದಿರುವಿಕೆ, ಸ್ವಾವಲಂಬನೆ, ಪ್ರಸಂಗಾವಧಾನ, ಕಾರ್ಯದಕ್ಷತೆ, ಆತ್ಮೋದ್ಧಾ
ಹವಣಿಕೆ, ಮನಶ್ಶುದ್ಧಿಗೆ ಬೇಕಾದ ಸಾತ್ವಿಕ ಆಹಾರ ವಿಹಾರದೊಂದಿಗೆ ಆ
ಗ್ಯವು ಇವೆಲ್ಲವು ಅತ್ಯಗತ್ಯವಾದ ಗುಣಗಳು. ಇವುಗಳನ್ನು ಬಹು ಸಂತೋ
ದಿಂದ ಮನೋವಾಕ್ಕಾಯಂಗಳಿಂದ, ವ್ಯವಹರಿಸಿದರೆ ಮಾತ್ರ ಕಲ್ಯಾಣವ
ತ್ತದೆ. ತರುವಾಯ ಲಿಂಗಾಂಗಿಗಳು ಅವಶ್ಯವಾಗಿ ಲಕ್ಷಿಸಬೇಕಾದ ವಿಶೇಷ ಕ
ಗಳನ್ನು ವಿಹಂಗಮ-ದೃಷ್ಟಿಯಿಂದ ಹೇಳತೊಡಗಿದರು. ಲಿಂಗವಂತರು ಪ
ಚಾರ ನಿರತರಾಗಬೇಕು. ಈ ವಿಷಯವನ್ನು ಮತ್ತೊಂದು ಸಲ ಹೇಳ
ಎಂದು ತಿಳಿಸಿ, ಸಕಲರು ಅಷ್ಟಾವರಣಯುಕ್ತರಾಗಬೇಕು :—ತ ಸಂಬಂಧ
ಸಂಕ್ಷೇಪವಾಗಿ ಕಥನಮಾಡಿದರು.

## ವಿ ಭೂ ತಿ .

ಶಿವನ ಸದ್ಯೋಜಾತಾದಿ ಮುಖಗಳಿಂದ ನಂದಿ, ಭದ್ರೆ, ಸುರಭಿ, ಸುಶಿ
ಸುಮನೆ ಎಂಬ ಗೋವುಗಳು ಹುಟ್ಟಿ ವಿಭೂತಿ, ಭಸಿತ, ಭಸ್ಮ, ಕ್ಷಾರ, ರಕ್ಷೆ
ಗಳು ಅನುಕ್ರಮವಾಗಿ ಉಂಟಾದವು. ಇವುಗಳನ್ನು ಶಾಸ್ತ್ರೋಕ್ತವಾಗಿ ತ
ರಿಸಿ, ಕ್ರಮವರಿತು, ಭಕ್ತಿಯಿಂದ ಧರಿಸುವುದರಿಂದ ಪಾಪ ಕ್ಷಯವಾಗಿ, ಸ
ಕಂಟಕ ನಿವಾರಣವಾಗಿ, ಅವರ್ಣನೀಯವಾದ ಶುಭಪರಂಪರೆಯುಂಟಾಗುತ್ತ

## ರು ದ್ರಾ ಕ್ಷ .

ತ್ರಿಪುರ ಸಂಹಾರ ಕಾಲಕ್ಕೆ ಪರಶಿವನ ಕಣ್ಣೀರಿನ ಹನಿಗಳು ಭೂ
ಬಿದ್ದು ಅವೇ ಪವಿತ್ರವಾದ ರುದ್ರಾಕ್ಷಗಳು ಆದವು. ಒಂದರಿಂದಾ ಹದಿನಾ
ಮುಖದವರೆಗೆ ಇರುವ ರುದ್ರಾಕ್ಷಗಳನ್ನು ಸ್ಥಾನವರಿತು, ಸಂಖ್ಯಾಕ್ರಮವ
ತಿಳಿದು ಪರಿಶುದ್ಧವಾದ ಮನಸ್ಸಿನಿಂದ ಧರಿಸಿದರೆ ಪಾಪವು ಅಳಿದು ಬಣ್ಣಿಸ
ವಲ್ಲದ ಕ್ಷೇಮವುಂಟಾಗುವುದು.

## ಗು ರು .

ಗುಕಾರದಿಂದ, ಕತ್ತಲೆಯೆಂದೂ, ರುಕಾರದಿಂದ, ಸೂರ್ಯೋದಯವೆಂ
ಗುರುಶಬ್ದದ ಉತ್ಪತ್ತಿಯು ಆಗಮದಲ್ಲಿ ಹೇಳಿದೆ. ಶರಣಾಗತನಾದ ಶಿ
ಅಜ್ಞಾನವನ್ನು ಹೋಗಲಾಡಿಸುವ, ಭಾಸ್ಕರನೋಪಾದಿಯಲ್ಲಿರುವ ಮಹಾತ್ಮ
ಗುರುವೆಂಬದಾಗಿ ತಿಳಿಯುವುದು. ಜಿತೇಂದ್ರಿಯನು, ಸರ್ವ ಶುಭಲಕ್ಷಣ ಸ
ನ್ನನು, ಶಿವಾಗಮಜ್ಞನು, ನಿರ್ಮಲನು, ಬ್ರಹ್ಮವೇತ್ತನು, ಏಕೋತ್ತರ ಶತ

ವನ್ನರಿತು ಸರಿಯಾಗಿ ಆಚರಿಸುವವನು, ಭಕ್ತಾನುಗ್ರಹತತ್ಪರನು ಆದ ಆ ಮಹನೀಯನೇ ಗುರುವೆಂದು ತಿಳಿಯಲಾಗುವದು. ಇಂತಪ್ಪ ಗುರುವಿನೊಡನೆ ಮುಮುಕ್ಷುವು ಕಾಯಾ-ವಾಚಾ-ಮನಸಾ ದಾಸೋಽಹಂಭಾವದಿಂದ ನಡೆದರೆ ಇಷ್ಟಾರ್ಥವು ಸಿದ್ಧಿಸುವುದು.

## ಲಿಂಗ.

ಈ ಚರಾಚರಾತ್ಮಕವಾದ ಸಕಲ ಪ್ರಪಂಚವೆಲ್ಲವು ಯಾವ ಪರವಸ್ತುವಿನಲ್ಲಿ ಬರತು ಹೋಗುವದೋ, ಲೀನವಾಗುವುದೋ ಲಯಹೊಂದುವದೋ, ಹಾಗೂ ಪುನಃ ಹುಟ್ಟುವದೋ ಆ ವಿಶಿಷ್ಟ ವಸ್ತುವೆ ಲಿಂಗವು. ಲಿಂಗವೇ ಪರಬ್ರಹ್ಮವೆಂದು ಶಂಕರನೇ ಲಿಂಗರೂಪನಾಗಿ ಸದ್ಗುರುಗಳ, ಕೃಪಾಕಟಾಕ್ಷದಿಂದ ಶಿಷ್ಯನ ಕರಕಮಲದಲ್ಲಿ ಇಷ್ಟಲಿಂಗವೆಂಬ ಅಭಿದಾನದಿಂದ ನೆಲಸುವನೆಂದು ಶಿವಪರವಾದ ಗ್ರಂಥಗಳು ಸಾರುವವು. ಶರೀರದಮೇಲೆ ಧರಿಸಲು ಯೋಗ್ಯವಾಗುವಂತೆ ಇಷ್ಟಲಿಂಗವು; ಕೇವಲ ಮನಸ್ಸಿನಿಂದ ರಮಮಾಣನಾಗುವದಕ್ಕೆ ಪ್ರಾಣಲಿಂಗವು; ಭಾವದಿಂದ ಉಪಚರಿಸಲು ಸಾಧಿಸುವಂತೆ ಭಾವಲಿಂಗವು. ಹೀಗೆ ತ್ರಿವಿಧವಾದ ಇಷ್ಟ-ಪ್ರಾಣ-ಭಾವಲಿಂಗಗಳನ್ನು ಸ್ಥೂಲ-ಸೂಕ್ಷ್ಮ-ಕಾರಣ ತನುಗಳಲ್ಲಿ ಯೋಜಿಸಲು ಅನುಕೂಲವಾಗುವಂತೆ ಸದ್ಗುರುವು ಅನುಗ್ರಹಿಸುತ್ತಾನೆ. ಈ ಮೂರು ಲಿಂಗಗಳು ಪರಸ್ಪರ ಸಂಬಂಧ ಪಟ್ಟವು ಅವೆ. ತ್ರಿಕರಣಶುದ್ಧಿಯಿಂದ, ಶ್ರೀಗುರುಗಳ ಅಪ್ಪಣೆಯ ಮೇರೆಗೆ ಲಿಂಗರತನಾದರೆ ಭವರೋಗವನ್ನು ನೀಗಿ ಕಾಮಿತ ಫಲವು ಕೈಸೇರುವುದರಲ್ಲಿ ಸಂದೇಹವಿಲ್ಲೆಂದು ಸಕಲ ಶಾಸ್ತ್ರಗಳು ಉದ್ಘೋಷಿಸುವವು.

## ಜಂಗಮ.

ಜಾನಂತ್ಯತಿಶಯಾದ್ಯೇತು ಶಿವಂ ವಿಶ್ವಪ್ರಕಾಶಕಂ । ಸ್ವಸ್ವರೂಪತಯಾ ಶೇತು ಜಂಗಮಾ ಇತಿಕೀರ್ತಿತಾಃ ॥ ಎಂಬ ಸಿದ್ಧಾಂತ ಶಿಖಾಮಣಿಯ ಉಕ್ತಿಯ ಪ್ರಕಾರ ತನ್ನ ಜ್ಞಾನ ಕ್ರಿಯಾಶಕ್ತಿಗಳಿಂದ ಪ್ರಪಂಚವನ್ನು ಪ್ರಕಾಶಗೊಳಿಸುತ್ತಿರುವ ಪರಶಿವನಿಗಿಂತಲೂ ತಾನು ಬೇರೆ ಅಲ್ಲವೆಂದು ಧೃಡವಾದ ನಂಬುಗೆಯಿಂದ ಯಾರು ಸ್ವಸ್ವರೂಪವನ್ನು ತಿಳಿಯುತ್ತಾರೆಯೋ ಅವರು ಜಂಗಮರೆಂದರ್ಥವು. ಶಿವತತ್ವವನ್ನು ಅರಿತು, ಶಿವೋತ್ಕರ್ಷಚಿಂತಾಯುತನಾಗಿ, ದಯಾರಸಭರಿತನಾಗಿ, ಉತ್ಕೃಷ್ಟವಾದ ಆಚಾರ ಸಂಪನ್ನನಾಗಿ, ಶಿವಾನಂದಮಗ್ನನಾಗುವದೇ ಜಂಗಮ ಲಕ್ಷಣವು. ಹೀಗೆ ಇರುವ ಮಹಾತ್ಮನು ಶಿವನೆಂದು ಭಾವಿಸಿ, ಗೌರವದಿಂದ ಪೂಜಿಸತಕ್ಕದ್ದು. ಪರಮಾತ್ಮನೇ ಗುರುರೂಪನಾಗಿಯೂ, ಜಂಗಮರೂಪನಾಗಿಯೂ, ಲಿಂಗರೂಪನಾಗಿಯೂ, ಇರುವುದರಿಂದ ಮೂವರಲ್ಲಿಯೂ ಭೇದವನ್ನು ಕಲ್ಪಿಸದೆ, ಏಕರೂಪವನ್ನೆ ಭಾವಿಸತಕ್ಕದ್ದು.

## ಮಂತ್ರ.

(ಶ್ರೀತೆ ಸಜ್ಜನಾನಾಂ ಮನಸ್ಯತ್ರೇತಿ ಶಿವಃ) ಆದಿಯೂ, ಅಂತವೂ ಇಲ್ಲದ ನಾಶರಹಿತನಾದ, ನಿತ್ಯನಾದ, ಸರ್ವಜ್ಞನಾದ, ಸರ್ವಕರ್ತೃತ್ವಶಕ್ತಿಯುಳ್ಳ, ಇಚ್ಛಾಮಾತ್ರದಿಂದಲೆ ಸೃಷ್ಟಿ-ಸ್ಥಿತಿ-ಲಯಗಳನ್ನುಂಟುಮಾಡಲು ಸಮರ್ಥನಾದ, ಭಕ್ತಾನುಗ್ರಹತತ್ಪರನಾದ, ಸ್ವಪ್ರಕಾಶನಾದ, ಪರಮಾತ್ಮನ ಅನಂತನಾಮಗಳಲ್ಲಿ ಮುಖ್ಯಾಭಿಧಾನವಾದ **ಶಿವ** ಎಂಬ ಪುಣ್ಯಪ್ರದವಾದ ಅಕ್ಷರದ್ವಯಗಳನ್ನೊಳ ಕೊಂಡಿರುವ ಪಂಚಾಕ್ಷರಿ ಮಹಾಮಂತ್ರವೇ ಸರ್ವ ಮಂತ್ರಗಳಲ್ಲಿ ಮಂತ್ರ ರಾಜ ನೆಂದು ವೇದಾಗಮೋಪನಿಷತ್ತುಗಳು ಘಂಟಾಘೋಷವಾಗಿ ಸಾರುತ್ತಿವೆ. ಇದನ್ನು ಸಕಲ ಶಿವಭಕ್ತರು ಜಪಿಸತಕ್ಕದ್ದು. ಅಮೋಘವಾದ ಓಂಕಾರದೊಡನೆ ಪಂಚಾ ಕ್ಷರ ಮಂತ್ರವನ್ನು ಜೋಡಿಸಿದರೆ ಅದೇ ಷಡಕ್ಷರ ಮಂತ್ರವಾಗುವದು. ಮನ ಶ್ಶುದ್ಧಿಯಿಂದ, ಗುರುಬೋಧವಾದ ಮೇರೆಗೆ ಶಿವಮಂತ್ರವನ್ನು ಜಪಿಸತಕ್ಕವನಿಗೆ ಈ ತ್ರಿಭುವನದಲ್ಲಿ ಯಾವದೂ ಅಶಕ್ಯವಲ್ಲವು. ವಾಚಕ, ಉಪಾಂಶು, ಮಾನಸ ಎಂಬ ತ್ರಿವಿಧ ಜಪಗಳಲ್ಲಿ ಫಲ ತಾರತಮ್ಯದಿಂದ ಹೇಳಬೇಕಾದರೆ ವಾಚಕಕ್ಕಿಂ ತಲೂ ಉಪಾಂಶು ಹೆಚ್ಚೆಂದು, ಉಪಾಂಶುವಿನಕಿಂತಲೂ ಮಾನಸ ಜಪವು ಬಹಳ ಹೆಚ್ಚೆಂದು ಜ್ಞಾನಿಗಳು ವಿಶದಪಡಿಸುತ್ತಾರೆ. (ಬಾಲ್ಯದಲ್ಲಿಯೇ, ಶಿವಮಂತ್ರ ಪ್ರಭಾವದಿಂದ ಉಪಮನ್ಯು ಹಾಗೂ ಮಾರ್ಕಾಂಡೇಯ ಇವರು ಕೃತಾರ್ಥರಾದ ಉದಾಹರಣೆಯನ್ನು ಹೇಳಿದರು.)

## ಪಾದೋದಕ.

ಶ್ರೀಗುರು ಜಂಗಮರ ಪಾದದಲ್ಲಿ ಜಗತ್ತಿನಲ್ಲಿರುವ ಎಲ್ಲ ಮಹಾತೀರ್ಥಗಳು ನೆಲಸಿರುವವೆಂದು ಶೃತ್ಯಾಗಮಗಳು ಡಂಗುರಿಸುವವು. ಪಾದೋದಕವೆಂದರೆ ಪರಮಪವಿತ್ರವಾದ ಶ್ರೀ—ಪಾದದ ಚಿದ್ಘನೈಕ ರಸವೆಂದು ತಿಳಿಯುವದು. ಭಕ್ತರ ಹಿತಾರ್ಥವಾಗಿ, ಮಹಿಮರು ಕರುಣಿಸಿದ ಅನುಪಮವಾದ ರಸವೇ ಪಾದೋ ದಕವು. ಇದನ್ನು ಸರಿಗಟ್ಟುವ ವಸ್ತುವೇ ಲೋಕದಲ್ಲಿ ಬೇರೊಂದಿಲ್ಲವು. ಅಂತ ರಂಗ ಶುದ್ಧಿಯಿಂದ ಯಾವಾತನು ಈ ಅಮೃತವನ್ನು ಸೇವಿಸುವನೊ ಅವನೇ ಈ ಜಗದೊಳು ಧನ್ಯನೆಂದು ಮೋಕ್ಷಾಪೇಕ್ಷಿಗಳು ಧೃಢವಾಗಿ ನಂಬುತ್ತಾರೆ. ಅತ್ಯಂತ ಶ್ರೇಷ್ಠವಾದ ಬಹು ಗೋಪ್ಯವಾದ ದಶವಿಧಪಾದೋದಕ ಕ್ರಮವನ್ನು ಸದ್ಗುರುವಿ ನಿಂದ ತಿಳಿಯತಕ್ಕದ್ದು.

## ಪ್ರಸಾದ.

ಭಕ್ತನು ತಾನು ಯಾವ ವಸ್ತುವನ್ನು ಸ್ವಿಕರಿಸಬೇಕಾದರೂ ಶಿವಾರ್ಪಣ (ಅಂದರೆ ಗುರು-ಲಿಂಗ-ಜಂಗಮರ ಅರ್ಪಣ) ಮೂಲಕವಾಗಿ ಅಂದರೆ ಪ್ರಸಾದ

ರೂಪವಾಗಿ ಸೇವಿಸತಕ್ಕದ್ದು. ಗುರು-ಲಿಂಗ-ಜಂಗಮರಿಗೆ ಧರಿಸಿದ ಹೂ-ಪತ್ರಿಗಳು, ಫಲ ನೈವೇದ್ಯಗಳು ನಿರ್ಮಾಲ್ಯವೆಂದು ಕರೆಯಲ್ಪಟ್ಟು ಪ್ರಸಾದದಲ್ಲಿಯೆ ಎಣಿಸಲ್ಪಡುತ್ತವೆ. ಗುರು-ಜಂಗಮರು ಒಕ್ಕು ಮಿಕ್ಕ ಪ್ರಸಾದವು ಚರಶೇಷವೆಂದು ಖ್ಯಾತಿಗೊಂಡಿರುವದು. ಪ್ರಸಾದದ ಮಹಿಮೆಯು ಇಷ್ಟೆ ಎಂದು ವರ್ಣಿಸಲು, ಯಾರಿಗೆತಾನೆ ಸಾಧ್ಯವು? ಪ್ರಸಾದ ಮಹಾತ್ಮ್ಯವು ವರ್ಣನಾತೀತವು. ನಿರ್ಮಲಚಿತ್ತನಾಗಿ, ಭಕ್ತಿಪರವಶನಾಗಿ, ಚರಶೇಷಪ್ರಸಾದವನ್ನು ಸೇವಿಸುವವನಿಗೆ ಸಕಲ ಮನೋರಥ ಪ್ರಾಪ್ತಿಯಾಗಿ, ನಿತ್ಯಾನಂದಮಯನಾಗಿ, ಅಂತ್ಯದಲ್ಲಿ ಶಿವಸನ್ನಿಧಿಯನ್ನೈದುವನು.

ಪ್ರೇಮಪೂರ್ವಕವಾಗಿ ಪಂಚಾಚಾರನಿರತನಾಗಿ, ಅಷ್ಟಾವರಣಭಕ್ತಿ ಸಂಪನ್ನನಾದವನಿಗೆ ಪರಶಿವ ಮೂರ್ತಿಯು ಆತನ ಛಾಯಾನುವರ್ತಿಯಾಗುವನು.

ಪುರಾಣವು ಇಷ್ಟು ನಡೆದ ಬಳಿಕ ಆತ್ಮಾನಾತ್ಮವಿಚಾರವಾಗಿ ಸ್ವಲ್ಪ ತಿಳಿಸಿ, ನಿತ್ಯಾನಿತ್ಯವಸ್ತು ವಿವೇಚನೆಯನ್ನು ಅತಿ ಸಂಕ್ಷೇಪವಾಗಿ ಹೇಳಿ ಆ ದಿವಸ ಸಮುದ್ರ ಮಥನ ಕಥೆಯು ಹೊರಟದ್ದರಿಂದ, ಪರಶಿವನು ಜಗದ್ಧಿತಾರ್ಥವಾಗಿ, ವಿಷಪಾನ ಮಾಡಿದನೆಂದು ಹೇಳುವದನ್ನು ಅಲ್ಲಿಯೇ ಪ್ರೀತಿಪುರಸ್ಸರವಾಗಿ ಪುರಾಣ ಕೇಳುತ್ತಿದ್ದ **ರುದ್ರಪಶುಪತಿ** ಎಂಬ ಮುಗ್ಧಭಕ್ತನು ಅತ್ಯಂತ ವ್ಯಾಕುಲಪಟ್ಟು, ಪರಿಪರಿಯಾಗಿ ನೊಂದು, ಅತಿಶಯವಾಗಿ ಕಳವಳಪಟ್ಟು, ಭಯದಿಂದ ಕಂಗೆಟ್ಟು, ಶಿವಶಿವಾ, ಎಂದು ಹಂಬಲಿಸಿ ಅಯ್ಯೋ, ಅಯ್ಯೋ, ನಮ್ಮಪ್ಪನು ವಿಷಕುಡಿಯುವಾಗ ಕರಿಮುಖ, ಷಡಾನನರು, ಇದ್ದಿಲ್ಲವೇ ಜಗನ್ಮಾತೆಯಾದ ಭವಾನಿಯಾದರೂ ಇರಲಿಲ್ಲವೇ, ಪ್ರಮಥರಾರೂ ನೋಡಲಿಲ್ಲವೇ ಅಯ್ಯೋ, ಕೆಟ್ಟೆನು ಕೆಟ್ಟೆನು ಎಂದು ಪರಿಪರಿಯಿಂದ ಸಂಕಟಪಟ್ಟು ಅಸುವನ್ನು ನೀಗುವಷ್ಟರಲ್ಲಿ, ಭಕ್ತವತ್ಸಲನಾದ ಚಂದ್ರಾಭರಣನು ಪ್ರತ್ಯಕ್ಷವಾಗಿ, ಪ್ರಸನ್ನನಾದನು; ಮಗನೇ ರುದ್ರಪಶುಪತಿ, ನಿನ್ನ ಇಷ್ಟಾರ್ಥವೇನು? ಬೇಡು ನಿಜವಾಗಿಯೂ ಕೊಡುವೆನು ಎನ್ನಲು, ಈ ಮುಗ್ಧಭಕ್ತನು ಹೇ ಪರಮಾತ್ಮ, ಮೊದಲು ವಿಷವನ್ನು ಉಗುಳು, ತೀವ್ರ ವಿಷವನ್ನು ಹೊರಗೆ ಚೆಲ್ಲಿಬಿಡು ಎಂದು ಗದ್ಗದ ಕಂಠನಾಗಿ, ದೈನ್ಯದಿಂದ ಬೇಡಿಕೊಂಡನು. ಅಂಬಿಕಾಪತಿಯು:-ರುದ್ರಪಶುಪತಿ ಈ ವಿಷದಿಂದ ನನಗೆ ಬಾಧೆಯಿಲ್ಲ, ಕಂಠದಲ್ಲಿಯೇ ಧರಿಸಿರುವೆನು, ಚಿಂತಿಸಬೇಡವೆಂದನು. ಆ ಭಕ್ತನು ಒಪ್ಪಲಿಲ್ಲ. ಆಗ ಶರಣಾಗತವತ್ಸಲನಾದ ಪ್ರಭುವು ಪ್ರೇಮದಿಂದ ಬಿಗಿದಪ್ಪಿಕೊಂಡನು. ಆ ರುದ್ರಪಶುಪತಿಯು ವಿಷವು ಕುತ್ತಿಗೆಯಿಂದ ಕೆಳಗೆ ಇಳಿದರೆ ಪ್ರಾಣವನ್ನೆ ಕೊಡುವೆನೆಂದು ಕೈಯಲ್ಲಿ ಕಠಾರಿಯನ್ನು ಹಿಡಿದುಕೊಂಡು ಶಿವಾಂಕದಲ್ಲಿ ಈಗಲೂ ಮೆರೆಯುತ್ತಿರುವನೆಂದು ಪುರಾಣಿಕರು ಹೇಳಿ ಮಂಗಲವನ್ನು ಮಾಡಿದರು.

ಪಾಠಾಂತರವು :—ಶಿವಾಗಾರವಾಗಿ ರಂಜಿಸುವ ಚೋಳ ಧರಿತ್ರಿಯಲ್ಲಿ ಶೋಭಿಸುವ ತಿರುವರಿ ಯೂರಲ್ಲಿ ರುದ್ರಪ್ರಭವ, ಶುಚೀದೇವಿ ಎಂಬ ವಿಪ್ರ ದಂಪತಿಗಳ ಮಗನಾದ ರುದ್ರಪಶುಪತಿ ಎಂಬ ಮುಗ್ಧನು ತ್ರಿಕರಣದಲ್ಲಿಯೂ ಶಿವನಿಷ್ಠನಾಗಿ ಸೇವೆಗಾಗಿ ಶಿವಾಲಯಕ್ಕೆ ಬಂದಾಗ ಲಿಂಗಮಸ್ತಕದ ಮೇಲೆ ಪಿಪೀಲಿಕೆಯನ್ನು ಕಂಡು ಬಹಳ ಮರುಗಿ ಜಾಗರೂಕತೆಯಿಂದ ತೆಗೆದೊಗೆದು ಲಿಂಗಮೂರ್ತಿಗೆ ಬಾಧೆಯಾಗಬಾರದೆಂದು ಮಂತ್ರಿಸಿ ಪುನಃ ಮಜ್ಜನಂಗೈದು ಪೂಜಿಸಿದುದನ್ನು ನೆರೆಯವರು ಕಂಡು ನಕ್ಕರು. ಈ ಮರುಳನು ಶಿವನಾಮ ದಿಂದ ಪ್ರಸಿದ್ಧನಾದ ದೇವನು ಚಂದ್ರಮೌಳಿಯೆಂದು, ಫಾಲಲೋಚನನೆಂದು, ಶಿತಿಕಂಠನೆಂದು, ರುಂಡಮಾಲಾ ವಿಭೂಷಿತನೆಂದು ಅರಿಯನು. ಆತನು ಶಿವಾ ಲಯಕ್ಕೆ ಬಂದಾಗ ಪುರಾಣ ಕಥನದಲ್ಲಿ ಸಮುದ್ರಮಥನ ವಿಷಯವು ಹೊರಟಿ ರಲು ಈಶ್ವರನು ವಿಷವನ್ನು ತೆಗೆದುಕೊಂಡುದುದನ್ನು ಈ ಮುಗ್ಧನು ಕೇಳಿ ಬಹಳ ನೊಂದುಕೊಂಡು ಮೂರ್ಛೆ ಹೊಂದಿದವನಾಗಿ ಬಳಿಕ ಎಚ್ಚೆತ್ತು ಸಮು ದ್ರಕ್ಕೆ ಬಂದು ಕಂಠಪ್ರಮಾಣ ನೀರಲ್ಲಿ ನಿಂತು ಶಿವರಕ್ಷಣಾರ್ಥವಾಗಿ ರುದ್ರಜಪ ವನ್ನು ಅನೇಕ ದಿವಸಗಳವರೆಗೆ ತನ್ನ ದೇಹದ ಪರವೆ ಇಲ್ಲದೆ ಮಾಡುತ್ತಿರಲು ಶಂಕರನು ಮೆಚ್ಚಿದವನಾಗಿ ಭಿನ್ನ ವೇಷವನ್ನು ಕಳೆದು ಕಥಾನಾಯಕನ ಮುಂದೆ ಬಂದು ನಿಂತು ಈ ಉಗ್ರ ತಪವೇಕೆಂದು ಕೇಳಲು ಆತನು ಸದಾಶಿವನ ಕಂಠದಲ್ಲಿ ರುವ ವಿಷವನ್ನು ಬಿಡಿಸಬೇಕೆಂಬುದೇ ನನ್ನ ಫಲವು ಅಂದನು. ಆಗ ಕಪರ್ದಿ ಯು ನೀನು ಹರನ ಕೊರಳಲ್ಲಿರುವ ವಿಷವನ್ನು ತೆಗೆಯಿಸುವದಾದರೆ ನೀನು ಆತನ ಶರೀರದ ಮೇಲಿರುವ ಸರ್ಪಗಳನ್ನು ಕೊರಳಲ್ಲಿ ಧರಿಸಿರುವ ರುಂಡ ಮಾಲೆಯನ್ನು ಮೈಮೇಲಿರುವ ಗಜ ಚರ್ಮವನ್ನು ಬಿಡಿಸುವಿಯಾ ಮರುಳೇ ತೊಲಗು ಎಂದು ನುಡಿಯಲಾಗಿ ಚರಿತ್ರ ಪುರುಷನು ಸಿಟ್ಟಿಗೆದ್ದು ಶಂಭುವು ಗರಳವನ್ನು ಬಿಡುವ ವರೆಗೆ ತಪವನ್ನು ಬಿಡುವವನಲ್ಲವೆಂದು ರುದ್ರಸೂಕ್ತವನ್ನು ಜಪಿಸುತ್ತಿರುವಾಗ ಮಹೇಶ್ವರನು ಮತ್ತೆ ಭಕ್ತನನ್ನು ಕೊಂಡಾಡುತ್ತಿರಲು ಈಶನಿಂದೆಯನ್ನು ಸೈರಿ ಸದೆ ಕಥಾನಾಯಕನು ಅಭಿಮಂತ್ರಿಸಿದ ನೀರನ್ನು ಶೂಲಿಯಮೇಲೆ ರೋಷದಿಂ ದೆರಚಲು ಆತನು ಕುಟಿಲ ವೇಷವನ್ನು ಬಿಟ್ಟು ನಿಜರೂಪದಿಂದ ಪ್ರಕಟನಾದನು. ಆಗಲಾ ಭಕ್ತನು ಸುರಶ್ರೇಷ್ಠನನ್ನು ಕಂಡು ಪ್ರೀತನಾಗಿ ಆತನನ್ನು ಸ್ತುತಿಸುತ್ತ ಬಾರಿಬಾರಿಗೂ ನಮಸ್ಕರಿಸುತ್ತ ತಂದೆಯೇ ವಿಷವನ್ನು ಬಿಟ್ಟುಬಿಡು ನನ್ನಾಣೆ ಗರಳವನ್ನು ಚೆಲ್ಲಿಬಿಡು ಎಂದು ಪ್ರಾರ್ಥಿಸುತ್ತಿರಲು ಆ ಮುಗ್ಧನ ಮಾತಿಗೆ ಪಶು ಪತಿಯೂ ಮಗನೇ ನನ್ನ ಕುತ್ತಿಗೆಯಲ್ಲಿ ವಿಷವೆಲ್ಲಿರುವುದು ನೋಡು ಹೋಗಿದೆ ಎಂದು ಸಂತೈಸಲು ಆತನು ನೀರು ಬಿಟ್ಟು ಮೇಲಕ್ಕೆ ಬಂದು ಹರನೇ ನೀನಿನ್ನು ಮುಂದೆ ವಿಷವನ್ನು ಕುಡಿಯದಿರೆಂದು ಬೇಡಿಕೊಳ್ಳುತ್ತ ಕುತ್ತಿಗೆಯನ್ನು ಆಘ್ರಾ

ಣಿಸಿ ಬಳಿಕ ಕಂಠವನ್ನು ನೆಕ್ಕಿ ನೋಡಿ ಗರಳವಿಲ್ಲದಿರಲು ಆನಂದಪಡುತ್ತಿರುವ ಮುಗ್ಧನ ಭಲಕ್ಕೆ ಮೆಚ್ಚಿ ಶ್ರೀಕಂಠನು ಆತನಿಗೆ ಗಣಪದವಿಯನ್ನು ಅನುಗ್ರಹಿಸಿದನು.

ಭಕ್ತ ಪ್ರೇಮಿಯಾದ ಪರಮಾತ್ಮನಿಗೆ ಪೊಡಮುಟ್ಟ ಶಿವಗಣಸಮೂಹಕ್ಕೆರಗಿ, ಶಿವಕವಿಗಳನ್ನಭಿನಂದಿಸಿ ಪಾಠಕ ಮಹಾಶಯರ ಉತ್ಕರ್ಷವನ್ನು ಲೇಖಕನು ಬಯಸುವನು.

“ ಅಕ್ಷರ ವೈದರಲ್ಲಿ ಷಡಕ್ಷರದಲ್ಲಿ ವಿಭೂತಿಯಲ್ಲಿ ರು । ದ್ರಾಕ್ಷೆಗಳಲ್ಲಿ ಲಿಂಗದಲಿ ಜಂಗಮದಲ್ಲಿ ಗುರುಪ್ರಸಾದ ಪಾ ॥ ದಾಕ್ಷಯ ತೀರ್ಥದಲ್ಲಿ ಮನಗಟ್ಟಿ ನಿರಂತರಬಾಳ್ವನಂಘ್ರಿಯಂ । ಈಕ್ಷಿಪೆನೆನ್ನ ಕಂಗಳ ಬರಂ ಹರಿಯಲ್ಗುರುಶಂಕರೇಶ್ವರಾ ॥ ”

---

೬೧.

# ೩. ಮುರುಘರು.

ವರಮೂಲಮಂತ್ರವನೆ ಕರಣವಾಗುಚ್ಚರಿಸಿ । ಪರಮನೊಲುಮೆಯನು
ಪಡೆದ ಮುರುಗರಚರಣ । ವಿರಲೆನ್ನ ಮಾಸದೊಸೂಂದಿ ॥

[ನಿಜಗುಣ ಶಿವಯೋಗಿ]




ಳಮಂಡಲದ ಪಗಲ್ಪುರದಲ್ಲಿ ಮುರುಘನೆಂಬ ಶೈವನು ಸರಿಯಿಲ್ಲದ, ಜೋಡಿಲ್ಲದ, ಅತುಲವಾದ, ಅನುಪಮವಾದ, ಅಪ್ರತಿಮವಾದ, ಎಣೆಯಿಲ್ಲದ ಅತ್ಯಗಾಧವಾದ ಮಹಿಮೆಗಳನ್ನೊಳಗೊಂಡ ವರಪಂಚಾಕ್ಷರವನ್ನೇ ಎಡೆಬಿಡದೆ ಅಂದರೆ ಮರಣಾವಧಿ ಮನುಷ್ಯನ ಶ್ವಾಸೋಚ್ಛ್ವಾಸವು ತಡೆಯಿಲ್ಲದೆ ನಡೆಯುವಂತೆ ಕೂಡ್ರುವಾಗ, ಏಳುವಾಗ, ಮಲಗುವಾಗ, ನೋಡುವಾಗ, ತಿರುಗಾಡುವಾಗ, ಆಟವಾಡುವಾಗ, ವಿನೋದ

ಪಡುವಾಗ, ಬರೆಯುವಾಗ, ಓದುವಾಗ, ತನ್ನ ಕೆಲಸ ಬೊಗಸೆಮಾಡುವಾಗ, ಉಣ್ಣುವಾಗ, ಅಂಗಸಾಧನೆ ಮಾಡುವಾಗ, ಹಗಲು, ರಾತ್ರಿ, ಮಧ್ಯರಾತ್ರಿ, ಎಚ್ಚತ್ತಾಗ, ಸದಾ ಕಾಲವು ನಿರತಿಶಯವಾದ ಪ್ರೀತಿಯಿಂದ ಪಠಿಸುತ್ತಿದ್ದನು. ಈ ಪರಿಯಾಗಿ ಶ್ರೀಷ್ಮವಾದ ಪಂಚಾಕ್ಷರದ ಕೋಠಾಗಿ ಇನ್ನಾವುದನ್ನು ಉಚ್ಚರಿಸದ ಆ ನರಪುಂಗವನ ಕೆಲವು ಸಂವತ್ಸರಗಳು ಕಳೆಯಲು ಒಂದುದಿನ ಆ ಪಗಲ್ಪುರದ ಚಂದ್ರಮೌಳೀಶ್ವರನ ಸನ್ನಿಧಿಗೆ ಪೂಜೆಗಾಗಿ ಮಹಾ ಭಕ್ತಿಯಿಂದ ಹೋಗಿ ಮಿಂದು ಶುಚಿಯಾಗಿ ಪದ್ಮಾಸನವನ್ನಿಕ್ಕಿ ಭೂತ ಶುದ್ಧಿಯನ್ನು ಗೈದು ವಿಧ್ಯುಕ್ತವಾಗಿ ಭಸ್ಮಸ್ನಾನ, ಭಸ್ಮೋದ್ಧೂಳನ, ಭಸ್ಮಧಾರಣ ಮಾಡಿ ಆಗ ಮೋಕ್ತವಾಗಿ ಆಯಾಯ ಸ್ಥಳಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಿ ಅಂಗನ್ಯಾಸ, ಕರನ್ಯಾಸವನ್ನು ಮಾಡಿ ಅಷ್ಟವಿಧಾರ್ಚನೆ, ಷೋಡಶೋಪಚಾರಗಳಿಂದ ಮಹಾ ಶಿವಮಂತ್ರದೊಡನೆ ಅರ್ಚಿಸುತ್ತ ಆನಂದಪರವಶನಾಗಿ ಭಕ್ತ್ಯಾವೇಶದಿಂದ ಮೈಮರೆದು, ಪಂಚಾಕ್ಷರವನ್ನೇ ಉಸುರುತ್ತ, ಹಾಡುತ್ತ, ಹಿಗ್ಗುತ್ತ, ನಲಿದಾಡುತ್ತ, ಶಿವಲಿಂಗವನ್ನು ಅಪ್ಪುತ್ತ, ತೆರಪಿಲ್ಲದ ಆನಂದಾಶ್ರುಗಳನ್ನು ಸುರಿಸುತ್ತ, ಪ್ರೀತಿಯಿಂದ ಮನಕರಗಿದವನಾಗಿ ಆತನ ಭಕ್ತಿಯು ಪಾರವಿಲ್ಲದ್ದಾಗಿ ಅಸಮಾನವಾಯಿತು. ಆತನ ಶಿವನಿಷ್ಠೆಯು ಬಲಿತು ಅಚಲವಾದದ್ದನ್ನು ಆರ್ತರಕ್ಷಾಮಣಿಯಾದ ಪರಶಿವಮೂರ್ತಿಯು ಕಂಡು, ಸಂತೋಷಪಟ್ಟು ನಿಜರೂಪವನ್ನು ಆ ಲಿಂಗಮುಖದಿಂದಲೆ ತೋರಿ ಆ ಪರಮಭಕ್ತನಿಗೆ ಪ್ರಸನ್ನನಾಗಿ ಗಣಪದವಿಯನ್ನು ದಯಪಾಲಿಸಿದನು. ಯಾವಾಗಲೂ ಸಹಜವಾದ ಪರಮಾತ್ಮನ ಧ್ಯಾನದಲ್ಲಿದ್ದರ ಮನುಷ್ಯನಿಗೆ ಸದ್ಗತಿಯಾಗುವದೆಂಬುವ ಸಂಗತಿಯು ಈ ಆಖ್ಯಾಯಿಕೆಯಿಂದ ಸ್ಪಷ್ಟವಾಗಿ ಕಾಣಿಸುವುದು.

---



೬೦.

# ೪. ಚೊಕ್ಕನಯನಾರು.

**ತಿಳಿದು ಪಂಚಾಕ್ಷರವೆ ಕೊಳಲೊಳೂದುತ್ತ ಶಿವ | ನಿಳಯವನು ಪೊಕ್ಕವರ ಚೊಕ್ಕ ನಯನಾರ | ರೆಳಸಿ ಮನವಾರೆ ನೆನೆಯುವೆನು ||** (ಶ್ರೀ ನಿಜಗುಣಶಿವಯೋಗಿ)



ಸ್ತಿಕ ಮಹಾಜನಗಳಿಂದ ಅಲಂಕೃತವಾದ ನಮ್ಮ ಚರಿತ್ರನಾಯಕನು ಅವತರಿಸಿದ ಶೋಭನಪುರದ ಸಮೀಪದಲ್ಲಿಯೆ ಸತ್ಪಾತ್ರದ ಕಡೆಗೆ ವಿಶೇಷಲಕ್ಷವುಳ್ಳ, ಶಿವಭಕ್ತಬಲ್ಲಿದನಾದ ಧನಿಕಸೋರ್ವನ ಉಪವನವು ಪ್ರೇಕ್ಷಕರಿಗೆ ಮನೋಲ್ಲಾಸವಾಗುವಂತೆ, ನಯನಾನಂದಕರವಾಗಿ, ಶೋಭಾಯಮಾನವಾಗಿತ್ತು. ಮಗ್ಗಿಲಲ್ಲಿಯೇ ಕಾವೇರಿ ಎಂಬ ಪುಣ್ಯಪ್ರವಾಹವು ಜಲತರಂಗಗಳಿಂದ ವಿರಾಜಿಸುತ್ತ, ಎಡಬಲದ ಪ್ರದೇಶವನ್ನು ತನ್ನ ಶಾಖೆಗಳಾದ ಕಾಲುವೆಗಳಿಂದ ಫಲದ್ರೂಪವಾಗಿ ಮಾಡಿದ್ದರಿಂದ ಬೆಳಸು ಚನ್ನಾಗಿದ್ದಿತು. ಆ ವನದ ಒಳಯಲ್ಲಿಯು, ತರತರದ ಕಮಲಗಳಿಂದ ಶೋಭಿಸುವ ಚಿತ್ತಾಕರ್ಷಕವಾದ ಚಿಕ್ಕ ಸರೋವರವು ತೃಷ್ಣಾರ್ತರಾದ ಜನರಿಗೆ ತನ್ನ ಅಮೃತೋದಕಗಳಿಂದ ಬಾಯಾರಿಕೆಯನ್ನು ಕಳೆಯುತ್ತಿತ್ತು. ಆ ಉಪವನದಲ್ಲಿ ಮಲ್ಲಿಗೆ, ಶಾವಂತಿಗೆ, ಗುಲಾಬಿ, ಪಾರಿಜಾತ, ನಾಗಸಂಪಿಗೆ ಮುಂತಾದ ಸುಗಂಧಪ್ರಧಾನವಾದ ಹೂವಿನ ಗಿಡಗಳು ಅಂದವಾಗಿದ್ದವು. ಒಂದು ಕಡೆಗೆ ಶಮೀವೃಕ್ಷಗಳ ಸಾಲು, ಮತ್ತೊಂದು ಕಡೆಗೆ ಬಿಲ್ವವೃಕ್ಷಗಳ ಸಾಲು ಚಂದವಾಗಿ ಕಾಣಿಸುತ್ತಿದ್ದವು. ತೋಟದ ಮಧ್ಯದಲ್ಲಿ ಒಂದು ವಾಪಿಯು, ಒಂದು ಶಿವಪೂಜಾಕುಟೀರವು ಒಪ್ಪುತ್ತಿದ್ದವು. ಮನೋಹರವಾದ ಬಿಲ್ವಪತ್ರಿಯ ಹೆಮ್ಮರವು ಶಾಖೋಪಶಾಖೆಗಳಿಂದ ಚಲ್ವಾಗಿ ಚಲ್ವರೆದಿದ್ದಿತು. ಇಲ್ಲಿಗೆ ಪುರಜನರು ವಿಶ್ರಾಂತಿಗಾಗಿ, ಯೋಗಿಗಳು ತಮ್ಮ ಕ್ರಿಯಾಚರಣೆಗಾಗಿ, ಶರಣರು ಹೂಪತ್ರಿಗಳನ್ನು ತರುವದಕ್ಕಾಗಿ ಬರುವ ರೂಢಿ ಇದ್ದಿತು. ಮಹತ್ತರವಾದ ಬನ್ನೀಗಿಡದ ನೆರಳಲ್ಲಿರುವ ಒಂದು ಚಪ್ಪರದಲ್ಲಿ ದಿನಾಲು ಮೇಧಾವಿಗಳಾದ ಅನುಭವಸ್ಥರಿಂದ ಸ್ವಲ್ಪ ವೇಳೆ ಶಿವಾನುಭವ ಶಾಸ್ತ್ರವು ಶ್ಲಾಘ್ಯವಾಗಿ ನಡೆಯುತ್ತಿತ್ತು. ಬ್ರಹ್ಮಜಿಜ್ಞಾಸುಗಳಾದ ಭಾವಿಕ ಮಹಾಶಯರು ಶಿವಾನುಭವದ ಪ್ರಯೋಜನ

ವನ್ನು ಅವಶ್ಯವಾಗಿ ತಪ್ಪದೆ ಪಡೆಯುತ್ತಿದ್ದರು. ಈಷಣತ್ರಯಗಳಿಗೆ ಒಳಗಾಗದ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳನ್ನು ಚನ್ನಾಗಿ ತಿಳಿದ ಪೂಜ್ಯರು ಬಂದಾಗ್ಗೆ, ಭಕ್ತಿಯಿಂದ ಆ ತೋಟಿಗನು ನಮಸ್ಕರಿಸುತ್ತಿದ್ದನು. ಆ ಪೂದೋಟದಲ್ಲಿಯ ಸ್ವಚ್ಛತ್ಯವ್ಯವಸ್ಥೆಯನ್ನು, ಶಿವಪೂಜಾ ಯೋಗ್ಯವಾದ ಪತ್ರಿ ಪುಷ್ಪಗಳನ್ನು, ಹಾಗೂ ಅಭಿಷೇಕಕ್ಕೆ ಯೋಗ್ಯವಾದ ಅಗ್ಗಣಿಯನ್ನು ನೋಡಿ ಸದ್ಭಕ್ತಿ ಸಾಮ್ರಾಜ್ಯದಲ್ಲಿ ನಲಿದಾಡುವ (ಇಷ್ಟ) ಲಿಂಗಾನುಸಂಧಾನಿಗಳಾದ ಲಿಂಗ ಮೋಹಿಗಳಿಗೆ ವಿಚಿತ್ರತರವಾದ ವಿರಹ ತಾಪವು ಉಂಟಾಗುತ್ತಿತ್ತು. ಆದರೆ ಆ ತಾಪವು ಗೀರ್ವಾಣಭಾಷಾ ಕವಿಸಾರ್ವಭೌಮರಾದ ಬಾಣ, ಕಾಲಿದಾಸರು ಬಣ್ಣಿಸುವ ವಿರಹತಾಪವಲ್ಲವು. ಅದರ ವಿಧವನ್ನು ವರ್ಣಿಸಲಿಕ್ಕೆ ಲಿಂಗಮೋಹಿಗಳಿಗೆ ಸಲ್ಲುವುದು. ಸೂರ್ಯನು ಮಧ್ಯರೇಖೆಗೆ ಬರುವ ಹೊತ್ತು ಸಮಿಾಪಿಸಿತು; ಮಧ್ಯಾನ್ಹ ಶಿವಪೂಜೆಗೆ ತ್ವರಿತವಾಗಿ ಹೋಗುವಾ ಎಂದು ಪ್ರಾತಃಕಾಲದ ಶಿವ ಪೂಜೆ ತೀರಿಸಿಕೊಂಡು ಬಂದವರು; ಸಾಯಂಕಾಲಕ್ಕೆ ಬಂದವರು ಪ್ರದೋಷ ಪೂಜೆಗೆ ತಡವಾಗುವುದು ತೆರಳುವಾ ಬನ್ನಿರಿ ಹೀಗೆ ತಮ್ಮ ಪ್ರೇಮಪರವಶತೆಯ ಶಿವಪೂಜಾ ಆತುರತೆಯುಳ್ಳವರಾಗಿದ್ದರು. ಭಕ್ತಿ ಸುಲಭನಾದ ಶಿವನ ಮಸ್ತಕದಮೇಲೆ ನಾವು ಭಾರವಾಗುವದಿಲ್ಲ; ಆದ್ದರಿಂದಲೆ ನಮ್ಮ ಮೇಲೆ ಆ ಜಗದ್ಭರಿತನ ಪ್ರೀತಿಯು ಹೆಚ್ಚೆಂದು ಅಲ್ಲಿಯ ದ್ರೋಣಪುಷ್ಪಗಳು ಹರ-ಗುರು ಭಕ್ತಿಪರಾಯಣರಾದ ಅತಿಥಿಗಳಿಗೆ ಪ್ರಾರ್ಥಿಸುತ್ತಿದ್ದವು ಅಲ್ಲಿಗೆ ಬಂದ ಐವರು ಜಂಗಮಾ ಭಕ್ತರನ್ನು ಕಂಡಕೂಡಲೆ ಆ ನಿರ್ಮಲ ಹೃದಯನಾದ ನಮ್ಮ ತೋಟಿಗನಿಗೆ ಅಸದೃಶವಾದ, ಮುಕ್ತಿಪ್ರದವಾದ, ಪಂಚಾಕ್ಷರದ ನೆನಪಾಗಿ ಅದರ ವರ್ಣಿಸಲಸದಳವಾದ ಮಹಿಮೆಯು ಆತನ ಪವಿತ್ರವಾದ ಮನೋಮಂದಿರದಲ್ಲಿ ಸರಸವಾಗಿ ನುರಿಯಲಾರಂಭಿಸಿತು. ಅಲ್ಲಿಗೆ ಬಂದ ಜಂಗಮ ಭಕ್ತರಲ್ಲೊಬ್ಬನು:—ಬೇಗನೆ ನಡೆಯಿರಿ, ಈ ದಿವಸ ನಮ್ಮ ಮನೆಗೆ ಲಿಂಗದ ನೆಲೆಕಲೆಗಳನ್ನು ಹಾಗೂ ಜಂಗಮ ತತ್ವವನ್ನು ಅರಿತಿರುವ ಗುರುಸ್ಥಲದ ಜಂಗಮರು ತೃಪ್ತಿಗಾಗಿ ಬರುವರು. ಮತ್ತೊಬ್ಬನು:—ಈ ಹೊತ್ತು ನಮ್ಮ ಮನೆಯಲ್ಲಿ ಸಾಂಗವಾಗುವ ಗಣಾರಾಧನೆಗೆ ಸದಾಚಾರನಿರತರಾದ, ಪಂಚಕ್ಲೇಶವಿದೂರರಾದ, ಪಂಚವರ್ಣಸಮನ್ವಿತರಾದ ಮುಪ್ಪಿನ ವಿರಕ್ತದಾಸೋಹ ಮೂರ್ತಿಗಳು ಪ್ರಸಾದಕ್ಕಾಗಿ ಬಿಜಯಮಾಡುವರು ತೀವ್ರ ಹೋಗುವಾ. ಮೂರನೇಯವನು—ಇಂದು, ಸ್ವಯ-ಚರ-ಪರ ಜಂಗಮ ಅರಿವನ್ನು ತಿಳಿದ ಇಹಪರದ ಜ್ಞಾನಯುತರಾದ, ಶಿವಾಗಮಜ್ಞರಾದ ಮಠದ ಮಹಾ ಸ್ವಾಮಿಗಳು ನಮ್ಮ ಗೃಹದಲ್ಲಿ ಜರಗಬೇಕಾಗಿರುವ ಏಕಾದಶ ರುದ್ರಾಭಿಷೇಕಕ್ಕಾಗಿ ದಯಮಾಡಿಸುವರು. ಅವರ ನಮ್ಮು ಖನೇತೃತ್ವದಲ್ಲಿ ಮಿಂದು ಮಡಿಯಾಗಿ ಆ ಮಹಾ ಶಿವಯೋಗಿಗಳವರ ಪಾದೋದಕ ಪ್ರಸಾದ

ವನ್ನು ಸ್ವೀಕರಿಸಬೇಕಾಗಿದೆ. ನಾಲ್ಕನೇಯವನು :—ಶಿವಭಕ್ತಿರಸಪ್ರಧಾನವಾದ ಆ ಪುರಾಣವು ಇನ್ನೂ ಕೆಲವು ತಿಂಗಳು ಸಾಗುವುದು ಬೇಗನೆ ಮುಗಿಯುವಂತಿಲ್ಲ. ಯಾಕಂದರೆ, ಆ ಸಾಹಿತ್ಯಕಲಾಭಿಜ್ಞರಾದ, ಪ್ರತಿಭಾಸಂಪನ್ನರಾದ ಪುರಾಣೀಕರು ಸಂದರ್ಭಾನುಸಾರವಾಗಿ ಸುಭಾಷಿತದ ಮಳೆಗರೆಯುವರು. ಹಾಗೂ ಸಮಯೋಚಿತವಾದ, ಸ್ವಾರಸ್ಯವಾದ ಸಂಗತಿಗಳನ್ನು ಬೋಧಪ್ರದವಾದ ಉಪಕಥೆಗಳನ್ನು, ಶಿವಭಾವಗರ್ಭಿತವಾದ ಶರಣರ ಪದ್ಯಗಳನ್ನು ಮತ್ತು ಅಮೃತೋಪಮವಾದ ಆಗಮೋಕ್ತಿಗಳೊಡನೆ ಉದಹರಿಸುವುದರಿಂದ ಮುಖ್ಯ ಪುರಾಣವು ಸಾವಕಾಶವಾಗಿ ಸಾಗುವುದು. ಐದನೇಯವನು :—ಶ್ರೋತೃಸಮುದಾಯದಲ್ಲಿ ಶ್ರವಣ, ಮನನ, ನಿಧಿಧ್ಯಾಸ ಉಂಟಾದರೆ ಮಾತ್ರ ಪುರಾಣದ ಸದುಪಯೋಗವು ಸಾಕಷ್ಟಾಗುವದು. ಹೀಗೆ ಮಾತನಾಡುತ್ತ ನಡ್ವಿನಯಶೀಲರಾದ ಆ ಗುರು-ಲಿಂಗ-ಜಂಗಮ ಭಕ್ತರು ತಮ್ಮ ತಮ್ಮ ವಸತಿಗೃಹಗಳನ್ನು ನೇರಿದರು.

ಈ ಮನೋಹರವಾದ ಆರಾಮದ ನೆರೆಯಲ್ಲಿಯೆ ಪ್ರಾಣಿದಯಾಪರನಾದ, ಕುಶಲಮತಿಯಾದ ಆ ಭಾಗದ ಅರಸನಿಂದ ವಿಚಾರಪೂರ್ವಕವಾಗಿ ಹಸುಗಳಿಗೆ ಮತ್ತು ವೃಷಭಗಳಿಗೆ ಮೇಯುವುದಕ್ಕಾಗಿ ಪ್ರತ್ಯೇಕವಾಗಿ ಇರಿಸಿದ ಗೋಮಾಳವೆಂಬ ಭೂಪ್ರದೇಶವು ಎತ್ತರವಾಗಿ ಬೆಳೆದ ಹುಲ್ಲಿನಿಂದ ಯುಕ್ತವಾಗಿ ಪುಷ್ಟವಾದ ಧೇನುಗಳಿಂದಲೂ ಬಲವಾದ ಸದೃಢಕಾಯದಿಂದ ಒಪ್ಪುತ್ತಿರುವ ಎತ್ತುಗಳಿಂದಲೂ ವಿರಾಜಿಸುತ್ತಿತ್ತು.

ನಮ್ಮ ಚರಿತ್ರನಾಯಕರಾದ ನಾಯನಾರು ಇವರು ವೃತ್ತಿಯಿಂದ ಗೋಪಾಲರಾಗಿದ್ದರು. ನಿಜವಾದ ಶಿವಭಕ್ತರಿಗೆ ಅವಶ್ಯವಾಗಿ ಇರಬೇಕಾದ ಯಾವತ್ತು ಸುಗುಣಗಳು ಇವರಲ್ಲಿ ಮೂರ್ತಿ ಮತ್ತಾಗಿ ನೆಲೆಗೊಂಡಿದ್ದವು. ಇವರಿಗೆ ಕೊಳಲೂದುವ ಪಾಂಡಿತ್ಯವು ಅಸಾಧಾರಣವಾಗಿದ್ದಿತು. ಇವರು ತಮ್ಮ ಕಾಯಕಕ್ಕೆ ಅನುಗುಣವಾಗಿ ದಿನಾಲು ಪಶುಗಳನ್ನು ಮೇಲೆ ವರ್ಣಿಸಿದ ಅಡವಿಗೆ ತೆಗೆದುಕೊಂಡು ಹೋಗುತ್ತಿದ್ದರು. ಅವರ ಅಪ್ರತಿಮವಾದ ಇಂಪಾದ ಕೊಳಲಿನ ಗಾನವನ್ನು ಕೇಳಿ ಗೋವೃಂದವು ಆತನನ್ನು ಬಹು ಪ್ರೀತಿಯಿಂದ ಹಿಂಬಾಲಿಸುತ್ತಿತ್ತು.

ರಾತ್ರಿಯ ಕಡೆಯ ಭಾಗವಾದ ಬ್ರಾಹ್ಮೀ ಮುಹೂರ್ತದಲ್ಲಿ ನಮ್ಮ ಕಥಾನಾಯಕನು ಶಿವಧ್ಯಾನ ಪೂರ್ವಕವಾಗಿ ಎದ್ದು, ಶರಣಸಂತತಿಯನ್ನು ಪಾಡಿ, ಸರ್ವೋತ್ಕೃಷ್ಟವಾದ ಪಂಚಾಕ್ಷರ ಮಹಾ ಮಂತ್ರದ ಮಹಿಮೆಯನ್ನು ಅರಿತವನಾದುದರಿಂದಲೆ, ಅಗಣಿತ ಶಕ್ತಿಯುಳ್ಳ ಪಂಚಾಕ್ಷರವನ್ನೇ ಕೊಳಲೂದುತ್ತ ಈ ಮೊದಲು ವಿವರಿಸಿದ ತೋಟಕ್ಕೆ ಪತ್ರಪುಷ್ಪಾದಿಗಳನ್ನು ತರುವುದಕ್ಕಾಗಿ ಹೋಗುತ್ತಿದ್ದನು.

**ಚೋಳ**ಮಂಡಲದಲ್ಲಿ ಒಪ್ಪುತ್ತಿದ್ದ ಮೇಲೆ ವರ್ಣಿಸಿದ ಶೋಭನಪುರದಲ್ಲಿ ಕೆಲವು ಶಿವಭಕ್ತರು ಉಷಃಕಾಲದಲ್ಲಿ ಎದ್ದು ಪ್ರಭುವಿನನ್ನು ಸ್ಮರಿಸಿ, ಶಿವಸ್ತುತಿ ಗೈದು, ಮುಂಜಾವಿನಲ್ಲಿ ವಿಹಾರಕ್ಕಾಗಿ ನಿರ್ದುಷ್ಟವಾದ, ನಿರ್ಮಲವಾದ ಪ್ರಾಣ ವಾಯು ಸೇವನೆಗಾಗಿ ಮತ್ತು ಪ್ರಭಾತಕಾಲದ ಬಾಲಸೂರ್ಯನ ಪವಿತ್ರಕಿರಣ ಗಳು ತಮ್ಮ ಮೇಲೆ ಬಿದ್ದು ಉತ್ಸಾಹವು ಹೆಚ್ಚಲೆಂದು ಈ ಮೊದಲು ವಿವರಿಸಿದ ತೋಟದ ಕಡೆಗೆ ಹೋಗುತ್ತಿದ್ದರು. ಬಹು ಪೂರ್ವಕಾಲದಲ್ಲಿ ಹಿಂದಕ್ಕೆ ಸನಕ-ಸನಂದ-ಸನತ್ಕುಮಾರ-ಪತಂಜಲಿ ಮುಂತಾದ ಋಷಿಗಳು ಶರಣಾಗತವತ್ಸಲ ನಾದ ಪರಶಿವನನ್ನು ಕುರಿತು ಇಷ್ಟಾರ್ಥಸಿದ್ಧಿಗಾಗಿ ಒಂದೇ ಸ್ಥಳದಲ್ಲಿ ತಪಸ್ಸನ್ನಾ ಚರಿಸಿದಾಗ ಆ ಕರುಣಾಮಯನಾದ, ಸ್ವಾಮಿಯು ಅವರ ಸಮ್ಮುಖದಲ್ಲಿ ಪ್ರತ್ಯಕ್ಷನಾಗಿ ತನ್ನ ಡಮರುಗವನ್ನು ಬಾರಿಸಿ ಆ ಋಷಿಗಳ ಅಭೀಷ್ಟವನ್ನು ಪೂರೈಸಿದನು. ಆ ಮಹಾ ದೇವನು ಆಶೀರ್ವದಿಸಿದ ಡಮರುಗ ಧ್ವನಿಯನ್ನು ಕೇಳಿ ಸನಕಾದಿಗಳು ತಮತಮಗೆ, ಆ ಅನಂತಮಹಿಮನ ಕೃಪೆಯಿಂದ ಭಾಸವಾ ದಂತೆ ಸೂತ್ರರೂಪದಿಂದ ತಾವು ಕೈಕೊಂಡ ಗ್ರಂಥಗಳನ್ನು ರಚಿಸಿದರು. ಒಂದು ದಿವಸ ಪ್ರಾತಃಕಾಲದಲ್ಲಿ ತೋಟದಿಂದ ಹೂ.ಪತ್ರಿಯನ್ನು ತೆಗೆದು ಕೊಂಡು ಮನೋಹರವಾಗಿ ಕೊಳಲೂದುತ್ತ ನಮ್ಮ ಮಹಾ ಶರಣನು ಬರು ವುದನ್ನು ಮಾರ್ಗದಲ್ಲಿ ಕಂಡು ಇಷ್ಟದೇವತೆಯನ್ನು ನೆನೆಯುತ್ತ ವಿಹಾರಕ್ಕೆ ಹೊರಟ ಸದ್ಭಕ್ತರಿಗೆ ಆ ನರಪುಂಗವನನ್ನು ನೋಡಿದೊಡನೆ ಈ ರೀತಿಯಾಗಿ ಅವ ರಿಗೆ ಹೊಳೆಯಿತು ; ಅಂದರೆ ಅವರ ಮನಸ್ಸಿಗೆ ಗೋಚರವಾಯಿತು ಅದೆಂತೆನೆ :-

ದಯಾನಿಧಿಯಾದ ಪರಮಾತ್ಮನು ಪರಿಶುದ್ಧವಾದ ಹವೆಯನ್ನು ಮತ್ತು ಆರೋಗ್ಯದಾಯಕವಾದ ಸೂರ್ಯಪ್ರಕಾಶವನ್ನು ಬಡವರು—ಶ್ರೀಮಂತರು, ಸ್ತ್ರೀಯರು—ಪುರುಷರು ಎಂಬ ಭೇದಭಾವವಿಲ್ಲದೆ ಸರ್ವರಿಗೂ ಸಮನಾಗಿ ದಯ ಪಾಲಿಸಿರುವನಷ್ಟೆ. ವಿಚಾರಪರರು ಮಾತ್ರ ಅವುಗಳ ಉಪಯೋಗ ಮಾಡಿ ಕೊಳ್ಳುವರು.

ಶುದ್ಧವಾದ ಮತ್ತು ಸಾತ್ವೀಕವಾದ ಅಹಾರವನ್ನು ಪ್ರಸಾದರೂಪವಾಗಿ ಸ್ವೀಕರಿಸುವದು, ಮಿತಾಹಾರಸೇವನೆ, ನಿದ್ರೆಗೆಡದಿರುವಿಕೆ, ಅನಿಷ್ಟಚಿಂತನೆ ಯಿಂದಾ ವಿಮುಖನಾಗಿ, ಸದ್ಭಾವನಾಪೂರಿತನಾಗಿ, ಸನ್ಮಾರ್ಗಪ್ರವರ್ತನಾಗೋಣ ಇವೆಲ್ಲವನ್ನು ಯಾವತ್ತರು ಆಚರಿಸಿ ಕೃತಾರ್ಥರಾಗುವದು ಶ್ರೇಯಸ್ಕರವು. ರೂಪ–ರುಚಿ–ರಸ–ಗಂಧ–ಸ್ಪರ್ಶ ಮುಂತಾದ ಯಾವತ್ತು ಭೋಗವನ್ನು ಶಿವಾ ರ್ಪಣ ಮೂಲಕವಾಗಿ ತೆಗೆದುಕೊಳ್ಳಬೇಕು.

ಆರೋಗ್ಯವೆಂಬ ಭಾಗ್ಯವು ಸರ್ವಸಂಪತ್ತುಗಳಲ್ಲಿ ಹೆಚ್ಚಿನದು. ಯಾಕೆಂ ದರೆ, ಇದು ಬಾಲಕರಿಗೂ, ಬ್ರಹ್ಮಚಾರಿಗಳಿಗೂ, ಗೃಹಸ್ಥರಿಗೂ, ವಾನಪ್ರಸ್ಥ

ರಿಗೂ, ಯತಿಗಳಿಗೂ ಸರಿಯಾಗಿ ಬೇಕಾದದ್ದು. ಶಿವಯೋಗದ ಪೂರ್ಣಸಿದ್ಧತೆ ಯಾಗಬೇಕಾದರೆ ಮತ್ತು ಕ್ಷಿಪ್ರದಲ್ಲಿ ಫಲಿಸಬೇಕಾದರೆ ಸಂಪೂರ್ಣವಾದ ಆರೋಗ್ಯವು ಹೆಚ್ಚು ಅವಶ್ಯವು. (ಶುಕ್ಲಸಂಗೋಪನವು ಅಥವಾ ವೀರ್ಯಸಂರಕ್ಷಣೆಯು ಜಯಾಪೇಕ್ಷಿಗಳು ಗಮನಿಸತಕ್ಕ ಮಹತ್ತರವಾದ ಸಂಗತಿಯು. ಬ್ರಹ್ಮೋಪಾಸಕರಿಗಂತೂ ಇದೇ ಪ್ರಥಮ ಪಾಠವು. ಇದನ್ನು ಪಾಠಕಮಹಾಶಯರು ಒಪ್ಪುವರು.)

ಅಪ್ರಾರ್ಥಿತರಾಗಿ ಪರರಿಗೆ ಪಾತ್ರವರಿತು ಸಕಾಲಕ್ಕೆ ಉಪಕಾರಮಾಡುವದೇ ಪುಣ್ಯವು, ಹೆರವರಿಗೆ ಪೀಡಿಸುವದೇ ಪಾಪವು. ಮಾನವನು ತನ್ನ ಕರ್ತವ್ಯವನ್ನರಿತು ಸರಿಯಾಗಿ ವರ್ತಿಸಿ ಆತ್ಮೋದ್ಧಾರ ಮಾಡಿಕೊಳ್ಳುವದು ಪುಣ್ಯಕರ್ಮವು. ಪ್ರಾಣಿಯು ದುಷ್ಕಾರ್ಯದಲ್ಲಿ ತೊಡಗಿ ಅಧಃಪತನವನ್ನು ಬರಮಾಡಿಕೊಳ್ಳುವದೇ ಪಾಪಾಚರಣೆಯು.

ಧರ್ಮ-ಅರ್ಥ-ಕಾಮ-ಮೋಕ್ಷ ಎಂಬ ಪುರುಷಾರ್ಥಗಳಿಗೆ ಶೀಲವೆಂಬುವದೇ ತಳಹದಿಯು. ನಿಷ್ಕಲಂಕವಾದ, ಸ್ತುತ್ಯವಾದ ಸದ್ವರ್ತನೆಯು ಸಕಲ ಸಾಧನೆಗಳಿಗೂ ಮೊದಲನೇ ಸೋಪಾನವು.

ಪೃಥ್ವಿ, ಅಪ್ಪು, ತೇಜ, ಆಕಾಶ, ವಾಯು ಎಂಬ ಪಂಚಮಹಾಭೂತಗಳೂ ಹಾಗೂ ಸೂರ್ಯ, ಚಂದ್ರ, ಮತ್ತು ಆತ್ಮಾ ಇವೇ ಪರಮಾತ್ಮನ ಅಷ್ಟತನುಗಳು. ಆದುದರಿಂದಲೆ ಯಾವ ಬಲಾಢ್ಯನಾಗಲಿ, ಅಥವಾ ಸಮರ್ಥವಾದ ಪ್ರಾಣಿಯಾಗಲಿ ಆ ಭಗವಂತನು ಅರಿಯದಂತೆ ಏನೊಂದನ್ನು ಮಾಡಲು ಸರ್ವಥಾ ಅಶಕ್ಯವು. ದೇವರು ಸರ್ವಸಾಕ್ಷಿಭೂತನೆಂಬುವದು ಸರ್ವಶೃತವಾದ ಸಂಗತಿಯು.

ನವವಿಧವಾದ ಶಿವಭಕ್ತಿಯ ಬಗ್ಗೆ ನೀತಿಕಾರರು ಪ್ರಸ್ತಾಪಿಸುವರು. ಅದರಲ್ಲಿ ಮುಖ್ಯವೆಂದರೆ ಸ್ಮರಣೆ, ಅರ್ಚನೆ, ವಂದನೆ, ಸಖ್ಯ, ಆತ್ಮನಿವೇದನೆ ಇವೇ ಪ್ರಾಮುಖ್ಯವಾದವುಗಳು. ಇವುಗಳಲ್ಲಿ ಹೆಚ್ಚಿನದೆಂದರೆ ಪರಮಾತ್ಮನಿಗೆ ಆತ್ಮಾರ್ಪಣೆ ಮಾಡುವದೇ ಸರ್ವೋತ್ಕೃಷ್ಟವು.

ಶಿವೋಪಾಸಕರಾದವರು ವಿಭೂತಿ ರುದ್ರಾಕ್ಷಗಳನ್ನು ಧರಿಸಿ ಪಂಚಾಕ್ಷರ ಮಹಾ ಮಂತ್ರವನ್ನು ಮನಸ್ಸಿಗೆ ಬಂದಂತೆ ಕೂಗಿದರೆ ಶಿವಭಕ್ತನು ಪಾಲಿಸತಕ್ಕ ಕಟ್ಟಳೆಗಳು ತೀರಲಿಲ್ಲ. ಇನ್ನುಳಿದ ಐದು ಆವರಣಗಳಾದ ಗುರು–ಲಿಂಗ–ಜಂಗಮ–ಪಾದೋದಕ–ಪ್ರಸಾದಗಳಲ್ಲಿ ಅಕೃತ್ರಿಮವಾದ ಸಹಜ ಪ್ರೇಮವನ್ನು ತಳೆದು, ಸದ್ಧರ್ಮಗುರುಪರಂಪರಾಗತರಾದ ಪೂಜ್ಯ ಗುರುಗಳಿಂದ ಬೋಧವನ್ನು ಹೊಂದಿ, ಶಾಸ್ತ್ರೋಕ್ತವಾಗಿ ಶಿವಮಂತ್ರಯುಕ್ತರಾದವರೇ ಶಿವಭಕ್ತರೆಂದು ಕರೆಸಿಕೊಳ್ಳಲು ಅರ್ಹರಾಗುತ್ತಾರೆ.

ಶಿವಭಕ್ತರು ಷಟ್ಸ್ಥಲಗಳನ್ನು ತಿಳಿದು, ಅಷ್ಟಾವರಣ ನಿಷ್ಠರಾಗಿ ಪಂಚಾಚಾರ ನಿರತರಾಗತಕ್ಕದ್ದು. ಶಿವಧ್ಯಾನಾಸಕ್ತನಾಗಿರಬೇಕು ಹಾಗೂ ಶಿವೇತರ ದೇವತೆಗಳನ್ನು ಉಪಾಸನೆಮಾಡದಿರುವದೇ ಲಿಂಗಾಚಾರವು. ದಿನಾಲು ತಪ್ಪದೆ ಮೂರು ವೇಳೆ ಅಂದರೆ ತ್ರಿಕಾಲದಲ್ಲಿ ಶುಚಿರ್ಭೂತನಾಗಿ, ವಿಧ್ಯುಕ್ತವಾಗಿ ಶಿವಲಿಂಗಾರ್ಚನ ಪೂರ್ವಕವಾಗಿ ಶಿವಮಂತ್ರವನ್ನು ಜಪಿಸತಕ್ಕದ್ದೇ ಸದಾಚಾರವು. ಶಿವಭಾವನಾಯುಕ್ತನಾಗಿ ಪವಿತ್ರಾಚರಣೆಯಿಂದ ನಿಜವಾದ ಶಿವಭಕ್ತರಿಗೆಲ್ಲಾ ಕಿಂಕರತೆಯನ್ನು ಅಕ್ಕರೆಯಿಂದ ವಹಿಸುವದೇ ಭೃತ್ಯಾಚಾರವು. ಸದಾಕಾಲವು ಮನಶ್ಶುದ್ಧಿಯಿಂದ ಶಿವಾಗಮೋಕ್ತವಾದ ಇಷ್ಟಲಿಂಗ ವ್ರತವನ್ನಾಚರಿಸುವದೇ ಶಿವಾಚಾರವು. ಶಿವನಿಂದೆ, ಶಿವಸಂಬಂಧವಾದ ಅಷ್ಟಾವರಣನಿಂದೆ, ಶಿವಧರ್ಮದ ನಿಂದೆ, ಶಿವಶಾಸ್ತ್ರಗಳ ನಿಂದೆಯನ್ನು ಸಹಿಸದಿರುವಿಕೆಯು ಹಾಗೂ ಸಾಧ್ಯವಾದರೆ ಆ ದುಷ್ಟರನ್ನು ನಿಗ್ರಹಿಸುವದು ಮತ್ತು ದಂಡಿಸುವದು ಗಣಾಚಾರವೆಂದು ತಿಳಿಯುವದು.

ಜಾಗರ, ಸ್ವಪ್ನ, ಸುಷುಪ್ತಿ, ತೂರ್ಯ, ತುರ್ಯಾತೀತ ಎಂಬ ಪಂಚಾವಸ್ಥೆಗಳಲ್ಲಿ ಶಿವಧ್ಯಾನ ವಿರಹಿತನಾಗದಿರುವಿಕೆಯು ಶಿವಭಕ್ತನ ಲಕ್ಷಣಗಳಲ್ಲಿ ಗಣನೀಯವಾದ ಮುಖ್ಯವಿಷಯವು. ಮಾನವನು ಯಾವ ಕಾರ್ಯಕಲಾಪಗಳಲ್ಲಿ ತೊಡಗಿದ್ದರೂ ಪರಮಾತ್ಮನ ನಿಜಧ್ಯಾನದಲ್ಲಿ ತಪ್ಪಕೂಡದು. ಅದೆಂತೆನೆ :— ತಲೆಯಮೇಲೆ ನೀರಿನ ಕೊಡವನ್ನಿಟ್ಟುಕೊಂಡು ತರುವ ವ್ಯಕ್ತಿಯು, ತನ್ನ ವಡನಾಡಿಗಳಕೂಡಾಗಲಿ, ಬೇರೆಯವರೊಡನೆ ಆಗಲಿ, ಮಾತಾಡಲಿ, ವಿನೋದವಾಡಲಿ, ಅತ್ತಿಂದ ಇತ್ತ ಚಲಿಸಲಿ ಅಥವಾ ಅತ್ತಿಂದ ಇತ್ತ ಭರದಿಂದ ವೇಗವಾಗಿ ಬರಲಿ, ಇಲ್ಲವೆ ಓಡಿಬರಲಿ ಹ್ಯಾಗೆ ಆಚರಿಸಿದರೂ ಕೂಡಾ ತಲೆಯಮೇಲಿನ ಕೊಡವು ಬೀಳದಂತೆ ಜಾಗ್ರತೆಯಾಗಿದ್ದು ಇತರ ವ್ಯವಹಾರಗಳನ್ನು ಆಚರಿಸುವದು ಎಲ್ಲರೂ ನಿತ್ಯನೋಡಿ ತಿಳಿದ ಮಾತಾಗಿದೆ.

ಪ್ರೀತಿಯಿಂದ ಪ್ರೀತಿಯು ಹೆಚ್ಚುವದು; ಸ್ನೇಹದಿಂದ ಪ್ರೇಮವು ವರ್ಧಿಸುವದು; ಪ್ರೇಮದಿಂದಲೆ ಅನುರಾಗವು ಬೆಳೆಯುವದು; ಸ್ನೇಹವು, ಪ್ರೀತಿಯು, ಪ್ರೇಮವು, ಅನುರಾಗವು, ದೇವರಲ್ಲಿಯು ಹಾಗೂ ಪೂಜ್ಯರಾದ ಗುರುಗಳಲ್ಲಿ ಉಂಟಾದರೆ ಅದು ಭಕ್ತಿಯೆಂದು ಕರೆಯಲ್ಪಡುತ್ತದೆ. ಭಗವಂತನಲ್ಲಿಯೂ ಹಾಗೂ ಆತನ ಸ್ವರೂಪ–ಪ್ರತಿನಿಧಿ ಮತ್ತು ಅವತಾರವೆನಿಸುವ ಗುರು–ಲಿಂಗ–ಜಂಗಮರಲ್ಲಿ ಭಕ್ತಿಯು ಮಿಗೆ ವೆಗ್ಗಳವಾದಂತೆ ಗುರು-ದೇವತಾಕಟಾಕ್ಷವು ಖಂಡಿತವಾಗಿ ಆಗುತ್ತದೆ. ಅಕುಟಿಲವಾದ ಭಕ್ತಿಯು ಅಧಿಕವಾಗಿ, ನೈಸರ್ಗಿಕವಾದ ಶಿವನಿಷ್ಠೆಯು ಬಲಿತು, ಪರಿಶುದ್ಧನಾಗಿ, ಶಿವಾಭಿನ್ನನಾಗಿ, ಶಿವತಾದಾತ್ಮ್ಯವನ್ನು

ಹೊಂದಿ ಪರಮಾತ್ಮನನ್ನು ಮರೆಹೊಕ್ಕು ತ್ರಿಕರಣಪೂರ್ವಕವಾಗಿ ಶಂಭುವಿನನ್ನು ಉಪಾಸಿಸಲು ನಿಸ್ಸಂದೇಹವಾಗಿ ಈಶಾನುಗ್ರಹವಾಗಿ ಸಕಲ ಮನೋರಥಗಳು ಪೂರೈಸುವವು.

ನೀತಿಕಾರರು ತೃಪ್ತಿಯೆ ಅನರ್ಘ್ಯವಾದ ಐಶ್ವರ್ಯವೆಂದು ಬಣ್ಣಿಸುವರಷ್ಟೆ. ಆದರೂ ಇದಕ್ಕೆ ಅಪವಾದಗಳು ಉಂಟು :—ಪ್ರಶಸ್ತ ಹಾಗೂ ಸ್ಪೃಹಣೀಯವಾದ ಸತ್ಕೃತಿಗಳು. ಯಥಾ ಯೋಗ್ಯವಾದ ಸಂಸ್ಕಾರವನ್ನು ಹೊಂದಿದ ಲಿಂಗ ಮೋಹಿಗೆ ಈಶಸ್ಮರಣೆ-ಈಕ್ಷಣೆ-ಸ್ತುತಿ-ಪೂಜೆ ಇವುಗಳಲ್ಲಿ ಆತನ ಸುಕೋಮಲವಾದ, ಅನುಕರಣನೀಯವಾದ ಮನಸ್ಸಿನ ಬಯಕೆಯು ಎಂದಿಗೆ ತಾನೆ ಪೂರೈಸುವದು.

ಶಿವಧರ್ಮರತಿಯೊಡನೆ ಶಿವಾಭಿನ್ನನಾಗಿ, ಆತ್ಮಾರಾಮನಾಗಿ ಮನೋವಾಕ್ಕಾಯಗಳಿಂದ ಶಿವನನ್ನಾರಾಧಿಸತಕ್ಕವರಿಗೆ, ಉನ್ಮಾದನೆ, ಮದನ, ಮೋಹನ, ಸಂತಾಪನ, ವಶೀಕರಣ ಎಂಬ ಪಂಚ ಬಾಣಗಳ ಬಾಧೆಯು ತಟ್ಟಲಾರದು. ಪರಶಿವನು ಮೊದಲೇ ಕಾಮವಿರೋಧಿಯು, ಕಾಯಜನನ್ನು ಗೆದ್ದವನು ಹೀಗಿರಲು ಆ ಮಹಾಸ್ಥಾಣುಮೂರ್ತಿಯನ್ನು ಅನನ್ಯಭಾವದಿಂದ ಶರಣು ಹೊಕ್ಕವನಿಗೆ ಅದೆಂತು ಮಕರಧ್ವಜನ ಉಪಟಳವು ತಾನೆ ಆದೀತು ?

ಅಪ್ರಾಕೃತ ಸೃಷ್ಟಿಯಾದ ಲಿಂಗಾಂಗಿಗಳ ಉತ್ಪತ್ತಿಯು ಶ್ರೀ ಪರಶಿವ ಮೂರ್ತಿಯ ಪಂಚಮುಖೋದ್ಭೂತರಾದ ಯುಗಭೇದದಿಂದ ಬೇರೆ ಬೇರೆ ಹೆಸರನ್ನು ತಳೆದ **ಏಕೋರಾಮಾರಾಧ್ಯ, ಪಂಡಿತಾರಾಧ್ಯ, ರೇವಣಾರಾಧ್ಯ, ಮರುಳಾರಾಧ್ಯ, ವಿಶ್ವಾರಾಧ್ಯ**ರೆಂಬೀ ಅಯೋನಿಜರಾದ ಪಂಚಾಚಾರ್ಯರಿಂದ ಆಗಿ ಅವರ ವಂಶಸ್ಥರ ಅಜಾಗರೂಕತೆಯಿಂದಲೋ, ಕಾಲವಶದಿಂದಲೋ, ಅಥವಾ ಇನ್ನಾವ ಅಗಮ್ಯ ಕಾರಣದಿಂದಲೋ ಶಿವಕುಟುಂಬವೆನಿಸುವ ಲಿಂಗವಂತರು ಕ್ಷೀಣದೆಶೆಯನ್ನು ಹೊಂದಲು ದಯಾಘನನಾದ, ಅಪಾರಮಹಿಮನಾದ ಶಿವನ ಶಿಖಾಚಕ್ರದಿಂದ ಶ್ರೀ **ನಿರಂಜನ ಜಂಗಮ** ಮೂರ್ತಿಯ ಅವತಾರವಾಗಿ, ಮೃತಪ್ರಾಯವಾದ ಶಿವಭಕ್ತರ ಕುಟುಂಬವು ಪುನರುಜ್ಜೀವನಗೊಂಡಿತು. ಈ ರೀತಿಯಾಗಿ ವಿಚಾರತರಂಗಗಳಿಂದ ರಂಜಿತರಾದ ಆ ವಿಹಾರಕ್ಕೆ ಹೊರಟ ಸುಜನರು "ನೀಲಗ್ರೀವತ್ವಮಸಿ ಭುವನಸ್ಥಾಪನಾಸೂತ್ರಧಾರಃ" ಎಂಬ ಮಹಾಕವಿ ದಂಡಿಯ ಉದ್ಗಾರವನ್ನು ನೆನಪಿನಲ್ಲಿ ತಂದು ಮುಂದಕ್ಕೆ ಸಾಗಿದರು.

ಒಂದು ದಿನ ನಮ್ಮ ಶಿವಧರ್ಮಪರನಾದ ಕಥಾನಾಯಕನು ಶೋಭನಪುರದ ಪೂದೋಟದಲ್ಲಿ ಅತಿ ರಮಣೀಯವಾದ ಹೊಂಬಣ್ಣದ ಹೂಗೊಂಚಲುಗಳಿಂದ ತೊನೆದು ತೂಗಾಡುವ ಕಕ್ಕೆಯ ಮರವನ್ನು ನೋಡಿ ಶಿವಲಿಂಗಾರ್ಚ

ನೆಯ ವಿರಹವು ತಲೆದೋರಿ, ಆ ಮನೋಹರವಾದ ಕಕ್ಕೆಯ ಮರದಲ್ಲಿ ದಿವ್ಯ ಶಿವಭಾವನೆಯನ್ನು ತಳೆದವನಾಗಿ ದೃಷ್ಟಿ, ಮನ, ಭಾವಗಳನ್ನು ಅಚಲವಾಗಿ ಇರಿಸಿ, ನೈಸರ್ಗಿಕವಾದ ಪ್ರೇಮಪರವಶತೆಯಿಂದ ಭರದಿಂದ ಕ್ಷಣಕ್ಷಣಕ್ಕೆ ಉಕ್ಕೇರಿಬರುವ ಶಿವಭಕ್ತಿರಸದಿಂದ ವರಪಂಚಾಕ್ಷರವನ್ನೇ, ಅವರ್ಣನೀಯವಾದ ಗಾನಪ್ರೌಢಿಮೆಯಿಂದ, ಮುಕ್ತಿಬೀಜವೆ ತಾನಾದ, ಮಹಾ ಮಂತ್ರವನ್ನೇ ಕೊಳಲೂದುತ್ತ, ಆತ್ಮಾರಾಮನಾಗಿ, ರೋಮಾಂಚನವಾಗಿ, ನಿಬ್ಬೆರಗಾಗಲು ಆ ಆಶ್ಚರ್ಯಕರವಾದ ಆತನ ನಿಷ್ಠೆಗೆ, ಮೆಚ್ಚಿ ಪ್ರಾಣಿಮಾತ್ರಕ್ಕೆ ಕಲ್ಯಾಣವನ್ನುಂಟುಮಾಡುವದರಿಂದಲೆ, ಶಂಕರನೆಂಬ ಅಭಿದಾನದಿಂದ, ಸರ್ವಶಕ್ತಿಯುತನಾದುದರಿಂದಲೆ ಅನೇಕ ವಿಶ್ವಗಳನ್ನು ಬೆಳಗುತ್ತಿರುವ ಅಂಬಿಕಾಪತಿಯು ಆ ಕಕ್ಕೆಯ ಮರದಲ್ಲಿ, ಪ್ರತ್ಯಕ್ಷನಾಗಿ ಆ ಭಕ್ತೋತ್ತಮನನ್ನು ಮೈದಡವಿ, ಆತನು ಬಾರಿಬಾರಿಗೂ ಸ್ತುತಿಸುವದನ್ನು ಕಂಡು ಅತಿಶಯ ಸಂತೋಷಪಟ್ಟವನಾಗಿ ದಿವ್ಯ ಪುಷ್ಪಕ ವಿಮಾನದಲ್ಲಿ ಆತನನ್ನು ಕುಳ್ಳಿರಿಸಿಕೊಂಡು, ಪ್ರಮಥರು ನಲಿದಾಡುತ್ತಿರಲು, **ನಾಯನಾರ**ರಿಗೆ ಗಣಪದವಿಯನ್ನು ಅನುಗ್ರಹಿಸಿದನು.

ನಿಜಾನಂದಯುತರಾದ ಯೋಗಿಗಳು ಅನಿಮಿಷದೃಷ್ಟಿಯಿಂದ ಯಾವ ನಿತ್ಯ ಪರಬ್ರಹ್ಮವಸ್ತುವನ್ನು ಈಕ್ಷಿಸುವರೋ, ಅರ್ಚಿಸುವರೋ, ಸ್ಮರಿಸುವರೋ, ಕೀರ್ತಿಸುವರೋ ಆ ಪರಶಿವಲಿಂಗಮೂರ್ತಿಯನ್ನು ಮನವಣಿಯುವಂತೆ ನೆನೆದು ಅಗಾಧ ಮಹಿಮೆಯಿಂದ ದೇದೀಪ್ಯಮಾನರಾದ ಶಿವಶರಣಗಣಾವಳಿಗೆ ವಿನೀತನಾಗಿ ವಾಚಕವೃಂದದ ಏಳಿಗೆಯನ್ನು ಲೇಖಕನು ಕಾಂಕ್ಷಿಸುವನು.

“ ಪರಪುರುಷಾರ್ಥಮಂ ಪರಹಿತಾರ್ಥಮ ನರ್ಗಳ ಪಾರಮಾರ್ಥಮಂ ।
ನಿರುಪಮಲಿಂಗನಿಷ್ಠೆಯ ಮಹಾಗಣ ತುಷ್ಟಿಯನೀಶಗೋಷ್ಠಿಯಂ ॥
ಸುರುಚಿರ ಸತ್ಯಶಾಂತಿದಮೆಯಂ ಕ್ಷಮೆಯಂ ಅಭಯಪ್ರಸಾದಮಂ ।
ಕರುಣಿಸು ದೇವ ಮೂಜಗದ ಜೀವರಿಗುಂ ಗುರುಶಂಕರೇಶ್ವರಾ ॥ ”

೬೦.

# ೫. ತಿರುನೀಲಕಂಠರು



ಶಿವನಾಣೆಯಿಡೆ ತನ್ನ ಯುವತಿಯನು ತೊರೆದು ಶಂ ।
ಭುವಿನ ಕೃಪೆವಡೆದ ತಿರುನೀಲಕಂಠರ್ಗೆ । ಸವೆಯದೊಲವಿಂದೆ ಶರಣೆಂಬೆ ॥

[ನಿಜಗುಣ ಶಿವಯೋಗಿ]



ಶಿವಭಕ್ತರಲ್ಲಿ ಈ ಪುರಾತನರ ಹೆಸರನ್ನು ಕೇಳದವರು ಅತಿವಿರಳವು ಚೋಳ ಧರಿತ್ರಿಯ ಪೊನ್ನಾಂಬಲವೆಂಬ ಪುರದಲ್ಲಿ ಒಂದುದಿನ ಈ ಶರಣರು ಎಂದಿನಂತೆ ಶಿವಾನುಭವ ಶಾಸ್ತ್ರವನ್ನು ಊರ ಸಮೀಪದಲ್ಲಿರುವ ಪೊನ್ನಾಂಬಲೇಶ್ವರಾಲಯದ ಹತ್ತಿರ ಇರುವ ಮಠದಲ್ಲಿ ಶ್ರವಣ ಮಾಡಿಕೊಂಡು ತಮ್ಮ ಸಹಜವಾದ ನಿಜಾನಂದದೊಡನೆ ಅಂದು ಕೇಳಿದ ವಿಷಯಗಳನ್ನು ಮನನಮಾಡುತ್ತಾ ಬರುವಾಗ ಆ ದಿವಸ ನಂದಿಯ ಉತ್ಸವವು ರಾಜಮಾರ್ಗದಲ್ಲಿ ಬರುತ್ತಿರುವಾಗ ಅದನ್ನು ಕಣ್ತುಂಬಾ ನೋಡಿ ಬಹು ಸಂತೋಷಪಟ್ಟು ಈ ವರಪುರುಷನು ರಾಜಬೀದಿಯಲ್ಲಿ ಉತ್ಸವದ ಮೂಲಕ ಜನಸಂದಣಿಯು ಹೆಚ್ಚಾಗಿದ್ದುದರಿಂದ ಪ್ರೇಕ್ಷಕರು ಕಿಕ್ಕಿರಿದು ನಿಂತದ್ದರಿಂದ ಆ ವೀಥಿಯನ್ನು ಬಿಟ್ಟು ಮಗ್ಗಲಲ್ಲಿರುವ ಮತ್ತೊಂದು ಓಣಿಯಿಂದ ತಮ್ಮ ಮನೆಗೆ ಬರುವಾಗ ದಾರಿಯಲ್ಲಿ ಒಬ್ಬ ಶಿವಭಕ್ತಿಯುತಳಾದ ಪುಣ್ಯಾಂಗನೆಯು ಮೇಲಮಹಡಿಯಿಂದ ಮುಚ್ಚಂದೆಯು ಆದ್ದರಿಂದ ಕತ್ತಲಲ್ಲಿ ನೋಡದೆ ಈ ನರಪುಂಗವನ ಮೇಲೆ ಮೈಲಿಗೆ ನೀರನ್ನು ಎರಚಿದಳು. ಆಗ ನಮ್ಮ ಕಥಾನಾಯಕರು ಉಚ್ಚಸ್ವರದಿಂದ ಹರ-ಹರ ಮಹಾದೇವ, ಎಂಬದಾಗಿ ಶಿವನಾಮೋದ್ಗಾರವನ್ನು ತೆಗೆಯಲು, ಇದನ್ನು ಆ ವಾರನಾರಿಯು ಕೇಳಿ, ಬೆಚ್ಚತ್ತು ದಿಗ್ಭ್ರಾಂತಳಾಗಿ ಶಿವ-ಶಿವ ಯಾವ ಶರಣರ ಮೇಲೆ ನಾನು ಕೊಳೆ ನೀರನ್ನು ಚೆಲ್ಲಿದೆನು, ಎಂದು ಹೌಹಾರಿ ಅವಸರದಿಂದ ಕೆಳಗೆ ಇಳಿದು ಬಂದು ತಿರುನೀಲಕಂಠರ ಪಾದಗಳ ಮೇಲೆ ಬಿದ್ದು ಕ್ಷಮೆಯನ್ನು ಬೇಡಿ, ಅವರನ್ನೊಡಂಬಡಿಸಿ, ಅವರನ್ನು ಸ್ನಾನಮಾಡಿಸಿ, ಮಡಿಬಟ್ಟೆಗಳನ್ನು ಹೊದಿಸಿ, ಸುಗಂಧ ದ್ರವ್ಯಗಳನ್ನು ಲೇಪಿಸಿ, ಆದರದಿಂದ ಸನ್ಮಾನವಂಗೈದು ಶರಣನನ್ನು ಕಳುಹಿಸಿದಳು.

ನಾರೀಕುಲತಿಲಕಳಾದ ಉಮೆಯಂತೊಪ್ಪುವ ಗುಣವತಿಯಾದ ನಮ್ಮ ಚರಿತ್ರನಾಯಕನ ಸಹಧರ್ಮಚಾರಿಣಿಯು ತನ್ನ ಮಂಗಲಸೂತ್ರಕ್ಕೆ ಕಾರಣನು ಹರ ಗುರು ಪೂಜೆಗೆ ಅನುಕೂಲನೂ ಆದ ಪ್ರಾಣದೊಡೆಯನು ಬರುವುದನ್ನು ದೂರದಿಂದಲೆ ನೋಡಿ ಕುಲಸ್ತ್ರೀಯರಿಗೆ ಭೂಷಣವಾದ ಸಹಜವಾದ ಮಂದಸ್ಮಿತವದನವುಳ್ಳವಳಾಗಿ, ಆತನು ಬರುತ್ತಲೆ ಕಡುಸಂತೋಷದಿಂದ ಹಸ್ತಲಾಘವನ್ನೀಡಿ ನಿಜ ಪತಿಯನ್ನು ಕರೆದೊಯ್ದಳು.

ಸತಿಪತಿಯರು ಯಥಾವಿಧಿಯಾಗಿ ಸರಳವಾದ ಭಕ್ತಿಯಿಂದ ಈಶನನ್ನಾರಾಧಿಸಿ ಶಿವಪ್ರಸಾದವನ್ನು ಸವಿದು ತರುವಾಯ ಶಿವಾನುಭವಗೋಷ್ಠಿಯನ್ನು ಸ್ವಲ್ಪ ಸಾಗಿಸಿ, ಅನಂತರ ಶಯ್ಯಾಗೃಹಕ್ಕೆ ದಂಪತಿಗಳು ಬಂದರು. ಸತ್ಯವತಿ ಎಂಬ ಹೆಸರನ್ನಾಂತ ಸದ್ಗುಣಿಯು, ಶಿವಾನುಭವ ಉತ್ಸಾಹಿಯು ಆದ ಭಾಮೆಯ ಮನಸ್ಸು ಈವರೆಗೆ ಶಿವ ಸಂಭ್ರಮದಲ್ಲಿ ಅಡಕವಾಗಿದ್ದುದರಿಂದ ನಮ್ಮ ಶರಣರ ಆ ದಿನದ ನೂತನ ಪರಿಸ್ಥಿತಿಯ ಕಡೆಗೆ ಲಕ್ಷವೇ ಹೋಗಿರಲಿಲ್ಲ, ಅದು ಈಗ ಗೋಚರವಾಗಿ ಕೋಪವು ತಲೆಗೇರಿ ಶಿಡಿಮಿಡಿಗೊಂಡಳು. ಆಗ ಅವಳು ದಿನವಹಿಯಕಿಂತಲೂ ತನ್ನ ಹಾಸಿಗೆಯನ್ನು ದೂರವಾಗಿ ಇರಿಸಿದಳು. ಭಾವಜ್ಞರಾದ ಶರಣರು ಅದನ್ನು ಕಂಡು ಅಚ್ಚರಿಪಟ್ಟು ಇದೇನು ಹೀಗೇಕೆ ಎಂದು ಕಾಂತೆಯನ್ನು ಕೇಳಲು, ಪರಸತಿಯೊಡನೆ ವಿಹರಿಸಿದ ನೀವು ನನ್ನನ್ನು ಮುಟ್ಟಕೂಡದು ಶಿವನಾಣೆ, ಶಿವನಾಣೆ ಎಂದು ಸರಸರನೆ ನುಡಿದುಬಿಟ್ಟಳು.

ಸತಿಪತಿಗಳು ಪರಸ್ಪರ ದೂರವಿದ್ದು ಈ ರೀತಿಯಾಗಿ ೮೦ ವರ್ಷಗಳು ಕಳೆದವು. ಆಗ ವಾಡಿಕೆಯಂತೆ ಒಂದುದಿನ ನಮ್ಮ ಶರಣರು ಶೈವರಾದುದರಿಂದ ಆ ಪೊನ್ನಾಂಬಲೇಶ್ವರ ಎಂಬ ಪುರಹರನಾಲಯಕ್ಕೆ ಹೋಗಿ ವಿಧ್ಯುಕ್ತವಾಗಿ ಅನನ್ಯ ಭಕ್ತಿಯಿಂದ ಅರ್ಚಿಸಿ ಮಹಾ ಮಂಗಳಾರತಿಯನ್ನು ಮಾಡುವಾಗ ಶುಭ ಚಿನ್ಹೆಗಳು ಆದವು, ಭುಜವು ಮತ್ತು ಕಣ್ಣು ಹಾರಿದವು. ಸುಪ್ರಸನ್ನನಾಗಿ ಆ ಶಿವಾಲಯದಿಂದ ಬರುವಾಗ ದಾರಿಯಲ್ಲಿ ಶುಭಶಕುನಗಳು ತಲೆದೋರಿದವು, ಅದೆಂತೆನೆ :—ಮೇಯುವುದಕ್ಕಾಗಿ ಹೊರಟ ಮನೋಹರವಾದ ಗೋವೃಂದವು ದೃಷ್ಟಿಗೆ ಬಿದ್ದಿತು. ಬೀಜ ಬಿತ್ತುವುದಕ್ಕಾಗಿ ಶೃಂಗರಿಸಿದ ಬಲವುಳ್ಳ ಎತ್ತುಗಳನ್ನು ರೈತರು ಹೊಲಗಳಿಗೆ ಒಯ್ಯುತ್ತಿದ್ದರು. ತರುಣರ ಕೂಟವು ಶಿವಭಜನೆಯೊಡನೆ ದೇವಾಲಯದ ಕಡೆಗೆ ಸಾಗಿತು. ಶಿವಭಕ್ತಿಸಂಪನ್ನೆಯರಾದ ಅಷ್ಟಾವರಣವೇ ಅಂಗವಾಗಿ, ಪಂಚಾಚಾರವೇ ಪ್ರಾಣವಾಗಿರುವ ಸುಮಂಗಲೆಯರು ಆರತಿಯನ್ನು ಹಾಗೂ ಫಲಗಳನ್ನು ತೆಗೆದುಕೊಂಡು ಮಂಗಲವಾದ್ಯಗಳೊಡನೆ ಆ ಮಠಕ್ಕೆ ಹೊರಟಿದ್ದರು. ಬರಬರುತ್ತಲೆ ಒಂದು ಮಂದಿರದಲ್ಲಿ ಮಾಹೇಶ್ವರರ ಇಂಪಾದ

ವೇದಘೋಷವನ್ನು ಕೇಳಿ ಹರ್ಷಿತನಾಗಿ, ಮನೆಗೆ ಬಂದನು. ದಿನವಹಿಯಂತೆ ಸಂಧ್ಯಾಕಾಲದಲ್ಲಿ ಅಂತಃಕರಣಪೂರ್ವಕವಾಗಿ ಅದ್ವಿತೀಯವಾದ ಶಿವಮಂತ್ರವನ್ನು ಜಪಿಸಿದನು. ಮನನಾತ್ ತ್ರಾಯತೆ ಇತಿ ಮಂತ್ರಃ ಅಂದರೆ ಯಾವುದನ್ನು ಮನನ ಮಾಡಿದರೆ ಮಾನವನ ರಕ್ಷಣೆಯಾಗುವದೋ ಅದುವೆ ಮಂತ್ರವೆಂದು ಶಾಸ್ತ್ರಜ್ಞರು ತಿಳಿಸುವರು. ಆದುದರಿಂದಲೆ ಶಿವಮಂತ್ರವನ್ನು ಕೂಗಬಾರದೆಂದು ತಜ್ಞರು ಒಪ್ಪುತ್ತಾರೆ. ಆ ದಿವಸ ಪ್ರದೋಷ ಕಾಲಕ್ಕೆ ಆ ಭಕಾನುಗ್ರಹತತ್ಪರನಾದ ಶಿತಿಕಂಠನಿಗೆ ಅವರ ಮೇಲೆ ಅಂದರೆ ಆ ಗುಣಾಢ್ಯರಾದ ಸತಿಪತಿಗಳಮೇಲೆ ಕರುಣೆಯು ಉಂಟಾಗಿ ಜಂಗಮ ವೇಷವನ್ನು ತಾಳ್ದು ಆ ಸನ್ಮಾರ್ಗಪ್ರವರ್ತಕರಾದ, ವೆಗ್ಗಳವಾದ ಶಿವಭಕ್ತಿ ತೇಜಸ್ಸಿನಿಂದ ಮಿನುಗುತ್ತಿರುವ ತಿರುನೀಲಕಂಠರ ಮನೆಗೆ ಬಂದು ಒಂದು ಶ್ರೇಷ್ಠವಾದ ಬಟ್ಟಲವನ್ನು ಆ ಜಾಯಾಪತಿಗಳ ವಶಕ್ಕೆ ಕೊಟ್ಟು ಬಹು ಜೋಕೆಯಿಂದ ಜತನದಿಂದ ತೆಗೆದಿಟ್ಟು ಭದ್ರವಾಗಿ ಇರಿಸಿರಿ, ಇನ್ನೊಂದುಸಾರೆ ಬಂದಾಗ ನನ್ನ ಪಾತ್ರೆಯನ್ನು ಒಯ್ಯುವೆನೆಂದು ಹೇಳಿ ತೆರಳಿದನು. (ಭಕ್ತಪ್ರೇಮಿಯೆಂಬ ಬಿರುದನ್ನಾಂತ ಆ ಕಪಟ ವೇಷದ ಮೃಡಮೂರ್ತಿಯು ಆ ದಂಪತಿಗಳ ಉದ್ಧಾರಾರ್ಥವಾಗಿಯೆ ಅವರಿಗೆ ತಿಳಿಯದಂತೆ ಆ ಬಟ್ಟಲವನ್ನು ಮಾಯವಾಗಿ ಮಾಡಿದನು.)

ಮರುದಿವಸ ಭೂರುದ್ರನಂತೊಪ್ಪುವ ಆ ಜಂಗಮಯ್ಯನು ಅವರ ಮನೆಗೆ ಬಂದು ಆ ಬಟ್ಟಲವನ್ನು ಕೇಳಲು ಆ ದಂಪತಿಗಳು ತಾವು ಆ ಪಾತ್ರೆಯನ್ನಿಟ್ಟ ಪೆಟ್ಟಿಗೆಯನ್ನು ತೆಗೆದು ನೋಡಲು ಬಟ್ಟಲವೇ ಅದೃಶ್ಯವಾಗಿತ್ತು. ಪರಮಾಶ್ಚರ್ಯ ಭಯಚಕಿತರಾಗಿ ಥರಥರನೆ ನಡುಗುತ್ತ ಗಾಬರಿಯಾಗಿ ಸಮ್ಮನೆ ನಿಂತುಬಿಟ್ಟರು. ಅದನ್ನು ಆ ಮಾಹೇಶ್ವರನು ಕಂಡು ನಮ್ಮ ಬಟ್ಟಲವನ್ನು ಕೊಟ್ಟುಬಿಡಿರಿ, ಇಲ್ಲವೆ ನಾವೀರ್ವರೂ ಬಟ್ಟಲವನ್ನು ಬಚ್ಚಿಟ್ಟಿಲ್ಲವೆಂದು ಇಬ್ಬರೂ ಪರಸ್ಪರವಾಗಿ ಕೈಹಿಡಿದು ಪ್ರತಿಜ್ಞಾ ಪೂರ್ವಕವಾಗಿ ಹೇಳಿರಿ, ನಿಮ್ಮ ಸತ್ಯಸಂಧತೆಯನ್ನು ನೋಡೋಣ, ಎಂದು ಅವರಿಗೆ ಹೇಳಿದನು. ಈ ಮಾತಿಗೆ ಸತಿಪತಿಗಳ್ಳು ಒಪ್ಪದಿರಲು ಅವರನ್ನು ಮೂದಲಿಸಿ ನೆರೆದ ಜನರೆದುರಿಗೆ ನೋಡಿದಿರಾ ಇವರ ನಡತೆಯನ್ನು ಹೇಗಿರುವದು, ಎಂದು ಜಂಗಮನು ತಿಳಿಸಿದನು. ಆ ದಂಪತಿಗಳು ತಮ್ಮೊಳಗಿನ ಕಟ್ಟನ್ನು ಉಸರಲಾರದೆ ಮನದೊಳಗೆ ಕರಗಿ, ಬೆಂಡುಬಂಡಾಗಿ ಮರಮರನೆ ಮರುಗಿ ಶಿವಶಿವಾ ಎಂಥ ಅವರ್ಣನೀಯವಾದ ಕಠಿಣ ಪ್ರಸಂಗವಿದು ಎಂದು ಅಂತರಂಗದಲ್ಲಿ ದೀನಬಂಧುವೆನಿಸಿದ ಪರಮೇಶ್ವರನಿಗೆ ಮೊರೆಯಿಟ್ಟರು. ಸರ್ವಜ್ಞನಾದ, ಭಕ್ತವತ್ಸಲನಾದ, ಜಂಗಮವೇಷವನ್ನಾಂತ ಸಾಂಬನು ಮನಕರಗಿದವನಾಗಿ ಆ ಪತಿಪತ್ನಿಯರಿಗೆ ಈ ರೀತಿಯಾಗಿ ಆಜ್ಞಾಪಿಸಿದನು. ಅಗೋ ಇಲ್ಲಿರುವ ಕಾರಂಜಿಯ ಹೊಂಡದಲ್ಲಿ ನೀವಿಬ್ಬರು ಈ ಕೋಲಿನ

ತುದಿಯನ್ನು ಹಿಡಿದು ನಾವು ಬಟ್ಟಲವನ್ನು ಅಪಹರಿಸಿಲ್ಲವೆಂದು ಹೇಳಿ ನೀರಿನಲ್ಲಿ ಮುಳುಗಿ ಏಳಿರಿ, ನೋಡುವಾ ಅನ್ನಲು, ಆ ಸತಿಪತಿಗಳು ಸಂತೋಷಪಟ್ಟು ಆ ರೀತಿ ಮಾಡಲು, ದಯಾಮೂರ್ತಿಯಾದ ಭಗವಂತನ ಕಾರುಣ್ಯದಿಂದ ಲಂ ವರ್ಷಗಳ ಮೊದಲು ಇದ್ದ ತಾರುಣ್ಯವು ಆ ದಂಪತಿಗಳಿಗೆ ಪುನಃ ಪ್ರಾಪ್ತವಾಯಿತು. ಆ ಕ್ಷಣವೇ ಮಹಾದೇವನು ತನ್ನ ನಿಜರೂಪವನ್ನು ಅವರಿಗೆ ತೋರಿಸಿ, ನೀವು ಸಕಲ ಭೋಗಗಳನ್ನು ಭೋಗಿಸಿ, ಅಂತ್ಯದಲ್ಲಿ ನನ್ನ ಸನ್ನಿಧಿಯನ್ನು ಹೊಂದುವಿರಿ. ಹೀಗೆ ಆಶೀರ್ವದಿಸಿ, ಮಹಾ ಸ್ವಾಮಿಯು ಅಂತರ್ಧಾನವಾದನು.

ಗುಣಗ್ರಾಹಿಗಳಾದ ವಾಚಕವೃಂದವನ್ನು ಅಭಿನಂದಿಸಿ, ಅನಾಥನಾಥನಾದ ಪಿನಾಕಪಾಣಿಗೆ ವಂದಿಸಿ ಸಕಲರಲ್ಲಿಯೂ ಆಸ್ತಿಕ್ಯವನ್ನು ಹೆಚ್ಚಿಸಲೆಂದು ಲೇಖಕನು ಭಗವಂತನನ್ನು ಪ್ರಾರ್ಥಿಸುವನು.



ಓಂ.

# ೬. ಕಾರಿಕಾಲಾಂಬೆ.



ನೇರಿತಹ ಶರಣ ಸಂಚಾರಮಾರ್ಗದೊಳು ಸುವಿ ।
ಚಾರದಿಂದಡಿಯ ನಿಡದೆ ತಲೆಯೊಳು ನಡೆದ।ಕಾರಿಕಾಲಮ್ಮೆ ಪೊರೆಯನ್ನ॥

[ಶ್ರೀ ನಿಜಗುಣ ಶಿವಯೋಗಿ]



ಮಸ್ತ ಭಾವಿಕರಿಗೆ ಆನಂದವನ್ನುಂಟುಮಾಡುವ ಅನೇಕ ದೇವಾಲಯಂಗಳಿಂದ ಅಲಂಕೃತವಾದ, ಶಿವಾನುಷ್ಠಾನಕ್ಕೆ ಅನುಕೂಲವಾದ ಮಂದಿರಗಳಿಂದ ಸುಶೋಭಿತವಾದ, ಶಿವೋಪಾಸಕರಿಂದ ರಂಜಿತವಾದ ಶಿವಭಕ್ತರ ಜನ್ಮಭೂಮಿಯಂತೊಪ್ಪುವ ಕಾರಿಕಾಲ ಎಂಬ ಪುರವು ಮನೋಹರವಾದ ಚೋಳಮಂಡಲದಲ್ಲಿ ರಮಣೀಯವಾಗಿ ಕಂಗೊಳಿಸುತ್ತಿತ್ತು. ಇಂತೆಸೆವ ಆ

ಪಟ್ಟಣದಲ್ಲಿ ಧನಿಕಳಾದ ಆರೋಗ್ಯಕಾಯದಿಂದ ಕೂಡಿದ ಲಾವಣ್ಯದಿಂದಲೂ, ಚನ್ನಾಗಿ ಓದುಬರಹವನ್ನು ಕಲಿತು, ಶಿವಗಣ ಸಮೂಹದ ಭಾವಚಿತ್ರವನ್ನು ತೆಗೆಯುವ ಲಲಿತ ಕಲೆಯಿಂದಲೂ, ಮಿಗಿಲಾದ ಶಿವಭಕ್ತಿ ಸಂಪತ್ತಿನಿಂದಲೂ, ಕಾರಿಕಾಲಮ್ಮ ಎಂಬ ನಾರೀಮಣಿಯು ಪ್ರಕಾಶಿಸುತ್ತಿದ್ದಳು.

ನಮ್ಮ ಚರಿತ್ರನಾಯಕಳ ಸುಗುಣಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದ ಹರಿಸಿರುತ್ತದೆ. ಯಾವಾಗಲೂ ಶಿವಧ್ಯಾನಾಸಕ್ತಳಾದ ಆ ಶರಣೆಯು ಅಕ್ಷರ ವಾದ ವರಶಿವಾಕ್ಷರಗಳನ್ನೇ ಬರೆಯುತ್ತಿದ್ದಳು. ವಿಭೂತಿ, ರುದ್ರಾಕ್ಷ, ಗುರು, ಲಿಂಗ, ಜಂಗಮ, ಮಂತ್ರ, ಪಾದೋದಕ, ಪ್ರಸಾದ ಎಂಬ ಅಷ್ಟಾವರಣಗಳಲ್ಲಿ ಆಕೆಯ ಭಕ್ತಿಯು ವೆಗ್ಗಳವಾಗಿದ್ದಿತು. ಶಿವನಿರ್ಮಾಲ್ಯ ಗುರು ಜಂಗಮರು ಧರಿ ಸುವ ಹೊದಿಕೆ, ಶಿವಪ್ರಸಾದ ಮುಂತಾದ ಶಿವ ದ್ರವ್ಯಗಳನ್ನು ಎಂದೂ ದಾಟು ತ್ತಿದ್ದಿಲ್ಲ. ಶಿವನಿರ್ಮಾಲ್ಯವನ್ನು ದಾಟಿದ ತಪ್ಪಿಗಾಗಿ ತನ್ನ ಶಕ್ತಿಯನ್ನು ಕಳ ಕೊಂಡು ಭಕ್ತಿಪುರಸ್ಸರವಾಗಿ ಉತ್ಕೃಷ್ಟವಾದ ಶಿವ ಪದ್ಯಗಳನ್ನು ರಚಿಸಿ ಪುನಃ ಪೂರ್ವಸಾಮರ್ಥ್ಯವನ್ನು ಪಡೆದ ಪುಷ್ಪದಂತನ ಮಹಿಮ್ನ ಸ್ತೋತ್ರವನ್ನು ಪ್ರೀತಿ ಪೂರ್ವಕವಾಗಿ ತ್ರಿಕಾಲದಲ್ಲಿ ಪಠಿಸುತ್ತ, ನಿಜಪತಿಯು ಭವಿಯಾಗಿದ್ದುದರಿಂದ, ಮನೆಗೆ ಬಂದ ಶಿವಭಕ್ತರಿಗೆ ಗುಪ್ತವಾಗಿ ಅವರು ಬಯಸಿದ ವಸ್ತುಗಳನ್ನು ಆದರ ರಿಂದ ಪೂರೈಸುತ್ತ ಈ ತೆರದ ಸಲ್ಲೀಲೆಯಿಂದಾದ ಆನಂದವನ್ನು ಶಿವಾರ್ಪಣ ಮಾಡುತ್ತಿದ್ದಳು.

ಭಕ್ತಪ್ರೇಮಿಯಾದ ಸಾಂಬನು ಜಂಗಮರೂಪದಿಂದ ಒಂದುದಿನ **ಕಾರಿ ಕಾಲಾಂಬೆ**ಯ ಮನೆಗೆ ಬಂದು ನಿನ್ನೆ ದಿವಸ ನಿನ್ನ ವಲ್ಲಭನು ತಂದ ಎರಡು ಮಾವಿನ ಹಣ್ಣುಗಳನ್ನು ನನಗೆ ಕೊಡು ಹೀಗೆ ಬೇಡಿದನು. ಭಾವಜ್ಞಳಾದ ಈ ಲಲನಾ ಮಣಿಯು ಬಹು ಸಂತೋಷದಿಂದ ಆ ಮಹೇಶ್ವರನನ್ನು ಪೂಜಿಸಿ ಆ ಆಮ್ರಫಲ ಗಳನ್ನು ಒಪ್ಪಿಸಲು ಅವುಗಳನ್ನು ಆರೋಗಿಸಿ ಹೋಗುವುದನ್ನು ದೂರದಿಂದಲೇ ಅವಳ ಪತಿಯು ಕಂಡು ಮನದಲ್ಲಿ ನೊಂದು ಮನೆಗೆ ಬಂದು ಕೆಲವು ಕಾಲಾ ನಂತರ ತನ್ನ ಪತ್ನಿಯನ್ನು ಕುರಿತು, ನಿನಗೆ ನಿನ್ನೆ ಕೊಟ್ಟಿರುವ ೨ ಹಣ್ಣುಗಳನ್ನು ಈಗಲೇ ತಂದುಕೊಡು ಎಂದು ಕೋಪಾವೇಶದಿಂದ ಹೇಳಿದನು. ಆಗ ಆ ಸಾಧ್ವೀ ಮಣಿಯು ಸರ್ವಮಂಗಲನನ್ನು ಸ್ಮರಿಸಿ ಯಾವ ತರದಿಂದಲೂ ಶಂಕಿಸದೆ ತನ್ನ ಮಂದಿರವನ್ನು ಹೊಕ್ಕು ತಟ್ಟನೆ ತನ್ನ ಗಂಡನಿಗೆ ಆ ಮಾವಿನ ಹಣ್ಣುಗಳನ್ನು ಕೊಟ್ಟುಬಿಟ್ಟಳು. ಈ ಮಹಿಮೆಯನ್ನು ಅವಳ ಪತಿಯು ಕಂಡು ಆಶ್ಚರ್ಯ-ಭಯ ಚಕಿತ ವಿಸ್ಮಿತನಾಗಿ ಸತಿಯೇ ಕ್ಷಮಿಸು ಎಂದು ಆ ಪುಣ್ಯವತಿಯ ಪಾದಕ್ಕೆರ ಗಿದನು.

ಈ ರೀತಿಯಾಗಿ ತನ್ನ ಸ್ಥಿತಿಯು ಪ್ರಕಟವಾಗಲಾಗಿ ಇನ್ನು ನನಗೆ ಸಂಸಾರವು ಸಾಕೆಂದು ಸರ್ವಸಂಗ ಪರಿತ್ಯಾಗವನ್ನು ಮಾಡಿ ಆ ಸುಶೀಲೆಯು ಆ ನಗರವನ್ನು ಬಿಟ್ಟು ತೆರಳಲುದ್ಯುಕ್ತಳಾದಳು. ಆಗ ಆಕೆಯ ಪತಿಯ ಮಿತ್ರರು ಇದೆಲ್ಲವನ್ನು ಕಂಡು ಮರಮರನೆ ಮರುಗಿ ಅವಳನ್ನು ತಡೆದರು. ಆಗ ಆ ಸದ್ಭಕ್ತಳು ತಾನು ಹೊದ್ದ ವಸನಗಳನ್ನು ತೊರೆದು ವೈರಾಗ್ಯವನ್ನು ತಾಳಿ ತನ್ನೆಡೆಗೆ ಬಂದ ಆಪ್ತ ಜನರನ್ನು ಧಿಕ್ಕರಿಸಿ ತಿರುವಾಲಂಗಾಪುರಕ್ಕೆ ಬಂದು ಉಕ್ಕೇರಿ ಬರುವ ಭಕ್ತಿರಸದಿಂದ ಲಿಂಗಮೂರ್ತಿಯನ್ನು ನೆನಿಸುತ್ತ ಅಲ್ಲಿಯ ಕನಕಕಲಶದಿಂದೊಪ್ಪುವ ಶಿವಾಲಯುವನ್ನು ಪ್ರವೇಶಿಸಿದಳು.

ಶಿವಾಲಯದೊಳಗೆ ಬಂದೊಡನೆ ತನ್ನ ಗಂಡನನ್ನು ತೊರೆದಿರುವ ಈ ವನಿತಯು ಇಲ್ಲಿಗೆ ಬರುತ್ತಿರುವಳು ಇದೇನು ವಿಶೇಷವು ಎಂದು ಭವಾನಿಯು ಮಹಾದೇವನನ್ನು ಕೇಳಿದಳು. ಪಾರ್ವತೀ ಇವಳೇ ನನ್ನ ತಾಯಿಯು ಎಂದು ಪ್ರೀತಿಯಿಂದ ತ್ರ್ಯಂಬಕನು ಹೇಳಿದನು. ಈಕೆಯು ವಿಮಲಳು; ನೀತಿವಂತಳು; ಪ್ರಾಣಿದಯಾಪರಳು; ಪರರ ಇಂಗಿತವನ್ನು ಅರಿದು ಅವರಿಗೆ ಬೇಕಾದುದನ್ನು ಕೊಡುವಳು. ಅನ್ನದಾನಿಯು, ಶಿವಧರ್ಮಪರಳು, ಶಿವಾಚಾರಗಳನ್ನು ಪಾಲಿಸುವಳು, ಶಿವಗಾನವನ್ನು ಸಾನಂದಳಾಗಿ ನರಸವಾಗಿ ಹಾಡುವಳು, ಮಹೇಶ್ವರರನ್ನು ಪೂಜಿಸುವ ಅಭಿಲಾಷೆಯು ಹೆಚ್ಚಾಗಿರುವವಳು, ದುಃಖಿತರನ್ನು ಕಂಡೊಡನೆ ಅವರ ಕಷ್ಟಗಳನ್ನು ದೂರಪಡಿಸಿ, ಅನುನಯದಿಂದ ಸಮಾಧಾನಗೊಳಿಸಿ ನಂತರ ಶಿವಗೋಷ್ಠಿಯೊಡನೆ ತೃಪ್ತಿಪಡಿಸಿ ಸಮಯುವರಿತು ಶಿವಾನುಭವವನ್ನು ಮಾಡಿಕೊಡುವಳು, ಬಹಳ ಹೇಳುವದೇನು ಉಮೆಯೇ ಇವಳು ಸನ್ಮಾರ್ಗಿಯು ಸದ್ಗುಣಗಳ ನಿಧಿಯು ಹೀಗೆ ಅಪರ್ಣೆಗೆ ಪುನಃ ಪಂಚವಕ್ತ್ರನು ವಿನೋದದೊಡನೆ ತಿಳಿಸಿದನು.

ನಮ್ಮ ಕಥಾನಾಯಕಳು ಆ ಲಿಂಗಮೂರ್ತಿಗೆ ಸಹಜವಾದ ಪ್ರೇಮದಿಂದ ಪೊಡಮಟ್ಟು ಅಡಿಗಡಿಗೆ ಸ್ತುತಿಸುತ್ತ ಭಕ್ತಿಯು ಪರಮಾವಧಿಯಾಗಿ ಪರಿಣಮಿಸಲು ಸದಾಶಿವನು ನಿಜರೂಪವನ್ನು ತೋರಿ ತನ್ನ ಮೃದುವಾದ ತೋಳುಗಳಿಂದ **ಕಾರಿಕಾಲಾಂಬೆ**ಯನ್ನು ಹಿಡಿದೆತ್ತಿ ಕುಳ್ಳಿರಿಸಿ ಮೈಯ್ದಡವಿ ಬಲವಾದ ವಜ್ರದೇಹದಂತಿರುವ ಭದ್ರವಾದ ಶರೀರವನ್ನು ಅನುಗ್ರಹಿಸಿ ತಾಳವೆರಡನ್ನು ಕೊಟ್ಟು ಗಣಪದವಿಯನ್ನು ದಯಪಾಲಿಸಿ ನೀನು ಕೈಲಾಸಕ್ಕೆ ನಡೆ ಎಂದು ಅಪ್ಪಣೆಯನ್ನಿತ್ತು ಅಭವನು ಬಿಜಯಮಾಡಿದನು.

ಸದಾಚಾರದ ಪುತ್ಥಳಿಯಂತಿರುವ ಆ ವಿವೇಕ ಸಂಪನ್ನೆಯು ಶರಣರು ನಡೆಯುವ ಮಹತ್ತರವಾದ ಶ್ರೇಷ್ಠವಾದ ಕೈಲಾಸ ಮಾರ್ಗದಲ್ಲಿ ಪಾದದಿಂದ

ನಡೆಯುವದು ಉಚಿತವಲ್ಲೆಂದು ಭಾವಿಸಿ ಜಗತ್ತೆಲ್ಲ ಚಕಿತವಾಗುವಂತೆ ಶಿವಘೋಷ ದೊಡನೆ ತಾಳಬಾರಿಸುತ್ತ ತಲೆಯಿಂದ( ನಡೆಯುತ್ತ)ಲೆ ಶಿವಲೋಕಕ್ಕೆ ತೆರಳಿದಳು.

ಚಿದ್ಘನಮಯ ಮೂರ್ತಿಯಾದ ಸೋಮೇಶನು ನಮ್ಮೆಲ್ಲರಲ್ಲಿಯೂ ಸದ್ವಾಸನೆಯನ್ನು ಬೀರಿ ಸದಾಚಾರನಿರತರಾಗಿರಿಸಲೆಂದು ಆ ಭಕ್ತವತ್ಸಲನನ್ನು ಲೇಖಕನು ಪ್ರಾರ್ಥಿಸುತ್ತಾನೆ.

---

ಓಂ.

# ೭. ನರಸಿಂಗಮೊನೆಯರು.

ಮನಸಿಜಾರಿಯ ಭಕ್ತನೆನಿತು । ಧನಮಂ ಬೇಡ । ಲಸಿತುಮಂ ಕೊಟ್ಟ
ಕಡುಚಾಗಿ ನರಸಿಂಗ । ಮೊನೆಯಾಂಡ ಶಾಂತವಿರಿಸೆನ್ನ ॥

[ಶ್ರೀ ನಿಜಗುಣಶಿವಯೋಗಿ]



ಆರ್ಯಾವರ್ತದ ದಕ್ಷಿಣ ಪ್ರದೇಶದಲ್ಲಿ ಪ್ರಖ್ಯಾತವಾದ ಚೋಳನಾಡು ಎಂಬ ಪ್ರಾಂತದಲ್ಲಿ ತಿರುವಾಲೂರೆಂಬ ಮುಖ್ಯಪಟ್ಟಣದಲ್ಲಿ ಪೂರ್ವಕಾಲದಲ್ಲಿ ಶಿವಭಾವನಾಯುತನಾದ, ಉಜ್ವಲವಾದ ಜಂಗಮ ಭಕ್ತಿಯುತನಾದ **ನರಸಿಂಗಮೊನೆಯರು** ಎಂಬ ಭೂಪತಿಯು ವಿರಾಜಿಸುತ್ತಿದ್ದನು. ಆ ಆದರ್ಶಪ್ರಾಯನಾದ ನೃಪತಿಯ ರಾಜ್ಯದಲ್ಲಿ ಸುಖಶಾಂತಿಗಳು ನೆಲೆಗೊಂಡು ಪ್ರಜರು ನೆಮ್ಮದಿಯಾಗಿರುತ್ತಿದ್ದರು. ಆ ಮಹಾರಾಯನ ಆಳಿಕೆಯಲ್ಲಿ ಸ್ತುತ್ಯವಾದ ಸಕಲ ವ್ಯವಸ್ಥೆಯು ತೃಪ್ತಿಕರವಾಗಿದ್ದಿತು. ಅದೆಂತೆನೆ :—

ವೈರಿಗಳ್ಳರಿಗೆ ತಕ್ಕ ಶಾಸನವಾಗುತ್ತಿತ್ತು. ಮನುಷ್ಯನ ಕಡುವೈರಿಯಾದ ಆಲಸ್ಯವೆಂಬ ದುರ್ಗಣದಿಂದ ಪೀಡಿತರಾದವರನ್ನು ರಾಜಸ್ಥಾನಕ್ಕೆ ತರಿಸಿ ಅವರಿಗೆ ಚನ್ನಾಗಿ ಬೋಧಿಸಿ ಅವರಿಗೆ ಅನುಗುಣವಾದ ಕಾರ್ಯಗಳಿಗೆ ತೊಡಗಿಸಿ ಉದ್ಯೋ

ಗಿಗಳನ್ನಾಗಿ ಮಾಡುವ ನಿಯಮವು ಇತ್ತು. ಜಾರರಿಗೂ, ಚೋರರಿಗೂ, ಕಠಿಣ ಶಿಕ್ಷೆಯಾಗುತ್ತಿತ್ತು. ಅಂಗಸಾಧನೆಯ ಕಾರ್ಯಾಲಯಗಳು ವೆಗ್ಗಳವಾಗಿದ್ದವು. ವ್ಯಾಯಾಮಶಾಲೆಗಳಲ್ಲಿ ದಕ್ಷತೆಯು ಕಂಡು ಬರುತ್ತಿತ್ತು. ರೈತರ ಕಷ್ಟನಷ್ಟಗಳ ಕಡೆಗೆ ರಾಜನ ದೃಷ್ಟಿಯು ಚನ್ನಾಗಿರುತ್ತಿತ್ತು. ಕೃಷಿಗೆ ಬೇಕಾದ ಯಾವತ್ತು ಸಲಹೆಗಳನ್ನು ಸರ್ವ ಅವಶ್ಯವಾದ ಪದಾರ್ಥಗಳನ್ನು ಸುಲಭವಾದ ಬೆಲೆಗೆ ಪೂರೈ ಸುತ್ತಿದ್ದನು. ಕೈಗಾರಿಕೆಗೆ ಪ್ರೋತ್ಸಾಹವನ್ನಿತ್ತಿದ್ದನು. ತನ್ನ ದೇಶದ (ಆಯಾತ ನಿರ್ಗತಗಳ) ಕಡೆಗೆ ಚಿತ್ತವಿಟ್ಟು ಪ್ರಜೆಗಳಿಗೆ ಭಾರವಾಗದಂತೆ ಕರ-ಕಂದಾಯ ಸುಂಕಗಳನ್ನು ವಿಧಿಸಿ ಅದರಿಂದುಂಟಾಗುವ ಆದಾಯದಲ್ಲಿ ಜನತೆಯ ಆರೋಗ್ಯದ ಅನುಕೂಲತೆಗಳಿಗೂ, ಬಾಲಕರ ಹಾಗೂ, ಸ್ತ್ರೀಯರ ಅಭ್ಯಾಸಕ್ಕೂ, ಪ್ರೌಢ ವಿದ್ಯಾರ್ಥಿಗಳ ಕಲಾ ಕೌಶಲ್ಯದ ಸಂಸ್ಥೆಗಳಿಗೂ ವಿಶೇಷ ಲಕ್ಷ ಕೊಡುತ್ತಿದ್ದನು. ಮಾದಕದ್ರವ್ಯಗಳ ಮಾರಾಟಕ್ಕೆ ಇಂಬುಗೊಟ್ಟದ್ದಿಲ್ಲ, ಎಲ್ಲ ಶಿಕ್ಷಣಾಲಯಗಳಲ್ಲಿ ಸರ್ವಾಂಗ ಪರಿಪೂರ್ಣವಾದ ಪುಸ್ತಕಭಂಡಾರಗಳು ಜೋಡಿಸಲ್ಪಟ್ಟಿದ್ದವು. ವಿದ್ವಾಂಸರಿಗೆ ಬಲವಾದ ಆಶ್ರಯವಿತ್ತು, ಅಧ್ಯಾಪಕ ಮಂಡಲಿಗೆ ಆದರವು ಹೆಚ್ಚಾಗಿ ದೊರೆಯುತ್ತಿತ್ತು. ಕೆರೆ, ಕಾಲುವೆ, ಭಾವಿ, ಅರವಟ್ಟಿಗೆ ಧರ್ಮಶಾಲೆ ಮುಂತಾದವುಗಳ ಕೊರತೆಯು ತಿಲಮಾತ್ರವಿರಲಿಲ್ಲ. ಬ್ರಹ್ಮ ಜಿಜ್ಞಾಸುಗಳಿ ಗಂತು ಆ ನರಪುಂಗವನು ಅಪ್ರತಿಮವಾದ ವ್ಯವಸ್ಥೆಯನ್ನಿಟ್ಟಿದ್ದನು. ಊರಹೊರ ಗಿನ ವಿಸ್ತಾರವಾದ ಉನ್ನತವಾದ ಬೈಲು ಸ್ಥಳದಲ್ಲಿ ಸಜ್ಜುಗೊಳಿಸಿದ ಭವ್ಯವಾದ ಕಟ್ಟಡದಲ್ಲಿ ಯೋಗಿಗಳು ಕಲೆತು ತಮ್ಮ ಪರಬ್ರಹ್ಮವಿದ್ಯೆಯ ಪ್ರಯೋಜನ ವನ್ನೂ, ಸಮ್ಯಕ್-ಜ್ಞಾನವನ್ನೂ, ಆತುರರಾದ ಮುಮುಕ್ಷುಗಳಿಗೆ ಮಾಡಿ ಕೊಡುವದಕ್ಕೆ ಎಲ್ಲ ವಿಧದಿಂದಲೂ ಸೌಕರ್ಯವಿತ್ತು. ಅಲ್ಲಿಯ ಮಠಾಧಿಪತಿ ಗಳು ಭಕ್ತಿಜ್ಞಾನ ವಿಭೂಷಿತರಾಗಿ ತಮ್ಮ ಸ್ವಭಾವಸಿದ್ಧವಾದ ವೈರಾಗ್ಯದೊಡನೆ ದೇಹಕಾಂತಿಯುತರಾಗಿದ್ದರು. ಅವರಲ್ಲಿ ಶಿವಯೋಗವು, ಘನವಾದ ಶಿವಜ್ಞಾ ನವು, ಅಸಾಧಾರಣವಾಗಿದ್ದುದರಿಂದ ಶಿವಕಲಾಪೂರಿತವಾದ ಶಿವತೇಜಸ್ಸು ವಿಶೇಷ ವಾಗಿದ್ದುದರಿಂದ ಅವರ ಮೇಲೆ ಭಕ್ತಸಮುದಾಯದ ನೈಸರ್ಗಿಕವಾದ ಭಕ್ತಿಯು ಪ್ರಫುಲ್ಲಿತವಾಗಿತ್ತು. ಆ ನಾಡಿನಲ್ಲಿಯ ಯಾವತ್ತು ಧರ್ಮಬೋಧಕರು ಬಹು ಗೌರವದಿಂದ ಸಂಭಾವಿಸಲ್ಪಡುತ್ತಿದ್ದರು ಜೀರ್ಣವಾದ ಶಿವಾಲಯಗಳೆಲ್ಲ ಸರಿ ಮಾಡಿಸಲ್ಪಟ್ಟು ಅವುಗಳ ವಿನಿಯೋಗಕ್ಕ ಭೂಮಿ ಕಾಣಿಕೆಗಳು ಉಚಿತವಾಗಿ ನಡೆಸಲ್ಪಡುತ್ತಿದ್ದವು. ಈ ರೀತಿಯಾಗಿ ಶ್ಲಾಘನೀಯವಾದ ಆ ನರೋತ್ತಮನ ಆಳಿಕೆಗೆ ಸಕಲ ಪ್ರಜೆಗಳು ಪರಮಹರ್ಷಿತರಾಗಿ ನಮ್ಮ ದೊರೆಯು ಕೀರ್ತಿವಂತ ನಾಗಿ ಚಿರಕಾಲ ಬಾಳಲಿ, ಈ ಪುಣ್ಯಪುರುಷನಿಗೆ ಶಿವಾನುಗ್ರಹವಾಗಲೆಂದು ಸರ್ವಜ್ಞಮೂರ್ತಿಯಲ್ಲಿ ಮೊರೆಯಿಡುತ್ತಿದ್ದರು.

ನಮ್ಮ ಕಥಾನಾಯಕನು ಸತ್ಯವಂತನು, ಸಾತ್ವಿಕನು, ಧರ್ಮಶೀಲನು, ದಯಾಪರನು, ಸದ್ವರ್ತನ ಶೀಲನು, ಕ್ಷಮಾಗುಣವುಳ್ಳವನು, ಪ್ರಜಾನುರಾಗಿಯು, ಶಿವಗೋಷ್ಠಿ ವಿಲಾಸದಲ್ಲಿ ಪರಮೋತ್ಸಾಹಿಯು, ಶಿವಧರ್ಮಿಯು, ಲಿಂಗರತನು, ಶಿವಾಚಾರ ಬಲ್ಲಿದನು ಜಂಗಮವೇ ಸಾಕ್ಷಾತ್ ಪರದೈವವೆಂದು ದೃಢವಾಗಿ ನಂಬಿದವನು, ನಿರ್ವಂಚನೆಯಿಂದ ಜಂಗಮರಿಗೆ ಸಕಲ ವಿಧವಾದ ದಾನ ಕೊಡುವುದರಲ್ಲಿ ಅತುಲವಾದ ಕೊಡಗೈದೊರೆಯಾಗಿ ಅಷ್ಟಾವರಣದಲ್ಲಿ ತ್ರಿಕರಣ ಪೂರ್ವಕವಾಗಿ ಆಸಕ್ತಿಯುಳ್ಳವನಾಗಿದ್ದನು. ಹೀಗಿರಲು ಕಾಲಕ್ರಮೇಣ ನಮ್ಮ ಚರಿತ್ರನಾಯಕನ ಶಿವಭಾವನೆಯು ನಿಸ್ಸೀಮವಾಗಿ ಬೆಳೆದು ಆ ಮಹಿಮನ ಪುಣ ಸಂಚಯವು ಒಬ್ಬುಳಿಗೂಡಿ ಶಿವತೇಜವು ಅತ್ಯಧಿಕವಾಗಿ ಆ ದಿವ್ಯಪ್ರಭೆಯು ಕೈಲಾಸಕ್ಕೆ ಆವರಿಸಲು ವೃಷಭಾರೂಢನು ಬೆರಗಾಗಿ ತಿರುವಾಲೂರಿನ ನರಸಿಂಗ ಮೊನೆಯರ ಅಪೂರ್ವವಾದ ಶಿವಭಕ್ತಿಯೊಡಗೂಡಿದ ಅಮೋಘವಾದ ಜಂಗಮ ಭಕ್ತಿಯನ್ನು ತಿಳಿದು ಸಂತೋಷಯುತನಾಗಿ ಆ ಅರಸನ ಪಟ್ಟಣಕ್ಕೆ ಬಹು ಸೊಗಸಾದ ವಿಟಜಂಗಮಾಕಾರವನ್ನು ತಾಳಿ ಕೈಯಲ್ಲಿ ವೀಣೆಯನ್ನು ಹಿಡಿದು ಮನೋಹರವಾಗಿ ಬಾರಿಸುತ್ತ ಸದ್ಗೀತವನ್ನು ರಸವತ್ತಾಗಿ ಹಾಡುತ್ತ ರಾಜನಿಗೆ ಎದುರಾಗಿ ಬಂದು ರತ್ನಖಚಿತವಾದ ಉಚಿತಾಸನವನ್ನಲಂಕರಿಸಿ ಆ ಭೂವರನಿಂದ ಬೀಳ್ಕೊಂಡು ಅವನ ಅಭೀಷ್ಟದಂತೆ ಸುಖಮಯವಾದ ಪಾದತೀರ್ಥವನ್ನು ಅನುಗ್ರಹಿಸಿ ಒಳ್ಳೇ ಸಂಭ್ರಮದೊಡನೆ ಆನಂದದಿಂದ ಕುಳಿತುಕೊಂಡು, ಅರಸನೇ ನಮ್ಮದೊಂದು ವ್ರತವು ಪೂರೈಸಬೇಕಾಗಿರುತ್ತದೆ. ಅದಕ್ಕಾಗಿ ಭಂಗಾರವು ಬಹಳ ಹೆಚ್ಚಾಗಿ ಬೇಕಾಗಿರುವುದು. ನೀನು ಕೊಟ್ಟರೆ ಬಹಳ ಒಳ್ಳೇದು ಹೀಗೆ ಕಪಟವೇಷದ ಶಂಕರನು ನುಡಿದನು; ಆಗ ನಮ್ಮ ಮಹಾರಾಜನು ಈ ಅಪೂರ್ವ ಜಂಗಮನಿಗೆ ಆತನಿಗೆ ಸಾಕಾಗುವಷ್ಟು ಭಂಗಾರವನ್ನು ರಾಶಿರಾಶಿಯಾಗಿ ಕೊಡಲು ಓಂಕಾರದ ನೆಲೆಯಾದ ಪರಮಾತ್ಮನು ಆತನ ಅದ್ವಿತೀಯವಾದ ಭಕ್ತಿಗೆ ಪ್ರಸನ್ನನಾಗಿ ನಿಜರೂಪವನ್ನು ತೋರಿ ದಿವ್ಯವಾದ ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ ಗಣಪದವಿಯನ್ನು ದಯಪಾಲಿಸಿ ಚಂದ್ರಶೇಖರನು ಅಂತರ್ಧಾನವಾದನು.

ಅಚ್ಚಳಿಯದ ಸಹಜವಾದ ಪರಮಾತ್ಮನಲ್ಲಿಯ ಭಕ್ತಿಯಿಂದ ಸದ್ಗತಿಯಾಗುವದೆಂದು ಈ ಆಖ್ಯಾಯಿಕೆಯಿಂದ ತಿಳಿದುಬರುದಷ್ಟೆ ಅಂಥ ಘನವಾದ ಗುರುಲಿಂಗ ಜಂಗಮ ಭಕ್ತಿಯು ಪಾಠಕ ಮಹಾಶಯರಲ್ಲಿ ವಿಸ್ತೃತವಾಗಲೆಂದು ಶಿವಗಣ ಸಮೂಹಕ್ಕೆ ಲೇಖಕನು ಪ್ರಾರ್ಥಿಸುತ್ತಾನೆ.

ಕಥಾನಾಯಕನ ಮೂಲ ಹೆಸರು ಉತ್ತುಂಗ ಚೋಳನು; ನರಸಿಂಗ ಮೊನೆಯರೆಂಬುದು ಉಪನಾಮವು ಹೆಚ್ಚಿನ ಸಂಗತಿಯನ್ನು ಜಡೆಯನಯನಾರ ಅಧ್ಯಾಯದಲ್ಲಿ ನೋಡುವದು.

---

೬೦.

# ೮. ಕಡವೂರಕಾರಿಯು.



ಧಾರುಣಿಗೆ ಬಂದು ಮದನಾರಿಯನ್ನಗಿಸಿ ಮನ । ವಾರೆ ಗಣಪದವ ನೊಳ
ಕೊಂಡ ಕಡವೂರ । ಕಾರಿಸಹಕಾರಿಯೆನಿಸೆನ್ನ ॥

[ಶ್ರೀ ನಿಜಗುಣರು]



ಶಿವಭಕ್ತರು ಶಬ್ದ, ಸ್ಪರ್ಶ, ರೂಪು, ರಸ, ಗಂಧ ಮುಂತಾದ ಸರ್ವಪದಾರ್ಥಗಳನ್ನು ಶಿವಾರ್ಪಣಮೂಲಕವಾಗಿಯೆ ಸೇವಿಸಬೇಕೆಂಬ ಕಟ್ಟಳೆಯು ಸಕಲರು ತಿಳಿದ ವಿಷಯವಾಗಿರುವದು. ಮನೋಹರವಾದ ಸಂಗೀತವನ್ನು ಅಥವಾ ಆಹ್ಲಾದಕರವಾದ ಮೃದುಮಧುರವಾದ ನೀತಿಪರ ಬೋಧಪರ ನುಡಿಗಳನ್ನು ಶಿವಾನುಭಾವದ ಭಾಷಣಗಳನ್ನು ಕೇಳಿ ಅದರಿಂದಾದ ಆನಂದವನ್ನು ಈಶ್ವರಾರ್ಪಣ ಮಾಡಿ; ಮೃದುವಾದ ಬಟ್ಟೆ, ಚರ್ಮ, ಎಲೆ, ಕಾಯಿ, ಹಣ್ಣು ಮುಂತಾದ ವಸ್ತುಗಳನ್ನು ಹಾಗೂ **(ಸಾಕಿದ)** ಪಶು ಪಕ್ಷಿಗಳನ್ನು ಅಥವಾ ಗುರು ಶಿಷ್ಯರನ್ನು, ಸ್ನೇಹಿತರನ್ನು ಇಲ್ಲವೆ ಆಪ್ತೇಷ್ಟರನ್ನು ಪ್ರೀತಿಯಿಂದ ಮುಟ್ಟಿದರೆ ಆಗುವ ಆನಂದವನ್ನು ಶಿವಾರ್ಪಣಮಾಡಿ; ಮಧುರವಾದ ಸರ್ವ ಭೋಜ್ಯಪದಾರ್ಥಗಳನ್ನು ಹಾಗೂ ಕವಿಗಳಿಂದಾಗುವ ವಿವಿಧರಸಗಳಂತಿರುವ ಎಲ್ಲ ಪೇಯಪದಾರ್ಥಗಳನ್ನು ಸವಿಯುವದರಿಂದ ಉಂಟಾಗುವ ಆನಂದವನ್ನು ಲಿಂಗಾರ್ಪಣಮಾಡಿ; ಪರಿಪರಿಯ ಸುಗಂಧಗಳಿಂದ ತನಗಾಗುವ ಆನಂದವನ್ನು ದೇವರಿಗೆ ನಿವೇದಿಸಿ ಪ್ರೇಕ್ಷಣೀಯವಾದ ಯಾವತ್ತು ಅಂದಚಂದದ ವಸ್ತುಗಳನ್ನು ನೋಡಿ ಅದರಿಂದಾಗುವ ಆನಂದವನ್ನು ಪರಮಾತ್ಮನಿಗೆ ಅರ್ಪಿಸಿ ಈ ಪ್ರಕಾರ ಲಿಂಗಭೋಗೋಪಭೋಗಿಯಾಗಿರಬೇಕೆಂಬುದೇ ನಿಯಮವು. ಯಾವದೇತರದಿಂದ ಯಾವ ಕಾಲಕ್ಕೆ ಆಗಲಿ ಆಗುವ ಆನಂದವನ್ನು ಶಿವಾರ್ಪಣಮಾಡುವದೇ ನಮ್ಮ ಶಿವಧರ್ಮದ ಗುಟ್ಟು ಅಂದರೆ ತಾನು ಸವಿಯತಕ್ಕದ್ದನ್ನೆಲ್ಲ ಶಿವಪ್ರಸಾದವಾಗಿಯೇ ಸೇವಿಸತಕ್ಕದ್ದು.

ಪ್ರಾಚೀನಕಾಲದಲ್ಲಿ ಕಡವೂರ ಎಂಬ ಗ್ರಾಮದಲ್ಲಿ ಒಬ್ಬ ಈಶ್ವರ ಭಕ್ತನಿದ್ದನು. ಈ ಸದ್ಭಕ್ತಲಲಾಮನು ಗುರು ದೇವತಾಭಕ್ತಿಸಂಪನ್ನನಾಗಿದ್ದು ತನ್ನ ನಿತ್ಯನೈಮಿತ್ತಿಕ ಕರ್ಮಗಳೊಂದಿಗೆ ಶಿವ ಸತ್ಕ್ರಿಯೆಗಳನ್ನಾಚರಿಸುತ್ತ ಶಿವಾಚಾರ

ಬಲ್ಲಿದನಾಗಿರುತ್ತಿರಲು, ದಿನಕ್ರಮೇಣ ಪುಣ್ಯಸಂಗ್ರಹವಾಗುತ್ತಿರಲು ಇವನ ಮುನವ್ವೆಳಿಸಿದಂತ್ತೆ ಹಾಸ್ಯರಸದ ಕಡೆ ಇವನ ಚಿತ್ತವು ಒಲಿದು ಆ ಕಲೆಯಲ್ಲಿ ನಿಷ್ಣಾತನಾಗಿದ್ದನು.

ಪೂರ್ವದಲ್ಲಿ **ಭೃಂಗಿಯು** ಕೈಲಾಸದ ಸಭಾಮಂದಿರದಲ್ಲಿ ಹಾಸ್ಯಮಾಡಿ ಅಲ್ಲಿ ಮಿಲಿತರಾದವರನ್ನು ನಗಿಸಿ ಅದರಿಂದಾಗುವ ಆನಂದವನ್ನು ಹ್ಯಾಗೆ ಶಿವಾರ್ಪಣ ಮಾಡುತ್ತಿದ್ದನೋ ಅದೇ ರೀತಿಯಲ್ಲಿ ಈ ಈಶ್ವರ ಭಕ್ತನು (ಅಂದರೆ ನಮ್ಮ ಚರಿತ್ರನಾಯಕನು) ಯಾರನ್ನು ಕಂಡರೂ ಅವರನ್ನು ತಪ್ಪದೆ ನಗಿಸಿ ಅದರಿಂದಾಗುವ ಆನಂದವನ್ನು ಶಿವಾರ್ಪಣವಮಾಡುತ್ತಿದ್ದನು. ಯಾರನ್ನು ಕಂಡರೂ ಅವರನ್ನು ನಗಿಸದೆ ಬಿಡುತ್ತಿದ್ದಿಲ್ಲ. **ಶ್ರೀ ಅಲ್ಲಮ ಪ್ರಭುವು, ಚನ್ನಬಸವೇಶ, ಬಸವೇಶ** ಇವರು ಭಕ್ತಿ-ಜ್ಞಾನ-ವೈರಾಗ್ಯದುರಂಧರರಾಗಿದ್ದಾಗ್ಯೂ ವಿಶೇಷತಃ ಇವರು ವೈರಾಗ್ಯದಲ್ಲಿ, ಜ್ಞಾನದಲ್ಲಿ ಭಕ್ತಿಯಲ್ಲಿ ಅನುಕ್ರಮವಾಗಿ ಅತುಲವಾಗಿ ಬಲ್ಲಿದರಾಗಿದ್ದರಷ್ಟೆ; ಅದೇ ರೀತಿಯಾಗಿ ನಮ್ಮ ಕಥಾನಾಯಕನು ಹಾಸ್ಯ ಕಲಿಯಲ್ಲಿ ಬಹು ಘನವಾದ ಯೋಗ್ಯತೆಯನ್ನು ಪಡೆದಿದ್ದನು.

ಈ ಮೇರೆಗೆ ವಿಚಿತ್ರವಾದ ಹಾಸ್ಯಮಾಡುವದರಿಂದಲೆ ತನಗಾಗುವ ಆನಂದವನ್ನು ಅಚಲವಾದ ಭಕ್ತಿಯಿಂದ ಶಿವಾರ್ಪಣಮಾಡುತ್ತ ಬರಲು ಕೆಲವು ಸಂವತ್ಸರಗಳು ಕಳೆಯಲು ಈ ನೂತನವಾದ ಶಿವಭಕ್ತಿವಿಲಾಸವು ವಿಷಕಂಠನಾಗಿದ್ದರೂ ಅಕ್ಷರನಾಗಿರುವ ಗಂಗಾಧರನಿಗೆ ವೇದ್ಯವಾಗಿ ಸಂತೋಷಪಟ್ಟು ಈ ಸಂಗತಿಯನ್ನು ತನ್ನ ಪತ್ನಿಯಾದ ಗಿರಿಜೆಗೆ ಪೇಳಲು ಆ ದೇವಿಯು ಹರ್ಷಪಟ್ಟು ಆ ವರ ಭಕ್ತನಲ್ಲಿಗೆ ಹೋಗುವ ಆತನ ಪಣವನ್ನಾದರೂ ನೋಡುವಾ ಎಂದು ಮೃತ್ಯುಂಜಯನಿಗೆ ಬಿನ್ನವಿಸಿದಳು.

ಒಂದು ದಿನ ಪ್ರಶಸ್ತವಾದ ತಾಣದಲ್ಲಿ ನಮ್ಮ ಹಾಸ್ಯಕಲಾ ಪ್ರವೀಣನು ಭಸ್ಮೋದ್ಧೂಳಿತನಾಗಿ, ರುದ್ರಾಕ್ಷಮಾಲಾ ಭೂಷಿತನಾಗಿ ಕರ್ತವ್ಯ ದಕ್ಷತೆಯಿಂದ ಮುಖದ ಕಳೆಯು ಉಕ್ಕುತ್ತಿರಲು ಶಿವಧ್ಯಾನದೊಡನೆ ಏಕಾಂಗಿಯಾಗಿ ಕುಳಿತಿರುವ ಸಮಯದಲ್ಲಿ ಶಿವಶಿವೆಯರು ಆ '**ಕಡವೂರಿಗೆ** ಜಂಗಮ ದಂಪತಿಗಳಾಗಿ ಬಂದು ನಮ್ಮ ಚರಿತ್ರಪುರುಷನಿದ್ದೆಡೆಗೆ ಪ್ರಾಪ್ತರಾಗಿ ಆತನ ಸಮ್ಮುಖದಲ್ಲಿ ಕುಳಿತುಕೊಂಡರು. ಆಗಲಾ ಭಕ್ತನು ಅವರೊಡನೆ ತನ್ನ ಹಾಸ್ಯ ಪ್ರೌಢಿಮೆಯನ್ನು ತನ್ನ ಶಕ್ತಿ ಮೀರಿ ತೋರಿಸಿದರೂ ಆತನ ಹಾಸ್ಯಕ್ಕೆ ಉಲುಕದೆ ಸ್ವಲ್ಪವಾದರೂ ವಶವಾಗದೆ ಎಳ್ಳಷ್ಟು ನಗದೆ ಅಖಂಡವಾಗಿ ಮೌನವಾಗಿಯೆ ಅವರಿಬ್ಬರೂ ಕುಳಿತಿರಲು ಆತನು ಆಶ್ಚರ್ಯಪಟ್ಟು ಮನದಲ್ಲಿ ಈ ರೀತಿ ಆಲೋಚಿಸಿದನು. ನನ್ನ ಸಮ್ಮುಖದಲ್ಲಿ ನಗದೆ ಇರುವವರು ಯಾರೂ ಇರುವದಿಲ್ಲ. ಇವ

ರೀರ್ವರೂ ಮಾತ್ರ ಸುಮ್ಮನೆ ಕುಳಿತಿರುವರು. ನನಗೆ ಈ ವ್ಯಕ್ತಿಗಳೀರ್ವರೂ ಅಪೂರ್ವ ಅತಿಥಿಗಳಾಗಿರುವರು ಹೀಗೆ ಕೌತುಕಪಡುತ್ತ (ಜೀವಿಗಳಿಗೆ ಸುಖ ವನ್ನುಂಟುಮಾಡುವದರಿಂದಲೆ ಮೃಡನೆಂದು ಪ್ರಸಿದ್ಧಿಯನ್ನು ಹೊಂದಿರುವ ಅರ್ಧ ನಾರೀಶ್ವರನನ್ನು ಏಕಚಿತ್ತದಿಂದ ನೆನೆಯುತ್ತ) ಬಹುಶಃ ಇವರು ಪಾರ್ವತೀಪರ ಮೇಶ್ವರರೇ ಇರಬಹುದೆಂದು ಶಂಕಿಸುತ್ತ ಆ ರೀತಿಯಾಗಿ ಭಾವಿಸತೊಡಗಿ ಒಳ್ಳೇದು ಪರೀಕ್ಷಿಸಿಯೆ ಬಿಡುವ ಎಂದು ಬಗೆದು ಈ ನವೀನ ಅತಿಥಿಗಳಿಗೆ ಈ ಪರಿಯಾಗಿ ಪ್ರಶ್ನೆ ಮಾಡಿದನು. ಮಹನೀಯರೇ ಈ ಹೆಣ್ಣು ಮಗಳು ತಮಗೆ ತಂಗಿಯೋ ಅಥವಾ ಅಕ್ಕನೋ ಪೇಳಿರಿ ಎಂದನು. ಆಗಲಾ ಜಗಜ್ಜನನೀಜನ ಕರು ಹಸನ್ಮುಖರಾಗಿ ಆ ಭಕ್ತನಿಗೆ ಸೋತವರಾಗಿ ಆತನು ನಿತ್ಯ ಮಾಡುವ ಶಿವಾರ್ಪಣಕ್ಕೆ ಮೆಚ್ಚಿದವರಾಗಿ ನಿಜರೂಪವನ್ನು ತೋರಿ ಆಶೀರ್ವದಿಸಿ ಅವನಿಗೆ ಅಕ್ಷಯವಾದ ಶಿವಗಣಪದವಿಯನ್ನು ದಯಪಾಲಿಸಿದರು.

ಸರ್ವವ್ಯಾಪಿಯೂ, ದಿಗಂಬರನೂ ಆದ ಶೂಲಪಾಣಿಯು ನಮ್ಮೆಲ್ಲರನ್ನು ಶಿವಾರ್ಪಣ ಮೂಲಕವಾಗಿಯೆ ಪ್ರಸಾದ ಸೇವನೆಯನ್ನು ಮಾಡುವಂತೆ ಅನು ಗ್ರಹಿಸಲೆಂದು ಆ ಭಕ್ತವತ್ಸಲನನ್ನು ಪ್ರಾರ್ಥಿಸೋಣ.

---

ಓಂ.

# ೯. ತಿರುನೀಲಕಂಠಪಾಣರು.

ಸರಸಮಯ ಗಾನದಿಂದುರುಗ ಕುಂಡಲನೊಪ್ಪು ।
ತಿರೆಪಾಡಿ ಮೆರೆದ ತಿರುನೀಲಕಂಠಪಾ । ಣರು ನೆಲಿಸಲೆನ್ನ ಭಾವದೊಳು ॥
[ಶ್ರೀ ನಿಜಗುಣರು]



ಣಿಗಳಿಗೆ ಜೀವನಾಧಾರವಾದ ಬೆಳೆಯಿಂದ ಸಮೃದ್ಧವಾದ ಪ್ರಖ್ಯಾತವಾದ ಚೇರಧರಿತ್ರಿಯಲ್ಲಿ ಶಿವಭಕ್ತರಿಂದಲೂ, ಆಗಮಜ್ಞರಿಂದಲೂ, ವಿಬುಧರಿಂದಲೂ, ತಿರುವಂಜಕಳ ವೆಂಬ ಪುರವು ಸೊಗಸಾಗಿತ್ತು. ಅಲ್ಲಿ ಕಬ್ಬಿನ ಗದ್ದೆ ಗಳು, ಎಲೆ ತೋಟಗಳು, ಮಾವಿನ ವನಗಳು, ಪುಷ್ಪ

ವಾಟಿಗಳು, ಕೆರೆ ಮುಂತಾದ ಜಲಾಶಯುಗಳು ಹೇರಳವಾಗಿದ್ದವು. ಆ ಊರಲ್ಲಿ ಈಶ್ವರ ಭಕ್ತರಿಂದ ವಿಲಸಿತವಾದ ಸೌಧಗಳು ಹಾಗೂ ಮನೋಹರವಾದ ಶಿವಾಲಯಗಳು ಒಪ್ಪುತ್ತಿದ್ದವು.

ಸತ್ಕೀರ್ತಿಯುತರಾದ ತಿರುನೀಲಕಂಠಪಾಣರು ಅರುವತ್ತುಮೂರು ಪುರಾತನರಲ್ಲೊಬ್ಬರೆಂಬುದು ಶಿವಭಕ್ತರು ಅರಿತ ಸಂಗತಿಯು. ಗಾನವಿಶಾರದರಾದ ಈ ಮಹನೀಯರು ತಿರುವಂಜಕಳ ಪುರವಾಸಿಗಳು; ಇವರ ಸಂಗೀತ ಶಕ್ತಿಯು ಅಸಾಧಾರಣವಾಗಿತ್ತು. ಇವರು ತಮ್ಮ ವೀಣಾಯುಕ್ತವಾದ ಮನೋಹರ ತಿರುಪಾಡುಗಳಿಂದ ಶಿವಾರ್ಪಣವಾಡುತ್ತ ಹೆಸರಾಗಿದ್ದರು.

ಭೂಮಂಡಲದಲ್ಲಿ ಇಂಪಾದ ರಾಗವನ್ನು ಕೇಳಿ ಪ್ರೀತಿಸದ ಮಾನವೀ ಪ್ರಾಣಿಯು ಬಹಳ ವಿರಳವೆಂದು ಹೇಳಬಹುದು. ಈ ಬಗ್ಗೆ ಸುಭಾಷಿತಕಾರರು ಹೀಗೆ ಉದ್ಗಾರ ತೆಗೆಯುತ್ತಾರೆ:—ಮಧುರವಾದ ಗಾಯನಕ್ಕೆ ಮೆಚ್ಚದವರು ಶತಮೂರ್ಖರು ಅಥವಾ ಜೀವನ್ಮುಕ್ತರು ಹೀಗೆ ನೀತಿಕಾರರು ಅಭಿಪ್ರಾಯವು.

ನಮ್ಮ ಕಥಾನಾಯಕನು ಸದ್ಧರ್ಮ, ಸುನೀತಿ, ಹಾಗೂ ಉಜ್ವಲವಾದ ಶಿವಭಕ್ತಿಯನ್ನೊಳಕೊಂಡ ಬಹು ಮನೋಹರವಾದ ಪದ್ಯಗಳನ್ನು ಪಾಡುತ್ತಿದ್ದನು. ಶ್ರದ್ಧೆಯಿಂದ ಆಲಿಸುವವರಿಗೆ ಅಷ್ಟೆ ಏಕೆ? ಸಹಜವಾಗಿ ಕೇಳುವ ಸಜ್ಜನರಿಗೆ ಆ ನರಪುಂಗವನು ಪಠಿಸುವ ಈ ಶಸ್ತವನಗಳಲ್ಲಿ ಪದ ಲಾಲಿತ್ಯವು, ಅರ್ಥ, ಗಾಂಭೀರ್ಯವು, ಶಬ್ದಾಲಂಕಾರವು, ಭಾವಮಾಧುರ್ಯವು, ಓಜಸ್ವಿತೆಯು, ಅತ್ಯದ್ಭುತವಾದ ಪ್ರತಿಭೆಯು ಕಂಡುಬಂದು ದೇವರಲ್ಲಿ ಭಕ್ತಿಯು ಉಕ್ಕೇರುತ್ತಿತ್ತು. ಚರಿತ್ರನಾಯಕನು ಶಿವರತಿಯಿಂದ ತನ್ನ ಅಂತಃಕರಣದಲ್ಲಿ ಉದಯಿಸಿದ ಸ್ಫೂರ್ತಿಯುತವಾದ ನಿರರ್ಗಳವಾದ ಪ್ರೇಮಪ್ರವಾಹದ ಶ್ರೇಷ್ಠವಾದ ಶಿವಭಕ್ತಿರಸವು ತುಂಬಿತುಳಕುವ (ಇವರ) ವೀಣಾಯುಕ್ತವಾದ ತಿರುಪಾಡುಗಳಿಂದ ಶ್ರೋತೃ ಜನರು ಸಾನಂದರಾಗಿ ತಲ್ಲೀನರಾಗುತ್ತಿದ್ದರು! ಈ ಸದ್ಭಕ್ತನ ಅಪ್ರತಿಮವಾದ ಗಾನವನ್ನು ಕೇಳುವವರು ಪಾಪಿಗಳಿರಲಿ, ನಾಸ್ತಿಕರಿರಲಿ, ಮುಗ್ಧರಿರಲಿ, ಅವಿಚಾರಿಗಳಿರಲಿ, ಪಾಷಾಣ ಹೃದಯದವರಿರಲಿ, ಯಾರಿದ್ದರೂ ಕೂಡ ಆ ಸೊಗಸಾದ, ಅನುಪಮವಾದ, ಶಿವಭಾವಗರ್ಭಿತವಾದ ನುಡಿಗಳು ಅವರ ಚಿತ್ತವನ್ನು ಆಕರ್ಷಿಸದೆ ಬಿಡುತ್ತಿದ್ದಿಲ್ಲ. ನಮ್ಮ ಚರಿತ್ರ ಪುರುಷನು ಈಶ್ವರ ಪ್ರಿಯನಾಗಿ ಅನವರತವೂ ಸದಾಚಾರವನ್ನಾಚರಿಸುತ್ತ ಏಕಚಿತ್ತದಿಂದ ತನ್ನ ಅಸಮವಾದ ಗಾನಪ್ರೌಢಿಮೆಯಿಂದ ದಿನಾಲು ತ್ರಿಕಾಲದಲ್ಲಿ ಭಕ್ತಿಪರವಶನಾಗಿ ಪರಮೇಶ್ವರನನ್ನು ಆರಾಧಿಸುತ್ತಿದ್ದನು. ಈ ಪೂಜ್ಯರ ಸರಸವಾದ ಶಿವಗಾನವನ್ನು ಕೇಳಿದೊಡನೆ :—

(೧) ಸ್ವಕಾರ್ಯ ವಿಮುಖರಾದವರು ಕೃತಾಪರಾಧಕ್ಕೆ ಪಶ್ಚಾತ್ತಾಪಪಟ್ಟು ಸನ್ಮಾರ್ಗಗಾಮಿಗಳಾಗುತ್ತಿದ್ದರು.

(೨) ಕರ್ತವ್ಯ ತತ್ಪರರಾದ ವಿಧವೆಯರು ದಯಾ ರಸಭರಿತನಾದ, ನಿತ್ಯನಾದ, ಜಗತ್ಪತಿಯಾದ ಪರಮೇಶ್ವರನನ್ನು ಸ್ಮರಿಸುತ್ತ ಸನಾಥರೆಂದು ಗ್ರಹಿಸುತ್ತಿದ್ದರು.

(೩) ಪರದೇಶಿಗರು ದೀನಚಿಂತಾಮಣಿಯಾದ ಭಗವಂತನೆಂದು ಖ್ಯಾತಿ ಹೊಂದಿದ ಕಾಲಾರಿಯನ್ನು ನೆನೆದು ತಾವು ಅನಾಥರಲ್ಲವೆಂದು ಪರಿಭಾವಿಸುತ್ತಿದ್ದರು.

(೪) ಗೃಹಸ್ಥಾಶ್ರಮಿಗಳು ಕಣ್ಣು, ನಾಲಿಗೆ, ಕಿವಿ, ಮುಂತಾದ ಪಂಚೇಂದ್ರಿಯಗಳು ತಮ್ಮ ಸ್ವಾಧೀನದಲ್ಲಿಡಬೇಕೆಂದು ಭಾವಿಸತೊಡಗಿದರು.

(೫) ಯತಿಗಳು ಪಂಚೇಂದ್ರಿಯಗಳಿಗೆ ವಶವಾಗದಿರುವುದರಿಂದಲೆ ತಮ್ಮ ಶಿವಾನುಭವವು ನಿರಾತಂಕವಾಗಿದೆ ಎಂದು ಬಗೆದು ಚರಿತ್ರನಾಯಕನನ್ನು ಕೊಂಡಾಡಿದರು.

(೬) (ಶಿವದೀಕ್ಷಾಯುತರಾದ) ಗುರುಪುತ್ರರಿಗೆ ಕಾರ್ಯರೂಪದೊಡನೆ ಪರಿಣಮಿಸುವ ಶಿವಧರ್ಮಶ್ರೇಯೋಭಿಲಾಷೆಯು ಮಾನವರಿಗೆ ಭೂಷಣವೆಂದು ಮನದಟ್ಟಾಗಹತ್ತಿತು.

(೭) ಭಗವತ್ ಪ್ರೇಮಿಗಳಾದ ಸುಜನರು ನಮ್ಮ ಪರಮಪಾವನ ಮೂರ್ತಿಯಾದ ಮಹಿಮನನ್ನು ಕಂಡೊಡನೆ ಶಿವಧರ್ಮ ರತಿಯೊಡನೆ ಕ್ರೀಡಿಸುವ ಗುರುವೆಂದು ಗೌರವಿಸುತ್ತಿದ್ದರು. ಗುರುವರ್ಣನೆಯನ್ನು ಪೂರ್ತಿಯಾಗಿ ಬಣ್ಣಿಸುವುದು ಅಸಾಧ್ಯವು :—ಕಾಮಧೇನುವು ಕಾಮಿಸಿದ ವಸ್ತುವನ್ನು ಮಾತ್ರ ಈಯುವುದು ; ಚಿಂತಾಮಣಿಯು ಚಿಂತಿಸಿದ ಪದಾರ್ಥವನ್ನು ಕೊಡುವುದು ; ಕಲ್ಪತರುವು ಕಲ್ಪಿಸಿದಮಟ್ಟಿಗೆ ಫಲಕಾರಿಯಾಗುವುದು. ಆದರೆ ಸದ್ಗುರುವು ಹಾಗಲ್ಲ, ಆ ಅಪ್ರತಿಮ ಗುರುರಾಯನು ನಿರ್ಮಲರಾದ ಆಸ್ತಿಕರಿಗೆ ಅಪ್ರಾರ್ಥಿತನಾಗಿ ಅಕ್ಷಯವಾದ ನಿತ್ಯಾನಂದವನ್ನುಂಟುಮಾಡುತ್ತಾನೆ. ಬಹಳ ಹೇಳುವದೇನು ಅಷ್ಟತನುಗಳಿಂದ ಬ್ರಹ್ಮಾಂಡವನ್ನೇ ವ್ಯಾಪಿಸಿರುವ ಪರಮಾತ್ಮನಾದ ಸ್ಥಾಣುಮೂರ್ತಿಯು ಸದ್ಭಕ್ತರ ಉದ್ಧಾರಕ್ಕಾಗಿಯೇ ಗುರುರೂಪದಿಂದ ಅವತರಿಸುವನು.

(೮) ದೈವಭಕ್ತರಾದವರು ಈ ಪುಣ್ಯಮೂರ್ತಿಗಳಾದ **(ತಿರುನೀಲಕಂಠ ಪಾಣರ)** ಪ್ರಭೆಯು (ಶಿವಭಕ್ತರು ನೆಲಸಿದ ಕೋಟೆಯಲ್ಲಿ ವೃಷಭಧ್ವಜನ ನಿಶಾನೆಯು ಮೆರೆಯುವಂತೆ) ಬೆಳಗುವದೆಂದು ಹಿಗ್ಗುತ್ತಿದ್ದರು.

ನಮ್ಮ ಸದ್ಭಕ್ತ ಲಲಾಮನು ಆ ಪಟ್ಟಣದಲ್ಲಿರುವ **ತಿರುವಂಜಕಳೇಶ್ವರಾಲ**ಯಕ್ಕೆ ಹೋಗಿ ಗಾನಪ್ರಿಯನಾದ ವಿರುಪಾಕ್ಷನನ್ನು ತನ್ನ ಪ್ರೌಢಿಮೆ

ಯಿಂದ ಆನಂದಗೊಳಿಸುತ್ತಿರುವಾಗ ಆ ನಾಡಿನ ದೊರೆಯಾದ **ಚಾರಮ** ನೃಪನು ಅಲ್ಲಿಗೆ ಉತ್ಸವದಿಂದ ಬಂದು ಆತನ ವೀಣಾ ವಾದ್ಯಕ್ಕೆ ಮೆಚ್ಚಿ ಆ ಶರಣನಿಗೆ ರತ್ನ ಪೀಠವನ್ನಿತ್ತು ಸಾಗಿದನು. ಈ ರೀತಿಯಾಗೆ **ತಿರುನೀಲಕಂಠಪಾಣರು** ಪ್ರತಿದಿನದಲ್ಲಿಯೂ ಸರಸವಾದ ವೀಣೆಯ ತಿರುಪಾಡುಗಳಿಂದ ಶಿವನನ್ನಾರಾಧಿಸುತ್ತ ಕೆಲವು ಸಂವತ್ಸರಗಳು ಕಳೆಯಲು ಒಂದು ದಿನ ಆ ಶಿವಾಲಯದಲ್ಲಿ ಚರಿತ್ರನಾಯಕನು ಶಿವಭಕ್ತಿರಸರಾಗದಿಂದ ಪಾಡುತ್ತ ಪರಿಪರಿಯ ರಾಗಗಳಿಂದ ಸಪ್ತಸ್ವರ ತಿರುಪಾಡುಗಳನ್ನು ಪರಮಾನಂದದಿಂದ ವೀಣೆಯಲ್ಲಿ ಉಚ್ಚರಿಸುತ್ತಿರಲು ಶಿವಭಕ್ತಿಯು ಅತ್ಯಧಿಕವಾಗಿ ಅತುಲವಾಗಿ ಪರಿಣಮಿಸಲು ಪರಮಾತ್ಮನು ಆ ಲಿಂಗ ಮೂರ್ತಿಯಿಂದಲೆ ಉದ್ಭವಿಸಿ ನಿಜರೂಪವನ್ನು ತೋರಿದನು. ಆ ದಿವ್ಯ ಮೂರ್ತಿಯನ್ನು ಕಂಡು ಹರ್ಷ-ಭಯಚಕಿತನಾಗಿ ರೋಮಾಂಚನಗಳೆದ್ದು ಅಡಿಗಡಿಗೆ ಮಹಾದೇವನನ್ನು ನಮಸ್ಕರಿಸುತ್ತ ಕೈ ಜೋಡಿಸಿಕೊಂಡು ಸ್ತೋತ್ರಗೈಯುತ್ತ ಭಕ್ತಿಯಿಂದ ನಿಂತಿರಲು ಷಣ್ಮುಖಪಿತನಾದ ತ್ರ್ಯಂಬಕನು ಪ್ರೀತಿಯುತನಾಗಿ ಆ ಭಕ್ತನಿಗೆ ಪ್ರಸನ್ನನಾಗಿ ದಿವ್ಯ ವಿಮಾನದಲ್ಲಿ ಕುಳ್ಳಿರಿಸಿ ಶಿವಗಣಪದವಿಯನ್ನಿತ್ತು ಅಂತರ್ಧಾನನಾದನು.

ಹೇರಂಬತಾತನಾದ ಸೋಮನನ್ನು ಅನನ್ಯಭಾವದಿಂದ ವಂದಿಸಿ, ತಮ್ಮ ಆತ್ಮೋದ್ಧಾರದ ಜೊತೆಗೆ ಶಿವಮತದ ಉತ್ಕರ್ಷಕ್ಕಾಗಿ ಅವಿಶ್ರಾಂತ ಶ್ರಮವಹಿಸುತ್ತಲಿರುವ ನರಪುಂಗವರಿಗೆ ವಿನೀತನಾಗಿ ಲೇಖಕನು ವಿರಮಿಸುವೆನು.



೬೦.

# ೧೦. ಚಿರುಪುಲಿಯಾಂಡರು.

ಸಲೆ ಚರಪದಾಂಬುಜವ ನೊಲಿದು ಪೂಜಿಸಲುಮಾ । ಲಲನೇಶನೊಪ್ಪಿ ನಿಜಪದವನಿತ್ತ ಚಿರು । ಪುಲಿಯಾಂಡರೆನ್ನ ಸುಖದಾಗು ॥

[ಶ್ರೀ ನಿಜಗುಣ ಶಿವಯೋಗಿ]

ರಮಣೀಯವಾದ ತೆಂಗು, ಅಡಿಕೆ, ಬಾಳೆ, ಮಾವು, ಹಲಸು, ದ್ರಾಕ್ಷೆ ಮುಂತಾದ ವನಗಳಿಂದಲೂ, ನೆಲ್ಲು, ಕಬ್ಬು ಮುಂತಾದ ಗದ್ದೆಗಳಿಂದಲೂ ಕಂಗೊಳಿಪ ಸಂಪತ್ಕರವಾದ ಸರ್ವಧಾನ್ಯದ ಬೆಳಸಿನಿಂದ ಮತ್ತು ಅನೇಕ ಜಲನಿಧಿಗಳಿಂದ ಪಾವನವಾದ ಚೋಳಧರೆಯು ಚನ್ನಾಗಿ ವಿರಾಜಿಸುತ್ತಿತ್ತು. ಅಂತು ಮೆರೆಯುವ ಚೋಳ ಮಂಡಲದಲ್ಲಿ ಅನೇಕ ಶಿವಭಕ್ತರಿಂದಲೂ ನಯನಾನಂದಕರವಾದ ಪ್ರೇಕ್ಷಣೀಯವಾದ ಪ್ರಾಸಾದಗಳಿಂದಲೂ, ಪಾಪಭೀರುಗಳಾದ ಪ್ರಜೆಗಳಿಂದಲೂ, ಕುಲೀನರಾದ ಸುಮಂಗಲೆಯರಿಂದಲೂ ಚಿರುಪುತ್ತೂರು ಎಂಬ ಪಟ್ಟಣವು ಸೊಗಸಾಗಿ ಒಪ್ಪುತ್ತಿತ್ತು. ಇಂತೆಸೆವ ಆ ಊರಲ್ಲಿ ಚಿರುಪುಲಿಯಾಂಡರು ಎಂಬ ಪುಣ್ಯಾಭಿದಾನಯುತನಾದ ಸದ್ಭಕ್ತನು ಸದಾಚಾರಿಯಾಗಿ ಸುಜನರಿಗೆ ಸಹಜವಾದ ಶೀಲದಿಂದ ಶ್ರೀಮದಷ್ಟಾವರಣ ಪರಾಯಣನಾಗಿ, ಪಂಚಾಚಾರನಿರತನಾಗಿ, ಸದ್ವರ್ತನೆಯೇ ರೂಪುಗೊಂಡು ಮಾನವಾಕಾರವನ್ನು ತಾಳಿದೆಯೊ ಎಂಬಂತೆ ಶಿವಭಕ್ತಸಮುದಾಯಕ್ಕೆ ಅಲಂಕಾರ ಪ್ರಾಯನಾಗಿ ಶೋಭಿಸುತ್ತಿದ್ದನು. ಶಿವಪ್ರೀತಿಕರವಾದನಡತೆಯಿಂದ ಕೆಲವುಕಾಲ ಕಳೆಯಲು ಆತನ ಪುಣ್ಯವಿಶೇಷದಿಂದ ಆ ನರಪುಂಗವನಿಗೆ ಗುರುಕಾರುಣ್ಯದಿಂದ ಅತ್ಯುಜ್ವಲವಾದ, ಘನವಾದ ಅಮೋಘವಾದ ಜಂಗಮ ಭಕ್ತಿಯು ಹೆಚ್ಚಾಗಿ ಅಂಕುರಿಸಿ, ಮಾಹೇಶ್ವರರಿಗೆ ಧನ, ಕನಕ, ಕಮಂಡಲು ಪಾದುಕೆ ಅನ್ನವಸ್ತ್ರಾದಿಗಳಿಂದ ಅವರಿಷ್ಟಾನುಸಾರವಾಗಿ ತೃಪ್ತಿಪಡಿಸುತ್ತಿದ್ದನು. ಜಂಗಮನು ಜನನ, ಗಮನ, ಮರಣರಹಿತನಾದವನೆಂದು ಬಗೆದು, ಆತನೇ ಮಹೇಶನ ಪ್ರತಿಬಿಂಬವೆಂದು, ಮುಕ್ತಿಪದದ ಕೈವಾರವೆಂದು, ಆ ಮಹನೀಯನೇ ಪುನಃ ಪುನಃ ಜನ್ಮತಾಳುವ ಗತಿಯನ್ನು ನಿವಾರಿಸುವ ತಾರಕನೆಂದು ಶಾಶ್ವತನಾದ ಶಿವಯೋಗದ ವಿಲಾಸವನ್ನು

ಕರುಣಿಸುವ ಚಿದಾನಂದ ಮೂರ್ತಿಯೆಂದು ಪರಿಭಾವಿಸಿ ಮನದಲ್ಲಿ ಮನನಮಾಡಿ ಜಗತ್ತಿನಲ್ಲಿರುವ ಸರ್ವತೀರ್ಥಗಳೆಲ್ಲ ಶ್ರೀ ಜಂಗಮದ ಪಾದದಲ್ಲಿಯೆ ಅಡಕವಾಗಿವೆ ಎಂದು ನಿರ್ಧರಿಸಿ, ಸರ್ವಪುಣ್ಯಕ್ಷೇತ್ರಗಳು ಆ ಮಹಿಮನಲ್ಲಿಯೆ ಬೆರತಿರುವವೆಂದು ತಿಳಿದು ಪ್ರತಿದಿವಸವೂ ತಪ್ಪದೆ ಪರಮಭಕ್ತಿಯಿಂದ ಜಂಗಮನನ್ನು ಕರೆತಂದು ವಿಧ್ಯುಕ್ತವಾಗಿ ಪೂಜಿಸಿ ಪಾದೋದಕ ಪ್ರಸಾದಗಳನ್ನು ಪ್ರೀತಿಯಿಂದ ಸೇವಿಸಿ ಕೃತಾರ್ಥನಾಗುತ್ತಿದ್ದನು. ಈ ರೀತಿಯಾಗಿ ಕೆಲವು ಸಂವತ್ಸರಗಳಾಗಲು ನಮ್ಮ ಕಥಾನಾಯಕನ ಪುಣ್ಯ ಸಂಗ್ರಹವು ಹೆಚ್ಚೆಚ್ಚಾಗತೊಡಗಲು ಪಕ್ಷಪಾತಿಯಾದ ಸರ್ವಕರ್ತೃತ್ವ ಶಕ್ತಿಯುಳ್ಳ ಸರ್ವಜ್ಞ ಮೂರ್ತಿಯಾದ ಗಿರಿಜಾಪತಿಗೆ ಸಂತೋಷ ವಾಗಿ ನಮ್ಮ ಚರಿತ್ರ ಪುರುಷನ ಸದ್ಭಕ್ತಿಯನ್ನು ಪರೀಕ್ಷಿಸಬೇಕೆಂದು ಆತನಿಗೆ ಜಂಗಮನು ದೊರೆಯದಂತೆ ಮಾಡಿದನು.

ಆಗಲಾ ನಮ್ಮ ಚರಿತ್ರನಾಯಕನು ಹಾ ಜಂಗಮವೇ, ಮತ್ಪ್ರಾಣ ಪ್ರಿಯನೇ, ಶಿವಧರ್ಮ ಸೌಭಾಗ್ಯದಖಣಿಯೇ, ಹಾ ಸಂಸಾರ ಪಾಶವನ್ನು ಹರಿ ಯುವ ವಿಚ್ಛೇದಕನೇ, ಪರಶಿವನು ಮಾನವಾಕಾರವನ್ನು ತಾಳಿದ ವಿಭೂತಿಯೇ ಎಂದು ಪರಿಪರಿಯಿಂದ ಹಂಬಲಿಸಿ ಪರಿತಾಪಗೊಂಡು ಜಂಗಮನನ್ನು ಹುಡು ಕುತ್ತ ದೊರೆಯದಿರಲು ೩೮ ದಿನಗಳವರೆಗೆ ಅನ್ನೋದಕಗಳನ್ನು ತೊರೆದು ಎಳ್ಳ ಷ್ಟಾದರೂ ಆಹಾರದಪರಿವೆ ಇಲ್ಲದೆ ಜಂಗಮನಲ್ಲಿಯೆ ಲೀನಮನಸ್ಕನಾಗಿ ಜಂ ಗಮ ವಿರಹದಿಂದುಂಟಾದ ದುಃಖಾತಿಶಯಕ್ಕೆ ನೊಂದು ಬೆಂದು ತನ್ನ ಪ್ರಾಣ ವನ್ನೆ ಪ್ರಮಥಾಧಿಪತಿಯಾದ ಶಿವನಿಗೆ ಅರ್ಪಿಸುವೆನೆಂದು ಉದ್ಯುಕ್ತನಾಗಿರುವ ಸಮಯದಲ್ಲಿ ಶರಣಸಹಾಯಕಳಾದ ಭವಾನಿಯು ತನ್ನ ಮಾಂಗಲ್ಯಕ್ಕೆ ಕಾರಣ ನಾದ ಸೋಮಸೂರ್ಯಾಗ್ನಿಲೋಚನನನ್ನು ಕುರಿತು, ಯೋಗಿಕುಲದೀಪ ಕನೇ, ಭಕ್ತವತ್ಸಲನೆಂಬ ಬಿರುದನ್ನು ತಾಳಿರುವ ಶಂಕರನೇ ಅತ್ಯುಗ್ರ ಜಂಗಮ ಭಕ್ತಿಯುತನಾದ ಚಿರುಪುಲಿಯಾಂಡರು ನಿನಗಾಗಿ ಪ್ರಾಣಕೊಡುವುದು. ನಿನಗೆ ಸಮ್ಮತವೊ ಇನ್ನೂ ಆ ವರಭಕ್ತನನ್ನು ಪರೀಕ್ಷಿಸುವುದು ತೃಪ್ತಿಯಾಗಲೊಲ್ಲದೋ ಎಂದು ಬಿನ್ನವಿಸಿದಳು. ಆಗ ಭಕ್ತಪ್ರೇಮಿಯಾದ ಮನ್ಮಥಧ್ವಂಸಿಯು ತ್ರಿಪುಂ ಡ್ರಭಸಿತನಾಗಿ, ರುದ್ರಾಕ್ಷಮಾಲೆಗಳಿಂದ ಭೂಷಿತನಾಗಿ, ಕೆಂಜೆಡೆಯಿಂದೊಪ್ಪುತ್ತ ಜಂಗಮಾಕೃತಿಯಿಂದ ಆ ಅಪ್ರತಿಮ ಜಂಗಮಭಕ್ತ ನೆಡೆಯಲ್ಲಿ ಪ್ರಾಪ್ತನಾದನು. ಆ ಸಮಯದಲ್ಲಿ ನಮ್ಮ ಕಥಾನಾಯಕನಿಗೆ ಕಡುದರಿದ್ರನಿಗೆ ನಿಧಿಕಂಡಂತಾಗಿ, ಹುಟ್ಟು ಕುರುಡನಿಗೆ ಕಣ್ಣುಗಳುಂಟಾದಂತಾಗಿ ಆ ಮಹಾ ಘನಪಾದವನ್ನು ಅತಿ ಹರ್ಷಿತನಾಗಿ ಮನದಣಿಯುವಂತೆ ಕೊಂಡಾಡಿ ನೈಸರ್ಗಿಕವಾದ, ನಿರ್ಮಲವಾದ ಪ್ರೇಮದಿಂದ ಪೂಜಿಸಿ ಪುಣ್ಯಪ್ರದವಾದ ಭವಮಾಲೆಯನ್ನು ದಾಂಟಿಸುವ ಚರ ಲಿಂಗಪಾದೋದಕವನ್ನು ಆಗತಾನೆ ಹುಟ್ಟಿದ ಕೂಸು ಮಧುವನ್ನು ಸೇವಿಸುವ

ಪರಿಯಂತೆ ಅಮೃತ ರಸವೇ ಅಮೃತವೇ ಎಂದು ಅಸಮ ಭಕ್ತಿಯಿಂದ ಸೇವಿಸಿದನು. ಆಗ ಚರಲಿಂಗರೂಪಿಯಾದ ಶಂಕರನು ಪ್ರತ್ಯಕ್ಷನಾಗಲು ಚಿರಪುಲಿಯಾಂಡರು ಸಾನಂದ ಭಯಚಕಿತರಾಗಿ, ನಿಬ್ಬೆರಗಾಗಿ, ಹರ್ಷದ ಅತಿರೇಕದಿಂದ ಉಂಟಾದ ಅಶ್ರುಗಳಿಂದ ಹರಿವಿರಂಚಿಗಳಿಂದ ಪೂಜಿಸಲ್ಪಟ್ಟ ದಿವ್ಯಪಾದಗಳನ್ನು ಅಭಿಷೇಚಿಸಿದರು. ಪರಮಾತ್ಮನು ಈತನ ಶ್ರೇಷ್ಠವಾದ ಜಂಗಮ ಭಕ್ತಿಗೊಲಿದು ಮಹೋನ್ನತವಾದ ಗಣಪದವಿಯನ್ನು ದಯಪಾಲಿಸಿ, ದಿವ್ಯವಿಮಾನವನ್ನು ಅನುಗ್ರಹಿಸಿ, ಪ್ರಮಥರು ನಿನ್ನನ್ನು ಕಾಣಲು ಕುತೂಹಲಪಡುವರು ನಡೆ ಕೈಲಾಸಕ್ಕೆ ತೆರಳು ಎಂದು ಯೋಗಿಜನ ವಂದ್ಯನಾದ ಭರ್ಗನು ಅಪ್ಪಣೆ ಮಾಡಿ ಅಂತರ್ಧಾನನಾದನು.

ಪ್ರಾಣಿಗಳ ಮೇಲೆ ಅವ್ಯಾಜ ಪ್ರೇಮವನ್ನು ತಳೆದಿರುವ ಶಿವಯೋಗಿಗಳ ಪಾದಾರವಿಂದಕ್ಕೆ ಆರಡಿಯಾಗಿ, ಶಿವ ಪ್ರಬಂಧಗಳನ್ನು ಆದರಿಸುವ ಮಹಾಶಯರ ಶುಭವನ್ನು ಕೋರಿ ಲೇಖಕನು ದಯಾಮಯನಾದ ಜಗತ್ಪತಿಯನ್ನು ಪ್ರಾರ್ಥಿಸುವನು.

ಓಂ.

# ೧೧. ಸೋಮಾಸಿಮಾರರು.

ವಾಸವಾದಿಗಳರಿಯದೀಶನಂ ನಿಜಯಾಗ ।
ವಾಸಕ್ಕೆ ಬರಿಸಿಧರೆಗೆ ತೋರಿಸಿದ ಸೋಮಾಸಿಮಾರರನೆ ಬಲಗೊಂಬೆ ॥

[ಶ್ರೀ ನಿಜಗುಣ ಶಿವಯೋಗಿ

ಶ್ರೀ ವಾಧ್ಯಯನ ಸಂಪನ್ನನು, ಸುವಿವೇಕಿಯು, ಆರೋಗ್ಯಕಾಯನು ಆದ **ಸೋಮಾಸಿಮಾರರು** ಎಂಬ ದ್ವಿಜೋತ್ತಮನು ತಿರುವಂಬರ ಎಂಬ ಗ್ರಾಮದಲ್ಲಿ ಶೋಭಿಸುತ್ತಿದ್ದನು. ಶುಚಿರ್ಭೂತರಾದ ಭೂಸುರ ದಂಪತಿಗಳ ಸಾಮರಸ್ಯದಿಂದಲೇ ಜನಿಸಿದವನಾದುದರಿಂದ ಈತನಿಗೆ ಶಿವಭಕ್ತರಲ್ಲಿ ಪ್ರೇಮವು ಈಶ್ವರನಲ್ಲಿ ನಿಷ್ಕಲಂಕವಾದ ಭಕ್ತಿಯು ಸೊಗಸಾಗಿ ಅಳವಟ್ಟಿತ್ತು. ಸದಾಚಾರ ಪರಾಯಣರಾದ ತಾಯಿತಂದೆಗಳ ಒಡನಾಟದಿಂದ ನಮ್ಮ

ಕಥಾನಾಯಕನಿಗೆ ವಿಭೂತಿಯಲ್ಲಿ ಪರಮ ವಿಶ್ವಾಸವು, (ತ್ರಿಪುರ ದಹನಕಾಲಕ್ಕೆ ಪರಶಿವಾಕ್ಷಿಗಳ ಹನಿಯಿಂದ ಉದಯಿಸಿದ ಪವಿತ್ರ) ರುದ್ರಾಕ್ಷಗಳಲ್ಲಿ ಅತಿಶಯವಾದ ಶ್ರದ್ಧೆಯು, ಶರಣರಲ್ಲಿ ಆದರವು ಚಿಕ್ಕಂದಿನಲ್ಲಿಯೇ ಇರುವದನ್ನು ಕಂಡು ಬಂಧು ಬಾಂಧವರು ಚಕಿತರಾಗುತ್ತಿದ್ದರು. ಪೂಜ್ಯನಾದ ಆತನ ಜನಕನು ಮಗನಿಗೆ ಬಾಲ್ಯದಲ್ಲಿಯೆ ರುದ್ರಾಕ್ಷಿಗಳನ್ನು ಧರಿಸುವ ಕ್ರಮವನ್ನು ತಿಳಿಸಿದ್ಧನು.

ಒಂದು ಮುಖದ ರುದ್ರಾಕ್ಷೆಯೊಂದನ್ನು ಶಿಖೆಯಲ್ಲಿ; ಎರಡು, ಮೂರು ಮತ್ತು ಹನ್ನೆರಡುಮುಖದ ಮೂರು ರುದ್ರಾಕ್ಷಿಗಳನ್ನು ಒಂದೊಂದರಂತೆ ಶಿರಸ್ಸಿನಲ್ಲಿ ಹನ್ನೊಂದುಮುಖದ ೩೬ ರುದ್ರಾಕ್ಷಿಗಳನ್ನು ತಲೆಯಸುತ್ತಲೂ: ಹತ್ತು ಮುಖದವೆರಡು ಏಳುಮುಖದವೆರಡು, ಐದುಮುಖದವೆರಡು ಈ ಪ್ರಕಾರ ೬ ರುದ್ರಾಕ್ಷಿಗಳನ್ನು ಎರಡುಕಿವಿಗಳಲ್ಲಿ, ಅರು ಮುಖದ ೧೬ ರುದ್ರಾಕ್ಷಿಗಳನ್ನು ಮತ್ತು ಎಂಟು ಮುಖದ ೧೬ ರುದ್ರಾಕ್ಷಿಗಳನ್ನು ಕಂಠದಲ್ಲಿ ನಾಲ್ಕು ಮುಖದ ೫೦ ರುದ್ರಾಕ್ಷಿಗಳನ್ನು ಹೃದಯದಲ್ಲಿ ೧೩ ಮುಖದ ೧೬ ರುದ್ರಾಕ್ಷಿಗಳನ್ನು ಎರಡು ಬಾಹುಗಳಲ್ಲಿ ಒಂಭತ್ತು ಮುಖದ ೧೨ ರುದ್ರಾಕ್ಷಿಗಳನ್ನು ಎರಡು ಮುಂಗೈಗಳಲ್ಲಿ ಈ ಪ್ರಕಾರ ಧರಿಸಬೇಕು. ಹದಿನಾಲ್ಕು ಮುಖದ ೧೦೮ ರುದ್ರಾಕ್ಷಿಗಳ ಮಾಲೆಯನ್ನು ಯಜ್ಞೋಪವೀತವಾಗಿ ಧರಿಸತಕ್ಕದ್ದು.

ನಮ್ಮ ಚರಿತ್ರನಾಯಕನು ಸಧನರ ಮನೆಯಲ್ಲಿ ಜನ್ಮತಾಳಿದ್ದರಿಂದ ಉದರ ಪೋಷಣೆಗಾಗಿ ಶ್ರಮಪಡಬೇಕಾಗಿರಲಿಲ್ಲ. ಆದುದರಿಂದ ಯಾವದಾದರೊಂದು ಕಾಯಕವನ್ನು ಮಾಡದೆ ಇರಬಾರದೆಂದು ಗ್ರಹಿಸಿ ದಿನಾಲು ಶರಣರಿಗೆ ಪತ್ರಪುಷ್ಪಾದಿಗಳನ್ನು ತಂದುಕೊಡುವ ಕಾರ್ಯವನ್ನು ಕೈಗೊಂಡು ಶಿವ ಮಂತ್ರರತನಾಗಿ ಕಾಲ ಕಳೆಯುತ್ತಿದ್ದನು.

ನಮ್ಮ ಚರಿತ್ರಪುರುಷನು ಇರುವ ಊರಿನಿಂದಾ ಒಂದು ಯೋಜನದೂರದಲ್ಲಿರುವ **ತಿರುವಾರೂರ** ಎಂಬ ಪಟ್ಟಣದಲ್ಲಿ **ಯಸ್ಮಜ್ಞಾನದೇವಿ** ಮತ್ತು **ಜಡಿಯನಯಿನಾರು** ಇವರಿಗೆ ಮಗನಾದ ನರಪುಂಗವನಾದ **ಸೌಂದರನಂಬಿಗೆ** ಆತನ ಅಸದೃಶನಾದ ಶಿವಭಕ್ತಿಮೂಲಕವಾಗಿ **ಪರಮೇಶ್ವರನು** ಆತನ ಛಾಯಾನುವರ್ತಿಯಾಗಿ ಸಕಲ ಬಯಕೆಗಳನ್ನು **ಈಡೇರಿಸುವದನ್ನು** ನಮ್ಮ ಚರಿತ್ರನಾಯಕನು ತನ್ನ ಈಶ್ವರಭಕ್ತಿ ಪ್ರಭಾವದಿಂದ ತಿಳಿದಿದ್ದನು. ಸಮಂತ್ರಕವಾಗಿ ವಿಭೂತಿ ರುದ್ರಾಕ್ಷಿಗಳನ್ನು ನಿತ್ಯದಲ್ಲಿಯೂ ಧಾರಣಮಾಡುವದರ ಫಲದಿಂದ **ಸೋಮಾಸಿಮಾರರಿಗೆ** ಶಿವಯಾಗವನ್ನು ಮಾಡಬೇಕೆಂತಲೂ ಮತ್ತು ಆ ಯಾಗಕ್ಕೆ ಪನ್ನಗಾಭರಣನಾದ, ಪ್ರಾಣಿಗಳ ದುಃಖವನ್ನು ಹೋಗಲಾಡಿಸುವದರಿಂದ ಶರ್ವನೆಂದು ಖ್ಯಾತಿಗೊಂಡಿರುವ, 'ಪರಶಿವನನ್ನೆ ಪಾದಪೂಜೆಗಾಗಿ ಕರಿಸಬೇಕೆಂಬ ಬಲವ

ತ್ತರವಾದ, ಸ್ತುತ್ಯವಾದ ಅಭಿಲಾಷೆಯು ಆಯಿತು ತನ್ನ ಶ್ಲಾಘನೀಯವಾದ ಅಪೇಕ್ಷೆಯು ಸಫಲವಾಗಬೇಕೆಂದು **ಸೌಂದರನಂಬಿಯ** ಪ್ರೀತಿಪಾತ್ರಳಾದ **ಪರ ವಿನಾಚಿಗೆ** ಅನೇಕ ಮಾಸಗಳಿಂದಲೂ ರಮಣೀಯವಾದ ಹೂವುಗಳನ್ನು ತಂದು ಕೊಡುತ್ತಿದ್ದನು. ಒಂದುದಿನ ತನ್ನ ಪ್ರಿಯಳಾದ **ಪರವಿನಾಚಿಗೆ** ನಮ್ಮ ಚರಿತ್ರ ಪುರುಷನು ಪರಿಮಳಿಸುವ ಚಂಗಣಿಗಲೆ ಮತ್ತು ಇರುವಂತಿಕೆ ಮುಂತಾದ ಮ ನೋಹರವಾದ ಪುಷ್ಪಗಳನ್ನು ಭಕ್ತಿಯಿಂದ ತಂದುಕೊಟ್ಟು ಬಹು ವಿನಯದಿಂದ ನಿಂತಿರುವದನ್ನು ಸೌಂದರನಂಬಿಯು ನೋಡಿ ಇವರಾರು ಎಂದು ತನ್ನ ಮನೋ ರಮೆಗೆ ಕೇಳಿದನು.

**ಪರವಿನಾಚಿಯು :—** ದೇವಾ ಈತನು ನಿಮ್ಮ ಸೇವೆಗೆ ೩ವರುಷಗಳಿಂದ ಲೂ ದಿನಾಲು ತಪ್ಪದೆ ಸುಗಂಧಮಯವಾದ ಕುಸುಮಗಳನ್ನು ತಂದು ಕೊಡುತ್ತಿ ರುವನು. ಇದನ್ನು ಸೌಂದರನು ಕೇಳಿದೊಡನೆ ಬಹು ಸಂತೋಷಪಟ್ಟು ೪ ಸಾ ವಿರ ಹೊನ್ನುಗಳನ್ನು ಈತನಿಗೆ ಕೊಡು ಎಂದು ತನ್ನ ಪರಿಚಾರಕನಿಗೆ ಹೇಳಲು ಆಗ ಕಥಾನಾಯಕನು:—ನಾನು ನಿಮ್ಮ ತೊತ್ತಿನ ತೊತ್ತು ನನ್ನ ಹೆಸರು **ಸೋ ಮಾಸಿಮಾರನು** ನನಗೆ ಹೊನ್ನಿನ ಅಪೇಕ್ಷೆ ಇಲ್ಲಾ, ಅದರ ಪ್ರತಿಯಾಗಿ ನಾನು ಮಾಡುವ ಯಾಗಕ್ಕೆ ಪಾದಪೂಜಾರ್ಥವಾಗಿ ಯಜ್ಞನಾಥನಾದ ವಿಶ್ವಪತಿಯಾದ ಸೋಮನಾಥನನ್ನು ಬಿಜಯಂಗೈಸಿಕೊಡುವುದೆಂದು ವಿನಯದಿಂದ ವಿಜ್ಞಾಪಿಸಿ ದನು. ಅದಕ್ಕೆ ಸೌಂದರನಂಬಿಯು ಒಪ್ಪಿಕೊಂಡು **ತಿರುವಾರೂರೇಶ್ವರನ** ಸನ್ನಿಧಿಗೆ ಬಂದು ಶಂಕರನೇ ತಿರುವಂಬರವೆಂಬ ಪುರದಲ್ಲಿ **ಸೋಮಾಸಿಮಾರನು** ಯಾಗವನ್ನು ಮಾಡುವನು; ಅಲ್ಲಿಗೆ ನೀನು ಹೋಗಿ ಪೂಜೆಯನ್ನು ಕೈಕೊಳ್ಳ ಬೇಕೆಂದು ಪ್ರಾರ್ಥಿಸಿದನು. ಭಕ್ತರ ಪ್ರೇಮಪಾಶಕ್ಕೆ ಒಳಗಾದ ನಾಗಭೂಷಣ ನಾದ ಮಾರಾರಿಯು ನಿರುಪಾಯನಾಗಿ ಸೌಂದರನ ಬಿನ್ನಹವನ್ನು ಒಪ್ಪಿ ಕೊಂಡನು.

ಇತ್ತ ಕಥಾನಾಯಕನು ಕಡು ಸಂಭ್ರಮದಿಂದ ವಿಧ್ಯುಕ್ತವಾಗಿ ಯಾಗ ವನ್ನು ತಯಾರಿಸಿ ಯಾಗ ಮಂಟಪವನ್ನು ಅಂದವಾಗಿ ಶೃಂಗರಿಸಿ ಸರಳವಾದ ಭಕ್ತಿಯಿಂದ ಮಹಾ ಪಾದದ ಆಗಮನವನ್ನೇ ನಿರೀಕ್ಷಿಸುತ್ತ ಅನನ್ಯನಾಗಿ ಪರ ಮಾತ್ಮನನ್ನೆ ಹಂಬಲಿಸುತ್ತಿರುವಾಗ ಕುಹಕ ವೇಷವನ್ನು ಧರಿಸಿ ಗಿರಿಜಾಪತಿಯು ಅಲ್ಲಿಗೆ ಬರಲು ಉದ್ಯುಕ್ತನಾದನು ಆ ಮಖಮಂಟಪದ ಮುಂಭಾಗದ ಮಹಾ ದ್ವಾರ ಸಮೀಪಕ್ಕೆ **ಶ್ರೀ ಭವಾನೀಪತಿಯು** ಹೊಲೆಯನ ವೇಷವನ್ನು ತಾಳಿ ತಲೆಗೆ ಮಿಣಿಯನ್ನೆ ಸುತ್ತಿ ಕೈಯಲ್ಲಿ ಸಂಬಳಗೋಲನ್ನು ಪಿಡಿದು ಸಂಬೊ, ಸಂಬೋಳಿಯಂದೊರಲುತ್ತ ಬರುವ ಧ್ವನಿಯನ್ನು ಕೇಳಿ (ತಾನು ಆಚರಿಸಿದ ಪುಣ್ಯದ ಫಲದ ನಿದರ್ಶನವೋ ಎಂಬಂತೆ) ಇವನೇ ಶಂಕರನು ನನ್ನ ಮನವನ್ನು

ಪರೀಕ್ಷೆ ಮಾಡಲಿಕ್ಕೆ ಕಪಟರೂಪದಿಂದ ಬಂದಿರುವನೆಂದು ಧೃಢವಾಗಿ ನಿರ್ಧರಿಸಿ ತ್ವರೆಯಿಂದ ಆತನ ಬಳಿಗೆ ಹೋಗಿ ಅವನ ಪವಿತ್ರ ಚರಣಗಳನ್ನು ಹಿಡಿಯಲೋಸುಗ ಹತ್ತಿರದಲ್ಲಿ ಬರುವುದನ್ನು ಗೌರೀರಮಣನು ಕಂಡು; ಅಕಟಕಟಾ! ನಾನು ಹೊಲೆಯನು, ಅಸ್ಪೃಶ್ಯನು? ನೀನು ದೂರ ಸರಿ ಆಚೆಗೆ ನಿಲ್ಲು ಮುಟ್ಟಬೇಡಾ ಎಂದು ಹೇಳಿದನು. ಆಗ ಅವನ ಮಾತಿಗೆ ಈ ಭಕ್ತನು ಲಕ್ಷಗೊಡದೆ ಚಂಡಾಲರೂಪದಿಂದ ಬಂದಿರುವ ಗಿರೀಶನ ಅಡಿಗಳನ್ನು ಬಲಾತ್ಕಾರದಿಂದ ಹಿಡಿದು ಪಾದಕ್ಕೆರಗಿ ನಿಮ್ಮ ನಿಜವನ್ನು ನಾನು ಬಲ್ಲೆ ನನಗೆ ಕೃಪೆಮಾಡಿರಿ. ಯಾಗಶಾಲೆಗೆ ನಡೆಯಿರಿ ಎಂದು ಬಲವಂತದಿಂದ ಪೂಜಾಮಂಟಪಕ್ಕೆ ಕರತಂದನು. ಆಗ ಯಜ್ಞಕ್ಕಾಗಿ ಆಹೂತರಾಗಿ ಅಲ್ಲಿ ನೆರೆದ ಎಲ್ಲಾ ವಿಪ್ರರು ಇದೆಲ್ಲವನ್ನು ನೋಡಿ ಕಿವಿ ಮುಚ್ಚಿಕೊಂಡು ಅಯ್ಯೋ ಯಾಗಶಾಲೆಯು ಹೊಲೆಗಲಿಸಿತು, ನಾವು ಇನ್ನು ಇಲ್ಲಿ ಇರಕೂಡದೆಂದು ಎಲ್ಲರೂ ಹೊರಟುಹೋದರು. ಇದನ್ನು ನಮ್ಮ ಪುಣ್ಯಶ್ಲೋಕನಾದ ಚರಿತ್ರಪುರುಷನು ಗಣನೆಗೆ ತಾರದೆ ಕೃತ್ರಿಮ ತೆರದಿಂದ ಬಂದ ಜಗದೀಶನನ್ನು ವಿಧ್ಯುಕ್ತವಾಗಿ ಮನದಣಿಯುವಂತೆ ಸಂತೋಷಾತಿಶಯದಿಂದ ಭಕ್ತಿಪೂರ್ವಕವಾಗಿ ಪೂಜಿಸಿ ಪಾದತೀರ್ಥವನ್ನು ಸ್ವೀಕರಿಸಿ ಆತನ ಅನಂತನಾಮಗಳ ಸಂಕೀರ್ತನ ಮಾಡುತ್ತ ಆ ಮಹಿಮನನ್ನು ಕೊಂಡಾಡಿದನು ಆಗ ಕಾತ್ಯಾಯನೀಪತಿಯು ಸೋಮಾಸಿಮಾರರ ಉತ್ತಮಭಕ್ತಿಗೂ ನಿಷ್ಕಪಟದ ನಿಷ್ಠೆಗೂ ಬಹಳ ಸಂತೋಷಪಟ್ಟು ತಾನು ತಳೆದಿರುವ ಕುಟಿಲರೂಪವನ್ನು ದೂರಮಾಡಿ ತನ್ನ ನಿಜರೂಪದಿಂದ ವಿರಾಜಿಸಲು ನಮ್ಮ ನರಪುಂಗವರು ಹರ್ಷಪಟ್ಟು ಮಹಾ ಸ್ವಾಮಿಯನ್ನು ಸ್ತುತಿಸುತ್ತ ಪುನಃ ಪುನಃ ನಮಸ್ಕರಿಸುವುದನ್ನು ಕಂಡು ದಯಾನಿಧಿಯಾದ ಶಶಿಶೇಖರನು ಆ ಯಾಗಶಾಲೆಯನ್ನೇ ಪುಷ್ಪಕ ವಿಮಾನವನ್ನಾಗಿ ಮಾಡಿ ಆ ವರಭಕ್ತನನ್ನು ಅದರಲ್ಲಿ ಕುಳ್ಳಿರಿಸಿ ಅವನಿಗೆ ಶ್ರೇಷ್ಠವಾದ ಗಣಪದವಿಯನ್ನು ಅನುಗ್ರಹಿಸಿ ಮದನಾರಿಯು ಇಚ್ಛಾನುಸಾರವಾಗಿ ದಯಮಾಡಿದನು.

ರಾಜಸ ತಾಮಸಗುಣಗಳನ್ನಳಿದು ಸತ್ವಶಾಲಿಗಳಾದ, ಸಕಲ ಶಿವಗಣ ಸಮೂಹಕ್ಕೆ ಮನವಾರೆತಲೆವಾಗಿ ಯಾವ ಮಾನವ ಪುಂಗವರ ಹೃತ್ಕಮಲವು ಅನುಪಮ ಆನಂದದ ಆಗರವಾದ ನೀಲಲೋಹಿತನ ಆ ವಾಸಸ್ಥಾನವಾಗಿದೆಯೋ ಅಂಥ ಗುಣಾಢ್ಯರಿಗೆ ಸ್ತ್ರೀಪುರುಷರೆಂಬ ಭೇದವನ್ನೆಣಿಸದೆ ಪ್ರೇಮದಿಂದ ಅಭಿನಂದಿಸಿ ಅವರಿಗೆ ಲೇಖಕನು ಧನ್ಯವಾದವನ್ನು ನೀಡುವನು.

---

ಓಂ.

# ೧೨. ಅಚ್ಯುತರು.

ಜಗವರಿಯೆ ಜೂಜಿನಿಂದೊಗೆದರ್ಥವನೆ ಶರಣ ।
ರುಗಳಿಗಿತ್ತ ಭವನೊಡನಾಡಿಗೆಲೆದೊಸೆಗೆ । ಮಿಗೆಯಚ್ಯುತರ್ಗೆ ಶಿಶುಪಾನು॥
[ಶ್ರೀ ನಿಜಗುಣರು]



ಲ್ಯಾಣನಿಧಿಯಾದುದರಿಂದಲೇ ನಾಶರಹಿತನಾದ, ಸಕಲ ಬ್ರಹ್ಮಾಂಡನಾಯಕನಾದ, ಪರಮೇಶ್ವರನ ಪವಿತ್ರನಾಮವಾದ ಅಚ್ಯುತನೆಂಬ ಹೆಸರಿನಿಂದೊಪ್ಪುವ ಶಿವಭಕ್ತಾಗ್ರಗಣಿಯು ನಂದಿವಾಹನನೂ, ಭಸ್ಮಪ್ರಿಯನೂ ಆದ ಶಂಕರನ ನಿಲಯದಂತೆ ಕಂಗೊಳಿಸುವ ಪ್ರಖ್ಯಾತವಾದ ಚೋಳಮಂಡಲದಲ್ಲಿರುವ ಶಿವೋಪಾಸಕರ ತವರ್ಮನೆಯಂತಿರುವ ತಿರುಚೆನ್ನಾಡೆಂಬ ಪಟ್ಟಣದಲ್ಲಿ ವಿಶಾಲವಾದ ಸರೋವರದಲ್ಲಿ ಕೆಂದಾವರೆ, ಹೊಂದಾವರೆ, ಕನ್ನೈದಿಲೆ, ಬೆಳ್ದಾವರೆ ಮುಂತಾದ ಮನೋಹರವಾದ ಕಮಲಗಳು ಶೋಭಿಸುವಂತೆ ದಾನ ಶೂರನಾಗಿ ಬಹು ಕೀರ್ತಿಯನ್ನು ಹೊಂದಿ ಶಿವಭಕ್ತಿ ಸಾಮ್ರಾಜ್ಯ ಧುರಂಧರನಾಗಿ ಸುಜನರ ಮೋಹದ ಪುತ್ಥಳಿಯಂತೆ ಮೆರೆಯುತ್ತಿದ್ದನು.

ನಮ್ಮ ಕಥಾನಾಯಕನ ಮಾತಾಪಿತರು ಸದ್ಗುರುವನ್ನಾಶ್ರಯಿಸಿ ಆತನ ನೀತಿಮಯವಾದ ಸದುಪದೇಶದಿಂದ ಸತ್ಕೃತಿಪರರಾಗಿ ಸದಾಚಾರದ ಫಲರೂಪವಾಗಿ ಪ್ರಕಾಶಮಯವಾದ ಪುತ್ರರತ್ನವನ್ನು ಪಡೆದು ತಮ್ಮ ನಿಜಗುರುಗಳ ಅಪ್ಪಣೆಯ ಪ್ರಕಾರ ಮಗನಿಗೆ ಅಚ್ಯುತನೆಂಬ ಅಭಿದಾನವನ್ನು ಶುಭಮುಹೂರ್ತದಲ್ಲಿ ಸುಮಂಗಲೆಯರಿಂದ ಮಾಹೇಶ್ವರರ ಸಾಕ್ಷಿಯಾಗಿ ಇಡಿಸಿ ಸಂತೋಷದಿಂದ ಕಾಲ ಕಳೆಯುತ್ತಿರಲು ತಮ್ಮ ಸುಕುಮಾರನಿಗೆ ೫ನೆಯ ವರ್ಷವು ಪ್ರಾಪ್ತವಾಗಲು ತಮ್ಮ ಶ್ರೇಯಸ್ಸಿಗೆ ಕಾರಣವಾದ ಶ್ರೀ ಶಿವಯೋಗಿಗಳವರ ಮಠಕ್ಕೆ ಗುರುಕುಲ ವಾಸದಿಂದ ಹಸುಳನು ಕೃತಕೃತ್ಯನಾಗಲೆಂದು ಪ್ರೀತಿಪುರಸ್ಸರವಾಗಿ ಒಪ್ಪಿಸಿದರು. ಶಿವಯೋಗಿಗಳಿಗೆ ಶ್ರೀ ಎಂಬ ಮಹತ್ತರವಾದ ಘನವಾದ ಒಕ್ಕಣಿಕೆಯನ್ನು ಜೋಡಿಸಿರುತ್ತದಷ್ಟೆ; ಶ್ರೀ ಇದರ ಅರ್ಥವನ್ನು ಟಿಪ್ಪಣಿಕಾರರು ಷಡ್ಗುಣೈಶ್ವರ್ಯ

ಸಂಪನ್ನರಾದ ಹೀಗೆ ಪ್ರತಿಪಾದಿಸುವುದು ಸರ್ವಶ್ರುತವು ಆದರೆ ಈ ವಿಷಯ ವಿವೇಚನೆಯನ್ನು ಸ್ವಲ್ಪವಾದರೂ ವಿಸ್ತರಿಸುವಾ :—ಸಪ್ತಷಟ್ಕಂಗಳಿಂದ ರಂಜಿತ ನಾದ ಸಮರ್ಥನಾದ ಮಾನವನೆಂದು ತಿಳಿಯುವುದು ಅದೆಂತೆಂದೆನೆ :—

(೧) ಸತ್ಯನಿಷ್ಠೆ, ಪ್ರಾಣಿದಯಾಪರತೆ, ಪ್ರಾಣಿ ಮಾತ್ರದಲ್ಲಿ ಸಮತಾ ದೃಷ್ಟಿ, ಕಾರ್ಯದಕ್ಷತೆ, ಕ್ಷಮೆ, ಮತ್ತು ಆತ್ಮೋದ್ಧಾರದ ಹವಣಿಕೆ.

(೨) ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಷಡ್ರಿಪು ಗಳಿಂದ ಅಲಿಪ್ತನಾಗುವಿಕೆ.

(೩) ಶಮೆ (ಅಂತಃಕರಣ ನಿಗ್ರಹ), ದಮೆ (ಬಹಿರಿಂದ್ರಿಯ ನಿಗ್ರಹ), ತಿತಿಕ್ಷೆ (ಕ್ರೋಧಾದಿ ವಿಕಾರಗಳನ್ನು ತಡೆಯುವದು), ಉಪರತಿ (ಸಕಲಕರ್ಮ ಪರಿತ್ಯಾಗ), ಶ್ರದ್ಧೆ (ಶಿವಾಗಮ-ಗುರು-ವಚನಗಳಲ್ಲಿ ನೈಸರ್ಗಿಕ ವಿಶ್ವಾಸ), ಸಮಾಧಿ (ಪುಣ್ಯಮೂರ್ತಿಯಾದ ಗುರುವರನ ಅಂದರೆ ಶಿವನೇ ಗುರುರೂಪನಾಗಿ ಅವತರಿಸಿರುವ ಮಹಿಮನ ಪವಿತ್ರೋಪದೇಶವು ಚಿತ್ತದಲ್ಲಿ ದೃಢಪಟ್ಟು ಅದನ್ನು ಕೃತಿಯಲ್ಲಿ ತರುವದು) ;

(೪) ಆಣವಮಲ, ಮಾಯಾಮಲ, ಕಾರ್ಮಿಕಮಲಗಳಿಂದ ವಿದೂರನಾಗಿ ಪುತ್ರೇಷಣ ದಾರೇಷಣ, ಅರ್ಥೇಷಣ ರಹಿತನಾಗುವಿಕೆ.

(೫) ಸ್ವಯ, ಚರ, ಪರಗಳನ್ನು ತಿಳಿದು ಮನೋವಾಕ್ಕಾಯಂಗಳಿದ ಬ್ರಹ್ಮ ಚಾರಿಯಾಗಿ, ದೀನ ಬಂಧುವಾಗಿ, ಜಗತ್ಕುಟುಂಬ ಭಾವನೆಯು ಕ್ಷಣ ಕ್ಷಣಕ್ಕೆ ಧೃಡವಾಗಿ ವರ್ಧಿಸುವುದು ; ಜಂಗಮವು ತಾನು ಸದ್ಭಕ್ತಿ ವಿಡಿಯಲ್ಕೆ ಸ್ವಯ । ಜಂಗಮವು ಭಕ್ತಿ ಸುಜ್ಞಾನ ವಿಡಿಯಲ್ಕೆ ಚರ । ಜಂಗಮವು ಸದ್ಭಕ್ತಿಸುಜ್ಞಾನ ವೈರಾಗ್ಯ ವಿಡಿಯಲ್ಕೆ ಪರಕೆಪರವು ॥

(೬) ಶಿವಭಕ್ತರು ಮನನಮಾಡಬೇಕಾಗಿರುವ ಏಕೋತ್ತರ ಶತಸ್ಥಲಗಳಲ್ಲಿ ಪ್ರಾಮುಖ್ಯವಾದ ಭಕ್ತ, ಮಹೇಶ, ಪ್ರಾಣಲಿಂಗ, ಪ್ರಸಾದಿ, ಶರಣ ಐಕ್ಯಸ್ಥಲ ಗಳನ್ನು ಚನ್ನಾಗಿ ತಿಳಿದುಕೊಂಡು ಸಹಜವಾದ ಪ್ರೇಮದಿಂದ ಅದರಂತೆ ಆಚರಿ ಸುವಿಕೆ.

(೭) ಆತ್ಮರತಿ, ಆತ್ಮಕ್ರೀಡೆ, ಆತ್ಮಮಿಥುನ, ಆತ್ಮಾನಂದ, ಆತ್ಮವಿಕಾಸ, ಆತ್ಮವಿಲಾಸದೊಡನೆ ನಲಿದಾಡುವಿರಾ.

ಇಂತಪ್ಪ ಶಿವಧರ್ಮರತಿಯಲ್ಲಿ ಸ್ವಚ್ಛಂದವಾಗಿ ವಿಹರಿಸುವ ಮಹನೀಯ ರಲ್ಲಿ ಓಂಕಾರಾದಿಯಾಗಿ ಸಮಸ್ತಶಿಕ್ಷಣವನ್ನು ಪಡೆದು ಯೋಗಿಗಳವರ ಕೃಪಾ ಪಾತ್ರನಾಗಿ, ವಿಶಾರದನಾಗಿ ಬಂದ ಸತ್ಪುತ್ರನನ್ನು ಕಂಡು ಪೂರ್ವೋಕ್ತಜನನೀ ಜನಕರ ಹರ್ಷಕ್ಕೆ ಎಣೆಯಿಲ್ಲದಂತಾಯಿತು.

ನಮ್ಮ ಕಥಾಪುರುಷನು ವರಗುರುಶುಷ್ರೂಷೆಯೊಡನೆ ಶಿವಾಧ್ಯಯನ ಸಂಪನ್ನನಾಗಿ ಮನೆಗೆ ಬಂದಬಳಿಕ ಸತ್ಕರ್ಮಗಳನ್ನಾಚರಿಸುತ್ತ ಗುರುಲಿಂಗ ಜಂಗಮ ಸೇವಾತತ್ಪರನಾಗಿ ಶಿವಭಕ್ತರು ಯಾವ ಮಹಾರ್ಘವಾದ ವಸ್ತುವನ್ನು ಬೇಡಿದರೂ ಸಂತೋಷದಿಂದ ಅವರಿಗೆ ಕೊಡುತ್ತ ಕೊಡಗೈ ದೊರೆಯಾಗಿದ್ದನು. ಶಿವಭಕ್ತರಿಗೆ ಅವರವರ ಇಚ್ಛೆಯಂತೆ ಅಗಣಿತ ದಾನಮಾಡುವದಕ್ಕೆ ಅನುಕೂಲವಾಗುವಂತೆ ಪಾಪಹರನಾದ ಹರಣ ಪ್ರಸಾದರೂಪವಾಗಿ ಆತನ ದ್ಯೂತ ವಿದ್ಯೆಯಲ್ಲಿ ಅಪ್ರತಿಮಪಾರಂಗತನಾಗಿದ್ದನು.

ಪೂರ್ವಕಾಲದಲ್ಲಿ ಪಾಂಡವರಾದಿಯಾಗಿ ಅನೇಕರು ಕೇವಲ ವಿನೋದಕ್ಕಾಗಿ ಜೂಜಾಡಿ ನಾನಾವಿಧವಾಗಿ ನಷ್ಟಹೊಂದಿದ ಸಂಗತಿಯು ಸುಪ್ರಸಿದ್ಧವಾಗಿರುವುದು. ಆದರೆ ನಮ್ಮ ಶಿವಶರಣರು ಯಾವ ಕಾರ್ಯವನ್ನು ಮಾಡಿದರೂ ಯಾವ ವಿನೋದಕ್ಕೆ ಮನವೆಳಿಸಿದರೂ, ಶಿವಾರ್ಪಣ ಬುದ್ಧಿಯಿಂದಲೇ ಆ, ಆ, ಕಾಯಕವನ್ನು ಮಾಡಿ ಅದರಿಂದಬರುವ ಧನವನ್ನು ಮತ್ತು ಆ ವಿನೋದಗಳಿಂದಾಗುವ ಆನಂದವನ್ನು ಶಿವಾರ್ಪಿತ ಮಾಡುವದಕ್ಕೆ ಮಗ್ನರಾಗಿರುವದರಿಂದ ಅವರ ಕೈಗೊಂಡ ಕಾರ್ಯವು ಏನಿದ್ದರೂ, ಸುಖಪ್ರದವಾಗಿಯೇಪರಣಮಿಸಿರುವದು.

ನಮ್ಮ ಚರಿತ್ರನಾಯಕನು ದಿನಾಲು ದ್ಯೂತಶಾಲೆಗೆ ಹೋಗಿ ಹೇರಳವಾಗಿ ಧನವನ್ನು ಸಂಪಾದಿಸಿ ಯಾವತ್ತು ಅತಿಥಿ ಅಭ್ಯಾಗತರಾದವರಿಗೂ ಇತರ ಶಿವಭಕ್ತರಿಗೂ ಅವರವರ ಇಷ್ಟದಂತೆ ಅನಂತಾನಂತ ಧನಕನಕ ವಸ್ತುವಾಹನಾದಿಗಳನ್ನು ಯಥೇಚ್ಛವಾಗಿ ಕೊಡುತ್ತ ಬಹು ಕೀರ್ತಿಯನ್ನು ಹೊಂದಿ ನಾಲ್ಕುಕಡೆಯಲ್ಲಿ ಬಹಳ ಹೆಸರಾಗಿದ್ದನು. ಈ ರೀತಿಯಾಗಿ ಸತ್ಕ್ರಿಯಾಚರಣೆಯೊಂದಿಗೆ ನಮ್ಮ ಶರಣನು ಕೆಲವು ಕಾಲ ಕಳೆಯಲು ಕಾಲಕ್ರಮದಿಂದ ಪುಣ್ಯಸಂಗ್ರಹವು ವಿಶೇಷವಾಗಲು ಅಪಾರಮಹಿಮನಾದ ನೀಲಗ್ರೀವನಿಗೆ ಇವನೊಡನೆ ದ್ಯೂತವಾಡಲಿಕ್ಕೆ ಬಯಕೆಯು ಉಂಟಾಯಿತು.

ಎಂದಿನಂತೆ ಒಂದುದಿನ ನಮ್ಮ ಶಿವಭಕ್ತ ಪುಂಗವನು ದ್ಯೂತಶಾಲೆಯಲ್ಲಿ ಸಂತೋಷಯುಕ್ತನಾಗಿ ಬಹು ಸಂಭ್ರಮದಿಂದಿರುತ್ತಿರುವ ಸಮಯದಲ್ಲಿ ದಾಕ್ಷಾಯಣೀಪತಿಯಾದ ವಿಶ್ವನಾಥನು ತನ್ನ ನಿಜರೂಪವನ್ನು ಬಚ್ಚಿಟ್ಟು ಅಮೋಘವಾದ ವಸ್ತ್ರಾಲಂಕಾರ ಭೂಷಿತನಾಗಿ ಸಿರಿಯ ಪತಿಯೋ, ಭೂಮಿಗೆ ಅವತರಿಸಿದ ಮನ್ಮಥನೋ ಎಂಬಂತೆ ಪರಮ ಸೌಂದರ್ಯದಿಂದ ಯುಕ್ತನಾಗಿ ದೊಡ್ಡ ವ್ಯಾಪಾರಿಯಂತೆ ನಟಿಸುತ್ತ ಆ ಜೂಜಾಡುವ ಸ್ಥಳಕ್ಕೆ ಹೋಗಿ ನಾನು ನಿಮ್ಮೊಡನೆ ದ್ಯೂತವಾಡುವದಕ್ಕೆ ಬರುತ್ತಲಿದ್ದೇನೆಂದು ಹೇಳಿದನು. ವಿಭೂತಿ ರುದ್ರಾಕ್ಷ ಮಾಲಾಭರಣಯುಕ್ತನಾಗಿ ಕಸ್ತೂರಿಯಿಂದ ವಿಭೂಷಿತನಾಗಿ ದಿವ್ಯತೇಜದಿಂದ

ಬರುವ ಅಪೂರ್ವ ಅತಿಥಿಯನ್ನು ನಮ್ಮ ಪುಣ್ಯಶ್ಲೋಕನಾದ ಅಚ್ಯುತನು ಕಂಡು ತಟ್ಟನೆ ಎದ್ದು ಭಕ್ತಿಭಾವದಿಂದ ನಾಲ್ಕು ಹೆಜ್ಜೆ ಮುಂದೆ ಹೋಗಿ ಸಾಷ್ಟಾಂಗವಾಗೆರಗಿ ಕೈಚಾಚಿ ಆ ನೂತನ ವ್ಯಾಪಾರಿಯ ಹಸ್ತವನ್ನು ಹಿಡಿದು ಉಚಿತಾಸನದಲ್ಲಿ ಕುಳ್ಳಿರಿಸಿ ಕುಶಲ ಪ್ರಶ್ನೆಯನ್ನು ಗೈದು ಮತ್ತೇನಪ್ಪಣೆ ಎಂದು ಕೇಳಲು ಆ ಕಪಟವೇಷಧಾರಿಯು ಅಚ್ಯುತನೇ! ನಿನ್ನೊಡನೆ ದ್ಯೂತವಾಡಿ ಗೆಲ್ಲಬೇಕೆಂದು ಬಂದಿರುವೆನು, ತಡವೇಕೆ ಹೀಗೆ ಹೇಳಿದನು. ಆಗ ನಮ್ಮ ಶಿವಭಕ್ತಲಲಾಮನು ನಾನು ತ್ರಿಪುರಾರಿಯ ಅನುಗ್ರಹದಿಂದ ಜೂಜಾಟದಲ್ಲಿ ಅದ್ವಿತೀಯನಾಗಿರುವೆನು; ಅಗಜೇಶನು ಬಂದು ನನ್ನೊಡನೆ ಆಡಿದರೂ ನನ್ನನ್ನು ಜಯಿಸಲಿಕ್ಕೆ ಆತನು ಅಸಮರ್ಥನು. ಈಗ ನಿನ್ನನ್ನು ಜೂಜಿನಲ್ಲಿ ಗೆದ್ದು ನಿನ್ನ ಸಮಸ್ತ ವಸ್ತ್ರಾಭರಣ ರತ್ನಾದಿಗಳನ್ನು ನಮ್ಮ ಶಿವಭಕ್ತರಿಗೆ ಯಥೇಚ್ಛವಾಗಿ ದಾನಮಾಡಿಬಿಡುವೆನು, ಹೀಗೆ ಅಂದನು. ಜೂಜಾಟವು ಶುರುವಾಗಿ ಆಟವು ಪೂರೈಸಲು ನಮ್ಮ ಶರಣನೇ ಜಯಶೀಲನಾಗಲು ಅಂಬಿಕಾಪತಿಯು ನಿರುಪಾಯನಾಗಿ ಪ್ರತ್ಯಕ್ಷನಾಗಲು ಅಚ್ಯುತನು ಹೆದರಿ ಬೆಂಡಾಗಿ, ಮಹಾ ಪ್ರಭುವೇ ನಾನು ನಿಮ್ಮೊಡನೆ ಸರಸವಾಡಿದೆನು ನಾನು ಕಡುಮೂರ್ಖನು ನಾನು ಮಹಾಪರಾಧಿಯು। ಎಂದು ಬಿನ್ನೈಸುತ್ತು ಅಡಿಗಡಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡುತ್ತ ಭಕ್ತಿಪರವಶತೆಯಿಂದ ಆನಂದ ಭಾಷ್ಪಗಳನ್ನು ಸುರಿಸುತ್ತ ಬಗೆಬಗೆಯಿಂದ ಸ್ತೋತ್ರ ಮಾಡುವದನ್ನು ಲಲಾಟಾಕ್ಷನು ಕಂಡು ಸಂತೋಷಪಟ್ಟು ಆತನನ್ನು ಸಂತೈಸಿ, ಇಚ್ಛಾಮಾತ್ರದಿಂದಲೆ ಅಖಿಲ ಪ್ರಪಂಚ ಕಾರ್ಯಗಳನ್ನು ಲೀಲಾಮಾತ್ರವಾಗಿ ನಿರ್ವಹಿಸುವ ಪರಮಾತ್ಮನು ಪುಷ್ಪಕವಿಮಾನವನ್ನು ಬರಮಾಡಿ ಆ ಭಕ್ತಾಗ್ರಗಣಿಯನ್ನು ಅದರಲ್ಲಿ ಕುಳಿರಿಸಿ ಗಣಪದವಿಯನ್ನು ದಯಪಾಲಿಸಿ ಸರ್ವ ಕರ್ತೃತ್ವಶಾಲಿಯಾದ ಸರ್ವಜ್ಞಮೂರ್ತಿಯು ಬಿಜಮಾಡಿದನು.

ಶಿವಕಾರ್ಯದಲ್ಲಿ ತೊಡಗಿ, ಶಿವಚಿಂತನೆಯಲ್ಲಿ ಮಗ್ನರಾಗಿ ಶಿವಾಪೇಕ್ಷೆಯಿಂದ ಶಿವಾಭಿನ್ನರಾಗಿರುವಂತೆ ನಮ್ಮೆಲ್ಲರನ್ನು ಆ ದಯಧಿಘನಮೂರ್ತಿಯು ಕರುಣಿಸಲೆಂದು ಆ ದಿವ್ಯಮೂರ್ತಿಯನ್ನು ಅನನ್ಯಭಾವದಿಂದ ಲೇಖಕನು ಪ್ರಾರ್ಥಿಸುತ್ತಾನೆ.



ಓಂ.

# ೧೩. ಮೊನೆಯಾಂಡರು.



ಜನವೈದೆ ಬವರಕ್ಕೆ ತನಗಿತ್ತ ಧನವನೆ । ಘನಿತನುಳಹಿಸದೆ ಚರಸೇವೆ
ಗೈದಧಿಕ । ಮೊನೆಯಾಂಡರೆನ್ನೊಡೆಯನೆಂಬೆ ॥

[ಶ್ರೀ ನಿಜಗುಣರು]



ಅಪರಿಮಿತ ದಿವ್ಯಾನಂದಮಯನಾದ, ವಿಶ್ವಮೂರ್ತಿಯಾದರೂ ಭಕ್ತರ ಪ್ರೇಮ ಪಾಶದಿಂದ ಬಂಧಿಸಲ್ಪಟ್ಟ ಶ್ರೀ ಪಶುಪತಿಯ ಕಟಾಕ್ಷಪಾತ್ರನಾದ ಚಂಡಪರಾಕ್ರಮಿಯಾದ ಮೊನೆಯಾಂಡನೆಂಬ ನರಪುಂಗವನು ಮಂಗಲಕರವಾದ ವಿಭೂತಿ ರುದ್ರಾಕ್ಷಿಗಳಿಂದೊಪ್ಪುವ ಸದ್ಭಕ್ತರನ್ನು ಕಂಡೊಡನೆ ಅವರನ್ನು ಸೋಮಶೇಖರನಾದ ಸೋಮನೆಂದು ಭಾವಿಸಿ ಆದರದಿಂದ ಮನ್ನಿಸುತ್ತಿದ್ದನು. ಸತ್ಕೀರ್ತಿಯುತನಾದ ನಮ್ಮ ವೀರನು ಚೋಳಪ್ರದೇಶದಲ್ಲಿ ಕಲಿಗಳಲ್ಲಿ ಮಿಗಿಲಾದ ಖ್ಯಾತಿಯನ್ನು ಪಡೆದು ಶಿವಭಕ್ತಕಲ್ಪದ್ರುಮನಾಗಿ ಶೋಭಿಸುತ್ತಿದ್ದನು. ವಿಭೂತಿ ರುದ್ರಾಕ್ಷಗಳಿಲ್ಲದೆ ಮೆರೆಯುವವರ ತಲೆಯನ್ನು ತರೆಯುವೆನೆಂದು ನಮ್ಮ ಚರಿತ್ರಪುರುಷನು ಚೋಳಮಂಡಲದಲ್ಲಿ ನಡೆಯುವ ಸಮರಾಂಗಣಕ್ಕೆ ಹೋಗಿ ಉಭಯ ಬಲದ ಮಧ್ಯದಲ್ಲಿ ನಿಂತು ಯಾರು ತನಗೆ ಸಹಸ್ರ ಹೊನ್ನುಗಳನ್ನು ಕೊಡುವರೋ ಅವರಹಗೆಗಳನ್ನು ಯುದ್ಧದಲ್ಲಿ ಭುಜಬಲ ಶೌರ್ಯದಿಂದ ನಿವಾರಿಸಿ ರಣಮುಖದಿಂದ ಬಂದ ಧನವನ್ನು ಪ್ರೀತಿಯಿಂದ ಪೂಜ್ಯರಾದ ಶಿವಭಕ್ತರಿಗೆ ಉಚಿತವಾಗಿ ಕೊಡುತ್ತ ಅವರನ್ನು ಪರಿಪರಿಯಿಂದ ಸನ್ಮಾನಿಸುತ್ತ ಶಿವಭಕ್ತತಿಂತಿಣಿಯಲ್ಲಿ ಚಿಂತಾಮಣಿಪ್ರಾಯನಾಗಿ ರಂಜಿಸುತ್ತಿದ್ದನು.

ನಮ್ಮ ಕಥಾನಾಯಕನು ಸದಾಚಾರಿಯಾದುದರಿಂದ ಮುಂಜಾವಿನಲ್ಲೆದ್ದು ಹರಗುರು ಸ್ತುತಿಯನ್ನು ಗೈದು ಪರಿಶುದ್ಧವಾದ ಹವೆಯಲ್ಲಿ ಅಂಗಸಾಧನೆಯನ್ನು ಮಾಡಿ ಸ್ವಗೃಹಕ್ಕೆ ಬಂದು ಯಥಾವಿಧಿಯಾಗಿ ಸ್ನಾನಮಾಡಿ ಭಸ್ಮಸ್ನಾನ-ಭಸ್ಮೋದ್ಧೂಳನ ಭಸ್ಮವಿಭೂಷಿತನಾಗಿ ರುದ್ರಾಕ್ಷಮಾಲಾಭರಣಾಲಂಕೃತನಾಗಿ ಆಗಮೋಕ್ತವಾಗಿ ಶಿವಾರ್ಚನೆಯನ್ನು ಪೂರೈಸಿ, ಶಿವಕವಚಗಳನ್ನು ಪಠಿಸಿ,

ಶಿವಭಕ್ತರಾದ ಕಲಿಗಳ ಚರಿತ್ರೆಯನ್ನು ಹರ್ಷದಿಂದ ಓದುತ್ತಿದ್ದನು. ಭೋಜ್ಯ ಪದಾರ್ಥಗಳ ಗುಣ ಧರ್ಮಗಳನ್ನು ತಿಳಿದು, ಸರಿಯಾಗಿ ತಕ್ಕ ಆಹಾರವನ್ನು ಶಿವಪ್ರಸಾದ ಮೂಲಕವಾಗಿ ಮಿತವಾಗಿ ಸೇವಿಸುತ್ತ, ತಪ್ಪದೆ ಉತ್ಸಾಹದಿಂದ ಕ್ರಮವಾಗಿ ವ್ಯಾಯಾಮ ಮಾಡುತ್ತ, ಸದೃಢಕಾಯನಾಗಿ, ದೇಹಕಾಂತಿಯುತ ನಾಗಿ ತುರಗಾರೋಹಣಮಾಡುತ್ತ ರಾಹುತರಲ್ಲಿ ಶ್ರೇಷ್ಠನೆಂದನಿಸಿ, ಶಿವಭಕ್ತರಿಗೆ ವೆಗ್ಗಳವಾಗಿ ಅತಿಥಿಸತ್ಕಾರವನ್ನು ಮಾಡುವದರಲ್ಲಿ ಧುರೀಣನಾಗಿದ್ದನು. ಈ ತೆರದಿಂದ ಕೆಲವು ಕಾಲ ಕಳೆಯಲು ನಿತ್ಯನಾದ ಅಸಮಾಕ್ಷನ ಕೃಪೆಯಿಂದ ನಮ್ಮ ಚರಿತ್ರ ಪುರುಷನಿಗೆ ಚೋಳಮಂಡಲಾಧಿಪನಾದ ಪಗಬ್ಬೋಳರಾಜನಲ್ಲಿಗೆ ಹೋ ಗಬೇಕೆಂಬ ಹಂಬಲವು ಅಂಕುರಿಸಿತು.

ಶಿವಧರ್ಮ ನಿರತನಾದ ಪಗಬ್ಬೋಳರಾಜನು ತನ್ನ ಮುಖ್ಯಪಟ್ಟಣವಾದ ಕರಿಯೂರ ಎಂಬ ಪುರದಲ್ಲಿ ಒಡ್ಡೋಲಗದಲ್ಲಿರುವಾಗ ಸಲಕ್ಷಣವಾದ ಹಯವ ನ್ನೇರಿ ಸಮಸ್ತ ಶಿವಭಕ್ತಿ ಚಿನ್ಹಾಂಕಿತನಾದ ನಮ್ಮ ಚರಿತ್ರನಾಯಕನು ಬಂದ ದ್ದನ್ನು ಭೂರಮಣನು ಕಂಡು ಪ್ರೀತಿಯುತನಾಗಿ ನೂತನ ರಾಹುತನನ್ನು ಸನ್ಮಾನಿಸಿ ಕುಶಲಪ್ರಶ್ನೆಯನ್ನು ಮಾಡಿ ಆತನ ಕಾಯಕವನ್ನು ಹಾಗೂ ಅಭಿಧಾ ನವನ್ನು ಕೇಳಿದನು.

ರಾಹುತನು :—ಧರ್ಮಾಧಿಕಾರಿಯಾದ ಅರಸನೇ ನನಗೆ ಶ್ರೀ ಗುರುಗಳು ಮೊನೆಯಾಂಡನೆಂಬ ನಾಮಕರಣವನ್ನು ಮಾಡಿರುವರು. ನಾನು "ತುರಂಗಿ ಯು" ರಣದಲ್ಲಿ ಅಶ್ವಾರೂಢನಾಗಿ ಲಿಂಗರಹಿತರ ಮತ್ತು ವಿಭೂತಿ ರುದ್ರಾಕ್ಷ ಧರಿಸದವರ ತಲೆಗಳನ್ನು ಚಂಡಾಡುವೆನು, ದೊರೆಗಳಿಂದ ಬರುವ ಬಹುಮಾನ ರೂಪವಾದ ಧನಧಾನ್ಯ ಮೊದಲಾದುವನ್ನು ಶಿವಭಕ್ತರಿಗೆ ಯಥೇಷ್ಟವಾಗಿ ಕೊ ಟ್ಟುಬಿಡುವೆನು. ಶ್ರೀಕಂಠನಾದ ಉಮಾಪತಿಯನ್ನೇ ನನ್ನ ಪ್ರಾಣಪತಿಯ ನ್ನಾಗಿ ಮನಸ್ಸಾಕ್ಷಿಯಾಗಿ ತಿಳಿದು ಶಿವಲಾಂಛನಾದಿಗಳಿಂದೊಪ್ಪುವ ಭಕ್ತರನ್ನು ಕಂಡೊಡನೆ ಅವರನ್ನು ಸಹಾ ಆ ಮಹಿಮನ ಸ್ವರೂಪಿಗಳಾಗಿ ಭಾವಿಸುವೆನು. ಶಿವಭಾವಚಿತ್ತನಾದ ನೃಪತಿಲಕನೇ ಇದು ನನ್ನವೃತ್ತಾಂತವು ಎಂದು ನಮ್ಮ ಚರಿತ್ರಪುರುಷನು ಬಿನ್ನವಿಸಿದನು. ಸದ್ಭಕ್ತ ಲಲಾಮನಾದ ಮೊನೆಯಾಂಡನು

---

* ದೇಹದ ಬಾಹ್ಯಶುಚಿಯಾಗಿ ಜಲಸ್ನಾನ ಮಾಡುವುದ, ಶರೀರದ ಒಳ ಭಾಗವನ್ನು ನಿರ್ಮಲವಾಗಿಡುವದಕ್ಕೆ ನಿರ್ದುಷ್ಟವಾದ ಪ್ರಾಣವಾಯುವನ್ನು ಸೇವಿಸುವದು ಎಷ್ಟು ಅವಶ್ಯವೋ ಅದರಂತೆ ಲಿಂಗಾಂಗಿಗಳು ಕಾಯಪವಿತ್ರತೆ ಗಾಗಿ ಕಲ್ಯಾಣಪ್ರದವಾದ ಭಸ್ಮಸ್ನಾನವನ್ನು ಯಥಾವಿಧಿಯಾಗಿ ಮಾಡಬೇಕಾಗಿ ಕಟ್ಟಳೆಯುಂಟು.

ಈ ರೀತಿಯಾಗಿ ಹೇಳುವದನ್ನು ಪಗಲ್ಚೋಳಮಹಾ ರಾಜನು ಕೇಳಿ ಪರಮಾನಂದಯುತನಾಗಿ ನನ್ನ ಶುಭೋದಯಕಾಲವು ಬರಲು ಉಪಕ್ರಮವಾಯಿತು, ಎಂದು ಸಂತೋಷಪಟ್ಟು ಶಿವಭಕ್ತಪುಂಗವನೇ, ಶ್ರೇಷ್ಠನಾದ ರಾಹುತನೇ, ನನ್ನ ಸೈನ್ಯಾಧಿಕಾರಿಗಳಲ್ಲಿ ನೀನೊಬ್ಬನು ಇರುವದು ವಿಹಿತವು. ಅವಶ್ಯವಾಗಿ ಇಲ್ಲಿಯೇ ಇರು ನಿನಗೆ ಬೇಕಾದಷ್ಟು ಧನವನ್ನು ತೆಗೆದುಕೊಂಡು ನಿನ್ನ ಕಾಯಕವನ್ನು ನಿರಾತಂಕವಾಗಿ ಮುಂಚಿನಂತೆಯೆ ಸಾಗಿಸು ಹೀಗೆ ಅಪ್ಪಣೆ ಮಾಡಿದನು.

ಈ ಮೇರೆಗೆ ರಾಜಮನ್ನಣೆಯಿಂದ ಉಪಚರಿಸಲ್ಪಟ್ಟ ಕಥಾನಾಯಕನು ಸತ್ಕಾಲಕ್ಷೇಪವನ್ನು ಮಾಡುತ್ತಿರಲು ಪಗಲ್ಚೋಳ ಭೂಪಾಲಕುಲೋತ್ತಮನಿಗೆ ಸರ್ವ ಮಾಂಡಲೀಕರಾಜರು ಪಗದಿಯನ್ನು ಕ್ರಮವಾಗಿ ಕೊಡುತ್ತಿದ್ದರು. ಆದರೆ ಪಾಂಡ್ಯರಾಜನು ಕಪ್ಪು ಮುಟ್ಟಿಸಲಿಲ್ಲವಾದ್ದರಿಂದ ಚೋಳ ಧರಣೀಶನು ಕೋಪಗೊಂಡು ಆತನ ಮೇಲೆ ಯುದ್ಧವನ್ನು ಸಾರೆಂದು ಮೊನೆಯಾಂಡನಿಗೆ ಹೇಳಿದನು. ಆಗಲಾ ಮೊನೆಯಾಂಡನು :—ಅರಸನೇ ದಂಡಯಾತ್ರೆಯು ರಾಜನೀತಿಯಲ್ಲಿ ಚತುರ್ಥೋಪಾಯವಾಗಿ ತಜ್ಞರಿಂದ ಗಣಿಸಲ್ಪಟ್ಟಿದೆ. ಆದ್ದರಿಂದ ಮೊದಲು ಕೈಕೊಳ್ಳಬೇಕಾದ ಮಾರ್ಗವನ್ನು ಹಿಡಿದು ಅದು ಫಲಕಾರಿಯಾಗದಿದ್ದರೆ ಬವರಕ್ಕೆ ಸನ್ನದ್ಧರಾಗುವ. ಸಂಗ್ರಾಮದಲ್ಲಿಯೂ ಕೂಡಾ ಧರ್ಮದಿಂದ ವರ್ತಿಸಿದರೆ ವಿಜಯಲಕ್ಷ್ಮಿಯು ಪೂಮಾಲೆಯನ್ನು ಸದ್ಧರ್ಮನಿರತನಿಗೆ ಹರ್ಷದಿಂದ ಅಲಂಕರಿಸುವಳು ಎಂದು ವಿವರಿಸಿದನು.

ಇತ್ತ ವಿವೇಕಶೂನ್ಯನಾದ ಪಾಂಡ್ಯರಾಜನು ಆವಹಕ್ಕೆ ಬರಲು ಅನುವಾದನು. ಚೋಳಮಹೀಶನು ನಿರುಪಾಯನಾಗಿ ಮೊನೆಯಾಂಡವೀರನಿಗೆ ಸೈನ್ಯದ ಸಿದ್ಧತೆಯೊಡನೆ ಪಾಂಡ್ಯನನ್ನು ಎದುರಿಸಲಿಕ್ಕೆ ಆಜ್ಞೆಮಾಡಿದನು. ಮಯೂರವಾಹನನಾದ ಕುಮಾರಸ್ವಾಮಿಯಂತೊಪ್ಪುವ ಸಿಂಹವಿಕ್ರಮನಾದ ಚರಿತ್ರನಾಯಕನು ರಣರಂಗದಲ್ಲಿ ವೈರಿಗಳನ್ನು ತರಿದು, ಪೂರ್ವದಲ್ಲಿ ವೀರನಾದ ವೀರಭದ್ರನು ನೃಸಿಂಹನನ್ನು ಶಿಕ್ಷಿಸುವಾಗ ಕಾದಿದಂತೆ ಹೋರಾಡಿ, ಸುಭಟಾಗ್ರಣಿ ಎಂಬ ತನ್ನ ಬಿರುದನ್ನು ಒಕ್ಕಣಿಸಿ ಜಯಶೀಲನಾಗುವ ಸಮಯದಲ್ಲಿ, ಅಪ್ರತಿಮ ಶಿವಭಾವನಾಯುತನಾದ ಮೊನೆಯಾಂಡನ ಶೌರ್ಯ ಧೈರ್ಯ ಸಮರಾಂಗಣದಲ್ಲಿಯ ಪ್ರಸಂಗಾವಧಾನ, ಕಾಳಗದಲ್ಲಿಯೂ ಸಹ ಶಿವಗಣಸಮೂಹದ ನೆನಪು ಇದೆಲ್ಲವನ್ನು ಶುದ್ಧಾತ್ಮನಾದ ಹೈಮವತಿಯ ಪತಿಯು ತಿಳಿದು ಕೌತುಕ

---

* ಮಾನಕಂಜರನು ತನ್ನ ಮಗಳ ಮುಡಿಯನ್ನೇ ಪರಶಿವನಿಗೆ ಅರ್ಪಿಸಿದಾಗ ಆ ಪರಮಾತ್ಮನು ಆತನ ಮಗಳಗೂ ಅಳಿಯ (ಪಗಲ್ಚೋಳ) ನಿಗೂ ಶುಭವಾಗಲೆಂದು ಆಶೀರ್ವದಿಸಿದನು.

ಪಟ್ಟು ಸುಪ್ರಸನ್ನನಾಗಿ ತನ್ನ ವೃಷಭವನ್ನು ತುರಗವನ್ನಾಗಿ ಮಾಡಿ ಶೂಲವನ್ನೇ ಖಡ್ಗವನ್ನಾಗಿಮಾಡಿ ರಾಹುತವೇಷವನ್ನು ತಾಳ್ದು ಚದರಿ ಓಡಿಹೋಗುವ ಪಾಂಡ್ಯ ಸೇನೆ ಯಿಂದ ನಮ್ಮ ಶರಣನ ಸಮ್ಮುಖದಲ್ಲಿ ಬರಲು ಅನುವಾದನು. ಈ ನೂತನ ರಾಹುತನ ಲಲಾಟದಲ್ಲಿರುವ ಶಿವಶಕ್ತಿಯೊಡನೆ ವಿಜೃಂಭಿಸುವ ತ್ರಿಪುಂಡ್ರವನ್ನು ಮತ್ತು ಕಂಠದಲ್ಲೊಪ್ಪುವ ಪ್ರಕಾಶಮಯವಾದ ರುದ್ರಾಕ್ಷಗಳನ್ನು ಕಂಡೊಡನೆ ಈತನು ತೇಜೋಮೂರ್ತಿಯಾದ ಭೂರುದ್ರನೋ ಅಥವಾ ಪ್ರಚ್ಛನ್ನವೇಷದ ಪಿನಾಕಪಾಣಿಯೋ, ನಿಗ್ರಹಾನುಗ್ರಹಸಮರ್ಥರಾದ ಪ್ರಮಥ ಗಣ ವೃಂದದ ಅಧಿಪತಿಯೋ, ಕಾಮರೂಪಿಯಾದ ಮಹೇಶ್ವರನೋ ಎಂಬಂತೆ ಶಿವನಿಷ್ಠರಿಗೆ ಅನುಮಾನವಾಗುವಂತಿತ್ತು; ರಣರಂಗದಲ್ಲಿ ಹೊಸದಾಗಿ ಬಂದ ಅಪೂರ್ವ ರಾಹುತನನ್ನು ನೋಡಿದರೆ ತ್ರಿಭುವನದಲ್ಲಿ ಶಿವನಲ್ಲದೆ ಬೇರೆ ದೈವವಿಲ್ಲೆಂದು, ದಯಾರಸವೇ ಸಾಕಾರವಾಗಿರುವ ಶಿವನಿಗೆ ಅಷ್ಟತನುಗಳಿರುವಂತೆ ಶಿವ ಭಕ್ತರಿಗೆ ಅಷ್ಟಾವರಣಗಳುಂಟೆಂದು, ಅತ್ಯತಿಷ್ಟದ್ದಶಾಂಗುಲನಾದ ಪರಮಾತ್ಮನಿಗೆ ಪಂಚಮುಖಗಳಿರುವಂತೆ ಶಿವಭಕ್ತರಿಗೆ ಪಂಚಾಚಾರಗಳುಂಟೆಂದು ಡಂಗುರಿಸುವದಕ್ಕೆ ಬಂದ ಬಂಟನೋ, ಭಕ್ತನನ್ನು ಅನುಗ್ರಹಿಸಲು ಬಂದ ದೇವತಾ ಪುರುಷನೋ ಎಂದು ಭಾಸವಾಗುತ್ತಿತ್ತು; ಹತ್ತಿರದಲ್ಲಿಯೇ ಬಂದ ನೂತನ ರಾಹುತನನ್ನು ಕಂಡು ಸವಿನಯವಾಗಿ ಪುನಃ ಪುನಃ ಶರಣೆಂದು ಕೈಮುಗಿದನು. ಆಗ ಕಪಟವೇಷದ ರಾಹುತನು ಭಕ್ತನ ಭವವನ್ನು ಕತ್ತರಿಸುವನೋ ಎಂಬಂತೆ ಮೊನೆಯಾಂಡನ ಅವಯವಗಳನ್ನು ಖಡ್ಗದಿಂದ ಕತ್ತರಿಸುತ್ತಿರಲು ಆತನು ಹರ ಹರ ಶರಣಾರ್ಥಿ ಎಂದು ಶಿವಧ್ಯಾನದೊಡನೆ, ನಡೆಯುವ ಕೃತಿಯನ್ನು ನಿಶ್ಯಂಕತೆಯಿಂದ ನೋಡುತ್ತ ತನ್ನ ದೇಹವು ಶಿವಾರ್ಪಿತವಾಗಲೆಂದು ಅಚಲವಾದ ಶಿವ ಭಕ್ತಿಯಿಂದ ಸ್ಥಿರವಾಗಿ ನಿಂತುಬಿಟ್ಟನು. ಈ ತರದ ಘನವಾದ ಶಿವಭಕ್ತಿಯನ್ನು ಕಂಡು ಪಾರ್ವತೀಪತಿಯು ಕಾರುಣ್ಯದಿಂದ ನೋಡಿ ನಿಜರೂಪವನ್ನು ತೋರಿ ಆತನ ಉಗ್ರವಾದ ಭಕ್ತಿಗೆ ಮೆಚ್ಚಿದನು. ದೇವದುಂಧುಭಿಗಳು ಮೊಳಗಿದವು. ಶಾಂತಿಮಯನಾದ ಗಿರಿಜಾವರನು ದಿವ್ಯವಿಮಾನವನ್ನು ಬರಮಾಡಿ ಮೊನೆಯಾಂಡನನ್ನು ಅದರಲ್ಲಿ ಕುಳ್ಳಿರಿಸಿ ಆತನಿಗೆ ಗಣಪದವಿಯನ್ನು ಆಶೀರ್ವದಿಸಿದನು.

---

* ಮಾಯಾವಿಗಳಾದ ರಾಕ್ಷಸರು ಕಾಮರೂಪಿಗಳು ಅಹುದು ಅಂದರೆ ಅವರು ವೇಷವನ್ನು ಧರಿಸುವುದು ಮುಖ್ಯವಾಗಿ ಪರರಿಗೆ ಮೋಸಮಾಡುವುದಕ್ಕಾಗಿಯೇ. ಆದರೆ ನಮ್ಮ ನಿರಂಜನ ಮೂರ್ತಿಯಾದ ಭುಜಂಗ ಭೂಷಣನು ಕಾಮರೂಪಿಯಾಗುವುದು ವಿಶೇಷತಃ ತನ್ನ ನಿಜಭಕ್ತರನ್ನು ಉದ್ಧರಿಸುವುದಕ್ಕಾಗಿಯೆ ಎಂಬುವದು ಸಕಲರು ತಿಳಿದ ವಿಷಯವು.

ಅನಿಮಿತ್ತ ಬಾಂಧವರಾದ ಶಿವಿಯೋಗಿಗಳನ್ನು ಮನವಾರೆ ಸ್ಮರಿಸಿ, ನಿರ್ಮಲರಾದ, ಶಿವಪ್ರಬಂಧ ಉತ್ಸಾಹಿಗಳಾದ ಪಾಠಕ ಮಹಾಶಯರ ಶುಭಪರಂಪರೆಗಾಗಿ ಶಿವಾವಲ್ಲಭನನ್ನು ಅನನ್ಯಭಾವದಿಂದ ಲೇಖಕನು ಕೊಂಡಾಡುವನು.



ಓಂ.

# ೧೪. ಮಾನಕಂಜರರು.



ಧರೆನೋಡೆ ಹಸನಿಂದ ವರಸುತೆಯ ಮುಡಿಯ ನುತ್ತರಿಸಿ ಭವನಂಘ್ರಿಗೊ
ಲಿದಿತ್ತ ಮಾನಕಂ । ಜರನೊಪ್ಪಿಸಲಹುತಿರಲೆನ್ನ ॥

[ಶ್ರೀ ನಿಜಗುಣರು]



ಪ್ರಶಾಂತಮಯವಾದ, ಅತಿ ಮಂಗಳಕರವಾದ ಬ್ರಾಹ್ಮೀಸಮಯ; ಆಸ್ತಿಕರು ಗುರುವಿನನ್ನು ಸ್ಮರಿಸುತ್ತ, ಪ್ರಭುವನ್ನು ಸ್ತುತಿಸುತ್ತ ಹಾಸಿಗೆಯನ್ನು ಸುತ್ತುತ್ತ ಕ್ರಿಯಾಚರಣೆ ಸ್ನಾನಾದಿಗಳಿಗೆ ಹೊರಟರು. ದೇಶದ ಸಂಪತ್ತಿಗೆ ಸಶಕ್ತವಾದ ಪೀಳಿಗೆಯೇ ಕಾರಣವೆಂದು ತಿಳಿದು ನೂತನ ತರುಣರು ತಮ್ಮ ಮೈಕಟ್ಟು ಬಲಪಡಲೆಂದು ಗರಡಿ ಮನೆಗೆ ತೆರಳಿದರು. ಬಾಲಕರು ತಮ್ಮ ಪಾಠಗಳನ್ನು ಮಾಡತೊಡಗಿದರು. ಶಾಸ್ತ್ರಿಗಳು ತಮ್ಮ ಶಿಷ್ಯ ವೃಂದಕ್ಕೆ ಹೊಸ ಹೊಸ ವಿಷಯಗಳನ್ನು ತಿಳಿಸಲುಪಕ್ರಮಿಸಿದರು. ಶಿವಾನುಭವಿಗಳು

---

* ರುದ್ರಪಶುಪತಿ ಲೇಖದಲ್ಲಿ ಅಷ್ಟಾವರಣದ ಸಂಕ್ಷಿಪ್ತ ವಿವೇಚನೆಯು, ಕಮಲಾಯಿ, ಏಣಾಧಿನಾಥರು, ಸೌಂದರನಂಬಿ ಲೇಖಗಳಲ್ಲಿ ವಿಭೂತಿಯು ಸೋಮಾಸಿಮಾರರು ಲೇಖದಲ್ಲಿ ರುದ್ರಾಕ್ಷವು, ತಿರುನೀಲಕಂಠಪಾಣರು ಮತ್ತು ಅಚ್ಯುತರು ಈ ಲೇಖಗಳಲ್ಲಿ ಗುರುವಿನ ವಿಸ್ತೃತ ವಿಷಯವು ಮತ್ತು ಪಂಚಾಚಾರಗಳ ವರ್ಣನೆಯು ಚೊಕ್ಕನಯನಾರು ಎಂಬ ಲೇಖದಲ್ಲಿ ಪ್ರಕಟವಾಗಿರುವುದು.

ಹೊಸಬರಿಗೆ ತಮ್ಮ ವಿಚಾರ ಕಲ್ಪನೆಯ ಚಾತುರ್ಯದಿಂದ ಬಹು ಸಮಂಜಸವಾಗಿ, ಯುಕ್ತಿಯುಕ್ತವಾಗಿ ಶಿವಾನಂದದ ಕೀಲನ್ನು ಗುರ್ತಿಸುವ ಹಾಗೆ ಮಾಡುತ್ತಿದ್ದರು. ಕೆಲವೆಡೆಯಲ್ಲಿ ಮುಕ್ತಿಪ್ರದವಾದ ವೇದಾಧ್ಯಯನವು ಸಾಂಗವಾಗಿ ಕೇಳಬರುತ್ತಿತ್ತು. ಜಗತ್ಕುಟುಂಬಿಗಳಾದ ಯೋಗಿಗಳು ಸ್ನಾನಾಚಮನಾದಿಗಳನ್ನು ತೀರಿಸಿಕೊಂಡು ವಾಮಕರ ಪೀಠದಲ್ಲಿ ತಮ್ಮ ಇಷ್ಟಲಿಂಗವನ್ನು ನೆಲಗೊಳಿಸಿ ದಕ್ಷಿಣ ಹಸ್ತದಲ್ಲಿ ರುದ್ರಾಕ್ಷಗಳನ್ನು ಎಣಿಸುತ್ತ ಚಿತ್ತೈಕಾಗ್ರತೆಯಿಂದ ಶಿವಮಂತ್ರರತರಾದದ್ದನ್ನು ನೋಡಿದರೆ ಭೂಮಿಗೆ ಅವತರಿಸಿದ ಪ್ರಮಥರೋ ಎಂಬಂತೆ ಕಾಣಿಸ್ಸುತ್ತಿದ್ದರು. ಗಾನವಿಶಾರದರು ತಮ್ಮ ವಿದ್ಯಾರ್ಥಿಗಳಿಗೂ, ವಿದ್ಯಾರ್ಥಿನಿಯರಿಗೂ ತಮ್ಮ ಮಧುರವಾದ ಸುಸ್ವರದೊಡನೆ ಸಂಗೀತವನ್ನು ಕಲಿಸಲಾರಂಭಿಸಿದರು. ನೂತನ ನಿಬಂಧಕಾರರು ತಮ್ಮ ಪ್ರಬಂಧವನ್ನು ಸುರುವು ಮಾಡಲಿಕ್ಕೆ ಇದೇ ತಕ್ಕ ವೇಳೆಯೆಂದು ಬರಹವನ್ನು ಕೈಕೊಂಡರು. ಯಾವ ಸತ್ಕಾರ್ಯವನ್ನು ಪ್ರಾರಂಭಮಾಡಬೇಕಾದರೂ ಇದೇ ಸಮಯವೇ ಪ್ರಶಸ್ತವೆಂದು ಉತ್ತಮರಾದ ಮೇಧಾವಿಗಳು ಒಪ್ಪಿ ತಮ್ಮ ವಿವಿಧ ಕಾರ್ಯಪ್ರಸಕ್ತರಾದರು. ನಿಯಮದಿಂದ ಸರಿಯಾಗಿ ಕೆಲಸವನ್ನು ಮಾಡುವ ಮಹಾ ಜನರು ನಿನ್ನೆ ಮಾಡಿದ ಕೆಲಸದ ಸಿಂಹಾವಲೋಕನವನ್ನು ಮಾಡಿ ಇಂದು ಮಾಡಬೇಕಾದ ಕೆಲಸಗಳನ್ನು ಕ್ರಮಗೊಳಿಸಿ ಅದರ ಟಿಪ್ಪಣಿಯನ್ನು ಬರೆಯ ಹತ್ತಿದರು. ಕೆಲವರು ಈಸುವದರಿಂದ ಶರೀರವು ಬಲಪಡುವದೆಂದು ಭಾವಿಗೆ ಹೊರಟರು. ಆಳುಮಕ್ಕಳು ಹಕ್ಕೆಗಳನ್ನು ಸ್ವಚ್ಛಮಾಡಿ ಪಶುಗಳ ಮೈಮೇಲೆ ಕೈಯಾಡಿಸಿ ಚನ್ನಾಗಿ ಮೈತಿಕ್ಕಿ ಅವುಗಳಿಗೆ ಸರಿಯಾದ ಆಹಾರವನ್ನು ಕೊಟ್ಟರು. ಮುಂಜಾವಿನ ಬೆಳದಿಂಗಳಲ್ಲಿ ಕಾರ್ಯವು ಒತ್ತರದಿಂದ ಸಾಗುವದೆಂದು ಹಾಗೂ ಆಗ ಮಾಡುವ ಕೆಲಸದಿಂದ ಎತ್ತುಗಳಿಗೆ ದಣವು ಆಗುವದಿಲ್ಲೆಂದು ರೈತರು ಕೂಡಲೆ ತಮ್ಮ ವ್ಯವಸ್ಥೆ ಸರಿಯಾಗಿ ಹೊಲಗಳಿಗೆ ಪರಮಾತ್ಮನನ್ನು ನೆನೆಸುತ್ತ ಹೊರಟರು. ಒಕ್ಕಲಿಗರು ಗೊಬ್ಬರವನ್ನು ಹೇರಲಿಕ್ಕೆ ಹತ್ತಿದರು. ಅಶ್ವಶಾಲೆಗಳಲ್ಲಿ ಕುದುರೆಗಳು ತಮ್ಮ ಶುಶ್ರೂಷೆ ಮಾಡುವವನು ಬಂದೊಡನೆ ಹೇಕರಿಸ ಹತ್ತಿದವು. ಅಬಲೆಯರು ತಮ್ಮ ಪತಿಗಳಿಗೆ ನಮಸ್ಕರಿಸಿ ಶರಣರ ಭಾವಚಿತ್ರಗಳನ್ನು ತಮ್ಮ ಕಣ್ಮುಂದೆ ತರುತ್ತ ಆತುರದಿಂದ ಶಿವಪೂಜಾಗೃಹವನ್ನು ಸಜ್ಜುಗೊಳಿಸಿ, ತವಕದಿಂದ ಗೃಹಕೃತ್ಯವನ್ನು ಮಾಡಲನುವಾದರು. ನಮ್ಮ ಕರ್ಮಾನುಸಾರವಾಗಿ ಆದದ್ದು ಆಗಿಹೋಯಿತು ಇನ್ನಾದರೂ ಮುಕ್ತಿಪಥವನ್ನು ಅನುಸರಿಸುವಾ ಎಂದು ವಿಧವೆಯರು ಮುಂಜಾನೆ ಶಿವಭಜನಾ ತಾಣಗಳಿಗೆ ಕೆಲವರು ಶಿವಪುರಾಣದ ಸ್ಥಳಗಳಿಗೆ ಕೆಲವರು ಹೋಗಿ ಸನ್ಮಾರ್ಗಗಾಮಿನಿಯರಾಗಿ ಕೃತಕೃತ್ಯರಾಗುವೆವು ಎಂದು ಉತ್ಸಾಹವನ್ನು ತಳೆಯುತ್ತಿದ್ದರು. ಪಕ್ಷಿಗಳು ತಮ್ಮ ಮಂಜುಳವಾದ ಮಂಗಲರವನ್ನು ಮಾಡತೊಡಗಿದವು.

ಮನೋಹರವಾದ ತಿಳಿಗೊಳದಲ್ಲಿಯ ಕಮಲಗಳು ಅರಳುತ್ತ ಸೂರ್ಯನ ಆಗ ಮನವನ್ನು ಸೂಚಿಸುತ್ತಿದ್ದವು. ಸಮಸ್ತ ವಿಧವಾದ ಬೆಳೆಯಿಂದಲೂ, ಸರ್ವ ಸಂಪತ್ತಿನಿಂದಲೂ ವಿರಾಜಿಸುವ ಚೋಳ ಧರಿತ್ರಿಯಲ್ಲೊಪ್ಪುವ ಕಂಜರಪುರಾಧಿಪನಾದ ಮಾನಕಂಜರನೆಂಬ ವಿಭುವು ಉಜ್ವಲವಾದ ಜಂಗಮ ಭಕ್ತಿಯುತನಾಗಿ ಶಿವಶರಣರ ಚರಣಸೇವಾಧುರಂಧರನಾಗಿರಲು ಅಲ್ಲಿಯ ಪಟ್ಟಣಗಳಲ್ಲಿ ಗುರು ಭಕ್ತಿ, ದೇವತಾ ಭಕ್ತಿ, ರಾಜ ಭಕ್ತಿ, ಮಾತೃ ಭಕ್ತಿ, ಪಿತೃ ಭಕ್ತಿ ಇತ್ಯಾದಿ ಸುಗುಣಾಭರಣಯುಕ್ತರಾಗಿ ಉದ್ಯೋಗಶೀಲರಾದುದರಿಂದ ಆ ಪುಣ್ಯಮೂರ್ತಿಯ ಕೀರ್ತಿಪ್ರಭೆಯು ಹೆಚ್ಚೋ ಅಥವಾ ನನ್ನ ಪ್ರಕಾಶವು ಅತಿಶಯವೋ ಸರಿಹಚ್ಚಿ ನೋಡಬೇಕೆಂದು ಆದಿತ್ಯನು ಉದಯವಾದನು. ಮಾರ್ತಾಂಡನು ಸಹ, ನಮ್ಮ ಕಥಾನಾಯಕನ ಧರ್ಮ ಪ್ರತಾಪದ ಬೆಳಕು ಅಧಿಕವೆಂದು ಅನುಮಾನಿಸುವಾಗ ಆತನು ಚೇರಪಾಂಡ್ಯರಾಜರಕಿಂತಲೂ ಯಶಸ್ವಿಯಾದುದು ಆಶ್ಚರ್ಯವಲ್ಲ. ನಮ್ಮ ಚರಿತ್ರ ಪುರುಷನ ಸಹಧರ್ಮಚಾರಿಣಿಯಾದ ಗುಣವತಿಯು ತನ್ನ ವಲ್ಲಭನ ಜಂಗಮ ಸೇವೆ ಜಂಗಮ ದಾಸೋಹಕ್ಕೆ ಅನುಕೂಲಳಾಗಿ, ಪತಿಭಕ್ತಿ ಪರಾಯಣಳಾಗಿ ಸಕಲ ಧರ್ಮ ಕಾರ್ಯಗಳಲ್ಲಿ ಪ್ರಾಣಕಾಂತನ ನೆರಳಿನೋಪಾದಿಯಲ್ಲಿದ್ದು ನಿಜಭರ್ತೃವಿನ ಮನೋರಮೆಯಾಗಿ ಮಾನಕಂಜರನ ಅರ್ಧಾಂಗಿಯಾಗಿಯಾಕೆ ಆತನ ಪಡಿನೆಳಲಿನಂತೆಯೇ ಶೋಭಿಸುತ್ತಿದ್ದಳು.

ನಮ್ಮ ಚರಿತ್ರಪುಂಗವನು ಶೈವನಾದುದರಿಂದ ಪ್ರತಿನಿತ್ಯದಂತೆ ಕಂಜಾರಪುರಾಧೀಶ್ವರನಾಲಯಕ್ಕೆ ಹೋಗಿ ಉಮಾಕಾಂತನನ್ನು ಭಕ್ತಿಪುರಸ್ಸರವಾಗಿ ಅರ್ಚಿಸಿ ಶಿವಾನಂದಯುತನಾಗಿ ಮನೆಗೆ ಬರಲು ತನ್ನ ಒಡತಿಯು ದುಮ್ಮಾನದಿಂದ ನಿಟ್ಟುಸುರುಬಿಡುತ್ತಾ ಚಿಂತಾಕ್ರಾಂತಳಾಗಿ ಸುಮ್ಮನೆ ಕುಳಿತ್ತಿದ್ದಳು. ಅದನ್ನು ಕಂಡು ಕಥಾನಾಯಕನು :—ಮನದನ್ನಳೇ! ನಿನ್ನ ಮುಖಕಳೆಯು ಅಡಗಿರುವುದು ಇದೇನು ಶಿವಭಕ್ತರಿಗೆ ಯಾತರ ಚಿಂತೆ ಇರುವುದು? ಜಂಗಮಾರಾಧನೆಯು ಸರಿಯಾಗಿ ನಡೆದಿಲ್ಲವೇ? ಜಂಗಮವು ಬೇಡಿದುದನ್ನು ಕೊಡುವುದಕ್ಕೆ ನಮಗೆ ಧನದ ಕೊರತೆಯೇ? ಜನತೆಯಲ್ಲಿ ಸುಧಾರಣೆಯು ಕಡಿಮೆಯಾಗಿದೆಯೋ? ದಿನಾಲು ವಿಕಸಿತ ಕಮಲದಂತಿರುವ ನಿನ್ನ ತೇಜಃಪುಂಜವಾದ ಮೊಗವು ಬಾಡಿರುವದಕ್ಕೆ ನಿಮಿತ್ತವಾದರೂ ಯಾವದು? ಹೀಗೆ ವಿಚಾರಿಸ ತೊಡಗಿದನು ಗುಣವತಿಯು :—ಧರ್ಮವಿಭುವೇ ಜನರಲ್ಲಿ ನೀತಿಯು ತಪ್ಪಿಲ್ಲ, ಆರೋಗ್ಯವು ಕಡಿಮೆಯಾಗಿಲ್ಲ, ದೇವತಾರಾಧನೆ ಭೂರುದ್ರರ ಮನ್ನಣೆ ಯಥಾವಿಧಿಯಾಗಿ ಪರಮಾತ್ಮನ ಕರುಣೆಯಿಂದ ಸಾಂಗವಾಗಿ ನಡದಿರುತ್ತದೆ: ಆದರೆ ನನಗೆ ಮಗನಿಲ್ಲದಿರುವದೇ ಒಂದು ಕೊರತೆಯು ಆದ್ದರಿಂದ ನಾಥನೇ ನೀನು ಉಮೇಶನನ್ನು ಪ್ರಾರ್ಥಿಸಿ ಕುಲದೀಪಕನಾದ ಸುತನನ್ನು ಪಡೆಯಬೇಕೆಂದು ಹೇಳ

ಪುತ್ರಕಾಮಿಯಾದ ಕಾಂತಾಮಣಿಯು ಶಾಂತಳಾದಳು. ಆಗ ನಮ್ಮ ಜಂಗಮ ಭಕ್ತನು :—"ಅ ಪುತ್ರಸ್ಯಗತಿರ್ನಾಸ್ತಿ" ಎಂಬುದು ಶಿವಭಕ್ತರಿಗೆ ಅನ್ವಯಿಸುವ ಮಾತೇ ? ಶಿವಭಕ್ತಿಪರಂಪರೆಯೆ ? ಅಕ್ಷಯವಾದ ಸಂತತಿಯು ನಿಷ್ಕಾಮವಾದ ಭಕ್ತಿಯೇ ಮಿಗಿಲಾದುದು. ಸಕಾಮವಾಗಿ ಈಶ್ವರನನ್ನು ಪೂಜಿಸುವದು ಮೇಲಾದುದಲ್ಲ. ಐಶ್ವರ್ಯವಂತನಿಗೆ ಅಂದರೆ ಈಶ್ವರಭಾವನೆಯು ಚನ್ನಾಗಿ ಅಳವಟ್ಟಿರುವವನಿಗೆ ಆತನನ್ನು ಯಾಚಿಸುವದು ಒಳಿತಲ್ಲ ಅನುಚಿತವು : ಆದುದರಿಂದ ನಾನು ಪ್ರಭುವನ್ನು ಬೇಡಲು ಇಚ್ಛಿಸುವವನಲ್ಲ ಹೀಗೆ ನುಡಿದನು ಬಂಜೆಯೆಂದು ಅನ್ಯರಿಂದ ತಿರಸ್ಕರಿಸಲ್ಪಟ್ಟ ಆ ಲಲನೆಯು ಸಂತಾನಕ್ಕಾಗಿ ಅಗ್ರಹ ಪಡಲು ಮಾನಕಂಜರನು ನಿರುಪಾಯನಾಗಿ ಮಹಾದೇವನನ್ನು ಕುರಿತು ಬೇಡುವದಕ್ಕೆಸಲಜ್ಜಿತನಾಗಿ ಕಳವಳಪಟ್ಟು ನಾಚುತ್ತ ಕಂಜಾರಪುರ ಶಿವಾಲಯಕ್ಕೆ ತೆರಳಿಅಲ್ಲಿ ಪ್ರೇಮಾತಿಶಯದಿಂದ ಭಕ್ತಿರಸೋದ್ರೇಕದಿಂದ ಪೂಜಿಸಲು ಭಕ್ತ್ಯಾವೇಶದಲ್ಲಿ ತನಯನನ್ನು ಬೇಡುವದಕ್ಕೆ ಪ್ರತಿಯಾಗಿ ತನ್ನ, ಪತ್ನಿಗೆ ಮಗಳನ್ನು ಕೊಡು ಎಂದು ಭಕ್ತವತ್ಸಲನನ್ನು ಪ್ರಾರ್ಥಿಸಲು ಶಿವಲಿಂಗ ಮುಖದಿಂದಲೆ ನಿನ್ನ ಸತಿಯು ಗರ್ಭವತಿಯಾಗುವಳೆಂದು ಧ್ವನಿಯಾಗಲು ಸಂತೋಷಪಟ್ಟು ನಿಜಗೃಹಕ್ಕೆ ಬಂದು ನಡೆದ ಸಂಗತಿಯನ್ನು ಭಾರ್ಯೆಗೆ ತಿಳಿಸಿ ಜಂಗಮರ ತೊತ್ತಾಗಿ ಜಂಗಮವೇ ಸಾಕ್ಷಾತ್ ಲಿಂಗವೆಂದು ಪರಿಭಾವಿಸುತ್ತ ಸುವಿವೇಕಿಯಾಗಿ ಶುದ್ಧಾಚರಣೆಯಿಂದ ಕಾಲಕಳೆಯುತ್ತಿದ್ದನು.

ಕೈಲಾಸಪತಿಯ ಆಶೀರ್ವಾದದಿಂದ ಗುಣವತಿಯು ಪುತ್ರಿವಿಭೂಷಿತೆಯಾಗಲು ಜಡನಾದಬ್ರಹ್ಮನಲಿಖಿತದಂತೆ ಹುಟ್ಟಿದ ಶಿಶುವು ಇದಲ್ಲ ? ಕೇವಲ ಸೃಷ್ಟಿ, ಸ್ಥಿತಿ, ಲಯ, ತಿರೋಧಾನ, ಅನುಗ್ರಹಕ್ಕೆ ಅಧಿಪತಿಯಾದ, ಪರಬ್ರಹ್ಮನಾದ ತ್ರಿಪುರಹರನಾದ ಸೋಮನ ವರದಿಂದಲೇ ಪುಟ್ಟಿದ ಮಗಳಾದ್ದರಿಂದ ಆಕೆಗೆ ಸೋಮಪ್ರಭೆ ಎಂಬ ನಿರ್ಮಲವಾದ ಹೆಸರಿಟ್ಟರು. ಆ ಕುಮಾರಿಯು ಶಿವಭಕ್ತಿಯ ಬಳ್ಳಿಯೋ ಶಿವಕೀರ್ತಿಯ ಪುಷ್ಪವೋ, ಶಿವತೇಜವಿಲಾಸದ ಆವಾಸವೋ ಎಂಬಂತೆ ಮಾತಾಪಿತರ ಆನಂದಕ್ಕೆ ಕಾರಣಳಾಗಿ ಅಸದೃಶವಾದ ಸೌಂದರ್ಯದಿಂದ ಮನೋಹರಗಾತ್ರಳಾಗಿ, ಥಳಥಳಿಸುವ ಪೂರ್ಣ ಚಂದ್ರನಂತೆ ಶೋಭಾಯಮಾನಳಾಗಿ, ಕಾಲಕ್ರಮದಿಂದ ಯೌವನವನ್ನು ಹೊಂದಿ, ಶಿವಾನುರಾಗಿಯಾಗಿ ತಂದೆಯ ಜಂಗಮಾರಾಧನೆಯನ್ನು ಕಂಡು ಹಿಗ್ಗುತ್ತಿದ್ದಳು.

ಭಾವಿಕ ಮಹಾಜನರಿಂದ ಮಂಗಲಮಯವಾಗಿ ಬೆಳಗುವ. ಚೋಳನಾಡಿನ ಭೂಪತಿಯಾದ ವಿಕ್ರಮ ಚೋಳನು ಪ್ರಜಾರಂಜಕನಾಗಿ ಧರ್ಮದಿಂದ ಪರಿಪಾಲನೆ ಮಾಡುತ್ತ ಕರಿಯೂರ ಎಂಬ ಪುರದಲ್ಲಿ ವಾಸಿಸುತ್ತಿದ್ದನು. ಈ

ರಾಜನು ತನ್ನ ಮಗನಾದ ಯುವರಾಜ ಪಗಲ್ಚೋಳನು ಸಕಲ ವಿದ್ಯಾನಿಷ್ಣಾತ ನಾಗಿ ಪ್ರಾಪ್ತವಯಸ್ಕನಾಗಲು ತನ್ನ ಪುತ್ರನಿಗೆ ಅನುರೂಪವಾದ ತಕ್ಕ ಸಲ್ಲಕ್ಷಣ ಕನ್ಯೆಯನ್ನು ಹುಡುಕುವದಕ್ಕೆ ಅಮಾತ್ಯವರನಾದ ಗಾಂಗೇಯನಿಗೆ ಆಜ್ಞಾಪಿ ಸಿದನು. ಗಾಂಗೇಯ ಮಂತ್ರಿಯು ಒಳ್ಳೇ ಶುಭಲಕ್ಷಣಾನ್ವಿತಯಾದ ಕನ್ಯೆ ಯನ್ನು ಶೋಧಿಸುತ್ತ ಕಡೆಗೆ ಕಂಜಾರಪುರಾಧಿಪನಾದ ಮಾನಕಂಜರನಲ್ಲಿಗೆ ಬಂದು ಆತನ ಉಗ್ರವಾದ ಶಿವಭಕ್ತಿಗೂ ಜಂಗಮ ನಿಷ್ಠೆಗೂ ಸಂತೋಷಪಟ್ಟು ಆತನ ಮಗಳ ಸೊಬಗನ್ನು ಮತ್ತು ಅನೇಕ ಉತ್ತಮ ಲಕ್ಷಣಗಳನ್ನು ಕಂಡು ವಿಸ್ಮಿತನಾದನು. ಅಹಹಾ ಈ ಕನ್ಯಾಮಣಿಯ ಪ್ರಭೆಯು ಸರ್ವಮಂಗಳೆಯಾದ ಉಮೆಯಂತೆ ಪ್ರಕಾಶಮಯವಾಗಿರುವದು. ಅರುಂಧತಿ, ಅನುಸೂಯೆ, ಈ ಮಹಾಸತಿಯರಂತೆ ಪತಿವ್ರತಾ ಲಕ್ಷಣಗಳು ಅಂದವಾಗಿ ಒಡೆದು ಕಾಣಿಸುವವು. ಮೇಲಾಗಿ ಮಹಾರಾಣಿಯಾಗುವ ಸಮಸ್ತ ಶುಭ ಚಿನ್ಹೆಗಳು ಸ್ಪಷ್ಟವಾಗಿ ತೋರು ತ್ತಿರುವವು. ಇನ್ನು ಲಾವಣ್ಯವು, ಮಕರಧ್ವಜನ ರಾಣಿಯಾದ ರತಿಯ ಚಲ್ವಿ ಕೆಗಿಂತಲೂ ವಿಶೇಷ ವಾಗಿರುವದು. ನಮ್ಮ ಯುವರಾಜನಿಗೆ ಇವಳೇ ಯೋ ಗ್ಯಳು ಎಂದು ಮನದಲ್ಲಿ ನಿಶ್ಚೈಯಿಸಿ ಬಹು ಸಂತೋಷಪಟ್ಟನು. ಧೀವರನಾದ ಗಾಂಗೇಯ ಸಚಿವನು ವಿಕ್ರಮಚೋಳ ಮಹಾರಾಜನಲ್ಲಿಗೆ ಬಂದು ಎಲ್ಲಿ ಸಂಗತಿ ಯನ್ನು ಆಮೂಲಾಗ್ರವಾಗಿ ವಿಜ್ಞಾಪಿಸಿದನು. ವಿಕ್ರಮ ಚೋಳನು:— ತನ್ನ ಗಾಂಗೇಯನೇ ಮಾನಕಂಜರನು ಕುವರಿಯನ್ನು ಕುಮಾರನಿಗೆ ಕೊಡಲಿಕ್ಕೆ ಒಡಂಬಡುವನೋ ಹ್ಯಾಗೆ? ಇದನ್ನು ವಿಚಾರಿಸಬೇಕಾಯಿತಲ್ಲವೇ. ಗಾಂಗೇ ಯನು:—ಭೂಕಾಂತನೇ ಶಿವಭಕ್ತಾಗ್ರಣಿಯಾದ ಮಾನಕಂಜರನು ಅರಿನೃಪ ರಿಗ ಗರ್ವಿತನೆನಿಸುವನಲ್ಲದೆ ಶಿವಭಕ್ತರಲ್ಲಿ ಕಿಂಕರತ್ವವನ್ನು ವಹಿಸುವನು ಅವರ ವರ ಇಚ್ಛಾನುಸಾರವಾಗಿ ವರ್ತಿಸುವನು. ವಿಕ್ರಮಚೋಳನು:—ಮಾನಕಂಜ ರನನ್ನು ಕಂಡು ವಿಚಾರಿಸಿ ವಿವಾಹ ಮಹೋತ್ಸವವನ್ನು ಮಾಡಬಹುದು ಹೀಗೆ ಪ್ರೇಮದಿಂದ ಅಪ್ಪಣೆ ಕೊಟ್ಟನು.

ಅಮಾತ್ಯನಿಂದ ಸೋಮಪ್ರಭೆಯನ್ನು ಯುವರಾಜನಿಗೆ ಕೊಡಲೊಪ್ಪಿದ ಸಂಗತಿಯನ್ನು ತಿಳಿದು ಚೋಳಮಹೀಪತಿಯು ಸಪರಿವಾರನಾಗಿ ಕಂಜಾರಪು ರಕ್ಕೆ ಇಂದ್ರವೈಭವದಿಂದ ಲಗ್ನಮುಹೂರ್ತಕ್ಕೆ ಸರಿಯಾಗಿ ಬಂದು ಮಾನಕಂಜ ರನ ಪ್ರೇಮ ಪುರಸ್ಸರವಾದ ಆತಿಥ್ಯದಲ್ಲಿ ಬಹು ಸಂಭ್ರಮದಿಂದ ಇದ್ದನು. ಪರಿಣಯಕ್ಕಾಗಿ ಸಕಲ ವಸ್ತುಗಳು ಅಣಿಯಾದವು. ವಿವಾಹಮಂಟಪವು ದಿವ್ಯ ಶೋಭೆಯಿಂದ ರಂಜಿಸಿತು. ಅಕ್ಷತಾರೋಪಣವನ್ನು ಮಾಡಲುದ್ಯುಕ್ತವಾಗುವ ಸಮಯಕ್ಕೆ ಚರಿತ್ರನಾಯಕನ ಪುತ್ರಿಯಾದ ಸೋಮಪ್ರಭೆಯನ್ನು ವಿಕ್ರಮ ಚೋಳನ ಪುತ್ರನಾದ ಪಗಲ್ಚೋಳನಿಗೆ ಸಕಲ ಭಕ್ತಮಾಹೇಶ್ವರ ಸಾಕ್ಷಿಯಾಗಿ

ಕೊಡುವೆನು ಎಂದು ಕೈ ನೀರೆರೆದನು. ಮಂಗಲವಾದ್ಯಧ್ವನಿಗಳು ಇಂಪಾಗಿ ಮೊಳಗಿದವು ಪರಿಣಯಕ್ಕಾಗಿ ಆಹ್ವಾನಿಸಲ್ಪಟ್ಟ ಸಕಲರೂ ಆನಂದಾಬ್ಧಿಯಲ್ಲಿ ಮುಳುಗಿದರು.

ಚರಿತ್ರಪುರುಷನ ಅಕುಟಿಲವಾದ ಶಿವಭಕ್ತಿ, ಘನವಾದ ಜಂಗಮಭಕ್ತಿ ಮೂಲಕವಾದ ಪುಣ್ಯಸಂಚಯವು ಕ್ರಮೇಣ ಹೆಚ್ಚೆಚ್ಚಾಗಿ ವರ್ಧಿಸಿ ದ್ವಾದಶಾಕ್ಷನಾದ ವಿಶಾಖನ, ಪಿತನಾದ ಪಂಚಾನನನಿಗೆ ವೇದ್ಯವಾಗಿ ಬಹು ಸಂತೋಷಪಟ್ಟು ನಮ್ಮ ಕಂಜಾರಪುರ ಲಗ್ನಮಂಟಪಕ್ಕೆ ಅಕ್ಷತಾರೋಪಣ ಮಾಡುವ ಕಾಲಕ್ಕೆ ಮುದುಕನಾದ ಜಂಗಮವೇಷವನ್ನು ಧರಿಸಿ ಬಂದು, ಮಾನಕರಂಜನಿಂದ ಬಿಳ್ಕೊಂಡನು. ತಾಪಸಿಯಂತಿರುವ ವೃದ್ಧನ ತೇಜವನ್ನು ಫಾಲದಲ್ಲಿರುವ ವಿಭೂತಿಯನ್ನು ಕಂಠದಲ್ಲೊಪ್ಪುವ ರುದ್ರಾಕ್ಷಗಳನ್ನು ಮನೋಹರವಾಗಿರುವ ಜಡೆಗಳನ್ನು ಆನಂದರಸದ ಉಗಮದಂತಿರುವ ಮುಖಮಂಡಲವನ್ನು ಕಥಾನಾಯಕನು ನೋಡಿ ಆಶ್ಚರಿಪಟ್ಟು ಪುನಃ ಪುನಃ ಭಯಭಕ್ತಿಯಿಂದ ನಮಸ್ಕರಿಸಿ ಪ್ರಭುವೇ ಮುನಿವರ್ಯನೇ ರತ್ನಪೀಠವನ್ನನ್ನಲಂಕರಿಸಿ ನಿಮಗಾವುದು ಇಷ್ಟವೊ ಅದನ್ನು ಬೇಡಿರಿ ನಿಶ್ಚಯವಾಗಿ ಕೊಡುವೆನು. ಜಂಗಮರ ತೃಪ್ತಿಯೆ ನನ್ನ ಮುಖ್ಯ ಕಾರ್ಯವು ಹೀಗೆ ನೂತನವಾಗಿ ಬಂದ ಪುರುಷಶ್ರೇಷ್ಠನಿಗೆ ಆದರದಿಂದ ಪ್ರಾರ್ಥಿಸಿದನು ; ಯತಿಯ ಪಾದಯುಗ್ಮಕ್ಕೆ ಮಜ್ಜನಂಗೈದು ತೀರ್ಥವನ್ನು ಶಿರದಲ್ಲಾಂತುಹರ್ಷೋದ್ರೇಕದಿಂದ ಮೈಗೂದಲು ನೆಟ್ಟಗಾಗಿ ಶರೀರವು ಬೆವರಿಟ್ಟು ಸ್ವರಗಾಗಿ ಸ್ವಾಮಿಯನ್ನು ಪೂಜಿಸಿ ಶಿವಾಕಾರವಾದ ಜಂಗಮ ಮೂರ್ತಿಯೇ ನಿಮ್ಮ ಬಯಕೆಯು ಯಾವದು ಅಪ್ಪಣೆ ಕೊಡಿರಿ ಹೀಗೆ ಸವಿನಯವಾಗಿ ವಿಜ್ಞಾಪಿಸಿದನು. ಭಕ್ತನ ನಿರ್ಮಲ ಹೃದಯವನ್ನು ವೆಗ್ಗಳವಾದ ಜಂಗಮನಿಷ್ಠೆಯನ್ನು ನೋಡಿ ಕಪಟವೇಷಧಾರಿಯಾದ ಸಾಂಬನು :—ಭಕ್ತನೇ ಬೇಡಿದುದನ್ನು ಕೊಡುವೆನೆಂಬ ಛಲವು ಬೇಡಾ ಅನುಚಿತವಾದುದನ್ನು ಬೇಡಲು ಹಿಂಜರಿಯುತ್ತೇನೆ ಹೀಗೆ ಹೇಳಿದನು. ಮಾನಕಂಜರನು ನಸುನಗುತ್ತಾ ನಿಬ್ಬಣದ ಸಮೂಹವು ಬೆರಗಾಗುವಂತೆ :—ಭದ್ರಕಾಯನೇ, ಶುಭ್ರಗಾತ್ರನೇ, ಜಗವಾದಿ ಬೀಜನೇ ತನು-ಮನ-ಧನಗಳೊಳಗೆ ನೀವು ಅಪೇಕ್ಷಿಸಿದುದನ್ನು ಖಂಡಿತವಾಗಿ ಅ-ಭವನಾದ ಭವನಾಣೆಯಾಗಿ ಕೊಡುವೆನು. ಹೀಗೆ ಭಕ್ತಿಪರವಶನಾಗಿ ನಿವೇದಿಸಿದನು. ಆಗ ಈ ಅಪೂರ್ವಜಂಗಮನು :—ಭಕ್ತನೇ ಸೊಬಗಿನರಾಶಿಯಂತೊಪ್ಪುವ ನಿನ್ನ ಮಗಳಾದ ಸೋಮಪ್ರಭೆಯ ಅತಿ ರಮಣೀಯವಾದ ಮುಡಿ....ಇಷ್ಟು ಹೇಳುತ್ತಲೆ ಅದನ್ನು ಬಯಸುವ ಭಾವವನ್ನು ಅಭಿನಯಿಸಿದನು. ನಿಜವಾದ ಶಿವಭಕ್ತಿಯು ಅಳವಟ್ಟವನಿಗೆ ಜಂಗಮನಿಷ್ಠೆಯು ಬಲಿತವನಿಗೆ ಶಮದಮಾದಿಗಳು ಸಹಜವಾಗಿರುವವಲ್ಲವೇ? ಷಡ್ರಿಪುಗಳ

ಸೋಂಕು ಸಹಾ ಇಲ್ಲದಿರುವಾಗ ಮಾನಕಂಜರನಿಗೆ ತಿಲಮಾತ್ರವಾದರೂ ಸಿಟ್ಟು ಬರುವದೇ? ಎಳ್ಳಷ್ಟಾದರೂ ಚಿಂತಿಸಿದನೇ? ಸ್ವಲ್ಪವಾದರೂ ಅನುಮಾನಿಸಿದನೇ? ಮನಸಿಜಹರನನ್ನು ಸ್ಮರಿಸುತ್ತ ಸಂತೋಷಭರದಿಂದ ಭವಮಾಲಿಯೆಂಬ ಬಳ್ಳಿಯನ್ನು ಕತ್ತರಿಸುವನೋ ಎಂಬಂತೆ ಶಿವವ್ರತೆಯಾದ ಪುತ್ರಿಯ ಸೋರ್ಮುಡಿಯನ್ನು ಕೊಯ್ದು ಶ್ರೀ ಜಂಗಮನ ಪಾದಕ್ಕೆ ಅರ್ಪಿಸಿದನು. ಆಗ ಮುನಿಪನು ವಧುವಿನ ಸ್ಥೈರಣೆಯನ್ನು ಕಂಡು ಮಗಳೇ ನಿನಗೂ ನಿನ್ನ ಪತಿಯಾದ ಪಗಳ್ಪೋಳನಿಗೂ ಶುಭವಾಗಲೆಂದು ಆಶೀರ್ವದಿಸಿ ಮೊದಲಿನಂತೆ ಸೋಮಪ್ರಭೆಯ ತಲೆಯನ್ನು ಶೃಂಗರಿಸಿ ಮಾನಕಂಜರನಿಗೆ ತನ್ನ ನಿಜರೂಪವನ್ನು ಪ್ರಕಟಮಾಡಿದನು. ದರಿದ್ರನು ಅಕ್ಷಯ ನಿಧಿಯನ್ನು ಕಂಡಂತೆ ಮಹಾಪಾದವನ್ನು ಕಂಡಕಥಾನಾಯಕನು ಸಂತಸವನ್ನು ಹೊಂದಿ ಅನೇಕ ಪ್ರಕಾರ ಸ್ತುತಿಸಿ, ನಲಿವಾಡಿಪಾಡಿದನು. ಶಂಕರನು ನಿಜಭಕ್ತನಿಗೆ ಶಿವಗಣಪದವಿಯನ್ನು ದಯಪಾಲಿಸಿದನು.

ಕಲ್ಪನಾತೀತನಾದರೂ, ಜಗದಾನಂದಕರನಾದ ವಿಶ್ವಾತ್ಮನನ್ನು ಬಾರಿಬಾರಿಗೂ ಸ್ಮರಿಸಿ ಲೇಖಕನು ತಾಯ್ನುಡಿಯನ್ನು ಗೌರವಿಸುವ ವಾಚಕವೃಂದವನ್ನಭಿವಂದಿಸುವನು

---

ಓಂ.

# ೧೫. ಶ್ರೀ ಪಗಲ್ಪೋಳನು.

ಜಡೆದಲೆಗೆ ತನ್ನ ಶಿರ ಮುಡಿದಲೆಯನಿತ್ತುಶಿವ । ನಡಿಗೆಸಲೆಸಂದಕಲಿಪಗ
ಲ್ಪೋಳನೀ । ನೆಡೆಗೊಂಡಿರೆನ್ನ ಮನದಲ್ಲಿ ॥

[ಶ್ರೀ ನಿಜಗುಣರು]




ಶ್ವರ ಭಕ್ತರಿಂದ ಕಂಗೊಳಿಸುವ ಸುಪ್ರಸಿದ್ಧವಾದ ಚೋಳದೇಶದಲ್ಲಿ ತನ್ನ ರಾಜಧಾನಿಯಾದ ಕರಿಯೂರ ಪಟ್ಟಣದಲ್ಲಿ ವಿಕ್ರಮಚೋಳನೆಂಬ ಭೂಪಾಲನು ಸುಕರವಾಗಿ ರಾಜ್ಯವಾಳುತ್ತಿದ್ದನು. ಮಹಾರಾಜನು ಧರ್ಮಿಷ್ಠನಾದುದರಿಂದ ಆ ಕರಿಯೂರ ಪಟ್ಟಣವು ಸುಶೀಲರು, ಗುಣವಂತರು, ಸಮ

ಯೋಚಿತ ಕಾರ್ಯದಕ್ಷರು, ಧೈರ್ಯ-ಶೌರ್ಯ ಉತ್ಸಾಹಯುತರು, ಶೂರರಾದ ಕಲಿಗಳು, ಔದಾರ್ಯಧುರಂಧರರು, ಸಾಹಿತ್ಯ ಶಾಸ್ತ್ರಜ್ಞರು, ಸಂಗೀತ ಕಲಾ ಕೋವಿದರು, ಕವಿಗಳು, ಶಿಲ್ಪಿಗಳು, ಕೃಷಿಕರು, ವಾಣಿಜ್ಯನಿಷ್ಣಾತರು ಆದ ಸಮಸ್ತ ಸತ್ಪುರುಷರಿಂದ ರಂಜಿತವಾಗಿತ್ತು. ಲಿಂಗಪೂಜಾಭಿಮಾನಿಯಾಗಿ, ಶಿವಾಂಘ್ರಿಪಂಕಜಭೃಂಗನೆಂದೆನಿಸುತ್ತ ಧರಣೀಶ್ವರನು ಬಹು ಕೀರ್ತಿವಂತನಾಗಿ ಚನ್ನಾಗಿ ಪ್ರಜಾಪಾಲನೆಯನ್ನು ಮಾಡುತ್ತಿದ್ದನು. ಗುಣಾಢ್ಯನು, ವೀರನು, ನೀತಿಶಾಸ್ತ್ರ ವಿಶಾರದನು, ಇಂಗಿತಜ್ಞನು, ಸರ್ವರಾಜ ಕಾರಣಗಳಲ್ಲಿ ಅತಿಚತುರನು, ಗೌರೀಶನಲ್ಲಿ ಭಕ್ತಿ ತತ್ಪರನು ಆದ ಗಾಂಗೇಯನೆಂಬ ಮಂತ್ರಿಯು ಧೀರ ಚೋಳಭೂಪನಿಗೆ ರಾಜ್ಯಾಡಳತೆಯಲ್ಲಿ ಅನುಕೂಲವಾಗಿ ಸಮಸ್ತ ಮಾಂಡಲೀಕರಿಂದ ಸಕಾಲಕ್ಕೆ ಕಪ್ಪವನ್ನು ತೆಗೆದುಕೊಳ್ಳುತ್ತಾ ಅರಸನ ಪ್ರೀತಿಗೆ ಪಾತ್ರನಾಗಿ ಪ್ರಜರಿಂದ ಸನ್ಮಾನಿಸಲ್ಪಡುತ್ತಿದ್ದನು.

ಭೂವರನ ಅರ್ಧಾಂಗಿಯಾದ ಕಲಾವತಿಯು ಒಂದುದಿನ ಪುರಾಣ ಕೇಳುವಾಗ "ಅಪುತ್ರಸ್ಯಗತಿರ್ನಾಸ್ತಿ" ಎಂಬ ಉದಾಹರಣೆಯು ಬರಲು ಕಡು ದುಃಖಿತಳಾಗಿ, ಸಂತಾಪಗೊಂಡು ನಿಟ್ಟುಸುರು ಬಿಡುತ್ತ ನಿಜರಮಣನಿಗೆ ಅತಿ ವಿನಯದಿಂದ ತನ್ನ ಬಯಕೆಯನ್ನು ಬಿನ್ನವಿಸಿ ತನಯನುಬೇಕೆಂದು ಆಗ್ರಹಪಟ್ಟಳು ಆಗ ಆ ರಾಣಿಯ ವಲ್ಲಭನು :—ಮಾನಿನಿಯೇ ಹಸಿದವರ್ಗೆ ಅನ್ನವನ್ನು ನೀಡು, ವಿಕಲಾಂಗರಿಗೆ ಕನಕವನ್ನು ಕೊಡು, ಭೂರುದ್ರರಿಗೆ ಗೋದಾನ ಭೂದಾನವನ್ನು ಮಾಡು, ಭೂಸುರರಿಗೆ ಯಥೇಚ್ಛವಾಗಿ ಆದರಿಸು, ಶಿವಯೋಗಿಗಳನ್ನು ಪರಿಶುದ್ಧವಾದ ಮನದಿಂದ ಅನವರತವೂ ನೆನೆಯುತ್ತಿರು ನಿನ್ನ ಮನೋಭೀಷ್ಟವು ನೆರವೇರುವುದು. ಹರಪೂಜೆಯನ್ನು ಮಾಡಿ ನಿಜವಾಗಿ ಕುವರನನ್ನು ಪಡೆಯುವೆನು. ಚಿಂತೆಯನ್ನು ಬಿಡು. ಉಮಾಕಾಂತನನ್ನು ಮರೆಯಬೇಡಾ; ನಿಗಮಾಗಮಾತೀತನಾದ ಮನುಮುನಿದೇವದಾನವ ಪೂಜಿತನಾದ ಶ್ರೀಕಂಠನು ದೀನರಾದ ನಮ್ಮಿರ್ವರನ್ನು ಉದ್ಧರಿಸುವನು; ಸಂದೇಹಬೇಡಾ. ಹೀಗೆ ಪ್ರಾಣಕಾಂತೆಯನ್ನು ಪರಿಪರಿಯಾಗಿ ಸಂತೈಸಿದನು

ಸುಮುಹೂರ್ತವನ್ನು ನೋಡಿ ಕರಿಯೂರೇಶ್ವರ ಪೂಜೆಗಾಗಿ ಆಶಿವನಿಲಯವನ್ನು ಪೊಕ್ಕು ಸಕ್ರಮವಾಗಿ ವಿಭೂತಿಯನ್ನು ತಳೆದು, ಶಾಸ್ತ್ರೋಕ್ತವಾಗಿ ರುದ್ರಾಕ್ಷಗಳನ್ನು ಧರಿಸಿ ನ್ಯಾಸಾದಿಗಳನ್ನು ಪೂರೈಸಿ ಪಂಚಾಮೃತಾಭಿಷೇಕದಿಂದ ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಆಗಮೋಕ್ತವಾಗಿ ಪೂಜಿಸಿ ಶಿವ ಷಡಕ್ಷರಿಯನ್ನು ಏಕಾಗ್ರಚಿತ್ತದಿಂದ ಜಪಿಸಿ ರೋಮೋದ್ಗಮವಾಗಿ, ಆನಂದಾಶ್ರುಗಳನ್ನು ಸುರಿಸುತ್ತ ಕಾಲಾರಿಯಾದ ಪುರಾರಿಯನ್ನು ಅನಂತ ವಿಧವಾಗಿ ಪಾಡಿ,

ಕೊಂಡಾಡುತ್ತಿರುವಾಗ ಲಿಂಗರೂಪಿಯಾದ ಶಿವನು ಆ ಶಿವಲಿಂಗದಿಂದಲೆ ನಿಜ ರೂಪದಿಂದ ಆವಿರ್ಭವಿಸಲು ಮನದಲ್ಲಿ ಧ್ಯಾನಿಸಿದ ಮಹಾ ಮೂರ್ತಿಯು ಪ್ರತ್ಯಕ್ಷ ನಾಗಿರುವವದನ್ನು ಕಂಡು ಮೈಯುಬ್ಬಿ ಸ್ತುತಿಸುತ್ತಾ ರಕ್ಷಿಸು ದೇವಾ ಪುತ್ರನಿಗಾಗಿ ನಿನ್ನನ್ನು ಪ್ರಾರ್ಥಿಸುವೆನು; ಕರುಣಿಸು ಮೃಡನೇ ಎಂದು ನೇವೇದಿಸಿದನು. ಆಗ ಭವನಿವಾರಕನಾದ ಮಹಾ ದೇವನು ಪ್ರಸನ್ನನಾಗಿ ನಿನ್ನ ಅಭಿಲಾಷೆಯು ಕೈಗೂಡುವದೆಂದು ಮಾವಿನ ಹಣ್ಣನ್ನು ಆಶೀರ್ವದಿಸಿ ಆಲಿಂಗದಲ್ಲಿಯೇ ಅಂತ ರ್ಧಾನನಾದನು.

ಪರಮಾನಂದಯುತನಾದ **ಭೂಕಾಂತನು** ತನ್ನ ಅಂತಃಪುರಕ್ಕೆ ಬಂದು ಕಲಾವತಿಯನ್ನು ಕಂಡು ನಡೆದ ಸಂಗತಿಯನ್ನು ಸಂತೋಷದಿಂದ ತಿಳಿಸಿ ಆ ಆಮ್ರಫಲವನ್ನಿತ್ತನು. ಸಮಸ್ತ ಶಿವಾಚಾರಗಳನ್ನು ಪಾಲಿಸುತ್ತ, ಶಿವಪೂಜಾ ನಂದರತಿಯುತಳಾದ ಮಹಾ ರಾಣಿಯು ಒಂದುದಿನ ಬೆಳಗಿನಜಾವದಲ್ಲಿ ಕನಸಿ ನಲ್ಲಿ ಶಿವಲಿಂಗ ವಿಭೂಷಿತನಾದ ತಾಪಸಿಯನ್ನು ಕಂಡು ಆ ವೃತ್ತಾಂತದನ್ನು ಪತಿಗೆ ನಿವೇದಿಸಿದಳು. ಆಗ ಅವನಿಪನು :—ಪ್ರಿಯತಮೆಯೇ ನೀನು ಕನಸಿ ನಲ್ಲಿ ಕಂಡ ಮುನಿಯು ಚಂದ್ರಾಭರಣನು ನಿನ್ನ ಪುಣ್ಯ ಗರ್ಭಾಂಬುಧಿಯಲ್ಲಿ ಪುರಾತನರಲ್ಲೊಬ್ಬನು ನಿಸ್ಸಂದೇಹವಾಗಿ ಅವತರಿಸುವನು.

ಕಾಲಕ್ರಮದಿಂದ ನವಮಾಸ ತುಂಬಿಸುಮುಹೂರ್ತದಲ್ಲಿ ಶಿವಭಕ್ತಿರಸದ ಪೂರ್ತಿಯಂತಿರುವ ಅರ್ಭಕನು ಪ್ರಾಪ್ತವಾದದ್ದನ್ನು ಕಂಡು ದಂಪತಿಗಳು ಹರ್ಷಪಟ್ಟರು; ಪ್ರಜೆಗಳೆಲ್ಲರು ತಮ್ಮ ಯುವರಾಜನು ಉದಯಿಸಿದನೆಂದು ಮಹೋತ್ಸಾಹವನ್ನು ಕಳೆದರು. ಕೋಮಲಗಾತ್ರನಾದ, ಶಿವಪ್ರಸಾದದಿಂದ ಜನಿಸಿದುದರಿಂದ ಶಿವತೇಜೋವಿಶೇಷದಿಂದ ಶೋಭಿಸುವ ಸುಕುಮಾರನಿಗ **ಹಗಲ್ಯೋಳ** ನೆಂಬ ನಾಮಕರಣವನ್ನು ಮಾಡಿದರು. ಕುವರನಿಗೆ ವಿದ್ಯಾಭ್ಯಾಸ ಮಾಡತಕ್ಕ ವಯಸ್ಸು ಪ್ರಾಪ್ತವಾಗಲು ಸತ್ಕುಲೋತ್ಪನ್ನರಾದ ಸುಶೀಲರಾದ ಆಚಾರ್ಯರಲ್ಲಿ ವಿದ್ಯಾರ್ಜನೆಗಾಗಿ ಮಗನನ್ನು ಕಳುಹಲು ಚರಿತ್ರನಾಯಕನು ಚನ್ನಾಗಿ ವಿದ್ಯಾಭ್ಯಾಸವನ್ನು ಪೂರೈಸಿ ರಾಜರಿಗೆ ತಕ್ಕ ಅಶ್ವಾರೋಹಣ ಮೊದ ಲಾದ ಯುದ್ಧಕಲೆಯಲ್ಲಿ ನಿಷ್ಣಾತನಾದನು ಹಾಗು ಶಿವಶಾಸ್ತ್ರಾಧ್ಯಯನದಲ್ಲಿ ವಿಶೇಷಪ್ರವೀಣನಾದನು.

ಯುವರಾಜನು ಯೌವನದೆಶೆಯನ್ನು ಹೊಂದಲು ಮಾತಾಪಿತರು ಪ್ರೀತಿ ಪಟ್ಟು ಅವನ ವಿವಾಹವನ್ನು ಮಾಡಬೇಕೆಂದು ಪರ್ಯಾಲೋಚಿಸಿ, ಸದ್ವಂಶದಲ್ಲಿ ಜನಿಸಿದ ಸಕಲ ಮಂಗಲ ಲಕ್ಷಣಾನ್ವಿತಳಾದ ತಮ್ಮ ಮಗನಿಗೆ ಅನುರೂಪಳು,

ಸದ್ಗುಣಗಳು ಇರುವ ಉತ್ತಮ ಕನ್ಯೆಯನ್ನು ಶೋಧಿಸುವದಕ್ಕೆ ಅಮಾತ್ಯಶ್ರೇಷ್ಠನಾದ ಗಾಂಗೇಯನಿಗೆ ಆಜ್ಞಾಪಿಸಿದರು.

ಅಧಿಕವಾದ ಶಿವಭಕ್ತಿಯುಳ್ಳಾತನಿಗೆ ಅನುರೂಪವಾದ ವಧುವೆಂದರೆ ಘನವಾದ ಈಶ್ವರ ಭಕ್ತಿಯುಳ್ಳವಳು ಸರಿಯಷ್ಟೆ? ಹರಪ್ರಸಾದದಿಂದುಂಟಾದ ಕುಮಾರನಿಗೆ ತಕ್ಕ ಕನ್ಯೆಯಂದರೆ ಪರಮಾತ್ಮನ ಕೃಪೆಯಿಂದ ಪುಟ್ಟಿದ ಕುವರಿಯು ಸಲ್ಲುವುದು ಸಹಜವಷ್ಟೇ? ಶರಣಸಂತತಿಯ ಬಾಂಧವ್ಯಕ್ಕೆ ಅನುಗುಣರಾದವರು ಶಿವಭಕ್ತಿ ಸಂಪನ್ನರಷ್ಟೇ? ಇದೇ ನಿಯಮಾನುಸಾರವಾಗಿ ಕುಶಾಗ್ರಬುದ್ಧಿಯುತನು, ಕಾರ್ಯಾಕಾರ್ಯ ವಿವೇಕಮತಿಯುತನು ಆದ ಗಾಂಗೇಯ ಸಚಿವನು ಕಂಜರಪುರಾಧಿಪನಾದ, ವರಭಕ್ತನಾದ ಮಾನಕಂಜರನ ಮಗಳಾದ ಸುಗುಣಾತಿಶಯದ ಶಿವಭಕ್ತಿಪುಂಜದಂತಿರುವ ಸೋಮಪ್ರಭಾದೇವಿಯನ್ನು ವಧುವನ್ನಾಗಿ ಆರಿಸಿ ಮಹಾರಾಜನಿಗೆ ಶ್ರುತಪಡಿಸಿದನು. ಭಗವತ್ಸಂಕಲ್ಪಾನುಸಾರವಾಗಿ ಲಗ್ನ ಮಹೋತ್ಸವವು ನಡೆಯಿತು. ವಿವಾಹ ಸಮಯದಲ್ಲಿ ಅಕ್ಷತಾರೋಪಣವಾಗುವ ಸ್ವಲ್ಪ ವೇಳೆ ಮುಂಚಿತವಾಗಿ ವಿಶ್ವಾಭಿರಾಮನಾದ ಶಂಕರನು ಜಂಗಮಾಕೃತಿಯನ್ನು ತಾಳಿ ಪರಿಣಯ ಮಂಟಪಕ್ಕೆ ಬಂದು ಮಾನಕಂಜರನಿಗೆ ಆತನ ಮಗಳ ಮುಡಿಯನ್ನು ಬೇಡಲು ವಿಚಾರಪರನು, ಶಿವಭಕ್ತ್ಯಾಧಿಕ್ಯದಿಂದ ಇಂಗಿತಜ್ಞನಾದ ಮಾನಕಂಜರನು ಶಿವಾರ್ಪಣವಾಗಲೆಂದು ಅರ್ಪಿಸಿದನು. ಮಾನಕಂಜರನ ಶ್ರೇಷ್ಠವಾದ ಶಿವಭಕ್ತಿಗೂ ಸೋಮಪ್ರಭೆಯ ಪಿತೃಭಕ್ತಿಗೂ, ಪಗಲ್ಚೋಳನ ನೈಸರ್ಗಿಕ ಅನುಮೋದನೆ-ಅನುಪಮ ಸಹನಶೀಲತೆಗೂ ಸಕಲ ಲೋಕೈಕವಂದ್ಯನಾದ ಮಹಾಸ್ವಾಮಿಯು ಸಂತುಷ್ಟನಾಗಿ ನೂತನ ದಂಪತಿಗಳಿಗೆ ಶುಭವಾಗಲೆಂದು ಆಶೀರ್ವದಿಸಿ ಮಾನಕಂಜರನಿಗೆ ಗಣಪದವಿಯನ್ನು ದಯಪಾಲಿಸಿ ಜಗನ್ನಿಯಾಮಕನು ಅದೃಶ್ಯವಾಗಲು ವಿಕ್ರಮಚೋಳ ದೊರೆಯು ಬೆರಗಾಗಿ ಮೈಮರೆದು ಎಲೈ ಮಂತ್ರಿಯೇ ಇದು ಕನಸೋ ಶಿವಮಯಮಂಟಪದ ವಿಲಾಸವೋ, ತ್ರಿಭುವನಪತಿಯ ಸರಸವಾಡುವ ನಾಟಕವೋ ನನಗೆ ಯಾವದೂ ನಿಷ್ಕರ್ಷೆಯಾಗವಲ್ಲದು ಎಂದು ಶಿವಭಕ್ತರ ಮಹಿಮೆಯನ್ನು ಕಣ್ಣಾರೆ ಕಂಡು ಕೌತುಕಪಟ್ಟನು. ಮಾಂಗಲ್ಯಧಾರಣವಾದ ಬಳಿಕ ಸೋಮಪ್ರಭಾದೇವಿಯೊಡನೆ ಚೋಳಮಹೀಶನು ತನ್ನ ಮುಖ್ಯ ಪಟ್ಟಣವಾದ ಕರಿಯೂರಿಗೆ ಬಂದು ತನ್ನ ಮಗನ ಸದ್ವರ್ತನೆಗೂ, ವಿವೇಕಪರವಾದ ಆಚರಣೆಗೂ, ಪ್ರಜಾನುರಾಗಗುಣ ವಿಶೇಷಕ್ಕೂ, ಶಿವಭಕ್ತಿ ಮಾರ್ಗಾವಲಂಬನೆಗೂ ತಲೆದೂಗಿ ಸಂತೋಷಪಟ್ಟು ಅಮಾತ್ಯನೇ ಪಗಲ್ಚೋಳನು ಯುವರಾಜ ಪಟ್ಟಾಭಿಷೇಕಕ್ಕೆ ಅರ್ಹನಾಗಿರುವದ್ಕು ನಿನಗೆ ಒಪ್ಪಿಗೆಯು ಸರಿಯಷ್ಟೇ ಸುಮುಹೂರ್ತವನ್ನು ನಿಶ್ಚೈಸು. ಶುಭಕಾರ್ಯವನ್ನು ಶೀಘ್ರವಾಗಿ ಪೂರೈಸು.

ಸಮಸ್ತ ರಾಜ್ಯಭಾರವನ್ನು ಯುವರಾಜನು ಧರ್ಮ ನ್ಯೂನತೆಯಾಗದಂತೆ ವಹಿಸಲು ವಿಕ್ರಮಚೋಳನು ಶಿವಧ್ಯಾನೈಕಪರನಾಗಿ, ನಿಶ್ಚಿಂತನಾಗಿ ಸುಖದಿಂದ ಕಾಲ ಕಳೆಯಹತ್ತಿದ್ದನು.

ನಮ್ಮ ಕಥಾನಾಯಕನಾದ ಪಗಲ್ಬ್ಚೋಳನು ಅನುಭವಶಾಲಿಯಾದ ವೃದ್ಧ ಮಂತ್ರಿಯಾದ ಗಾಂಗೇಯನ ಸದುಪದೇಶದಂತೆ ಶಿವಾರಮಣನು ಅನುಮೋದಿಸುವಂತೆ ಪ್ರಜೆಗಳನ್ನು ತನ್ನ ಮಕ್ಕಳಂತೆ ಪರಿಪಾಲಿಸುತ್ತ ಸಪ್ತ ವ್ಯಸನಗಳ ಹಾಗೂ ಅರಿಷಡ್ವರ್ಗದ ಸೋಂಕಿಲ್ಲದೆ ರಾಜನೀತಿಯನ್ನು ಸಂಪೂರ್ಣವಾಗಿ ತಿಳಿದು ಪರಮಶಿವಭಕ್ತನಾಗಿ ತನ್ನ ಮಾವನು ಶಿವಭಕ್ತರಿಗೆ ಅವರು ಬೇಡಿದುದನ್ನು ಕೊಟ್ಟು ಸಾಯುಜ್ಯವನ್ನು ಪಡೆದ ಸಂಗತಿಯನ್ನು ಸ್ಮರಿಸುತ್ತ ಜಡೆ ರುದ್ರಾಕ್ಷ ವಿಭೂತಿಯನ್ನು ಧರಿಸಿದ ಸದ್ಭಕ್ತರನ್ನು ಕಂಡೊಡನೆ ಮೃಡಮೂರ್ತಿಗಳೆಂದು ಪರಿಭಾವಿಸಿ, ನೆರೆನಂಬಿ ಅವರಿಗೆ ಆನತನಾಗಿ ಅವರ ಸಕಲ ಬಯಕೆಗಳನ್ನು ಕೊನೆಗಾಣಿಸುತ್ತ ಶಿವಾನಂದಪರನಾಗಿದ್ದನು.

ಹಯಾರೋಹಣವನ್ನು ಮಾಡಿ ಅರಿಗಳೊಡನೆ ಹೋರಾಡಿ ವಿಜಯಶಾಲಿಯಾಗಿ ವಿಭೂತಿರುದ್ರಾಕ್ಷಗಳಿಂದೊಪ್ಪುವವರನ್ನು ಕಂಡೊಡನೆ ಅವರನ್ನು ಸನ್ಮಾನಿಸಿ ಅವರನ್ನು ಶಂಕರನ ಅವತಾರಿಗಳೆಂದು ತಿಳಿಯುತ್ತ ಅವರಿಗೆ ಯಥೇಷ್ಟವಾಗಿ ಧನವನ್ನು ಕೊಡುತ್ತ ಮೊನೆಯಾಂಡನೆಂಬ ವೀರನು ಆ ಚೋಳನಾಡಿನಲ್ಲಿ ಖ್ಯಾತಿಯನ್ನು ಪಡೆದು ಕರಿಯೂರಿಗೆಬಂದು ನಮ್ಮ ಕಥಾಪುರುಷನನ್ನು ಕಂಡು ವಿನಯದಿಂದತಲೆಬಾಗಿ ವಂದಿಸಿ ತನ್ನವೃತ್ತಿಯನ್ನು ಅರುಹಿ ಆರಾಜನ ಆಶ್ರಯವನ್ನು ಹೊಂದಿದನು. ನೂತನವಾಗಿ ತನ್ನ ಬಳಿಗೆಬಂದ ಕಲಿಯ, ಮುಖಕಾಂತಿಯನ್ನು ಹಾಗೂ ನಿಜವಾದ ಶಿವಭಕ್ತರಲ್ಲಿರುವ ಒಂದು ವಿಶಿಷ್ಟತರವಾದ ಶಿವಪ್ರಭೆಯನ್ನು ಆ ಮೊನೆಯಾಂಡನಲ್ಲಿ ಕಂಡು ಪಗಲ್ಬ್ಚೋಳನು ಬಹುಸಂತೋಷಪಟ್ಟು ನನಗೆ ಮಂಗಲವಾಗುವ ವೇಳೆಯು ಸಮೀಪಿಸಿತು ಎಂದು ಭಾವಿಸತೊಡಗಿದನು.

ರಾಜನೀತಿನಿಪುಣನಾನ ಗಾಂಗೇಯಮಂತ್ರಿಯೊಡನೆ ಚ್ಯುತಿಯಿಲ್ಲದಂತೆ ಧರ್ಮಾಚರಣೆಯಿಂದ ನಡಿಯುವ ಕಲಿಯಾದ ಪಗಲ್ಬ್ಚೋಳರಾಜನ ಪರಾಕ್ರಮಕ್ಕೆ ಸಕಲಸಾಮಂತರು ಭಯಭೀತರಾಗಿ ನಿಯಮದಿಂದ ಪೊಗದಿಯನ್ನು ಕೊಡುತ್ತಿದ್ದರು. ಆದರೆ ಪಾಂಡ್ಯನುಮಾತ್ರ ತಂದು ಮುಟ್ಟಿಸಲಿಲ್ಲವಾದ್ದರಿಂದ ನಮ್ಮನರಪುಂಗವನು ಆ ಪಾಂಡ್ಯರಾಜನ ಮೇಲೆ ಯುದ್ಧವನ್ನು ಸಾರಲಿಕ್ಕೆ ಅಪ್ಪಣೆಮಾಡಿದ ಪ್ರಕಾರ ಸಕಲ ಸನ್ನಾಹವನ್ನು ಮಾಡಿ ಮೊನೆಯಾಂಡನು ರಣೋತ್ಸುಕನಾಗಿ ಅರಿನೃಪನಿಗೆ ಎದುರಾದನು ಪಗಲ್ಬ್ಚೋಳನು ಮೊನೆಯಾಂಡನನ್ನೊಡಗೊಂಡು ಹಗೆಗಳೊಡನೆ ಅತಿಪರಾಕ್ರಮದಿಂದ ಸೈನ್ಯವನ್ನೆಲ್ಲ ಚದರಿಸಿವೈರಿಗಳ

ತಲೆಗಳನ್ನು ತರಿದನು; ಬಹಳಶೌರ್ಯದಿಂದ ಪಾಂಡ್ಯನನ್ನು ಸೋಲಿಸಿದನು. ಸರ್ವಸಾಕ್ಷಿಭೂತನಾದ, ಕರ್ತವ್ಯಪರಾಙ್ಮುಖರಿಗೆ ಅರ್ಥಾತ್ ಪಾಪಿಗಳಿಗೆ ಭೀಮನೆನಿಸಿದರೂ ನಿಜಭಕ್ತರಿಗೆ ಸೌಮ್ಯನೆನಿಸಿದಶಂಭುವು ಪಗಲ್ಕೋಳನ ಅಸದೃಶವಾದ ಕಲಿತನಕ್ಕು, ಜಡೆ, ವಿಭೂತಿ, ರುದ್ರಾಕ್ಷಗಳನ್ನು ತಳೆದವರನ್ನು ಶಿವನಂತೆ ಭಾವಿಸುವ ಆತನ ಅತಿಶಯವಾದ ಭಕ್ತಿಗೂ ಸಂತೋಷಪಟ್ಟು ಮಾಯಾವಿಡಂಬವನ್ನು ವಿರಚಿಸಿದನು. ಅದಂತೆನೆ :—

ನಮ್ಮ ಕಲಿಪುಂಗವನು ತನ್ನ ಸೈನಿಕರಿಗೆ ವೈರಿಗಳತಲೆಗಳನ್ನು ತಂದೊಪ್ಪಿಸುವವರಿಗೆ ತಲೆಗೊಂದರಂತೆ ಹೊನ್ನನ್ನು ಕೊಡುವೆನೆಂದು ಸಾರಿದ್ದರಿದ ಮೂರ್ಖನಾದ ಒಬ್ಬಪಾತಕಿಯು, ಒಡುತ್ತಿರ್ಪ ಪಡೆಯಲ್ಲಿ ಸಿಕ್ಕಿದ ಭಕ್ತನನ್ನು ಬೆಂಬಿಡದಟ್ಟಿ ತನ್ನ ಖಡ್ಗದಿಂದ ಆತನ ಜಡೆದಲೆಯನ್ನು ಹೊಡೆದು ಕೆಡವಿದನು.

ಇತ್ತ ಪಗಲ್ಕೋಳಭೂಪತಿಯು ಒಡ್ಡೋಲಗದಲ್ಲಿ ಕುಳಿತು ತನ್ನ ಸೈನಿಕರಿಗೆ ಅವರು ತಂದಿರುವ ವೈರಿಗಳ ತಲೆಗೊಂದರಂತೆ ವರವನ್ನು ಕೊಟ್ಟು ಕಳುಹಿಸುತ್ತಿರಲು ಒಬ್ಬ ಪಾತಕಿಯು ಶಿವಭಕ್ತನ ತಲೆಯನ್ನು ತರಲು ಅದನ್ನು ನಮ್ಮ ವೀರನೃಪತಿಯು ಕಂಡು ಶಿವಮಂತ್ರವನ್ನು ಮನದಲ್ಲಿಧ್ಯಾನಿಸಿ, ಶಿವಶಿವಾ! ನಾನು ಕಡುಪಾಪಿಯಾದನು. ಶಿವಭಕ್ತನವಧೆಯಿಂದ ನನಗೆ ಮಹಾಪಾಪವು ಸಂಘಟಿಸಿತು ನನ್ನ ಸ್ವತ್ವವು ಅಳಿದಂತಾಯಿತು ವಿಭೂತಿ ರುದ್ರಾಕ್ಷವನ್ನು ಧರಿಸಿದವರನ್ನು ಮತ್ತು ಜಡೆದಲೆಯವರನ್ನು ನೋಡಿದೊಡನೆ ಸಾಕ್ಷಾತ್ಗೌರೀಶನೆಂದು ಭಾವಿಸಿ ಸನ್ಮಾನಿಸುವೆನೆಂಬ ನನ್ನ ಛಲವು ಇಂದಿಗೆ ಬಯಲಾಯಿತು. ನಾನೇಕೆ ನನ್ನಸೈನಿಕರಿಗೆ ಅರಿಗಳ ಶಿರಗಳನ್ನು ತಂದೊಪ್ಪಿಸುವದಕ್ಕೆ ಆಜ್ಞಾಪಿಸಿದೆನು ನನ್ನ ವಿವೇಕವು ಹಾಳಾಗಿ ಹೋಯಿತು; ಅಕಟಕಟಾ ಶಿವಭಕ್ತನತಲೆಯನ್ನು ನೋಡಬೇಕಾಯಿತಲ್ಲವೆ? ಅಯ್ಯೋ ಮಹಾಪಾಪ, ಅಕ್ಷಮ್ಯವಾದ ಅಪರಾಧವಾಯಿತು, ಎಂದು ಹೇಳಿ ಪರಿಪರಿಯಿಂದ ತಳಮಳಗೊಂಡು, ಕಡುನೊಂದು ಅನೇಕವಿಧವಾಗಿ ಪಶ್ಚಾತ್ತಾಪಪಟ್ಟು ಆ ಶಿವಭಕ್ತನ ತ್ರಿಪುಂಡ್ರಭೂಷಿತವಾದ ಜಡೆದಲೆಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಸಿಂಹಾಸನದಲ್ಲಿರಿಸಿ ಸುಗಂಧವನ್ನು ತೊಡೆದು ಪತ್ರಪುಷ್ಪಾದಿಗಳಿಂದ ನಿರ್ಮಲವಾದ ಭಕ್ತಿಯಿಂದ ಅರ್ಚಿಸಿ ನಮಸ್ಕರಿಸುವದನ್ನು ಸಭಾಜನರುನೋಡಿ ಬೆರಗಾಗುತ್ತಿರಲು, ನಿಷ್ಕಾರಣವಾಗಿ ಶಿವಭಕ್ತನ ಜಡೆದಲೆಯನ್ನು ತರಿಸಿದವಕ್ಕೆ ನನ್ನ ಮುಡಿದಬೆದಂಡವೆ ಶಿಕ್ಷೆಯವೆಂದು ನಿರ್ಧರಿಸಿ ಒರೆಯೊಳಗಿಂದ ತನ್ನ ಖಡ್ಗವನ್ನು ಹೊರಗೆಳೆದು ಬೊಬ್ಬಿರಿದನು. ಶಿವಭಕ್ತಾಗ್ರಣಿಯಾದ ಈತನಸಾಹಸಕ್ಕೆ ದೇವತೆಗಳು ಶಿವಶಿವಎಂದೆನುತ ನೋಡುತ್ತಿದ್ದರು. ಶಿವನಾಮೋಚ್ಚಾರಣೆಯನ್ನು ಮಾಡುತ್ತ

ಪಗಲ್ಪೋಳನು ಸರಸರನೆ ತನ್ನ ತಲೆಯನ್ನು ಕತ್ತರಿಸಲು ಸುರರು ಉಘೆ, ಉಘೆ ಎಂದು ಕೊಂಡಾಡಿ ಪೂವಿನಮಳೆಯನ್ನು ಕರೆದರು. ಭಕ್ತೋದ್ಧಾರಕನಾದ ಪರ ಮಾತ್ಮನು ಒಡನೆಯೆ ಅಲ್ಲಿಗೆಬಂದು ವೀರಪಗಲ್ಪೋಳನ ಕೈಯಲ್ಲಿರುವ ಆತನ ಶಿರವನ್ನು ಮುಂಡಕ್ಕೆಜೋಡಿಸಿ ಜೀವಕಳೆಯನ್ನುದಯಪಾಲಿಸಿ ಕಾರುಣ್ಯದಿಂದ ನೋಡುತ್ತ, ಸುರಭಿಯು ತನ್ನ ಎಳಗರುವನ್ನು ನೆಕ್ಕುವಂತೆ ಆ ಶಿವಭಕ್ತಾಗ್ರಣಿಯ ಮೈಯನ್ನು ತನ್ನ ಅಮೃತಹಸ್ತದಿಂದಸವರಿದನು. ಪಗಲ್ಪೋಳನು ದುರಿತಹರ ನಾದ ಪರಮಾತ್ಮನನ್ನು ಕಣ್ತುಂಬಾನೋಡಿ ಅನೇಕ ವಿಧವಾಗಿ ಸ್ತುತಿಸಿ ರೋ ಮಾಂಚನಗೊಂಡು ಆನಂದಬಾಷ್ಪಗಳನ್ನು ಸುರಿಸಲು ಮಂಗಲಸ್ವರೂಪನಾದಗಿರಿ ಜಾಪತಿಯು :—ಭಕ್ತನೇ ನಿನ್ನ ಭಕ್ತಿಗೆ ಮೆಚ್ಚಿದೆನು ; ನಿನಗೆಬೇಕಾದ ವರವನ್ನು ಬೇಡು ಎಂದನು. ಆಗ ನಮ್ಮ ವರಭಕ್ತನು :—ದೇವಾ ! ಗತಪ್ರಾಣನಾಗಿರುವ ಆ ಶಿವಭಕ್ತನನ್ನು ಉದ್ಧರಿಸು ಎಂದು ಬಿನ್ನವಿಸಲು ಅದರಂತೆ ಮಹಾಸ್ವಾಮಿಯು ಅನುಗ್ರಹಿಸಿದನು. ಪುನಃಪಗಲ್ಪೋಳನು:—ದಯಾಘನನೇ ಮಾನಕಂಜರಾತ್ಮಜೆ ಯಾದ ನಿನ್ನ ಪುಣ್ಯಾಭಿದಾನವನ್ನ ತಳೆದ ನನ್ನ ಸತಿಗೆ ನಿನ್ನ ನಿಜಭಕ್ತಿಯನ್ನಿತ್ತು ರಕ್ಷಿಸೆನ್ನಲು, ಶಂಕರನು,—ಎಲೈ ಭಕ್ತನೆ ದಂಪತಿಗಳಾದ ನಿಮಗೆ ವಿವಾಹಕಾ ಲಕ್ಕೆ ಶುಭವನ್ನಾಶೀರ್ವದಿಸಿರುವೆನು ಅದಕ್ಕಾಗಿಯೆ ಈಗ ಬಂದಿರುವೆನು. ಅಷ್ಟ ರಲ್ಲಿ ಸೋಮಪ್ರಭಾದೇವಿಯು ಗಂಡನ ವಿಜಯವನ್ನು ಕೇಳಿ ಆತನಿದ್ದಲ್ಲಿಗೆ ಬಂದು ಪಾತಿವ್ರತ್ಯದ ಸದ್ಭಾವದಿಂದಲೂ ನಿಸ್ಸೀಮವಾದ ಶಿವಭಕ್ತಿಯ ಪ್ರಭಾವ ದಿಂದಲೂ ಶಶಿಧರನನ್ನು ಕಂಡು ಭಕ್ತಿಪರವಶಳಾಗಿ ಮಹಾಪಾದಕ್ಕೆರಗಿದಳು. ಆಗ ಸೋಮಾಂಕನು :—ಎಲೈ ಮಗಳೇ ನಿನ್ನ ಪತಿಯಭಕ್ತಿಗೆ ಹರ್ಷವಾಯಿತೆಂದು ಅವಳ ಶಿರದಲ್ಲಿ ಅಭಯಹಸ್ತವನ್ನಿಟ್ಟನು. ದಂಪತಿಗಳೀರ್ವರಿಗೂ ಹಾಗೂಪ್ರಾಣ ವನ್ನು ಪಡೆದ ಶಿವಭಕ್ತನಿಗೂ ಗಣಪದವಿಯನ್ನು ಅನುಗ್ರಹಿಸಿ ಜಗತ್ಪತಿಯು ಇಚ್ಛಾನುಸಾರವಾಗಿ ಸಾಗಿದನು.



೬೦.

# ೧೬. ಕಲಿಕಾಮದೇವರು



ಶಿವನ ಮೆಲ್ಲಡಿನೋಯಲವನಿಯೊಳುನಡಿಸುತಿರೆ । ತವೆಮುಳಿದು ನಂಬಿ
ಯೊಳು ಸಂದಕಲಿಕಾಮ । ನವಿರತಂಲೇಸುಗೊಡಲೆನಗೆ ॥

[ಶ್ರೀ ನಿಜಗುಣರು]




ಕ್ತಿಕಮಹಾಜನರಿಂದ ನೆಲಸಿದುದರಿಂದ ಬೆಳಸಿನಿಂದಲೂ, ಜಲನಿಧಿಗಳಿಂದಲೂ, ಪೂರಿತವಾದ ಮನೋಹರವಾದ ಚೋಳ ಭೂಮಿಯ ಮಧ್ಯದಲ್ಲಿಮೆರೆಯುವ ತಿರುನಲ್ಲೂರೆಂಬ ಪಟ್ಟಣವು ದೇವಾಲಯಗಳಿಂದಲೂ, ಈಶಭಕ್ತರಿಂದಲೂ ಅನೇಕಚಿತ್ರಾಕರ್ಷಕ ಕಟ್ಟಡಗಳಿಂದಲೂ ಶೋಭಿಸುತ್ತಿದ್ದುದರಿಂದ ಸತ್ಪುರವೆಂದು ಹೆಸರಾಗಿತ್ತು.

ಶಿವಧ್ಯಾನೈಕಪರನಾಗಿ, ಶಿವಾಚಾರಗಳನ್ನು ಆಚರಿಸುತ್ತ, ಶಿವಾನಂದಮಗ್ನನಾಗಿ, ಶಿವಭಕ್ತರಶ್ರೇಯಸ್ಸನ್ನು ಇಚ್ಛಿಸುವಾತನಾಗಿ ಶಿವಭಕ್ತರ ಉತ್ಕರ್ಷಪರಂಪರೆಯೆ ತನ್ನ ಅನವರತವಾದ ಬಯಕೆಯುಳ್ಳಾತನಾಗಿ ಶಿವಭಕ್ತರ ಸುಖದುಃಖಗಳಲ್ಲಿ ತಾನು ಪಾಲುಗಾರನಾಗಿ, ದುಃಖಿಗಳ ಕಷ್ಟವನ್ನು ಹೋಗಲಾಡಿಸುವದಕ್ಕೆ ಹೆಣಗಾಡಿ, ಅಕ್ರಮವಾದ ನಡೆಯನ್ನು ಕಂಡರೆ ಅದನ್ನು ಸಾಹಸಪಟ್ಟು ಸರಳವಾದ ಮನಸಿನಿಂದ ತಿದ್ದುವದಕ್ಕೆ ಯತ್ನಮಾಡುವದು ಈ ರೀತಿಯಾಗಿ ಸಕಲಸನ್ಮಾರ್ಗಾವಲಂಬನೆಯುಳ್ಳಾತನೇ ಹರಭಕ್ತನೆಂಬುವದರಗುಟ್ಟು.

ಕಲಿಕಾಮನೆಂಬ ಕ್ಷಿತಿಪನು ಬಹುಕೀರ್ತಿವಂತನಾಗಿ, ವೀರಭಕ್ತನಾಗಿ ಆ ತಿರುನಲ್ಲೂರೆಂಬಪುರದಲ್ಲಿ ಅಲಂಕಾರಪ್ರಾಯನಾಗಿ ರಂಜಿಸುತ್ತಿದ್ದನು. ಆ ಮಹಾರಾಯನು ಕಠಿಣಾತ್ಮರಿಗೂ, ಶಿವಾರ್ಚನೆಗಳಿಲ್ಲದ ಕರ್ಮಠರಿಗೂ ಶಿವಭಕ್ತಿವಿಹೀನರಿಗೂ ಶಿವವಿರೋಧಿಗಳಾದ ಕಾಪುರುಷರಿಗೂ ಸಿಂಹವಿಕ್ರಮನಾಗಿ ಭವಕುಜಕುಠಾರನಾಗಿ ಮೆರೆಯುತ್ತಿದ್ದನು.

ಜನಾರ್ದನವಂದ್ಯನಾದ ಪುರುಷಶ್ರೇಷ್ಠನಾದ ಅಪ್ರಮೇಯನಾದ ಶಿವನಲ್ಲಿ ಅತ್ಯುಗ್ರವಾದ ಭಕ್ತಿಯುಳ್ಳಾತನಾಗಿ ಕಟ್ಟಾದ ಆಚಾರ-ಭಕ್ತಿಯಿಂದೊಪ್ಪುವ

ನಮ್ಮ ಕಥಾನಾಯಕನು ತಿರುವಾರೂರಿನಲ್ಲಿರುವ * ಸೌಂದರನಂಬಿಯಲ್ಲಿ ವಿಶ್ವಪತಿಯಾದ ಪರಮಾತ್ಮನು ಆತನ ಇಚ್ಛಾನುವರ್ತಿಯಾಗಿ ಸೇವೆಯನ್ನು ಮಾಡುವ ಸಂಗತಿಯನ್ನು ಕರ್ಣಪರಂಪರೆಯಾಗಿ ಕೇಳಿ ಬಹುಪರಿಯಾಗಿನೊಂದು ಅತಿದುಃಖಿತನಾಗಿ ಗಿರೀಶನ ಮೃದುವಾದಪಾದಗಳು ನೋವಾಗಿ ಗಾಸಿಯಾಗುವವೆಂದು ಬಗೆದು ಉಮೇಶನನ್ನು ಕುಂಟಣಿತನಕ್ಕೆ ಹಚ್ಚಿದ ಪಾಪಿಯಾದ ನಂಬಿಯನ್ನು ತರಿದು ಬಿಡುವೆನೆಂದು ಅತಿರೋಷಗೊಂಡನು. ಹೀಗೆ ಭಕ್ತಿರಸಾವೇಶದೊಡನೆ ಕೋಪಗೊಂಡು ನಮ್ಮ ಚರಿತ್ರನಾಯಕನು ತಿರುವಾಲೂರತ್ತಣಿಂದಬಂದ ಓರ್ವನನ್ನು ಕಂಡು ಯಾವಕಡೆಯಿಂದ ದಯಮಾಡಿದಿರೆಂದು ಕೇಳಲು ಆತನು ಸೌಂದರನಂಬಣ್ಣನ ಪಟ್ಟಣದಿಂದ ಬಂದೆನೆಂದು ಹೇಳಲು ಖಡ್ಗದಿಂದ ಆತನ ಶಿರವನ್ನು ಚಂಡಾಡಿದ್ದನ್ನು ನೋಡಿ ಜನರು ಬೆದರಿದರು. ಈ ರೀತಿಯಾಗಿ ತಿರುವಾಲೂರಿಂದ ತಿರುನೆಲ್ಲೂರಿಗೆ ಬಂದವರನ್ನೂ ಕಲಿಕಾಮಭೂಪನು ತರಿದಿಕ್ಕುವದನ್ನು ನಂಬೆಣ್ಣನು ಕೇಳಿಕೋಪಾತಿರೇಕದಿಂದ ತಲ್ಲಣಗೊಂಡು ದುಷ್ಟವೀರನಾದ ಕಲಿಕಾಮನಗರ್ವಭಂಗವನ್ನು ಮಾಡಿಕೆಡಹುವೆನೆಂದು ಯುದ್ಧದ ಸಲಕರಣೆಗಳಿಂದ ಯುಕ್ತನಾಗಿ ಭಯಂಕರವಾಗಿ ಸಿಂಹನಾದವನ್ನು ಗೈಯುತ್ತ ಕಾದುವದಕ್ಕಾಗಿ ಹೊರಟು ಆತನ ಪಟ್ಟಣವನ್ನು ಸೌಂದರನು ಮುತ್ತಿದನು. ಉಭಯನೃಪರು ವೀರಾವೇಶದಿಂದ ಜಯಾಪೇಕ್ಷೆಯುಳ್ಳವರಾಗಿ ಅತಿಕಲಿತನದಿಂದ ಒಬ್ಬರೊನ್ನೊಬ್ಬರು ಕೆಣಕಿದರು. ಕಲಿಕಾಮಭೂವರನು, ಎಲೇ ಸೌಂದರಾ ಮೃಡನನ್ನು ಕುಂಟಣಿಯಾಗಿ ನಡಿಸಿದ ದುಃಳಾ ಶಿವದ್ರೋಹಿ, ದುಷ್ಕರ್ಮಿ ಭಯದಿಂದೋಡ ಬೇಡಾ ; ನಿಲ್ಲು ನಿನ್ನನ್ನು ಗತಿಗಾಣಿಸುವೆನೆಂದು ಜಡಿದನು. ಘೋರತರವಾಗಿ ಹೀಗೆ ನಡೆದ ಧುರದಲ್ಲಿ ನಂಬೆಣ್ಣನು ಪ್ರತಿಪಕ್ಷದ ಅತಿಶಯವಾದ ಪರಾಕ್ರಮವನ್ನು ಕಂಡು ಉಪಾಯದಿಂದ ಮೆಲ್ಲಗೆ ಸರಿಯುತ್ತ ಅಪಜಯವು ಬರುವದನ್ನು ತಿಳಿದು ಕಾಳಗದಿಂದ ಹಿಂದೆಗೆದು ಓಡಿದನು.

---

* ಈತನು ಶಿವಪ್ರಸಾದದಿಂದ ದ್ವಿಜರಾದ ಯಸ್ಯಜ್ಞಾನದೇವಿ, ಜಡೆಯನ್ನೈನಾರು ಎಂಬ ಜಾಯಾಪತಿಗಳಿಗೆ ಸುತನಾಗಿ ಪುಟ್ಟಿ ಹಸುಳನಾಗಿರುವಾಗಲೆ ಶಿವಾಧ್ಯಾನಸಂಪನ್ನನಾದ ತಂದೆಯಿಂದ ಶ್ರೀಭಸಿತರುದ್ರಾಕ್ಷಾದಿಗಳಿಂದ ಯುಕ್ತನಾಗಿ ಶ್ರೇಷ್ಠವಾದ ಪಂಚಾಕ್ಷರಮಹಾಮಂತ್ರವನ್ನು ಅರಿತುಕೊಂಡು ಪರಶಿವನ ಮಗನಂತೆ ಇರುತ್ತಾ ತನ್ನಿಷ್ಟಾನುಸಾರವಾಗಿ ಸುಖವಾಗಿ ಇರುತ್ತಿದ್ದನು. ಚಿಕ್ಕವನಿರುವಾಗ ಬಾಲಕರೊಂದಿಗೆ ಓಣಿಯಲ್ಲಿ ಆಡುತ್ತಿರುವಾಗ ಮದಿಸಿದ ಒಂದು ಆನೆಯು ಈತನೆಡೆಗೆ ಓಡಿಬರಲು ಎಲ್ಲಮಕ್ಕಳು ಬೆದರಿ ಸರಿದು ಸುರಕ್ಷಿತಸ್ಥಳಗಳಿಗೆ ಹೊರಟುಹೋದರು. ಸೌಂದರನುಮಾತ್ರ ಧೀರತನದಿಂದಲೂ, ಗಾಂಭೀರ್ಯದಿಂದಲೂ ತಟಸ್ಥನಾಗಿ ಅಲ್ಲಿಯೇ ನಿಂತುಕೊಂಡನು. ಆಗ ಅವನ ತಾಯಿಯು ಗಾಬರಿ

ನಮ್ಮ ಚರಿತ್ರಪುಂಗವನು ತನ್ನ ಮನೆಗೆ ಬಂದು ಶಿವಲಿಂಗಪೂಜಾನುರಕ್ತನಾಗಿ ಶಿವಾಗಮ ಶ್ರವಣ ಶೀಲನಾಗಿ ಶಿವಧ್ಯಾನಪರನಾಗಿ ಮಾಹೇಶ್ವರನನ್ನು ಅರ್ಚಿಸುತ್ತ, ಶಿವಭಕ್ತಕಲ್ಪದ್ರುಮನಾಗಿ ಗಣಾಚಾರ ವಿಚಕ್ಷಣ ಮಣಿಮುಕುಟಪ್ರಾಯನಾಗಿದ್ದನು.

ಸಮರದ ಪರ್ಯವಸಾನವು ಈರೀತಿಯಾಗಿ ಪರಿಣಮಿಸಲು ಭಕ್ತಪ್ರಿಯನಾದ ಸಾಂಬನು ಕಲಿಕಾಮನ ಭಕ್ತಿಯನ್ನು ಪರೀಕ್ಷಿಸಿನೋಡುವೆನೆಂದು ತಿರುನಲ್ಲೂರಿಗೆ ಜಂಗಮವೇಷಧಾರಿಯಾಗಿ ಬಿಜಯಮಾಡಿದನು. ಗಣಾಚಾರಪಟುವಾದ ಕಲಿಕಾಮಲಲಾಮನು ಈ ಜಂಗಮನು ಬಂದೊಡನೆ, ಶುಭಲಕ್ಷಣಗಳು ತಲೆದೋರಲು, ಲಿಂಗರಮಣನ ಇಚ್ಛೆ ಇನ್ತಂತಾಗಲೆಂದು ಹಾರೈಸಿ ಅರ್ಘ್ಯಪಾದ್ಯಾಚಮನೀಯಾದಿಗಳನ್ನು ಕೊಟ್ಟು ಸ್ನಾನಮಾಡಿಸಿ ಮಡಿಬಟ್ಟೆಯನ್ನುಡಿಸಿ ಮನದಣಿಯುವಂತೆ ಪೂಜಿಸಿ ಪರಮಪವಿತ್ರವಾದ ಮಹಾಪಾದದ ತೀರ್ಥವನ್ನು ಕೈಗೊಂಡು, ಪಾವನತರವಾದ ಪ್ರಸಾದವನ್ನು ಸವಿದು ಮಹಾನುಭಾವರೇ ಎಲ್ಲಿಂದಬಂದಿರೆಂದು ವಿನಯದಿಂದ ಕೇಳಿದನು. ಆಗ ಈ ನೂತನವರಜಂಗಮನು ತ್ವರಯಿಂದೆದ್ದು ತನ್ನ ವಲ್ಕಲವನ್ನು ಹೊದ್ದು, ಕಮಂಡಲವನ್ನು ತೆಗೆದುಕೊಂಡು ಕೋಲನ್ನು ಊರುತ್ತ ಶಿವನಲ್ಲಿ ಹೆಚ್ಚಾಗಿ ನಂಬಿದರೂ ಆತನನ್ನೇ ಅನುಚಿತಕಾರ್ಯಕ್ಕೆ ಹಚ್ಚಿರುವ ಆ ನಂಬೆಣ್ಣನಲ್ಲಿರುವದಕ್ಕೆ ಒಪ್ಪದೆ ಬಂದೆನೆಂದು ಹೇಳುತ್ತ ಭರದಿಂದೋಡಹತ್ತಲು ಕಲಿಕಾಮನು ಅಕ್ಷಣವೇ ವರೆಯಿಂದ ಕತ್ತಿಯನ್ನು ಹಿರಿದು ಜಂಗಮನನ್ನು ವೇಗದಿಂದ ಬನ್ನಟ್ಟಿದನು. ಕಪಟರೂಪವನ್ನು ಧರಿಸಿದ ಶಂಕರನು ಆ ವೀರನ ಕೈಗೆ ಸಿಗುವಂತೆ ನಟಿಸುತ್ತಾ ಬಹುದೂರ ಬಂದು ಆತನ ಕೈಗೆ ಸಿಲುಕದೆ ಶೀಘ್ರವಾಗಿ ತಿರುನಲ್ಲೂರ ಸೀಮೆಯನ್ನು ಸೇರಲು ಆ ಪಾತಕಿಯ ಭೂಮಿಯಲ್ಲಿ ನಾನು ಹೆಜ್ಜೆಯನ್ನಿಡಲಾರೆನೆಂದು ಕಲಿಕಾಮನು ಹಿಂದಿರಿಗಿ ತನ್ನ ನಿಜಪುರಿಗೆ ಬಂದು ಶಿವಾರ್ಚನಾಪರನಾಗಿ ಜಂಗಮಸೇವಾಧುರೀಣನಾಗಿದ್ದನು.

ಇತ್ತ ತಿರುವಾಲೂರಲ್ಲಿ ಸೌಂದರನು ತಿರುವಾಲೂರೇಶ್ವರನಲ್ಲಿ ತನಗಾದ ಅಪಜಯವನ್ನು ಬಿನ್ನವಿಸಲು, ಅಭವನು ತನಗಾದ ಪರಿಭವವನ್ನು ನೆನೆದು ಕಲಿ

---

ಯಾಗಿ ಓಡಿಬಂದು ಮಗನ ಸ್ಥಿತಿಯು ಏನಾಗಿದೆಯೊ ಎಂದು ನೋಡುತ್ತಾಳೆ. ಆ ಮತ್ತಗಜವು ಭಯಭಕ್ತಿಯಿಂದ ನೆಲಕ್ಕೆ ಕಾಲೂರಿ ಸೊಂಡೆಯನ್ನೆತ್ತಿ ನಮಸ್ಕರಿಸಿತು. ಆ ಪುರದ ಅರಸನಾದ ನರಸಿಂಗಮೊನೆಯರು ತನ್ನ ಪಟ್ಟದಾನೆಯು ಚಿಕ್ಕಮಗುವಾದ ಸೌಂದರನಿಗೆ ನಮಸ್ಕರಿಸಿದ ವರ್ತಮಾನವನ್ನು ತಿಳಿದು ತನಗೆ ಮಕ್ಕಳಿಲ್ಲದ್ದರಿಂದ ಆತನ ಮಾತಾಪಿತರನ್ನೊಡಂಬಡಿಸಿ ತನ್ನ ಮಗನನ್ನಾಗಿ ಮಾಡಿಕೊಂಡನು.

ಕಾಮನ ಭಕ್ತಿಯ ಫಲವನ್ನು ನಂಬಿಗೆ ತೋರಿಸಬೇಕೆಂದು ತನ್ನ ಇಚ್ಛಾಶಕ್ತಿಮಾತ್ರದಿಂದಲೆ ಆ ಕಲಿಕಾಮನ ಒಡಲಿನಲ್ಲಿ ನೋವನ್ನು ಮಾಡಿ ಸೌಂದರನಿಗೆ ಭಿನ್ನವೇಷವನ್ನು ತಳೆಯುವಂತೆ ತಿಳಿಸಿ ಆತನೊಡಗೊಂಡು ತಾನು ಪುನಃ ಜಂಗಮಾಕಾರವನ್ನು ತಾಳಿ ತೀಕ್ಷ್ಣವಾಗಿ ಗಣಾಚಾರವನ್ನು ಪಾಲಿಸುವ ನಮ್ಮ ಚರಿತ್ರಪುಂಗವನ ಸಮೀಪಕ್ಕೆ ಬರಲು ತನ್ನ ಉದರಶೂಲವನ್ನು ಲಕ್ಷಕ್ಕೆ ತರದೆ ಕಲಿಕಾಮ ನೃಪತಿಯು ಬಂದ ಅತಿಥಿಗಳಿಗೆ ಸತ್ಕರಿಸಿ ಜಂಗಮದ ಪಾದಪ್ರಕ್ಷಾಲನೆಯನ್ನು ಮಾಡಿ ಅಮೋಘವಾದ ಪಾದತೀರ್ಥವನ್ನು ಸ್ವೀಕರಿಸಿ ಮಹಾಸ್ವಾಮಿ ಎತ್ತಣಿಂದ ದಯಮಾಡಿಸಿದಿರಿ ಅಂದನು. ಆಗ ಜಂಗಮನು :—ಈತನೇ ಸೌಂದರನೆನ್ನಲು ಕಲಿಕಾಮನು ಹಸಿದ ಹುಲಿಯಂತೆ ಗರ್ಜಿಸುತ್ತ ರೌದ್ರಾವತಾರವನ್ನು ತಾಳಿ ಕಣ್ಣಿನಿಂದ ಕಿಡಿಗಳನ್ನು ಹೊರಚೆಲ್ಲುತ್ತ ಖಡ್ಗವನ್ನು ಜಳಪಿಸುತ್ತ ದುಷ್ಕೃತಿಯನ್ನು ಮಾಡುತ್ತಿರುವ ಪಾಪಾತ್ಮನಾದ ಸೌಂದರನನಂಬಿಯನ್ನು ಈಗಲೆ ಸಂಹರಿಸುವೆನೆಂದು ಖಡ್ಗವನ್ನು ರಭಸದಿಂದ ಮೇಲಕ್ಕೆತ್ತಲು ಆತನ ಛಲಕ್ಕೆ ವಿರೂಪಾಕ್ಷನು ಮೆಚ್ಚಿ ನಿಜರೂಪವನ್ನು ತೋರಿ ಸುಶೋಭಿಸಲು ನಮ್ಮ ಕಥಾಪುರುಷನು ದಿವ್ಯಮೂರ್ತಿಯನ್ನು ಕಂಡು ಭಯಚಕಿತನಾಗಿ ಶರೀರದಲ್ಲಿ ಕಂಪವಾಗಿ ಮೈಬೆವರೇರಿ ಆನಂದಾಶ್ರುಗಳು ಸುರಿದು ಕರದಲ್ಲಿ ಪಿಡಿದ ಕತ್ತಿಯನ್ನು ಬಿಸುಟು ಈಶ್ವರನಾದ ಜಾಹ್ನವೀಧರನನ್ನು ಅನೇಕ ಸ್ತೋತ್ರಗಳಿಂದ ಸ್ತುತಿಸಿ ಆ ಮಹಾಮೂರ್ತಿಪಾದದಲ್ಲಿ ಬಿದ್ದು ಎಡಬಿಡದೆ ಪ್ರಣಾಮವನ್ನು ಮಾಡುತ್ತಿರಲು ಸದಾಶಿವನು ಸಂತುಷ್ಟನಾಗಿ ಸೌಂದರನಿಗೆ ಕಲಿಕಾಮನ ಗಣಾಚಾರದ ಪರಿಯನ್ನು ಚೆನ್ನಾಗಿತಿಳಿಸಿ, ಸೌಂದರನ ಘನತರವಾದ ಶಿವಭಕ್ತಿಗೆ ಪ್ರೀತಿಯಾಗಿ ತಾನು ಆತನ ಸಂಗಡಿಗನಾಗಿರುವದನ್ನು ಕಲಿಕಾಮನಿಗೆ ತಿಳಿಸಿ ನಾನು ಈಶನೆಂದೆನಿಸಿ ಅಖಿಲ ಬ್ರಹ್ಮಾಂಡಕ್ಕೊಡೆಯನಾದರೂ ನನಗೆ ನನ್ನ ಭಕ್ತರು ಅಧಿಪತಿಗಳು ನಾನು ಅವರ ಊಳಿಗದ ಆಳು ಎಂದು ಬಿಂಬಿಸಿಹೇಳಿ ಕಲಿಕಾಮ ಶರಣಲಲಾಮನಿಗೆ ಗಣಪದವಿಯನ್ನು ಕರುಣಿಸಿದನು.

ಆಸ್ತಿಕ್ಯವುಸುಳಿದಾಡಿ, ಬೆಳದು ಹೆಪ್ಪುಗೊಂಡು, ಜನತೆಯಲ್ಲಿ ಕರ್ತವ್ಯ ದಕ್ಷತೆಯು ಅಭಿವೃದ್ಧಿಗೊಂಡು ನಾಡಿನಲ್ಲಿ ಶಾಂತಿಯುಹಾಗೂ ನಿಜಸುಖವು ನೆಲೆಗೊಳ್ಳಲೆಂದು ಮಂಗಲದಾಯಕನಾದ ಭಗವಂತನನ್ನು ಲೇಖಕನು ಪ್ರಾರ್ಥಿಸುತ್ತಾನೆ.



ಓಂ.

# ೧೭. ತಿರುಮೂಲ ದೇವರು.

ಪರಮಂಗೆ ಪಾಲ್ಗರೆಯೆ ಗಿರಿಜೆ ಪಶುವೇಷಮಂ । ಧರಿಸಿ ಬರೆಕಾಯ್ದ ಕರುಣಾಸಾಗರ ನೆನಿಪ । ತಿರುಮೂಲರೆನ್ನ ಸುರಧೇನು ॥

[ಶ್ರೀ ನಿಜಗುಣರು]



ಪರಹಿತವಾದ ದುಷ್ಕೃತಿಗಳಿಗೆ ಎಡೆ ಇಲ್ಲದ, ಜೀವಿಗಳಿಗೆ ದುಃಖವನ್ನುಂಟು ಮಾಡದ, ಪ್ರಾಣಿಗಳಿಗೆ ಅನಿಷ್ಟಕಾರವಾಗದ ಜನತೆಗೆ ಉಪಯುಕ್ತವೆನಿಸುವ ಯಾವ ಕಾಯಕವನ್ನು ಮಾನವನು ಮಾಡಿದರೂ ಅದು ಪ್ರಶಸ್ತವಾದ ಉದ್ಯೋಗವೆಂದು ಹೇಳಬಹುದು. ಇಂಥ ಕೆಲಸಗಳಲ್ಲಿ ಗೋಪಾಲವೃತ್ತಿಯು ಸಮಾವೇಶವಾಗುವದು.

ಪೂರ್ವಕಾಲದಲ್ಲಿ ಒಬ್ಬ ಬಲವಂತನಾದ ದನಗಾಹಿಯು ಎಂದಿನಂತೆ ಆಕಳುಗಳನ್ನು ಅಡವಿಗೆ ಒಯ್ದು ಹುಲ್ಲು ಮೇಸುತ್ತಿರುವಾಗ ಹಾವು ಕಡಿದು ಮಡಿದನು.

ಒಳ್ಳೇ ನಡತೆಯುಳ್ಳವರಾಗಿ ದೇವತಾರಾಧನದಿಂದ ಬಲಶಾಲಿಗಳಾಗಿ ಹಲವು ಸಣ್ಣ ಪುಟ್ಟ ಅಸಾಧಾರಣವಾದ ಕಾರ್ಯಗಳನ್ನು ಮಾಡಬಹುದಾದ ಪುರುಷರಿಗೆ ವಾಡಿಕೆಯಾಗಿ ಸಿದ್ಧರೆಂಬುದು ಸಂಜ್ಞೆಯು. ಇವರು ನಿರಪೇಕ್ಷಣಯುತರಾಗಿ ಶಿವಯೋಗವನ್ನೇ ಪ್ರಧಾನವಾಗಿಟ್ಟುಕೊಂಡರೆ ಕ್ಷಿಪ್ರದಲ್ಲಿಯೆ ನಿಸ್ಸಂದೇಹವಾಗಿ ಸದ್ಗತಿಯನ್ನೈದುವರು.

ಮೇಲೆ ಉದಹರಿಸಿದ ಗಹನದಲ್ಲಿ ಒಬ್ಬ ಸಿದ್ಧನು ಸಂಚರಿಸುತ್ತಿರುವಾಗ ಆಗ ತಾನೆ ಅಸುವನ್ನು ತೊರೆದ ಪಶುಪನ ಘಟ್ಟಿಮುಟ್ಟಾದ ಮತ್ತು ಸುಂದರವಾದ ದೇಹವನ್ನು ನೋಡಿ ಮೋಹಿಸಿ ಆತನ ಶರೀರವನ್ನು ಧರಿಸಲು ಅಪೇಕ್ಷೆಯುಂಟಾಗಿ ಪರಕಾಯ ಪ್ರವೇಶ ಪ್ರವೀಣನಾದುದರಿಂದ ತನ್ನ ತನುವನ್ನು ಬೇರೊಂದು ತಾಣದಲ್ಲಿ ಬಚ್ಚಿಟ್ಟು ಆ ಗೋಪನ ಶರೀರದಲ್ಲಿ ಹೊಕ್ಕು ಮುಚ್ಚಂದೆಯಾದುದರಿಂದ ಗೋವೃಂದದೊಡನೆ ಪುರದೊಳಗೆ ಹೋದನು. ಈತನೇ ನಮ್ಮ ಚರಿತ್ರನಾಯಕನು. ದನಕರುಗಳೆಲ್ಲ ತಮ್ಮ ತಮ್ಮ ಮನೆಗೆ ಹೋಗಲು ಆಗ

ನಮ್ಮ ಕಥಾಪುರುಷನು ಮುಂದೆ ಏನು ಮಾಡಬೇಕೆಂದು ತಿಳಿಯದವನಾಗಿ ಸುಮ್ಮನೆ ಒಂದು ಗಿಡದ ಬುಡದಲ್ಲಿ ನಿಂತುಬಿಟ್ಟನು. ಅದನ್ನು ಕಂಡು ಗೋಪನ ಹೆಂಡತಿಯು ಈ ದಿವಸ ಮಾತ್ರ ತನ್ನ ಗಂಡನು ಮನೆಗೆ ಬಾರದೆ ವೃಕ್ಷದ ಅಡಿಯಲ್ಲಿರುವನು. ಆತನನ್ನು ಕರೆದುಕೊಂಡು ಬರುವಾ ಎಂದು ಯೋಚಿಸಿ ಪತಿಯನ್ನು ಗೃಹಕ್ಕೆ ಬಾರೆಂದು ಆಗ್ರಹಮಾಡಿದಳು. ಆದರೆ ಈ ನವೀನ ಗೋಪನು ಉಲುಕದೆ, ಮಾತನಾಡದೆ, ಮೌನವಾಗಿದ್ದನು. ಆಗ ಗೋಪನ ಪತ್ನಿಯು ಹಾಗೂ ಆ ದಾರಿಯಿಂದ ಹೋಗಬರುವ ಜನರು ಇವನಿಗೆ, ಹುಚ್ಚುಹಿಡಿದಂತೆ ಕಾಣುತ್ತದೆಂದು, ಆಲೋಚಿಸುತ್ತಾ ಮುಂದಕ್ಕೆ ಸಾಗಿದರು. ನಂತರ ನಮ್ಮ ಕಥಾನಾಯಕನು ದನಗಳು ಮೇಯುವ ಆ ಸ್ಥಳಕ್ಕೆ ಬಂದು ತನ್ನ ಮೊದಲಿನ ಕಳೇವರವನ್ನು ಎಷ್ಟು ಹುಡುಕಿದರೂ ದೊರೆಯದ್ದರಿಂದ ಹುಲಿ ಮೊದಲಾದ ಪ್ರಾಣಿಗಳು ನಾಶಮಾಡಿರಬಹುದೆಂದು ಬಗೆದು ತಾನು ವೇಷವನ್ನು ತೊಡೆದದ್ದಕ್ಕಾಗಿ ಖತಿಗೊಂಡು, ಪಶ್ಚಾತ್ತಾಪ ಪಟ್ಟು ಅನಘನಾದ ಶಿವನನ್ನು ಚಿಂತಿಸಲು, ಪೂರ್ವಕೃತ ಪುಣ್ಯವಶದಿಂದ ಶಿವಲಿಂಗದ ಭಕ್ತಿಯು ಅಂಕುರಿಸಿತು. ಶಿವಭಕ್ತಿ ತತ್ಪರನಾಗಿ ಆದರದಿಂದ ಪರಮಾತ್ಮನನ್ನು ಸಹಸ್ರವರ್ಷ ಅರ್ಚಿಸಿದನು. ಈ ರೀತಿ ಪೂಜಿಸುತ್ತಿರಲು, ಶಿವಲಿಂಗಕ್ಕೆ ಹಿಂದೆ ಯಾರೂ ಮಾಡದಂಥ, ನೂತನಾಭಿಷೇಕವನ್ನು ಮಾಡಬೇಕೆಂದು ಯೋಚಿಸಿದನು; ಮತ್ತು ಶುಚಿರ್ಭೂತನಾಗಿ ಶಿವಾಲಯವನ್ನು ಪ್ರವೇಶಿಸಿ, ವಿಧ್ಯುಕ್ತವಾಗಿ ವಿಭೂತಿ, ರುದ್ರಾಕ್ಷಾದಿಗಳನ್ನು ತಳದು ಪದ್ಮಾಸನವನ್ನಿಕ್ಕಿ ಸಾನಂದಯುತನಾಗಿ ಶಿವಮಂತ್ರವನ್ನು ಜಪಿಸಿ ಚರಿತ್ರಪುಂಗವನು:— ಭಕ್ತಾಭೀಷ್ಟಪ್ರದನಾದ ಮಹಾದೇವನೇ ನಿನಗೆ ಸುರಭಿಯ ಹಾಲಿನಿಂದ ಮಜ್ಜನವನ್ನು ನೀಡುವ ಅಭಿಲಾಷೆಯು ನನಗೆ ಹೆಚ್ಚಾಗಿರುವದು; ಆದ್ದರಿಂದ ಭದ್ರಕಾಯನೇ, ಮಂಗಲಪ್ರದನೇ, ಗೌರೀರಮಣನೇ ನನಗೆ ಸುರಧೇನುವನ್ನು ದಯಪಾಲಿಸು ಎಂದು ಪ್ರಾರ್ಥಿಸಿ, ಪರಿಪರಿಯಿಂದ ಹೊರಳಾಡಿ ಹಲ್ಗಿರಿದು, ಸಣ್ಣ ಮಕ್ಕಳು ತಂದೆಯನ್ನು ಕಾಡುವಂತೆ ಬಹು ಆರ್ತಸ್ವರದಿಂದ ಕೇಳುವವರಿಗೆ ಕರುಣೆ ಉಂಟಾಗುವಂತೆ ಹಂಬಲಿಸಿ ಯಾಚಿಸಿದನು.

ಈ ಮುಗ್ಧ ಭಕ್ತನ ಪರಿಶುದ್ಧವಾದ ಭಕ್ತಿಯನ್ನು ಮತ್ತು ಆತನು ಕಂಬನಿ ಕರೆಯುವದನ್ನು ಪಾರ್ವತಿಯು ನೋಡಿ ಮರುಗಿ ತನ್ನ ಪತಿಯಾದ ವಿಶ್ವನಾಥನನ್ನು ಕುರಿತು:— ಪ್ರಭುವೇ ಕಂದನಾದ ಉಪಮನ್ಯುವು ಪಾಲ್ಗಡಲನ್ನು ಬೇಡಲು ಅದನ್ನು ಆತನಿಗೆ ಅನುಗ್ರಹಿಸಿದಿ. ಆದರೆ ಈ ಭಕ್ತನು ಎಷ್ಟು ಹಲುಬಿದರೂ ಸುಮ್ಮನೆ ಇರುವಿ ಇದೇನು ಆಶ್ಚರ್ಯವು ಎಂದಳು. ಆಗ ಜಗದೀಶನು:— ಜಗದಂಬಿಕೆಯೇ ಆ ಮಗನ (ತಿರುಮೂಲನ) ಮೇಲೆ ನಿನಗೆ ಅಷ್ಟು ಪ್ರೀತಿ ಇದ್ದರೆ ನೀನೆ ಸುರಭಿಯಾಗಿ ನನ್ನ (ಲಿಂಗ) ಮಸ್ತಕದಮೇಲೆ ನಿನ್ನ ಮುಗ್ಧ ಮಗನು

ಸಂತೋಷಪಡುವಂತೆ ಹಾಲು ಕರೆ ಎಂದು ಹೇಳಿದನು. ಆಗ ಭಕ್ತನ ಪಾಶಕ್ಕೊಳಗಾದ ರುದ್ರಾಣಿಯು ಸುರಭಿಯಾಗಲು ತಿರುಮೂಲನು ಪರಮೋತ್ಸಾಹವನ್ನು ತಾಳಿ ಭಯಭಕ್ತಿಯಿಂದ ಭವನನ್ನು ಸ್ಮರಿಸುತ್ತ, ಸುರಧೇನುವನ್ನು ಆದರದಿಂದ ನಮಸ್ಕರಿಸಿ, ಶಿವಲಿಂಗದ ತಲೆಯ ಮೇಲೆ ಕೆಚ್ಚಲು ನೀಟಾಗುವಂತೆ ಆ ನೂತನ ಗೋವನ್ನು ನಿಲ್ಲಿಸಿ, ಸಂತೋಷಾತಿಶಯದಿಂದ ಪಾಲ್ಗರೆದನು. ಎಡಬಿಡದೆ ಅವಿಚ್ಛಿನ್ನವಾಗಿ ಸುರಭಿಯ ಅಖಂಡ ಅಮೃತ ಧಾರೆಯನ್ನೆರದನು. ಹಾಲಿನ ಪ್ರವಾಹವು ಹೆಚ್ಚಾಗಿ ಮಡುಗಟ್ಟಲು ನಮ್ಮ ಚರಿತ್ರನಾಯಕನ ಮೈಯುಬ್ಬಿ, ಮೇರೆದಪ್ಪಿದ ಹರ್ಷದಿಂದ ನಲಿದಾಡಿ ಆನಂದದ ಕಡಲಿನಲ್ಲಿ ಈಸಾಡಿದನು. ಈ ರೀತಿಯಾಗಿ ಭಕ್ತಿರಸಾವೇಶದಿಂದ ಅಭಿಷೇಕ ಮಾಡುತ್ತ ಮೈಮರೆದಿರ್ಪ ಭಕ್ತನನ್ನು ಕೃಪಾಮಯನಾದ ಸರ್ವಜ್ಞನು ಕಂಡು, ಸುರಭಿಯಾಗಿರುವ ತನ್ನ ಕಾಂತೆಯನ್ನು ತನ್ನೊಳಡಗಿಸಿಕೊಂಡು, ನಿಜಶರಣರಿಗೆ ತಾನೇ ತಾಯಿತಂದೆ ಸ್ವರೂಪನಾಗಿರುವೆನೆಂಬದನ್ನು ಜಗತ್ತಿಗೆ ತೋರ್ಪಡಿಸುವದಕ್ಕಾಗಿಯೊ ಏನೋ ಎಂಬಂತೆ ಅರ್ಧನಾರೀಶ್ವರ ರೂಪದಿಂದ ಈ ಮುಗ್ಧಭಕ್ತನೆದುರಿಗೆ ಪ್ರಕಟವಾದನು. ಆಗ ಚರಿತ್ರಪುಂಗವನು ಆನಂದಾಬ್ಧಿಯಲ್ಲಿ ಮುಳುಗಿ, ರೋಮಾಂಚವನ್ನು ಹೊಂದಿ ಬಹು ವಿಧವಾಗಿ ಸ್ತುತಿಸುತ್ತ ಪುನಃ ಪುನಃ ಮಹಾಚರಣಯುಗ್ಮಕ್ಕೆರಗಿರುವದನ್ನು ಶಿವಾರಮಣನು ಕಂಡು ತಿರುಮೂಲನನ್ನು ಹಿಡಿದೆತ್ತಿ ಮೈದಡವಿ ಶ್ರೇಷ್ಠವಾದ ಗಣಪದವಿಯನ್ನು ಆಶೀರ್ವದಿಸಿದನು.

  

೬೦.

# ೧೮. ಶ್ರೀ ಪಗಲ್ತೊಣೆಯಾಂಡರು.



ಅಣುವಿಲ್ಲದಿರಲಗ್ಗವಣಿ ಶರ್ವನಂಘ್ರಿಯೊಳ । ಗೆಣಿಸಿಕೊಣದೊತ್ತುಮಳಿ
ಗಾಲಂ ಪಡೆದಪಗಲ್ । ತೊಣೆಯಾಂಡರೆನ್ನ ಸುಖಸಿಂಧು ॥

[ಶ್ರೀ ನಿಜಗುಣರು]



ಕಡುಪೆಂಪಿನಿಂದ ಮೆರೆಯುವ ಚೋಳಸೀಮೆಯಲ್ಲಿ ದೇವಾಲಯಗಳಿಂದಲೂ, ಸುಜನ ಸಮೂಹದಿಂದಲೂ ತಿರುವಂಜಲೂರೆಂಬ ಪುರವು ಒಪ್ಪುತ್ತಿತ್ತು. ಈ ಮನೋಹರವಾದ ಪಟ್ಟಣದಲ್ಲಿ ಸಕಲ ಶುಭಗುಣಾನ್ವಿತನು, ಸಮಸ್ತ ಕಲಾವಿಶಾರದನು, ಮಿಗಿಲಾದ ಶಿವಭಕ್ತ ಸಂಪತ್ತಿನಿಂದ ವಿರಾಜಿಸುವವನು, ಪರಮ ದಯಾನಿಧಿಯು, ಧನಾಢ್ಯನು ಆದ **ಪಗಲ್ತೊಣೆಯಾಂಡರೆಂಬ** ಮಂಗಲಾಭಿದಾನವನ್ನು ತಳೆದ ಶಿವವ್ರತದ ಶೈವನು ಶೋಭಿಸುತ್ತಿದ್ದನು.

ಪಕ್ಷಿಗಳಿಗೆ ಎರಡು ರೆಕ್ಕೆಗಳು ಹೇಗೆ ಅವಶ್ಯಕವೋ ಹಾಗೆ ಮುಮುಕ್ಷುಗಳಿಗೆ ಸಮ್ಯಜ್ಞಾನದೊಡನೆ ಶಿವಾಚಾರ ಕ್ರಿಯೆಗಳು ಅಗತ್ಯವು; ಸಕಲ ಶೈವಗ್ರಂಥಗಳು ಈ ವಿಷಯವನ್ನು ಅಂಗೀಕರಿಸುತ್ತವೆಯಷ್ಟೇ?

ನಮ್ಮ ಕಥಾನಾಯಕನು ಮಾನಸಿಕ ಪೂಜಾಪ್ರವೀಣನಾದರೂ ಶಿವಾರ್ಚನಾಕ್ರಿಯೆಯಲ್ಲಿ ನಿರತನಾಗಿದ್ದನು. ಪಾಲ್ಕುರಿಕೆಯ ಸುಪ್ರಸಿದ್ಧ **ಸೋಮಾರಾಧ್ಯರು** ವಿವರಿಸಿರುವ ೬೪ ಶೀಲಗಳಲ್ಲಿ ೭ಂದಾಗಿರುವ ಒರ್ತಿಯಿಂದ ತೆಗೆದ ನವಜಲವು ಈಶ್ವರಾಭಿಷೇಕಕ್ಕೆ ಯೋಗ್ಯವೆಂಬದನ್ನು ಸರ್ವರೂ ಅರಿತ ಸಂಗತಿಯಾಗಿರುವದಷ್ಟೇ? ನಮ್ಮ ಚರಿತ್ರಪುಂಗವನು ಇದಕ್ಕೂ ಒಂದು ಹೆಜ್ಜೆ ಮುಂದೆ ಇಟ್ಟ ಛಲದವನಾಗಿದ್ದನು. ಭವಾಂತಕನಾದ, ತರುಣೇಂದು-ಶೇಖರನಾದ ತಿರುವಂಜನ ಪುರಾಧಿಪನ ಲಿಂಗಾಭಿಷೇಕಕ್ಕೆ ಪ್ರತಿನಿತ್ಯವೂ ತಪ್ಪದೆ, ದಿನಾಲು ಹೊಸ ಹೊಸ ಒರ್ತಿಗಳನ್ನು ತೆಗೆದು ನೂತನ ಸಲಿಲಾಭಿಷೇಕವನ್ನು ಗೈದು, ನಿರ್ವಿಘ್ನವಾಗಿ ತನ್ನ ಶ್ರೇಯಸ್ಕರವಾದ ಮಜ್ಜನ ಕ್ರಮವನ್ನು ಸಾಗಿಸುತ್ತಿದ್ದನು. ದೇವತಾರಾಧನೆಗೆ ಹೊಸನೀರಿನಿಂದ ಪೂಜಿಸುವ ಈ ಕ್ರಮವನ್ನು, ಕಂಡು ಶೀಲವಂ

ತರು ಬೆರಗಾಗುತ್ತಿದ್ದರು. ಈ ರೀತಿ ಭಕ್ತಿ ಪುರಸ್ಸರವಾದ ಶಿವೋಪಾಸನೆಯು ಸಾಗುತ್ತಿರಲು ತನಗಾಗುವ ಆನಂದವನ್ನು ಶಿವಾರ್ಪಣಮಾಡುತ್ತಾ ಸುಖಿಯಾಗಿರಲು ದಿನಕ್ರಮೇಣ ಆ ವರಭಕ್ತನ ಪುಣ್ಯಸಂಚಯವು ಅಧಿಕವಾಗಿ ವರ್ಧಿಸಿತು.

ಮಾಘಮಾಸವು ತಲೆದೋರಿತು. ಶಕೆಯು ಹೆಚ್ಚಾಗಿ ದಾರುಣವಾಯಿತು. ಸೂರ್ಯನ ಕಿರಣಗಳು ಅತಿ ಪ್ರಖರವಾಗಿದ್ದುದರಿಂದ ಬಿಸಿಲು ತೀಕ್ಷಣವಾಗಿತ್ತು. ಸಹಿಸಲಶಕ್ಯವಾದ ಬಿಸಲಿನಲ್ಲಿ ಜ್ವಾಲೆಯಿಂದ ಕೂಡಿದೆಯೋ ಎಂಬಂತೆ ಗಾಳಿಯು ಅತ್ಯುಷ್ಣವಾಗಿ ಬೀಸಹತ್ತಿ, ಅಡಿಗಡಿಗೆ ದೇವರನ್ನು ಮರೆಯುವ ಎಂಥ ತಿಳಿಗೇಡಿಗಳು ಕೂಡಾ ಶಿವ! ಶಿವ!! ಎಂಥ ಭೀಕರವಾದ ರವಿರಾಜನ ಪ್ರತಾಪವಿದು. ಎಂದು ಪರಮಾತ್ಮನ ಸ್ಮರಣೆಯನ್ನು ಮಾಡುತ್ತಿದ್ದರು. ಪಾಂಥಸ್ಥರಿಗೆ ಕಾಲು ಸುಡುತ್ತಿದ್ದವು. ದಾರಿಕಾರರು ಬಾಯಾರಿ ಬಸವಳಿದು ಬಾಯಿಬಿಡುತ್ತಿದ್ದರು. ಈ ಪ್ರಚಂಡ ಭಾಸ್ಕರನ ವೇಗಕ್ಕೆ ಹಾದಿಕಾರರಿಗೆ ತಮ್ಮ ತಲೆಯು ಎಲ್ಲಿ ಸಿಡಿದು ಬೀಳುವದೋ ಎಂಬ ಅನುಮಾನವಾಗುತ್ತಿತ್ತು. ಜನರ ಮೈ ಬೆವರಿಟ್ಟಿತು. ಪ್ರಯಾಣಿಕರಿಗೆ ಪ್ರವಾಸವು ಬೇಸರಾಯಿತು. ಮೃಗ ಪಕ್ಷಿಗಳು ಕಂಗೆಟ್ಟವು. ದುಸ್ಸಹವಾದ ದಿನಮಣಿಯ ಆರ್ಭಟಿಗೆ ಸಕಲ ಪ್ರಾಣಿಗಳು ನೊಂದು ಬೆಂದವು. ಕೆರೆಗಳು ಬತ್ತಿದವು. ಹೊಳೆ ಹಳ್ಳಗಳಲ್ಲಿ ನೀರಿನ ಕೊರತೆಯಾಯಿತು. ಸರೋವರಗಳಲ್ಲಿಯೂ, ಬಾವಿಗಳಲ್ಲಿಯೂ ನೀರು ಕಡಿಮೆಯಾಗತೊಡಗಿ ನೀರಿನ ಅಭಾವವು ಪ್ರಾಪ್ತವಾಗಲು ಹಂಸ ಪಕ್ಷಿಗಳು ಎಲ್ಲಿ ತಡಕಿದರೂ ಜಲವು ಕಾಣದಿರಲು ತಪ್ತವಾಗಿ ಕಳವಳ ಪಟ್ಟವು. ಹೊಲಗಳಲ್ಲಿ ಬೀಡು ಸೆಳೆಯಲಿಕ್ಕೆ ಹತ್ತಿದ್ದರಿಂದ ಭೂಮಿಯು ಬಿರಿಯುವದೋ ಏನೋ ಎಂದು ಕೆಲವರು ಹೆದರಿದರು. ಆಗ ಹಲವು ವಿವೇಕಿಗಳಾದ ವೃದ್ಧರು:—ಅಪ್ಪಾ! ದಿನಕರನೇ!! ಸಕಲ ಜೀವಿಗಳಿಗೆ ಮೇಘರಾಜನು ಹ್ಯಾಗೆ ಹಿತಕರನಾಗಿರುವನೋ ಹಾಗೆ ನೀನಾದರೂ ಸರ್ವ ಪ್ರಾಣಿಮಾತ್ರಕ್ಕೆ ಜೀವನ ಶಕ್ತಿಯನ್ನು ಬೀರುವವನಾಗಿರುವದರಿಂದ ಸವಿತೃ ಎಂಬ ಹೆಸರಿನಿಂದ ಪ್ರಸಿದ್ಧನಾಗಿರುವಿ. ಆದರೆ ಈಗ ನಿನ್ನ ಉಗ್ರಕಿರಣಗಳನ್ನು ಉಪಸಂಹರಿಸಿ ಉಪಕರಿಸಬೇಕು ; ಕಲ್ಯಾಣಕರನಾದ ಗ್ರಹಶ್ರೇಷ್ಠನೇ ಎಂದು ಮೊರೆ ಇಟ್ಟರು. ಅಖಿಲ ಬ್ರಹ್ಮಾಂಡಕ್ಕೆ ಒಡೆಯನೆನ್ನಿಸಿಕೊಳ್ಳುವ ದೇವೋತ್ತಮನು ಮೃತ್ಯುಂಜಯನೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿದ್ದರೂ ನವಗ್ರಹಗಳಲ್ಲಿ ಮೇಲೆನಿಸುವ ಸೂರ್ಯನ ಉಲ್ಬಣಕ್ಕಾಗಿ ಹಣೆಯಲ್ಲಿ ಶೀತಲಕರನಾದ ಚಂದ್ರನನ್ನೂ, ಜಡೆಯಲ್ಲಿ ಸುರನದಿಯನ್ನೂ ಧರಿಸಿರುವನು ಎಂದು ಒಬ್ಬ ವಿಲಕ್ಷಣ ಕವಿಯು ಉದ್ಗಾರ ತೆಗೆದನು. ಫಾಲ್ಗುಣಮಾಸವು ಬರಲು ಮಾರ್ತಾಂಡನ ಆಳಿಕೆಗೆ ಇಮ್ಮಡಿ ಬಲವು ಉಂಟಾಯಿತು. ಕ್ರಮೇಣ ಚೈತ್ರವು ಬರಲು ಇನಯನ ತೀಕ್ಷ್ಣತೆಯು ಮುಮ್ಮಡಿ ಆಯಿತು. ಭೋಗಿಗಳು ಪನ್ನೀರಿನ ಚಳಿ

ಯನ್ನು ಬಯಸಿದರು. ಕಮಲಾಕ್ಷಿಯರು ಶ್ರೀಗಂಧವನ್ನು ಲೇಪಿಸಿಕೊಳ್ಳಲನುವಾದರು. ವಿಲಾಸಿಗಳು ಚೂತವನಕ್ಕೆ ಸಾಗಿ ಮಾಮರದ ನೆರಳಿನಲ್ಲಿ ವಿಶ್ರಮಿಸುವಾಗ ಗಿಳಿಮುಟ್ಟಿದ ಹಾಗೆ ತಾನೇ ಪರಿಪಕ್ವದೆಶೆಗೆ ಬರುವ ಆಮ್ರಫಲಗಳ ಸೊಬಗನ್ನು ನೋಡಿ ಆನಂದಿಸುವಾಗ, ರಸಿಕರು ತಾರುಣ್ಯಪಥಕ್ಕೆ ಕಾಲಿಡುವ ನವತರುಣಿಯರ ಜವ್ವನದ ರಮಣೀಯವಾದ ಕವಿಗಳ ವರ್ಣನೆಯನ್ನು ನೆನೆದರು. ವೈಶಾಖಮಾಸವು ಬಂದರೂ ಮಳೆಯು ಹುಟ್ಟದ್ದರಿಂದ ಸಕಲರೂ ನೀರಿನ ಚಿಂತೆಯಿಂದ ವ್ಯಾಕುಲರಾದರು.

ಅಶರೀರಿಯಾದ ಆದಿದೇವನು ನಮ್ಮ ಕಥಾಪುರುಷನ ಛಲವನ್ನು ಪರೀಕ್ಷಿಸುವದಕ್ಕಾಗಿ ತಿರುವಂಜಲೂರಲ್ಲಿ ಜಲಾಶಯಗಳನ್ನೆಲ್ಲ ಬತ್ತಿಸಿ ಉದಕದ ಅಭಾವವಾಗುವಂತೆ ಮಾಡಲು ಧನಿಕನಾದ ನಮ್ಮ ಶರಣಲಲಾಮನು ತನ್ನ ಸಂಪತ್ತು ತೀರುವವರೆಗೆ ಕೆರೆ ಬಾವಿಗಳಲ್ಲಿ ಒರ್ತೆಯನ್ನು ತೋಡಿಸಿದಾಗ್ಯೂ ನೀರು ಹೊರಡದಿರಲು ತನ್ನ ನಿಯಮಕ್ಕೆ ಭಂಗಬರಲು ಎಷ್ಟೋದಿವಸ ಉಪವಾಸವನ್ನು ಗೈದನು. ಬಳಿಕ ಆತನಿಗೆ ಒಂದು ಉಪಾಯವು ತೋಚಿತು. ಆಗ **ಪಗಲ್ತೊಣೆಯಾಂಡರು:—** ಎಲೈ ವಹ್ನಿನೇತ್ರನೇ ಅಜಾತ ಶತ್ರುವೆಂದು, ಅಧರ್ಮ ಶತ್ರುವೆಂದು ನಿನಗೆ ಬಿರುದು ಸಲ್ಲುತ್ತಿದ್ದು ಈಗ ನಿನ್ನ ಭಕ್ತನಮೇಲೆ ಮುನಿಸೇ! ಪ್ರತಿನಿತ್ಯದ ಹೊಸಹೊಸ ವರ್ತೆಯ ಜಲವು ಕಲ್ಪನಾರಹಿತನಾದ ಮಹೇಶನ ಮಜ್ಜನಕ್ಕೆ ದೊರೆಯದಂತೆ ಮಾಡುವದು ನಿನಗೆ ವಿನೋದಕರವಾದ ಲೀಲೆಯಾಯಿತೇ! ಭೋ! ರುದ್ರನೇ (ಅಂದರೆ ಸಂಸಾರದುಃಖವನ್ನು ಹೋಗಲಾಡಿಸುವವನೇ) ಭವದೀಯ ಅಭಿಷೇಕಕ್ಕಾಗಿ ನನ್ನ ದೇಹವನ್ನೇ ಸಮರ್ಪಿಸುವೆನೆಂದು, ಮೊದಲು ತಿರುವಂಜಲ ಪುರಾಧಿಪನನ್ನು ಬಿಗಿದಪ್ಪಿ ಚನ್ನಾಗಿ ಸಂತೋಷಾತಿಶಯದಿಂದ ಕಣ್ತುಂಬಾ ನೋಡಿನೋಡಿ ದಣಿದು ಮೈಯುಬ್ಬಿ ಭಕ್ತಚಿಂತಾಮಣಿಯೇ! ಶರಣಾಗತ ವತ್ಸಲನೇ! ಈ ಅಲ್ಪನ ಶರೀರವು ಮಹಂತನ ಪಾದಕ್ಕೆ ಸಲ್ಲಲಿಯೆಂದು ಆರ್ಭಟಿಸಿ ಒದರುತ್ತ ಲಿಂಗಮೂರ್ತಿಗೆ, ಡಗ್! ಡಗ್ಗನೇ!! ಹಾಯುತ್ತಿರಲು ರವಿನೇತ್ರನು ಆಕ್ಷಣದಲ್ಲಿಯೇ ಪ್ರಾಪ್ತನಾಗಿ ಆತನ ಸಾಹಸವನ್ನು ತಡೆದು ಭಕ್ತನನ್ನು ಕೃಪಾದೃಷ್ಟಿಯಿಂದ ನೋಡಿ ಒರ್ತೆಗಳಲ್ಲಿ ನೀರು ಬರುವಂತೆಯೂ ಪ್ರಾಣಿಗಳಿಗೆ ಆನಂದವಾಗುವಂತೆಯೂ ಮಳೆಯನ್ನು ಕೊಟ್ಟು ಕಥಾನಾಯಕನಿಗೆ ನಿತ್ಯವಾದ-ಗಣಪದವಿಯನ್ನು ಆಶೀರ್ವದಿಸಿ ಅಂತರ್ಧಾನನಾದನು.



ಓಂ.

# ೧೯. ಅರಿವಾಳ್ತಾಂಡರು.

ಶಶಿಭೂಷಣಂಗೆ ನೇಮಿಸಿದಕ್ಕಿಸೂಸೆತ । ನ್ನಸುವಿತ್ತೊಲಿಸಿದರಿ ವಾಳ್ತಾಂಡ
ನೀಮು । ನ್ನಿಸುಸಲೆಸ್ಯೆವುದಳೆ ಯುವೆನು ॥

[ಶ್ರೀ ನಿಜಗುಣರು]



ಣಿಕೋಟಿಗೆ ಜೀವನಾಧಾರವೆನಿಸುವ ಸಮಸ್ತ ಬೆಳೆಸಿನಿಂದಲೂ, ಅನೇಕ ತಟಾಕಾದಿ ಜಲಸಮೃದ್ಧಿಯಿಂದಲೂ ವಿರಾಜಿಸುತ್ತಿರುವ ಚೋಳಧರಿತ್ರಿಯಲ್ಲಿ ಕಣ್ಣಮಂಗಲವೆಂಬ ಗ್ರಾಮವು ದೈವಭಕ್ತರಿಂದಲೂ ರೈತರಿಂದಲೂ ಸರ್ವವಿಧದ ಕೆಲಸಗಾರರಿಂದಲೂ ಕಂಗೊಳಿಸುತ್ತಿತ್ತು. ಈ ಊರನೆರೆಯಲ್ಲಿ ನೀರಿನ ವಿಪುಲತೆಯು ಹೆಚ್ಚಾಗಿದ್ದುದರಿಂದ ಪುರದಸುತ್ತಲೂ ತೋಟ ಗದ್ದೆಗಳು ಶೋಭಿಸುತ್ತಿದ್ದವು. ಅದರಲ್ಲಿ ವಿಶೇಷವಾಗಿ ಭತ್ತದ ಗದ್ದೆಗಳು ಬಹು ಮನೋಹರವಾಗಿದ್ದು ಅತಿ ರಮಣೀಯವಾಗಿದ್ದವು.

ಮಾನವನು ಯಾವ ಕುಲದಲ್ಲಿ ಜನ್ಮವೆತ್ತಿದರೂ ಚಿಂತೆಯಿಲ್ಲ ದೇವತಾಭಕ್ತಿಯಿಂದ ಕೂಡಿದವನಾದರೆ ಅವನೇ ಮೇಲ್ತರದವನೆಂದು ಸಕಲ ವಿದ್ವಾಂಸರು ಒಪ್ಪುವರು. ಮನುಷ್ಯನು ಯಾವವೃತ್ತಿಯನ್ನು ಅವಲಂಬಿಸಿದರು ಯಾವ ಆಕ್ಷೇಪವು ಇಲ್ಲಾ? ಆದರೆ ಆ ಕೈಕೊಂಡ ಕಜ್ಜವನ್ನು ತನ್ನ ಸಾಮರ್ಥ್ಯಾನುಗುಣವಾಗಿ ತೃಪ್ತಿಕರವಾಗಿ ಅನ್ಯರಿಗೆ ನೋವಾಗದಂತೆ ಅನುದಿನವು ಮಾಡುತ್ತಾ ಈಶ್ವರಾರ್ಪಣ ಬುದ್ಧಿಯಿಂದ ಸಂತೋಷಚಿತ್ತನಾಗಿದ್ದು ಸರ್ವಾನಂದಮಯನಾದ ಭಗವಂತನನ್ನು ಸದಾವಕಾಲದಲ್ಲಿ ನೆನಿಸುತ್ತಿದ್ದರೆ ಅವನು ಮಾಡುವ ಉದ್ಯೋಗವೇ ಉಚಿತವಾದದ್ದೆಂದು ನಿರಾತಂಕವಾಗಿ ಹೇಳಬಹುದು ಇಂಥ ಸತ್ಪುರುಷನ ಸಂಪರ್ಕ ಒಡನಾಟವು ಹಿತಕರವಾದುದು. ಶಿವಯೋಗಿತುಲ್ಯನಾದ ಇಂಥ ಸಜ್ಜನನು ಚಲಿಸುವ ಸ್ಥಾನವು ಪ್ರಶಸ್ತವಾದುದು. ಆತನಿಗೆ ಆಶ್ರಯಕೊಟ್ಟವರಿಗೆ ಶುಭವಾಗುವದು ಯಥಾರ್ಥವಾದ ಸಂಗತಿಯು.

ಆ ಕಣ್ಣಮಂಗಲದಲ್ಲಿ ಶೂದ್ರರಲ್ಲಿ ಜನಿಸಿ ಗದ್ದೆಗಳಿಗೆ ಹೋಗಿ ಕೂಲಿಯನ್ನು ಮಾಡಿ ಬಡವನಾಗಿದ್ದು ಈಶ್ವರಭಕ್ತಿಯುಳ್ಳವನಾದ **ಅರಿವಾಳ್ತಾಂಡನೇ** ನಮ್ಮ ಚರಿತ್ರನಾಯಕನು ಈತನು ಶಿವಭಕ್ತರ ಕಿಂಕರನು. ಮಂಗಲಮಯನಾದ ಮಹೇಶನನ್ನು ಪ್ರೀತಿಸುವದರಲ್ಲಿ ಮಹೋತ್ಸಾಹಿಯು- ಶಿವಭಕ್ತರ ಸೇವೆಯನ್ನು ಮಾಡುವದಕ್ಕೆ ಹಾತೊರೆಯುವನು. ಶಿವನಲ್ಲದೆ ಇತರ ದೇವತೆಗಳನ್ನು ಭಜಿಸನು ಶಿವಸಂಬಂಧಿಗಳ ಬಳಿಕೆಯಲ್ಲಿ ಅಸಕ್ತನು ಅನ್ಯರ ಸಮೂಹದಲ್ಲಿ ಬೆರೆಯಲು ಅಪೇಕ್ಷಿಸನು ಭವಿಗಳ ಗದ್ದೆಗಳಿಗೆ ಹೋಗನು.

ಆ ಗ್ರಾಮದಿಂದ ೫ ಮೈಲು ದೂರದಲ್ಲಿ ವೃಷೇಂದ್ರಕೇತುವಾದ ಚಿತ್ತಜಾರಿಯ ಪ್ರಸಿದ್ಧ ದೇವಾಲಯವು **ತಿರುನಲ್ಲೂರಿ**ನಲ್ಲಿ ರಂಜಿಸುತ್ತಿತ್ತು.

ನಮ್ಮ ಕಥಾನಾಯಕನು ಒಳ್ಳೇನಡೆಯುಳ್ಳವನಾಗಿ ತನ್ನ ಕೆಲಸವನ್ನು ಚನ್ನಾಗಿ ಮಾಡುತ್ತಿದ್ದದರಿಂದ ಅಲ್ಲಿಯ ಒಕ್ಕಲಿಗರು ಈತನನ್ನು ತಮ್ಮ ಗದ್ದೆಗಳಿಗೆ ಕರಕೊಂಡು ಹೋಗುತ್ತಿದ್ದರು. ಕುಶಲರಾದ ಕೆಲವು ಅನುಭವಿಕ ಕೃಷಿಕರು ನಮ್ಮ ಕಥಾಪುರುಷನು ತನ್ನ ಕಾರ್ಯದಲ್ಲಿ ಚತುರನು ನಿಯಮಿತ ವೇಳೆಯಲ್ಲಿ ಹೆಚ್ಚುಕೆಲಸವನ್ನು ಮಾಡುವದನ್ನು ಕಂಡು ಈತನಿಗೆ ಹೆಚ್ಚಾಗಿ ಸಂಬಳವನ್ನು ಗೊತ್ತುಮಾಡಿ ಕರಕೊಳ್ಳುತ್ತಿದ್ದರು. ಇನ್ನೂ ಕೆಲವು ಜಾಣರಾದ ಬುದ್ಧಿವಂತ ರೈತರು **ಅರಿವಾಳ್ತಾಂಡನು** ದೈವಭಕ್ತನಾದುದರಿಂದ ಈತನನ್ನು ಯಾರು ಕೆಲಸಕ್ಕೆ ಕರಕೊಳ್ಳುವರೋ ಅವರ ಗದ್ದೆಗಳಲ್ಲಿ ಕಾಳು ಹುಲಸಾಗುವದೆಂದು ಅರಿತು ಆತನಿಗೆ ಬಹಳ ಹೆಚ್ಚಾಗಿ ಕೂಲಿಯನ್ನು ಕೊಟ್ಟು ಆದರದಿಂದ ಬರಮಾಡಿಕೊಳ್ಳುತ್ತಿದ್ದರು. ನಮ್ಮ ಕಥಾನಾಯಕನು ತನಗೆ ಬರುವ ಕೂಲಿಯ ನೆಲ್ಲಿನಲ್ಲಿ ಸಣ್ಣಕ್ಕಿಯ ಭತ್ತವು ಬಂದೊಡನೆ ಅಕ್ಷರಾತ್ಮನಾದ ಸಕಲ ಲೋಕೈಕನಾಥನಾದ ಆ ತಿರನಲ್ಲೇಶ್ವರನಲ್ಲಿಗೆ ಹೋಗಿ ಪೊಡಮಟ್ಟು ಅಲ್ಲಿಯ ಪೂಜಾರಿಗಳ ಕೈಯ್ಯಲ್ಲಿ ಕೀರೆಯು ಸೊಪ್ಪು ಮತ್ತೂ ಸಣ್ಣಕ್ಕಿಯನ್ನು ಅಡಿಗೆ ಮಾಡಿ ಸ್ವಾಮಿಗೆ ನೈವೇದ್ಯಮಾಡುವದಕ್ಕೆ ಬಹಳ ಸಂತೋಷದಿಂದ ಕೊಟ್ಟು ದೂರ ಸರಿದುನಿಂತು ಒಡೆಯನೇ ನನ್ನಪ್ಪನೇ ಮಾದೇವನೇ ನನಗೆ ಬರುವ ಕೂಲಿಯಲ್ಲಿ ದೊಡ್ಡ ಭತ್ತವನ್ನು ನನಗಾಗಿ ಇಟ್ಟುಕೊಂಡು ಸಣ್ಣಕ್ಕಿಯ ನೆಲ್ಲು ಬಂದಾಗೆಲ್ಲ ನಿನಗೆ ಮುಡುಪಾಗಿಟ್ಟು ದೊರೆತಷ್ಟು ಸಣ್ಣಕ್ಕಿಯನ್ನೆಲ್ಲ ನಿನಗೆ ಪ್ರಸಾಸಲಾಗಿ ಮುಟ್ಟಿಸುವೆನೆಂದು ಪ್ರಾರ್ಥಿಸಿ ಹಿಗ್ಗುತ್ತ ಬರುತ್ತಿದ್ದನು. ಈ ನಿಯಮವನ್ನು ಅನೇಕ ಸಂವತ್ಸರಗಳವರೆಗೆ ಸಾಗಿಸುತ್ತ ಬಂದನು. ಕೇವಲ ನಿರ್ಮಲಮನಸ್ಸಿನಿಂದ ಈತನು ನಡೆಸಿರುವ ಛಲದ ಭಕ್ತಿಗೆ ಪರಮಾತ್ಮನು ಸಂತೋಷಪಟ್ಟು ಈತನ ನಿಷ್ಠೆಯನ್ನು ಪರೀಕ್ಷಿಸಬೇಕೆಂದು ಬಗೆದು ಸಚ್ಚಿದಾನಂದ ರೂಪಿಣಿಯಾದ ಶಾಂಭವಿಗೆ ತಿಳಿಸಿ ಸಪತ್ನೀಕನಾಗಿ ಪ್ರಮಥರೊಡನೆ ಹೊರಟು ಆತನು ವಾಸಿಸುವ ಪುರಕ್ಕೆ ಬಂದು

ಆಕಾಶದಲ್ಲಿಯೇ ನಿಂತು ಈ ಭಕ್ತನಿಗೆ ಪ್ರತಿದಿನವು ಸಣ್ಣಕ್ಕಿಯೇ ದೊರೆಯುವಂತೆ ಮಾಡಿದನು. ಆಗ ನಮ್ಮ ನರಪುಂಗವನು ದಿನಾಲು ತಿರನಲ್ಲೂರಿಗೆ ಬಂದು ಕಾಲಾರಿಗೆ ಅರ್ಪಿಸಿ ತಾನು ಊಟವಿಲ್ಲದೆ ಇರುತ್ತಿದ್ದನು. ಜಗಚ್ಚಾಲಕನ ಸಂಕೇತದಂತೆ **ಅರಿವಳ್ತಾಂಡನಿಗೆ** ನಿತ್ಯದಲ್ಲು ಸಣ್ಣಕ್ಕಿ ದೊರಿಯುತ್ತ ನಡೆದದ್ದರಿಂದ ಆತನು ಅದನ್ನೆಲ್ಲ ಈಶ್ವರಾರ್ಪಣೆಮಾಡಿ ೨೦ ದಿನಗಳವರಿಗೆ ಉಪವಾಸ ಇದ್ದನು. ಈತನ ಛಲಕ್ಕೆ ಪ್ರಮಥರು ಬೆರಗಾದರು. ಜಗಜ್ಜನನಿಯೊದ ಪಾರ್ವತಿಯು ತನ್ನ (?) ನಾಥನಿಗೆ ಪ್ರಭುವೇ! ನಿಮಗೆ ಈ ಭಕ್ತನಮೇಲೆ ಇನ್ನೂ ಕರುಣ ಹುಟ್ಟಲಿಲ್ಲವೋ? ಎಂದು ಕೇಳಿದಳು. ಆಗ ಮನಸಿಜಾರಿಯು ಅನ್ನಪೂರ್ಣೇ ಇನ್ನು ಮುಂದೇನು ನಡೆಯುವದು ಅದನ್ನು ಸುಮ್ಮನೆ ನೋಡುತ್ತಿರು ಎಂದು ಹೇಳಿದನು.

೨೧ ನೇಯದಿನ ಪ್ರತಿದಿನದಂತೆ ಮಹೇಶನಿಗಾಗಿ ನಮ್ಮ ಶರಣಾಗ್ರಣಿಯು ತನ್ನ ಉಡಿಯಲ್ಲಿ ಕೀರೆಯಸೊಪ್ಪನ್ನು ಹಾಗೂ ಸಣ್ಣಕ್ಕಿಯನ್ನು ಒಯ್ಯುತ್ತಿರಲು ಭೂತೇಶನ ಅಪ್ಪಣೆಯ ಪ್ರಕಾರ ಪ್ರಚಂಡವಾಗಿ ಬಿರುಗಾಳಿ ಬೀಸಲು ಆ ಭಕ್ತನ ಉಡಿಯಲ್ಲಿರುವ ಸೊಪ್ಪು ಮತ್ತು ತಂಡುಲವು ದಿಕ್ಕುದಿಕ್ಕಿಗೆ ಹಾರಿ ಚಲ್ಲಿಹೋಯಿತು. ಈ ಭಕ್ತನು ಶಶಿಭೂಷಣನಿಗಾಗಿ ನೇಮಿಸಿದ ಅಕ್ಕಿಯು ಅಪವ್ಯಯವಾಯಿತೆಂದು ತಿಳಿದು ಕಡುಕೋಪವನ್ನು ತಾಳಿ ರೌದ್ರಾವೇಶದಿಂದ ಈ ತಪ್ಪಿಗಾಗಿ ನನ್ನ ಪ್ರಾಣವನ್ನೇ ಈಶ್ವರಾರ್ಪಣೆ ಮಾಡುತ್ತೇನೆಂದು ನಿರ್ಧರಿಸಿ ಶಿವನಾಮೋಚ್ಚಾರವನ್ನು ಮಾಡುತ್ತಾ ತನ್ನ ಸೊಂಟದಲ್ಲಿ ಇಟ್ಟ ಹದನಾದ ಕುಡುಗೋಲನ್ನು ತೆಗೆದುಕೊಂಡು ಕುತ್ತಿಗೆಗೆ ಕೈಹಾಕಿ ಛೇದಿಸಲುದ್ಯುಕ್ತನಾಗಲು ಆ ಕ್ಷಣದಲ್ಲಿಯೇ ಕಪಾಲಧರನು ಪ್ರತ್ಯಕ್ಷನಾಗಲು ಪ್ರಮಥರು ಜಯಜಯ ಎಂದರು. ನಮ್ಮ ಚರಿತ್ರಪುಂಗವನು ಮಹಾಸ್ವಾಮಿಯನ್ನು ಕಂಡು ಪರಮ ಸಂತೋಷಪಟ್ಟು ಅಡಿಗಡಿಗೆ ನಮಸ್ಕರಿಸಿ ಆನಂದಾಶ್ರುಗಳನ್ನು ಸುರಿಸಿದನು. ಪರಮಾತ್ಮನ ಇಚ್ಛಾಮಾತ್ರದಿಂದಲೆ ಸುರಯಾನವು ಬರಲು ಗಿರಿಜಾವರನು ಆತನನ್ನು ಕುಳ್ಳಿರಿಸಿ ಕೈಲಾಸಕ್ಕೊಯ್ದು ಗಣಪದವಿಯನ್ನು ದಯಪಾಲಿಸಿದನು.

ಶಿವಚರಿತ್ರವನ್ನು ಭಕ್ತಿಯಿಂದ ಪಠಿಸುವ ಓದುಗರಿಗೆ ಶಂಭುವು ಶುಭವನ್ನೀಯುವದು ಸತ್ಯವು.



ಓಂ.

# ೨೦. ನೈಸಭಕ್ತರು.



ಮನವಾರೆ ದೇವಾಂಗವನುನೆಯ್ದು ಚರ್ಮಾಂಬ । ರನಗಣರಿಗಿತ್ತು ಮೆರೆದನೈ । ಸರ ಪಾದವನಜ ವೆನ್ನೆದೆಯೊಳಿರುತಿರ್ಕೆ ॥

[ಶ್ರೀ ನಿಜಗುಣರು]



ಕಲ ಸೌಭಾಗ್ಯದಿಂದ ಮೆರೆಯುವ ಚೋಳರಾಜ್ಯದಲ್ಲಿ **ತಿರುವನಂದನ**ವೆಂಬ ಪಟ್ಟಣವು ಸಾಧುಸಜ್ಜನ ಗುಣಾಢ್ಯರಿಂದಲೂ ಕುಶಲಮತಿಯರಿಂದಲೂ ಸಮಸ್ತವಿಧದ ಕಸಬುಗಾರರಿಂದಲೂ ತುಂಬಿ ತುಳುಕುತ್ತಿದ್ದದರಿಂದ ಸತ್ಪುರವಾಗಿ ಒಪ್ಪುತ್ತಿತ್ತು.

ಶ್ರೀಮದ್ಭೃಂಗಿಯ ಪರಾವತಾರವೆನಿಸಿದ ಸೋಮಾರಾಧ್ಯರು ತಾವು ಆಚರಿಸಿ ತೋರಿಸಿದ ೬೪ ಶೀಲಗಳಲ್ಲಿ ಶಿವಭಕ್ತನು ನಿಷೇಧವಸ್ತುಗಳ ಸಂಪರ್ಕವಿಲ್ಲದ ಪರಿಶುದ್ಧವಾದ ಬಟ್ಟೆಗಳನ್ನು ಧರಿಸಬೇಕೆಂದು ಒಂದು ಕಟ್ಟಳೆಯಾಗಿರುವದು. ವಸ್ತ್ರಗಳನ್ನಷ್ಟೇ ಏಕೆ ಸದೋಷವಾದ ಯಾವ ಪದಾರ್ಥಗಳನ್ನು ಶಿವಭಕ್ತನು ಸ್ವೀಕರಿಸಲಾಗದು? ಏಕಂದರೆ ತಾನು ಪರಿಗ್ರಹಿಸುವದೆಲ್ಲವು ಲಿಂಗಾರ್ಪಣಮೂಲಕವಾಗಿಯೇ ತೆಗೆದುಕೊಳ್ಳಬೇಕಾಗುವದು. ಆಗ ಶಿವಾರ್ಪಣಕ್ಕೆ ಯೋಗ್ಯವಾದದ್ದು ಯಾವದೆಂಬಬಗ್ಗೆ ಚನ್ನಾಗಿ ಸಾರಾಸಾರನೋಡಿ ಅರ್ಪಣಕ್ರಮಾನುರೀತಿಯಾಗಿ ನಡೆಯಬೇಕಾಗುವದು. ವಿಚಾರಪರರಾದ ಭಾವಿಕಮಹಾಶಯರು ಹೊಸ ಅರಿವೆ ಅಂಚಡಿಗಳನ್ನು ಗ್ರಹಿಸಬೇಕಾದರೆ ಗುರುಜಂಗಮರಿಗೆ ಅರ್ಪಿಸಿ ಅಥವಾ ಶಿವಾರ್ಪಣೆಭಾವನೆಯಿಂದಾಗಲಿ ಅಥವಾ ಗೋವುಗಳ ಮೇಲಾಗಲಿ ಇಲ್ಲವೇ ವೃಷಭಗಳಮೇಲಾಗಲಿ ಹೊದಿಸಿ ನಂತರ ಆದಿಕರ್ತವ್ಯನನ್ನು ಸ್ಮರಿಸಿ ತಾವು ಸ್ವೀಕರಿಸುವರು. ಈ ರೀತಿಯಾಗಿ ಆಚರಿಸಿದರೆ ಮಾನವನ ಸನ್ಮಾರ್ಗಪ್ರವರ್ತನೆಗೆ ಹೇಗೆ ತಾನೇ ಚ್ಯುತಿಯುಂಟಾಗುವದು? ಭಾವನಾನುಸಾರವಾಗಿ ಶಿವಾನುಕೂಲತೆಯು ನಿಶ್ಶಂಕತೆಯಿಂದಾಗುವದು ಪಾಠಕಮಹಾಶಯರಲ್ಲಿ ಅನೇಕರಿಗೆ ಮನದಟ್ಟಾಗಿರುವ ಮಾತಾಗಿದೆ. ನಿರ್ದೋಷವಾದ ಪರಿಗ್ರಾಹ್ಯವಾದ ಬಟ್ಟೆಗಳನ್ನು ತಯಾ

ರಿಸಿ ಶಿವೋಪಾಸಕರಿಗೆ ಒದಗಿಸಿಕೊಡುವದು ಸಹಾ ಮೇಲಿನ ಶೀಲಕ್ಕೆ ಅನುಗುಣ ವಾಗಿದೆ ಎಂದು ಹೇಳಬಹುದು.

ಆ ತಿರುವನಂದಪುರದಲ್ಲಿ ಶಿವಭಕ್ತರ ಸಮೂಹದಲ್ಲಿ ಅಲಂಕಾರಪ್ರಾಯ ನಾಗಿದ್ದು ಸದ್ವಾಸನೆಯಿಂದ ಹೂವು ಹ್ಯಾಗೆ ಶೋಭಿಸುವದೋ ಹಾಗೆ ಮತ್ತು ಶೀತಲಕರವೂ ಮತ್ತೂ ಶಾಂತಿದಾಯಕವು ಆದ ಬೆಳದಿಂಗಳದಿಂದ ಅಮೃತ ಕುಂ ಡಲನಾದ ಚಂದ್ರಮನು ಹ್ಯಾಗೆ ಒಪ್ಪುವನೋ ಅದೇ ತೆರದಲ್ಲಿ ತನ್ನ ಗಂಡನ ನೆರಳಿನೋಪಾದಿಯಲ್ಲಿದ್ದು ಸಮಸ್ತಕಾರ್ಯಗಳಲ್ಲಿ ಅನುಕೂಲಳಾಗಿ ಸದ್ಧರ್ಮ ಸೇವೆ ಯಲ್ಲಿ ನಾಥನಿಗೆ ಬೆಂಬಲವಾಗಿ ಸುಗುಣಾಭರಣ ಭೂಷಿತಳಾದ ಪತಿಹಿತಳೆಂಬ ಸಹಧರ್ಮಚಾರಿಣಿಗೆ ಪತಿಯಾಗಿ ನೇಯುವ ಪವಿತ್ರಕಾಯಕವನ್ನು ಕೈಕೊಂಡ ನೈಸನಾಮಕ ಭಕ್ತನೇ ನಮ್ಮ ಚರಿತ್ರನಾಯಕನು.

ನಮ್ಮ ಕಥಾಪುರುಷನ ವೃತ್ತಿಯು ಬಟ್ಟೆಗಳನ್ನು ನೇಯ್ದು ಮೊದಲು ಜಂ ಗಮರಿಗೆ ಸಮರ್ಪಿಸಿ ನಂತರ ಶಿವಭಕ್ತರಿಗೆ ಪ್ರೀತಿಯಿಂದ ಆ ವಸ್ತ್ರಗಳನ್ನು ಕೊಟ್ಟು ಆ ಭಕ್ತರು ಆದರದಿಂದ ಕರುಣಿಸಿಕೊಟ್ಟ ಧನವು ಮಾತ್ರ ತಂದು ಗುರು ಲಿಂಗ ಜಂಗಮ ಶಿವಾರ್ಪಣ ಮೂಲಕವಾಗಿ ಶಿವಾನಂದದಿಂದ ಇರುವದಾಗಿತ್ತು. ಈ ಕಾರ್ಯದಲ್ಲಿ ಆ ಶರಣಲಲಾಮನ ಹೆಂಡತಿಯು ಪರಿಪರಿಯಿಂದ ಸರ್ವವಿಧ ದಿಂದ ಅಕೃತಿಮ ಪ್ರೀತಿವಿಶ್ವಾಸಪೂರ್ವಕವಾಗಿ ನೆರವಾಗುತ್ತಿದ್ದುದರಿಂದ ಸಂಸಾ ರವು ಸುಗಮವಾಗಿ ನಡೆದು ನಿಸ್ಸಾರವೆನಿಸಿದ ಭವಬಂಧನವು ಸರಾಗವಾಗಿ ಪರಿ ಣಮಿಸಿ ಶಿವಪ್ರೀತಿಗೆ ಇಂಬಾಗಿ ಅನೇಕ ಸಂವತ್ಸರಗಳು ಕಳೆಯಲು ಆತನಿಗೆ ತಾನು ಆಚರಿಸಿದ ಸತ್ಕರ್ಮ ಪಾರಿತೋಷಕ ರೂಪವಾಗಿ ಒಂದು ಶುಭಯೋಚನೆ ಉಂಟಾಯಿತು. ಅದೆಂತೆನೆ :—

ಹಿಂದಕ್ಕೆ ಯಾರು ನೇಯದ ಅಪೂರ್ವವಾದ, ಅಮೋಘವಾದ, ಉತ್ಕೃಷ್ಟ ವಾದ ಸೌಂದರ್ಯದ ಪರಮಾವಧಿಯಿಂದ ಕೂಡಿದ, ಕೈಗಾರಿಕೆಯ ಜಾಣ್ಮೆಯ ಅನುಪಮಸೀಮೆಯನ್ನು ತೋರ್ಪಡಿಸುವ, ಶಿವಗಣಸಮೂಹದ ಚಿತ್ರಗಳಿಂದೊ ಪ್ಪುತ್ತ ಶಿವಸಮಯ ಭಾವನನ್ನೇ ಬೀರುವ ಅಮೃತಾಕ್ಷರಗಳಿಂದ ರಂಜಿತವಾದ ಹಲವು ಬಣ್ಣಗಳಿಂದೊಪ್ಪುವ ಅತಿಸೂಕ್ಷ್ಮವಾದ ಪರಮ ಪವಿತ್ರವಾದ ನೂಲಿ ನಿಂದ ದಿವ್ಯಾಂಬರವನ್ನು ಮಾಡಬೇಕೆಂದು ಸಂಕಲ್ಪಿಸಿ ಸಮಗ್ರ ಒಂದುವರ್ಷದ ವರಿಗೆ ನೇಯ್ದು ಪೂರೈಸಿದನು.

ತನ್ನ ಮಂಗಲಸೂತ್ರಕ್ಕೆ ಕಾರಣನಾದ ಜಂಗಮ ಪ್ರೇಮಿಯಾದ ರಮ ಣನು ಮಾಡಿದ ಅತ್ಯುತ್ತಮವಾದ ನೂತನವಾದ ಮಡಿಯನ್ನು ನೋಡಿ ಪತಿಹಿ ತಳು ತನ್ನೊಳಗೆ ಪರಮಾನಂದ ಪಟ್ಟು ಇದು ದಿಗಂಬರನಾದ ಕೃತ್ತಿವಾಸನಿಗೆ

ತಕ್ಕದ್ದೆಂದು ಬಗೆದಳು. **(ಗಿರಿಜಾ)** ಕಲ್ಯಾಣ ಸಮಯದಲ್ಲಿ ಯೋಗಿಶ್ರೇಷ್ಠನಾದ ದಾಕ್ಷಾಯಣಿಯ ವಲ್ಲಭನು ಮದುವಣಿಗನಾಗಿ ಹೊರಡುವಕಾಲಕ್ಕೆ ದರ್ಪಣದಲ್ಲಿ ತನ್ನ ಪ್ರತಿಬಿಂಬವನ್ನು ಕಂಡು ಅತಿಶಯವಾಗಿ ಸಂತೋಷಪಟ್ಟಂತೆ ನಮ್ಮ ಕಥಾ ಪುರುಷನು ತಾನು ಭಕ್ತಿಪೂರ್ವಕವಾಗಿ ತಯಾರಿಸಿದ ದೇವಾಂಗವಸ್ತ್ರವು ಸರ್ವೋತ್ತಮನಾದ ಶಿವನಿಗೆ ತಕ್ಕದ್ದೆಂದು ಹಾರೈಸಿ ಆ ಭಕ್ತಪ್ರೇಮಿಯಾದ ಕಾಲಾತೀತನಾದ ವಿಷಧರನನ್ನು ಶ್ರದ್ಧಾತಿಶಯದಿಂದ ನೆನೆದನು. ಮಾನ್ಯರಾದ ಜಾಯಾಪತಿಗಳು ಏಕಕಾಲದಲ್ಲಿ ತಮ್ಮ ತಮ್ಮ ಮನೋರಾಜ್ಯದಲ್ಲಿ ನಂದಿಸುವ ಈ ಸ್ತುತ್ಯವಾದ ಸಂಗತಿಯು ಒಡನೆಯೇ ಸರ್ವಸಾಕ್ಷೀಭೂತನಾದ ಪಶುಪತಿಗ ಗೋಚರವಾಗಿ ಆ ದಯಾನಿಧಿಯು ಪಾದದಲ್ಲಿ ಕಿರುಗೆಜ್ಜೆಗಳಿಂದ ಯುಕ್ತನಾಗಿ ಹುಲಿದೊಗಲನ್ನು ಹೊದ್ದು ಭಸಿತದಿಂದ ಭೂಷಣನಾಗಿ ನಯನ ಮನೋಹರವಾಗಿ ಮೆರೆಯುವ ಜಡೆಗಳಿಂದೊಪ್ಪುತ್ತ ಹೊರಟು ನಮ್ಮ ಕಥಾಪುರುಷನ ಮನೆಯ ಬಾಗಿಲಕ್ಕೆ ಬಿಜಯಮಾಡಿದನು. ಬಾಗಿಲದಲ್ಲಿ ಬಂದಿರುವ ಕಪಟವೇಷಧಾರಿಯಾದ ತಾಂಡವಪ್ರಿಯನನ್ನು ನಮ್ಮ ಚರಿತ್ರಪುಂಗವನು ತಾನು ಬಯಸಿರುವ ಗಣನಾಯಕನೇ ನೂತನ ಶೋಭನವಾದ ಜಂಗಮರೂಪಿನಿಂದ ಬಂದಿರುವನೆಂದು ನಿರ್ಧರಿಸಿ ಭಯಭಕ್ತಿಯಿಂದ ಪತ್ನಿಯೊಡನೆ ಜಗದ್ಭರ್ತೃವಿಗೆ ಸಾಷ್ಟಾಂಗವಾಗಿ ಎರಗಿ ಶಿವಕಾರ್ಯಕ್ಕಾಗಿಯೆ ದುಡಿದಿರುವ ಕೈಯನ್ನೀಡಿ ಸರ್ವಾತ್ಮನಾದ ಜಗತ್ಪತಿಯನ್ನು ಗೃಹದಲ್ಲಿ ಕರೆದೊಯ್ದು ಸ್ನಾನವನ್ನು ಮಾಡಿಸಿ ಭಕ್ತ್ಯಾದರದಿಂದ ಉಚಿತಾಸನದಲ್ಲಿ ಕುಳ್ಳಿರಿಸಿ ಆ ಮಹಾಪಾದಕ್ಕೆ ಅಭಿಷೇಕವನ್ನು ಮಾಡಿ ಅನ್ವಿತೀಯನೆನಿಸಿದ ಪರಮಾತ್ಮನ ಪುಣ್ಯಮಯವಾದ ಪಾವನ ತಮವಾದ ದಿವ್ಯಪಾದ ತೀರ್ಥವನ್ನು ದಂಪತಿಗಳು ಉಕ್ಕಿ ಹೊರಸೂಸುತ್ತಿರುವ ಹರ್ಷದಿಂದ ಸ್ವೀಕರಿಸಿ ನೂತನ ಜಂಗಮಪ್ರಭುಸ್ವಾಮಿಗೆ ಆ ಅಪೂರ್ವವಾದ ಅಪ್ರತಿಮ ದಿವ್ಯಾಂಬರವನ್ನು ಸಂತೋಷಾತಿಶಯದಿಂದ ಅರ್ಪಿಸಿದರು. ಆಗ ಅಗ್ರಜನಾದ ಧೂರ್ಜಟಿಯು ಕಾರುಣ್ಯದಿಂದ ನೈಸಭಕ್ತರಿಗೆ ಒಂದು ತಾರಮಂ (ಅಂದರೆ ವರವನ್ನು) ಕೊಡಲು ದಂಪತಿಗಳು ಹರ್ಷಿತರಾಗಲು ಮೊದಲಿಗನೆನಿಸಿದ ದಶಭುಜನೆನಿಸಿದ ಚಂದ್ರಾಭರಣನು ತನ್ನ ನಿಜರೂಪವನ್ನು ತೋರಿಸಿದನು. ಆಗ ನಮ್ಮ ಚರಿತ್ರಪುಂಗವರ ಸಂತೋಷಾನಂದೋತ್ಸವಕ್ಕೆ ಎಣೆಯಿಲ್ಲದಷ್ಟಾಗಿ ದೇಹದಲ್ಲಿ ಕಂಪವಾಗಿ ರೋಮಾಂಚಗೊಂಡವರಾಗಿ ಬಾರಿಬಾರಿಗೂ ಪ್ರಮಥಾಧಿಪನನ್ನು ನಮಸ್ಕರಿಸಲು ದಯಾರಸನೆನಿಸಿದ ಅಷ್ಟಮೂರ್ತಿಯು ಸಂತುಷ್ಟನಾಗಿ ಪ್ರಕಾಶಮಯವಾದ ಸುರಯಾನವನ್ನು ಬರಮಾಡಿ ಆ ಜಾಯಾಪತಿಗಳನ್ನು ಅದರಲ್ಲಿ ಕುಳ್ಳಿರಿಸಿ ಅವರಿಬ್ಬರಿಗೂ ಗಣಪದವಿಯನ್ನು ಅನುಗ್ರಹಿಸಿದನು. ಗುರು ಲಿಂಗ ಜಂಗಮ ಸೇವೆಗಾಗಿಯೇ ಕಾಯಕವನ್ನು ಕೈಕೊಳ್ಳುವವರಿಗೆ ಖಂಡಿತವಾಗಿಯೂ ಸದ್ಗತಿಯಾಗು

ವದೆಂಬುದು ಈ ಆಖ್ಯಾಯಿಕೆಯಿಂದ ಒಡೆದು ಕಾಣುವದಲ್ಲವೇ? ಅಂಥ ಸದ್ಬುದ್ಧಿಯನ್ನೆ ನಮ್ಮ ಪಾಠಕ ಮಹಾಶಯರಿಗೆ ಆ ದಯಾಘನನು ದೃಢಪಡಿಸಲೆಂದು ಅನಂತನನ್ನು ಲೇಖಕನು ಪ್ರಾರ್ಥಿಸುತ್ತಾನೆ.

ಓಂ.

# ೨೧. ತಿರುನೀಲನಕ್ಕರು.

ಮುಕ್ಕಣ್ಣನಿಗೆ ಶಲದಿ ತಕ್ಕುದಲ್ಲೆಂದು ಬಗೆ। ಮಿಕ್ಕು ತೂಪಿರಿದ ಸತಿಗೆ
ಪತಿಯಹ ನೀಲ। ನಕ್ಕರಿಂದಹಿತವನು ಗೆಲುವೆ ॥

[ಶ್ರೀ ನಿಜಗುಣರು]



ವಭಕ್ತಿ ತತ್ಪರರಾದ, ಸುಗುಣ ಸಮೂಹದಿಂದೊಪ್ಪುವ ಮಹಾಜನಗಳಿಂದ ಅಲಂಕೃತವಾದ ಸಮಸ್ತ ವಿಧವಾದ ಬೆಳೆಗಳಿಂದ ಪೂರಿತವಾದ ಚೋಳ ಧರಿತ್ರಿಯು ಮನೋಹರವಾಗಿ ಕಂಗೊಳಿಸುತ್ತಿತ್ತು. ಆ ಶೋಭನವಾದ ನಾಡಿನಲ್ಲಿ **ಶಾಂತಿಮಂಗಲ** ಎಂಬ ಪುರವು ಶಿವೋಪಾಸಕರಿಂದ ರಂಜಿಸುತ್ತಿದ್ದಿತು. ಆ ಪುಣ್ಯಪಟ್ಟಣದಲ್ಲಿ ಸಲ್ಲೀಲೆ ಎಂಬ ಹೆಂಡತಿಯೊಡನೆ ಶೈವರಾದ ನಮ್ಮ ಕಥಾನಾಯಕರು ಶಿವಭಕ್ತಿ ಪರಾಯಣರಾಗಿ, ಶಿವಾರ್ಪಣ-ಶಿವಸೇವಾ ಧುರಂಧರರಾಗಿ, ಸದಾಚಾರ ಪ್ರೇಮಿಗಳಾಗಿದ್ದರು. ಶಿವಯೋಗ ಶಿವಾಚಾರ ಕ್ರಿಯೆಗಳಲ್ಲಿ ಗಂಡನಿಗೆ ನಮ್ಮ ಚರಿತ್ರನಾಯಕಳು ಸರಳವಾದ ಪ್ರೀತಿಯಿಂದ ವಿಶ್ವಾಸಪೂರ್ವಕವಾಗಿ ತನ್ನ ಶಕ್ತಿಮೀರಿ ಸಹಾಯಮಾಡುತ್ತಿದ್ದಳು. ಈ ರೀತಿಯಾಗಿ ಈ ಸಾಧ್ವೀಮಣಿಯ ಶಿವಪ್ರೇಮವು ಬೆಳೆದು ತಾನು ಯಾವ ನಿತ್ಯಕರ್ಮಗಳನ್ನಾಚರಿಸುತ್ತಿದ್ದರೂ ಚಿತ್ತವು ಮಾತ್ರ ಸುರೇಶನಾದ ಮಹೇಶನಲ್ಲಿ ಲೀನವಾಗಿರುತ್ತಿತ್ತು. ನಮ್ಮ ಕಥಾಪುರುಷನು ದಿನಾಲು ಸಹಧರ್ಮಚಾರಿಣಿಯೊಡಗೊಂಡು ತರತರದ ನವಪುಷ್ಪಗಳಿಂದ ಶಾಂತಿ ಮಂಗಲ ಪುರಾಧೀಶನಾದ, ಸ್ವ-ಪ್ರಕಾಶನಪ್ಪ ಮಹಾಲಿಂಗದಾಲಯಕ್ಕೆ ಬಂದು ಮನದಣಿಯು

ವಂತೆ ಪೂಜಿಸಿ, ಸಂತೋಷವನ್ನು ಹೊಂದಿ ತನಗಾಗುವ ಆನಂದವನ್ನು ಶಿವಾರ್ಪಣ ಮಾಡುತ್ತ ಶಿವಾಧ್ಯಾನೈಕಪರನಾಗಿ ನಿಜಗೃಹಕ್ಕೆ ಬರುತ್ತಿದ್ದನು. ಈ ತೆರದಿಂದ ಈ ಜಾಯಾಪತಿಗಳ ಶಿವಮಂಗಲದ ಮೋಹವು ಅಭಿವೃದ್ಧಿಗೊಂಡು ಶಿವಾಭಿನ್ನಭಾವವು ಹೆಚ್ಚುತ್ತಿರಲು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಪಂಚಲಕ್ಷಣಗಳಿಂದ ಶೋಭಿತನಾದ ಪರಬ್ರಹ್ಮಮೂರ್ತಿಗೆ ವೇದ್ಯವಾಗಿ ಈ ಸತಿಪತಿಗಳ ಮೇಲೆ ಕರುಣೆಯುಂಟಾಗಿ ಒಂದು ವಿಚಿತ್ರವಾದ ಸಂಗತಿಯು ಸಂಭವಿಸಿತು ಅದೆಂತೆನೆ :—

ಮಿಂದು ಶುಚಿಯಾಗಿ ಎಂದಿನಂತೆ ಒಂದುದಿನ ಆ ಭವಹರನಾಲಯಕ್ಕೆ ಚರಿತ್ರನಾಯಕನು ಬಂದು ಪದ್ಮಾಸನವನ್ನಿಕ್ಕಿ ಆಗಮೋಕ್ತವಾಗಿ ಭಸ್ಮ ರುದ್ರಾಕ್ಷಾದಿಗಳನ್ನು ಸಕ್ರಮವಾಗಿ ಧರಿಸುತ್ತಿರುವಾಗ ಆತನ ಪತ್ನಿಯು ಶ್ರೀ ಲಿಂಗಾಭಿಷೇಕಕ್ಕೆ ಅಣಿಮಾಡಲೋಸುಗ ಮುನ್ನಿನ ದಿವಸ ಧರಿಸಿದ ಕುಸುಮಗಳನ್ನು ತೆಗೆಯುತ್ತ ವಿಸರ್ಜನ ಮಾಡುತ್ತಿರುವಾಗ ಆ ಘನಲಿಂಗದ ತಲೆಯಮೇಲೆ ಶಲದಿಯು (ಜೇಡವು) ಸುಳಿದಾಡುತ್ತಿತ್ತು. ಅದನ್ನು ಕಂಡು ಆ ದಯಾರ್ದ್ರ ಹೃದಯಳಾದ ಆ ಸತಿಯು ಶಿವ, ಶಿವ, ಈ ಜೇಡವು ದೇವರ ಮಸ್ತಕದ ಮೇಲೆ ಆಡುವದರಿಂದ ಬಕ್ಕೆಗಳಾಗಿ ಹುಳುಗಳು ಉಂಟಾಗಿ ನೋವಾಗುವದೆಂದು ಬಗೆದು ಕಳವಳಪಟ್ಟು ಬಹಳ ಮರುಗಿ, ಅಶ್ರುಗಳನ್ನು ಸುರಿಸುತ್ತ ಶಿವಲಿಂಗ ಮೂರ್ತಿಗೆ ಬಾಧೆಯಾಗಬಾರದೆಂದು ಅತಿ ಪ್ರೀತಿಯಿಂದ ಸಾವಕಾಶವಾಗಿ ಭಕ್ತಿ ಭಾವದಿಂದ ಶಂಕರಮೂರ್ತಿಯ ಶಿರದಲ್ಲಿರುವ ಶಲದಿಯು ದೂರಾಗಲೆಂದು ಶಿವ ಮಂತ್ರವನ್ನು ನೆನೆಯುತ್ತ ತೂಪಿರಿದಳು. ಇದನ್ನು ಅವಳ ವಲ್ಲಭನು ಕಂಡು ಪರಮ ಪವಿತ್ರವಾದ ಮಂಗಲಕರವಾದ ಸ್ವಾಮಿಯ ತಲೆಗೆ ಉಗುಳು ಸಿಡಿಯಿತೆಂದು ಶಂಕಿಸುತ್ತ, ಎಲೆಲೆ ಅವಿವೇಕಿ, ಬುದ್ಧಿಶೂನ್ಯಳೇ ನೀನು ಈ ರೀತಿ ಆಚರಿಸಬಹುದೇ ಎಂದು ಆಕೆಯನ್ನು ಆ ದೇವಾಲಯದಿಂದ ಹೊರಗೆ ನೂಕಿಬಿಟ್ಟನು.

ಬಳಿಕ ಪರಿಶುದ್ಧವಾದ ನವಜಲದಿಂದ ಮಹಾದೇವನಿಗೆ ಅಭಿಷೇಕವನ್ನು ಮಾಡಿ ಅನೇಕ ಪುಷ್ಪಪತ್ರಾದಿಗಳನ್ನು ಧರಿಸಿ ಯಥಾವಿಧಿಯಾಗಿ ಪೂಜಿಸಿ ಪರಿಪರಿಯಿಂದ ಸ್ತುತಿಸಿ ಕಡುಹರ್ಷಪಟ್ಟು ಮನೆಗೆ ಬರುತ್ತಿರುವಾಗ ಆತನ ಪತ್ನಿಯು ಶಿವಭಕ್ತರ ಮುಂದೆ ಅತಿ ಮೃದುವಾದ ಲಿಂಗದ ತಲೆಯ ಮೇಲೆ ಶಲದಿಯು ಸುಳಿಯುತ್ತಿರುವದನ್ನು ಕಂಡು ಅದರ ನಿವಾರಣೆಗಾಗಿ ನಾನು ಮಂತ್ರಿಸುತ್ತಿರುವಾಗ ನನ್ನ ರಮಣನು ನನ್ನನ್ನು ದೇವಾಲಯದಾಚೆಗೆ ತಳ್ಳಿದನೆಂದು ದೂರುತ್ತಿದ್ದಳು. ಆಗ ತನ್ನ ಮಡದಿಯನ್ನು ಪರಿಭಾವಿಸುತ್ತ, ಶಿವಾಚಾರ ಕ್ರಮವನ್ನು ವಿವರಿಸುತ್ತ ನಮ್ಮ ಚರಿತ್ರನಾಯಕನು ಮನೆಗೆ ಬಂದನು. ಆ ದಿನ

ರಾತ್ರಿ ಶಿವಸ್ಮರಣೆಯನ್ನು ಗೈಯ್ಯುತ್ತ ದಂಪತಿಗಳು ಮಲಗಿರುವಾಗ ಆ ಮುಗ್ಧ ಭಕ್ತನ ಕನಸಿನಲ್ಲಿ ಮುನಿಧ್ಯೇಯನಾದ ಪರಮಾತ್ಮನು ಬಂದು ಎಲೈ ತಿರುನೀಲ ನಕ್ಕನೇ ನನ್ನ ಮಸ್ತಕದ ಮೇಲೆ ಜೇಡವು ಹರಿದಾಡುವದನ್ನು ನಿನ್ನ ಸ್ತ್ರೀಯಳು ಕಂಡು ನನಗೆ ನೋವಾಗಬಾರದೆಂದು ಊದಿರಿದು ಮಂತ್ರಿಸುತ್ತಿರುವಾಗ ಅವಳನ್ನು ಹೊರಗೆ ತಳ್ಳಿದಿ. ಈಗ ನೋಡು ನನ್ನ ತಲೆಯ ಮೇಲೆ ಗುಳ್ಳೆಗಳಾಗಿ ಹುಳುಗಳು ತುಂಬಿ ಕಷ್ಟವಾಗಿದೆ, ಎಂದು ಹೇಳಿ ಮಾಯವಾದನು. ಬೆಳಗಿನಲ್ಲಿ ಎಚ್ಚತ್ತು ಸ್ವಪ್ನ ವೃತ್ತಾಂತವನ್ನು ತಿಳಿಯಬೇಕೆಂದು ನಿಜಕಾಂತೆಯೊಡನೆ ಆ ದೇವಾಲಯಕ್ಕೆ ಬಂದನು. ಆ ಭಕ್ತನು ಶಿವಲಿಂಗದ ಬಳಿಯಲ್ಲಿ ಕುಳಿತು ನಿರ್ಮಾಲ್ಯವನ್ನು ವಿಸರ್ಜಿಸುತ್ತಿರುವಾಗ ಆತನ ಭಾರ್ಯೆಯು ದೀಪವನ್ನು ಹಿಡಿದು ಶಿವಮೂರ್ತಿಯನ್ನು ನೋಡುತ್ತಲೆ ಅಯ್ಯಯ್ಯೋ ಹುಳುಗಳು ಮುತ್ತಿವೆ. ಶಿವ, ಶಿವ, ನೊಂದೆಯಾ ಎಂದು ಚಿಂತಾತುರಳಾಗಿ ವ್ಯಸನಾತಿರೇಕದಿಂದ ದೊಪ್ಪನೆ ಬಿದ್ದಳು. ಆಗ ನಮ್ಮ ಚರಿತ್ರಪುಂಗವನು ಶಿವ, ಶಿವ, ನಿನ್ನೆ ಕನಸಿನಲ್ಲಿ ಭಗವಂತನು ಹೇಳಿದುದೇ ನಿಜವಾಯಿತೆಂದು ತಿಳಿದು ನಾನೇಕೆ ಮೂಢನಾಗಿ ಸಲ್ಲೀಲೆಯನ್ನು ಬಲಾತ್ಕಾರದಿಂದ ನಿನ್ನೆ ದೇವಾಲಯದ ಹೊರಗೆ ಹಾಕಿದೆನೆಂದು ಕೃತಾಪರಾಧಕ್ಕೆ ಪಶ್ಚಾತ್ತಾಪಪಟ್ಟು ತನ್ನಲ್ಲಿಯೇ ತಾನು ಅತಿಶಯವಾಗಿ ನೊಂದು ಖತಿಗೊಳ್ಳುತ್ತಿರುವಾಗ ದೀನರಕ್ಷಕನಾದ ಫಾಲನೇತ್ರನು ಆ ಮುಗ್ಧ ದಂಪತಿಗಳ ಮೇಲೆ ಕನಿಕರಪಟ್ಟು ಆ ಲಿಂಗಮೂರ್ತಿಯಿಂದಲೇ ಆವಿರ್ಭವಿಸಿ ಸತಿಪತಿಗಳನ್ನು ಮೈದಡವಲು ಆ ಭಕ್ತರ ಆನಂದಕ್ಕೆ ಎಣೆ ಇಲ್ಲದಷ್ಟಾಗಿ ಅಡಿಗಡಿಗೆ ಆ ಮಹಿಮನನ್ನು ಕೊಂಡಾಡುತ್ತ ಸಂತೋಷದ ಭರದಲ್ಲಿ ಮೈಮರೆತರು. ಆಗ ಕಂತುಹರನು ಮಣಿಪುಷ್ಪಕವೆಂಬ ವಿಮಾನವನ್ನು ಬರಮಾಡಿ ಆ ಮುಗ್ಧ ದಂಪತಿಗಳನ್ನು ಅದರಲ್ಲಿ ಕುಳ್ಳಿರಿಸಿ ಅವರೀರ್ವರಿಗೂ ಗಣಪದವಿಯನ್ನು ದಯಪಾಲಿಸಿದನು.

ಶಿವಭಕ್ತಿಯು ಮೊಳೆತು, ಶಿವನಿಷ್ಠೆಯು ಬಲಿತು, ಶಿವಾಭಿನ್ನತೆಯು ಪೂರ್ಣವಾಗಿ, ಶಿವಭಾವನೆಯ ಪರಮಾವಧಿಯು ಉದಯಿಸಿದೊಡನೆಯೆ ಸದ್ಗತಿಯು ತಡವಿಲ್ಲದೆ ದೊರಕುವದೆಂದು ಈ ಆಖ್ಯಾಯಿಕೆಯಿಂದ ವಾಚಕ ಮಹಾಶಯರಿಗೆ ತಪ್ಪದೆ ಹೊಳೆಯುವದಲ್ಲವೇ? ಅಂಥ ನಿರತಿಶಯ ಶಿವಯೋಗವನ್ನುಂಟುಮಾಡುವ ಗುರುಲಿಂಗ ಜಂಗಮ ಸೇವೆಯನ್ನು ಕೈಕೊಳ್ಳುವಂತೆ ಪರಮಾತ್ಮನು ನಮ್ಮೆಲ್ಲರಿಗೂ ಆಶೀರ್ವದಿಸಲಿ.



ಓಂ.

# ೨೨. ತಿರುಕುರುಪಿತೊಂಡರು.



ಖಂಡಪರಶುವಿನ ಕರಿಗೊಂಡ ಕಂತೆಯನುಪಮೆ । ಗಂಡು ನಿಜರುಧಿರ
ದೊಳು ತೊಳೆದ ತಿರುಕುರುಪೆ । ತೊಂಡರೆ ನಗಮಳತೆಯಸೀಗೆ ॥

[ಶ್ರೀ ನಿಜಗುಣರು]



ಹೇಶನಾಲಯಗಳಿಂದ, ಮನೋಹರವಾಗಿರುವ, ಮಿಗಿಲೆಸೆವ ತೊಂಡಧರೆಯು ಪಚ್ಚೆಪೈರುಗಳಿಂದ ಶೋಭಿತಮಾಗಿ ಜಲನದಿಗಳಿಂದ ವಿಪುಲವಾಗಿ ವಿರಾಜಿಸುತ್ತಿತ್ತು. ಅಂತೆಸೆವ ಆ ನಾಡಿನಲ್ಲಿ ಕಾಂಚೀಪುರವು ಅನೇಕ ಶಿವಭಕ್ತ ವೃಂದಗಳಿಂದ ಮತ್ತೂ ಅತಿ ರಮಣೀಯವಾದ ಪ್ರಾಸಾದಗಳಿಂದ ಒಪ್ಪುತ್ತಿರುವದರಿಂದ ದೇವೇಂದ್ರನ ಅಮರಾವತಿಗಿಂತಲೂ ಹೆಚ್ಚಿಗೆ ಪ್ರಕಾಶಿಸುತ್ತಿತ್ತು.

ಮಾನವನು ಶಿವಾರ್ಪಣಕ್ಕಾಗಿ ಯಾವ ಉಚ್ಚ ಅಥವಾ ಕಡಿಮಿ ತರಗತಿಯ ಕೆಲಸ ಕೈಕೊಂಡರೂ ಚಿಂತೆಯಿಲ್ಲ. ಕೇವಲ ಗುರುಲಿಂಗ ಜಂಗಮ ಸೇವೆಗಾಗಿ ಎಂಥ ಹೀನತರವಾದ ಕಜ್ಜವನ್ನು ಮಾಡಿದರೂ ಯಾವ ಆಕ್ಷೇಪವೂ ಇಲ್ಲಾ. ಆ ಆ ಕಾಯಕಗಳೆಲ್ಲವೂ ಶುಭಪ್ರದವಾಗಿ ಪರಿಣಮಿಸಿ ಆತನನ್ನು ಮುಕ್ತಿಪಥಕ್ಕೆ ಅಣಿಮಾಡುವವು. ಉದರ ನಿರ್ವಾಹಕ್ಕಾಗಿಯೇ ಮಾತ್ರ ದುಡಿಯುವದು ಅಷ್ಟೊಂದು ಪ್ರಶಂಸನೀಯವಾದುದಲ್ಲ. ಶಿವಾರ್ಪಣ ಭಾವದಿಂದಲೇ ಉದ್ಯೋಗಮಾಡುವದೇ ಶ್ರೇಯಸ್ಕರವಾದುದು. ಇಷ್ಟೇ ಏಕೆ ಸರ್ವ ಸಂಪತ್ಕರವಾದುದು.

ಭೂಮಿಯ ಮಲಿನತೆಯನ್ನು ನಿವಾರಿಸುವದಕ್ಕಾಗಿಯೋ ಏನೋ ಎಂಬುವಂತೆ ಅಗಸರ ವಂಶದಲ್ಲಿ **ತಿರುಕುರುಪಿತೊಂಡರು** ಎಂಬ ಸದ್ಭಕ್ತರು ಆ ಕಾಂಚೀಪುರದಲ್ಲಿ ಜನಿಸಿದರು. ತಮ್ಮ ಪರಂಪರಾಗತ ರಜಕ ಕಾಯಕವನ್ನು ನಮ್ಮ ಕಥಾಪುರುಷನು ಕೈಕೊಂಡನು. ಶಿವಭಕ್ತರ ತೊತ್ತಾಗಿ ಅವರಿದ್ದಲ್ಲಿಗೆ ತಾನಾಗಿಯೇ ಹೋಗಿ ಅವರ ಅರಿವಿಗಳನ್ನು ಇಸಕೊಂಡು ಬಹಳ ಹಸನಾಗಿ ಒಗೆದು ಒಣಗಿಸಿ

ಸರಿಯಾಗಿ ಗಳಿಗೆಯನ್ನು ಮಾಡಿ ಬಹು ಭಯಭಕ್ತಿಯಿಂದ ಅವರಿಗೆ ಮುಟ್ಟಿಸಿ ಅವರು ತಾವಾಗಿಯೇ ಪ್ರೀತಿಯಿಂದ ಕೊಟ್ಟಷ್ಟು ಮಾತ್ರ ಆ ಅಲ್ಪಧನದಿಂದಲೇ ಗುರುಲಿಂಗ ಜಂಗಮರ ಸೇವೆಯಲ್ಲಿ ನಿರತನಾಗಿದ್ದನು. ಶಿವೋಪಾಸಕರ ಬಟ್ಟೆಗಳನ್ನಲ್ಲದೇ ಭವಿಗಳ ವಸ್ತ್ರಗಳನ್ನು ಮುಟ್ಟದ ಛಲದವನಾಗಿ ಮುಂಜಾನೆ ಬಹಳ ನಸುಕಿನಲ್ಲೆದ್ದು ಏಳೀಳುತ್ತಲೆ ಕಲ್ಪರೂಪನಾದ ಕಾಲರೂಪನಾದ ಮಂಗಲದ ಮನೆಯಾಗಿರುವ ಮಹಾದೇವನನ್ನು ಸ್ಮರಿಸುತ್ತ ಶಿವಗಣ ಸಮೂಹವನ್ನು ಸ್ತುತಿಸುತ್ತ ಉಪವನಗಳಿಂದ ಭ್ರಮರಗಳೆರಗದ ಆಗ ತಾನೇ ಅರಳಲನುವಾದ ನವ ಪುಷ್ಪವನ್ನು ತಂದು ಸ್ನಾನವನ್ನು ಮಾಡಿ ಈಶಾರ್ಚನೆಯನ್ನು ಮಾಡಿ ಪ್ರಭುವನ್ನು ಮನವೆಂಬ ಕಮಲವು ವಿಕಸಿತವಾಗುವಂತೆ ಪರಿಪರಿಯಿಂದ ಆ ಮಹಿಮನನ್ನು ಅನಂತ ವಿಧವಾಗಿ ಕೊಂಡಾಡಿ ವಿಶೇಷ ಉತ್ಸಾಹವನ್ನು ತಳೆದು ತನ್ನ ನಿಯಮಿತವಾದ ವೃತ್ತಿಯನ್ನು ಅವಲಂಬಿಸಿ ಅದನ್ನು ನಿರ್ವಂಚನೆಯಿಂದ ಹಾಗೂ ದಕ್ಷತೆಯಿಂದ ಸಾಗಿಸುತ್ತ ಹರಗುರುಭಕ್ತಿಪರಾಯಣನಾಗಿ ಹೃತ್ಪುಂಡರೀಕದಲ್ಲಿ ವಿಶ್ವವ್ಯಾಪಕನನ್ನು ಸುಖವಾಗಿರಿಸಿ ಸಲ್ಲೀಲೆಯಿಂದ ಕಾಲಕ್ಷೇಪವನ್ನು ಮಾಡುತ್ತಿದ್ದನು. ಈ ರೀತಿಯಾಗಿ ಕೆಲವು ಸಂವತ್ಸರಗಳು ಕಳೆಯಲು ಸೋಮಶೇಖರನಿಗೆ ನಮ್ಮ ಕಥಾನಾಯಕನ ಮೇಲೆ ಪ್ರೀತಿಯು ಹೆಚ್ಚಾಗಿ ಇವನ ಭಕ್ತಿಯನ್ನು ಪರೀಕ್ಷಿಸಲೋಸುಗ ಪ್ರಮಥರನ್ನು ಕಳುಹಿಸಿದನು. ಅವರು ಶಿವತೇಜದ ಸೊಬಗಿನಿಂದ ಯುಕ್ತರಾಗಿ ಮಾನವಾಕಾರವನ್ನು ಹೊಂದಿ ಆತನು ಬಟ್ಟೆಗಳನ್ನೊಗೆಯುತ್ತಿರುವ ಇಳೆಗಿಳಿದು ನಮ್ಮ ಚರಿತ್ರಪುರುಷನ ಎದುರಿನಲ್ಲಿ ತಮ್ಮ ತಮ್ಮ ವಸ್ತ್ರಗಳನ್ನು ರಾಶಿರಾಶಿಯಾಗಿ ಬಿಟ್ಟು ಅವುಗಳನ್ನು ಮಡಿಮಾಡಿ ಕೊಡಬೇಕೆಂದು ಆ ಮಡಿವಳನಿಗೆ ಆಜ್ಞಾಪಿಸಿದರು. ಆಗ ನಮ್ಮ ಭಕ್ತನು ಹಸಾದವೆಂದು ಹೇಳಿ ಸಮಾಧಾನವನ್ನು ತಾಳಿ ಅರಿವೆಗಳ ಸಮುದಾಯವನ್ನು ನೋಡಿ ಅಂಜದೆ ಕ್ರಮವಾಗಿ ಒಗೆಯಲನುವಾದನು. ಶ್ರೀ ವೀರಭದ್ರನ ಅವತಾರವೇ ತಾನಾದ ಮಡಿವಳ ಮಾಚದೇವನ ಬಂಧುವಿನೋಪಾದಿಯಲ್ಲಿರುವ ಆತನು ಆ ವಸ್ತ್ರಗಳನ್ನು ಸ್ವಚ್ಛಮಾಡುತ್ತ ಹೋದಂತೆ ಅವು ಸವೆಯದಂತೆ ಕಂಡರೂ ಎಳ್ಳಷ್ಟು ಅಂಜದೆ ಸಂತೋಷದಿಂದಲೇ ಹತ್ತುಪವಾಸವನ್ನುಮಾಡಿ ಆ ಶಿವಕಲಾಶೋಭಿತರಾದ ವ್ಯಕ್ತಿಗಳ ಸರ್ವ ಅರಿವೆಗಳನ್ನು ಮಡಿಮಾಡಿಕೊಟ್ಟು ಅವರನ್ನು ತೃಪ್ತಿಪಡಿಸಿ ಅವರು ಕರುಣಿಸಿಕೊಟ್ಟ ಹಣದಿಂದ ಶಿವಶರಣರಿಗೆ ದಾನ ಮಾಡಿ ತನ್ನ ಲಿಂಗಾರ್ಪಣವನ್ನು ಪೂರೈಸಿದನು. ಸರ್ವಜ್ಞನಾದರೂ ಬೇಕಾಗಿಯೇ ಆ ಶಿವಶರಣರಿಂದ ನಮ್ಮ ಚರಿತ್ರಪುಂಗವನ ಸರ್ವ ವೃತ್ತಾಂತವನ್ನು ಕೇಳಿ ಆನಂದ ತುಂದಿಲನಾಗಿ ಆ ಪರಮಭಕ್ತನನ್ನು ಅನುಗ್ರಹಿಸಲೋಸುಗ ಮನೋಹರವಾದ ತಾಪಸಿಯ ವೇಷವನ್ನು ತಾಳ್ದು ಅವನು ಅರಿವೆಗಳನ್ನು ತೊಳಿ

ಯುವ ಸ್ಥಳಕ್ಕೆ ಸೂರ್ಯೋದಯಕ್ಕೆ ಬರುತ್ತಿರಲು ಆಗ ರಜಕನು ಮಹಾನುಭಾವನಿಗೆ ಸಾಷ್ಟಾಂಗವೆರಗಲು ಆತನು ಭಕ್ತನೇ ವಿಮಲಮತಿಯೇ, ನಿರ್ಮಲಾತ್ಮನೇ ಮಗನೇ ನನ್ನದೊಂದು ವಸ್ತ್ರವಿದೆ. ಅದಕ್ಕೆ ಕಂಥೆಯ ಬಣ್ಣವು ಹತ್ತಿರುವದು. ಅದನ್ನು ಬಣ್ಣವು ಹೋಗುವಂತೆ ಸ್ವಚ್ಛಮಾಡಿ ಕೊಡುವಿಯಾ ಎಂದು ಹೇಳಿ ಆತನ ಕೈಯ್ಯಲ್ಲಿ ಕೊಡಲು ಹಸಾದವೆಂದು ಹೇಳಿ ಆ ಬಟ್ಟೆಯನ್ನು ಬಹು ಭಕ್ತಿಪೂರ್ವಕವಾಗಿ ತೊಳಿಯಲಿಕ್ಕೆ ಒಪ್ಪಿ ತೆಗೆದುಕೊಂಡನು. ಅರಿವೆಗಳ ಮಲಿನತೆಯನ್ನು ನಿವಾರಿಸುವ ಸರ್ವ ಪದಾರ್ಥಗಳನ್ನು ತಿಕ್ಕಿದರೂ ದಿನಕರನಸ್ತವಾಗುವವರಿಗೆ ಎಷ್ಟೋ ಸಾರೆ ಎಡೆಬಿಡದೆ ತಿಕ್ಕಿ ತೊಳೆದರೂ ಆ ಕಂಥೆಯ ಬಣ್ಣವು ಮಾತ್ರ ಹೋಗಲಿಲ್ಲ. ಒಡನೆಯೇ ಕೃತಕವೇಷವನ್ನು ಧರಿಸಿದ ಅನಾಥನಾದ ಶಂಕರನು ಅಲ್ಲಿಗೆ ಬಿಜಯಮಾಡಿದನು. ಆಗ ನಮ್ಮ ಶರಣಲಲಾಮನು ಶಿವ ಶಿವ ನನ್ನ ಛಲವು ತಪ್ಪಿತು. ನನ್ನ ಮಾತು ಹುಶಿಯಾಯಿತೆಂದು ಖತಿಗೊಂಡು ಇನ್ನು ನಾನು ಬಾಳಬಾರದೆಂದು ಬಗೆದು ಎಲೈ ಕಾಲಾಗ್ನಿರುದ್ರನೇ ನನ್ನನ್ನೇ ನಿನ್ನ ಪಾದಕ್ಕೆ ಅರ್ಪಿಸುವೆನೆಂದು ನಿರ್ಧರಿಸಿ ತಾನು ನಿತ್ಯ ಒಗೆಯುತ್ತಿರುವ ಕಲ್ಲಿಗೆ ತನ್ನ ಕಾಯವನ್ನು ಅಪ್ಪಳಿಸುವದಕ್ಕೆ ಉದ್ಯುಕ್ತನಾಗುವಷ್ಟರಲ್ಲಿಯೇ ಉಮಾಕಾಂತನು ಪ್ರಸನ್ನನಾಗಿ ನಿಜರೂಪವನ್ನು ತೋರಿಸಿದನು. ಆಗ ನಮ್ಮ ನಿಜ ಭಕ್ತನು ಭಕ್ತಿಪರವಶನಾಗಿ ಭಗವಂತನನ್ನು ಸ್ತುತಿಸುತ್ತ ಆತನ ದಿವ್ಯಚರಣದಲ್ಲಿ ಶಿರವನ್ನಿಡಿ ಆನಂದ ಕಡಲಿನಲ್ಲಿ ಈಜಾಡಿದನು. ಭಕ್ತದೇಹಿಕನೆಂದು ಹೆಸಗೊಂಡ ಸಾಂಬನು ಚರಿತ್ರನಾಯಕನಿಗೆ ಗಣಪದವಿಯನ್ನು ದಯಪಾಲಿಸಿದನು.



ಓಂ.

# ೨೩. ತಿರುನಾಳ್ಪೋವರು.

ನಾಡೆಪೊನ್ನಾಂಬಲವ ನೋಡುವಾತುರತೆಯೊಡ । ಗೂಡಿ ನಿರ್ಮಳತೆ ದಳೆದ
ತಿರುನಾಳ್ಪೋವರೀಡಾಡಲೆನ್ನ ಭವವನ್ನು ॥

[ಶ್ರೀ ನಿಜಗುಣರು]



ವಾರ್ಷಣಾನಂದ ಪರರಾದ ಶಿವಭಕ್ತರ ವಿಲಾಸಕ್ಕಾಗಿಯೋ ಅಥವಾ ಭೂದೇವತೆಯ ಶೃಂಗಾರಕ್ಕಾಗಿಯೋ ಅಥವಾ ಭೋಗಿಗಳ ಮನಶ್ಯಾಂತಿಗಾಗಿಯೋ ಎಂಬಂತೆ ರಮಣೀಯವಾದ ಹೂವಿನ ತೋಟಗಳಿಂದಲೂ, ಫಲವೃಕ್ಷಗಳಿಂದ ರಂಜಿತವಾದ ವನಗಳಿಂದಲೂ ಅನೇಕ ಗದ್ದೆಗಳಿಂದಲೂ ಶೋಭಿಸುತ್ತಿರುವ ಚೋಳಪ್ರದೇಶದಲ್ಲಿ ವಾದನೂರು ಎಂಬ ಪುರವು ಉದ್ಯೋಗಪ್ರಿಯರಾದ ಜನರಿಂದಲೂ ಭಾವನಾಪ್ರಧಾನರಾದ ಶಿವೋಪಾಸಕರಿಂದಲೂ ಅಲಂಕಾರ ವಿಶೇಷಗಳಿಂದ ಮನೋಹರವಾದ ಉನ್ನತ ಶಿವಾಲಯಗಳಿಂದಲೂ ಚಲ್ವಾಗಿ ಮೆರೆಯುತ್ತಿತ್ತು. ಅಂತೊಪ್ಪುವ ಆ ಊರ ಹೊರಭಾಗದಲ್ಲಿ ಯಾವ ಬಗೆಯಿಂದಲೂ ಭಪಿಗಳ ಸೊಂಕು ತನಗಾಗಬಾರದೆಂಬ ನಿಯಮದವನಾದ ಶಿವಸೇವಾಪ್ರಿಯನಾದ **ತಿರುನಾಳ್ಪೋವ**ನೆಂಬ ಭಕ್ತೋತ್ತಮನು ಮನೆಯನ್ನು ಮಾಡಿಕೊಂಡು ಲಿಂಗನಿಷ್ಠನಾಗಿ ವಿರಾಜಿಸುತ್ತಿದ್ದನು.

(ಈ ಮೊದಲೇ ಅನೇಕಸಾರೆ ವಾಚಕವೃಂದದ ಅವಗಾಹನೆಗೆ ತಂದ ಮೇರೆಗೆ) ಉದರಪೋಷಣೆಗಾಗಿ ಮನುಷ್ಯನು ಕೈಕೊಳ್ಳುವ ಕಾರ್ಯಕ್ಕೆ ವಿಶೇಷ ಗೌರವ ಕೊಡದೆ ಉಚ್ಚ ಅಥವಾ ಕಡಿಮೆ ಪ್ರತಿಯ ಕೆಲಸಗಳೆಂದು ಕಲ್ಪಿಸದೆ ಆತನು ಆತ್ಮಸಾಕ್ಷಿಯಾಗಿ ಶಿವಸೇವೆಗಾಗಿ ತನ್ನ ಶರೀರ ಮನ ವಾಣಿಗಳನ್ನು ದುಡಿಸಿದರೆ ಆ ಆ ಕಜ್ಜಗಳು ಉಚಿತವಾದವುಗಳೆಂದೇ ಭಾವಿಸತಕ್ಕದ್ದು. ಇದು ನಮ್ಮ ಪುರಾತನ ಮತವು, ವಿಚಾರಪರರು ಅಹುದೆನ್ನುವ ಸಂಗತಿಯು ಪಾಠಕ ಮಹಾಶಯರು ಅನುಮೋದಿಸುವ ವಿಷಯವು.

ನಮ್ಮ ಕಥಾನಾಯಕನು ಅವಲಂಬಿಸಿದ ವೃತ್ತಿಯು ಕೃಷಿಸೇವೆಯು. ಈತನು ಘಟ್ಟಿಗನು, ಉತ್ಸಾಹಯುತನು, ಸರಳಸ್ವಭಾವದವನು, ನಂಬಿಗಸ್ತನು, ತಾನು ಮಾಡುವ ಕೆಲಸಕ್ಕೆ ಅಂಜನು, ಧೈರ್ಯಶಾಲಿಯು. ಈತನು ಗದ್ದೆಗಳಲ್ಲಿ ಹಗಲೆಲ್ಲ ದುಡಿಯುತ್ತಿದ್ದರೂ ವಾಯುವಿನ ಸಂಚಾರವು ತಡೆಯಿಲ್ಲದೇ ಸಾಗುವಂತೆ ಪ್ರಾಣಸ್ವರೂಪನಾದ ಈಶ್ವರನಲ್ಲಿ ಆತನ ಮನವು ಬೇರೂರಿತ್ತು. ಸಮೀಪದಲ್ಲಿರುವ ತಿರುನಾಳ್ಗಳು ಎಂಬ ಸ್ಥಳದಲ್ಲಿ ನಿಷ್ಕಳಂಕನಾದ ಪರಂಜ್ಯೋತಿಸ್ವರೂಪನಾದ ವೇದಗರ್ಭನಾದ ಶ್ರೀ ಶಂಕರನು ಅತಿಪ್ರಖ್ಯಾತವಾದ ಪೊನ್ನಾಂಬರೇಶ್ವರಾಲಯದಲ್ಲಿ ನೆಲಿಸಿರುವನೆಂದು ಅನೇಕ ದಿವಸಗಳಿಂದ ಕೇಳಿ ದರ್ಶನಾಪೇಕ್ಷಿಯಾಗಿ ಹಂಬಲಿಸುತ್ತಿದ್ದನು. ಮತಿವಂತರ ಮನೆಯಲ್ಲಿ ಹುಟ್ಟದಿದ್ದರೂ ಗೌರವಸ್ಥರಲ್ಲಿ ಈತನು ಜನ್ಮವೆತ್ತದಿದ್ದರೂ ಅಕ್ಷರಸ್ಥರಾದ ಕುಟುಂಬದವರಲ್ಲಿ ಈತನ ಉತ್ಪತ್ತಿಯಾಗದಿದ್ದರೂ ಅತಿ ಬಡವರಲ್ಲಿ ಜನಿಸಿದರೂ ಆತನ ಪೂರ್ವಸುಕೃತದಿಂದ ದೇವರಲ್ಲಿ ವಿಶ್ವಾಸವೂ ಪ್ರೇಮವೂ ಚಿಕ್ಕಂದಿನಲ್ಲಿ ಮೂಡಿದ್ದರಿಂದ ಆತನು ದೈವಭಕ್ತಿಯುತನಾಗಿ ನಿತ್ಯವು ಸ್ವಕಾರ್ಯತತ್ಪರನಾಗಿ ಭಗವಂತನ ಸ್ಮರಣೆಗೈಯ್ಯುವದರಲ್ಲಿ ಮುಕುಟಪ್ರಾಯನಾಗಿದ್ದನು.

ದೈವಗತಿಗನುಸಾರವಾಗಿ ಸಿರಿವಂತನಾದ ಭೂಸುರನ ಗದ್ದೆಯಲ್ಲಿ ಕೆಲಸ ಮಾಡುವದಕ್ಕೊಡಂಬಟ್ಟು ಒಂದು ತಿಂಗಳ ಕೂಲಿಯನ್ನು ಗೊತ್ತುಪಡಿಸಿಕೊಂಡು ನಿಯಮಿತವಾದ ಸಂಬಳವನ್ನು ಒಪ್ಪೊಲಿ ತೆಗೆದುಕೊಂಡು ದಿನಾಲು ಆ ಬ್ರಾಹ್ಮಣನಲ್ಲಿಗೆ ಕೆಲಸಕ್ಕೆ ಹೋಗುತ್ತಿದ್ದನು. ಆ ಗದ್ದೆಯಲ್ಲಿ ಕೆಲಸ ಮಾಡುತ್ತಿರುವಾಗಲೇ ಕೆಲವು ದಿವಸಗಳು ಕಳೆಯಲು ತಿರುನಾಳ್ಗಳು ಎಂಬುವ ಸ್ಥಲಕ್ಕೆ ಹೋಗುವದಕ್ಕೆ ಆತನಿಗೆ ಬಲವತ್ತರವಾದ ಅಪೇಕ್ಷೆಯಾಗಲು ಪೊನ್ನಾಂಬಲ ಶಿವಲಿಂಗದಲ್ಲಿ ಅತಿಶಯವಾದ ಭಕ್ತಿಯನ್ನು ವಹಿಸಿ ಆತನ ಸನ್ನಿಧಿಗೆ ಹೋಗುವೆನೆಂದು ಸಂತೋಷಪಟ್ಟು ಉತ್ಸಾಹವನ್ನು ತಳೆದು ಆ ಪೊನ್ನಾಂಬಲೇಶ್ವರನೇ ತನ್ನ ತಾಯಿ ತಂದೆ ಬಂಧು ಎಂದು ಅನ್ನುತ್ತಾ ಆ ಮಹಾಲಿಂಗವನ್ನೇ ಧ್ಯಾನಿಸುತ್ತ ಆ ಹಂಬಲದಲ್ಲಿ ಮಗ್ನನಾದುದರಿಂದ ಹಗಲು ರಾತ್ರಿ ಹಸಿವೆ ನೀರಡಿಕೆಯ ಪರವೆ ಇಲ್ಲದವನಾಗಿ ಮನೆಗೆ ಬಂದು ಆ ಕ್ಷೇತ್ರಕ್ಕೆ ಪ್ರಯಾಣಮಾಡುವದಕ್ಕೆ ಅನುವು ಕಾಣದೆ ಬಹು ವ್ಯಾಕುಲಪಟ್ಟು ಇನ್ನೆಂದಿಗೆ ಆತನ ಸನ್ನಿಧಿಗೆ ಹೋಗುವದಕ್ಕೆ ಅನುಕೂಲವಾಗುವದೆಂದು ನೆನಿಸುತ್ತ ಮಲಗಿಕೊಂಡು ಬೆಳಗಾಗುತ್ತಲೆ ಎದ್ದು ಪೊನ್ನಾಂಬಲ ಜಾತ್ರೆಗೆ ಹೋಗುವವರನ್ನು ಕಂಡು ಅವರೊಡನೆ ಹೋಗಬೇಕೆಂದು ಕುತೂಹಲಪಡುತ್ತಿರುವಾಗ ನಮ್ಮ ಕಥಾಪುರುಷನಿಗೆ ಗದ್ದೆ ಕೊಯ್ಯಲಿಕ್ಕೆ ಹಚ್ಚಿದ ವಿಪ್ರನು ಆತನನ್ನು ಕರೆಯಲಿಕ್ಕೆ ಬಂದನು. ಆಗ ಕಥಾನಾಯಕನು ಭೂಸುರನೇ ಇದುವರಿಗೆ ಪೊನ್ನಾಂಬಲಕ್ಕೆ ಹೋಗಿರುವದಿಲ್ಲ. ಆದದರಿಂದ ನಾಳೆ

ನದಿವಸ ಹೋಗಿಬರುವದಕ್ಕೆ ನೀನು ಒಪ್ಪಬೇಕಾಗಿ ಬೇಡಿಕೊಳ್ಳುತ್ತೇನೆ. ಆಗ ಬ್ರಾಹ್ಮಣನು ನೀನು ತಿಂಗಳವಲ್ಲಿ ಮಾಡಿ ಮುಗಿಸುವೆನೆಂದು ಕೈಕೊಂಡಿರುವದನ್ನು ಇಂದೇ ಪೂರೈಸಿಬಿಡು ಅಂದರೆ ನಾಳೆಯೇ ನೀನು ಬೇಕಾದ ಕ್ಷೇತ್ರಕ್ಕೆ ಹೋಗಬಹುದು ; ಈ ಮಾತಿಗೆ ಹಿರಿಹಿರಿ ಹಿಗ್ಗಿ ಈ ದಿವಸವೇ ಕೆಲಸವನ್ನು ಮುಗಿಸುವೆನೆಂದು ಒಪ್ಪುತ್ತ ಆ ವಿಪ್ರನ ಗದ್ದೆಗೆ ಬಂದು ಪರಮೋತ್ಸಾಹದಿಂದ ಕೊಯ್ಯುತ್ತಿದ್ದನು. ತಿರುನಾಳ್ಳಕ್ಕೆ ಹೋಗುವ ಭಕ್ತಿಯ ಉತ್ಪ್ರೇಕ್ಷದಿಂದ ಸಾನಂದನಾಗಿ ಮೈಮರದು ಬೆಳದುನಿಂತಿರುವ ನಿಲುವನ್ನು ಕೊಯ್ಯುತ್ತಿರಲು ಸರ್ವವ್ಯಾಪಿಯಾದ ತ್ರ್ಯಂಬಕನಿಗೆ ವೇದ್ಯವಾಗಿ ಕಾರುಣ್ಯದಿಂದ ತನ್ನ ಭೂತಗಣಕ್ಕೆ ಆ ಗದ್ದೆಯನ್ನು ಕೊಯ್ಯಲಿಕ್ಕೆ ಅಪ್ಪಣೆಮಾಡಲು ಅವರು ಅದೃಶ್ಯಾಕಾರದಿಂದ ಬಂದು ಎಲ್ಲ ಹುಲ್ಲನ್ನು ರಾಶಿರಾಶಿಯಾಗಿ ಕೊಯ್ದುಬಿಟ್ಟರು. ಈ ಅದ್ಭುತವನ್ನು ಆ ಬ್ರಾಹ್ಮಣನು ಕಂಡು ಇದೆಲ್ಲವನ್ನು ಸರಿಯಾಗಿ ಒಟ್ಟಿಹೋಗಬೇಕೆಂದು ಹೇಳಿದನು. ಆಗ ತಿರುನಾಳ್ಪೋವನು ಭಕ್ತಿರಸಾವೇಶದಿಂದ ಆ ಹುಲ್ಲನ್ನು ಭರದಿಂದ ಮಿಗಿಲಾದ ಶಕ್ತಿಯನ್ನು ತಾಳಿ ಶಿವಕೃಪೆಯಿಂದ ಒಂದೇಬಾರಿಗೆ ತಂದುಬಿಟ್ಟನು. ಆಗ ಆಶ್ಚರ್ಯಚಕಿತನಾದ ವಿಪ್ರನು ಆತನಿಗೆ ಇಷ್ಟಬಂದಲ್ಲಿಗೆ ಹೋಗುವದಕ್ಕೆ ಸಮ್ಮತಿಸಿದನು. ಅಷ್ಟರಲ್ಲಿ ಪೊನ್ನಾಂಬಲಕ್ಕೆ ಹೋಗುವ ಯಾತ್ರಸ್ಥರು ಈ ವಿಪ್ರನಿದ್ದ ಸ್ಥಾನಕ್ಕೆ ಬಂದು ತಮ್ಮ ಅಕ್ಕಿಯ ಚೀಲಗಳನ್ನು ಹೊರುವದಕ್ಕೆ ಬಿಟ್ಟಿ ಆಳುಗಳು ಬೇಕೆಂದು ಹೇಳಿದರು. ಆಗ ನಮ್ಮ ಚರಿತ್ರನಾಯಕನು ಸ್ವಸಂತೋಷದಿಂದ ಭಕ್ತಿಪೂರ್ವಕವಾಗಿ ಕೆಲವು ನೆಲ್ಲಕ್ಕಿಯ ಚೀಲಗಳನ್ನು ಹೊತ್ತು ಪರಿಸಿಯೊಡನೆ ಪರಮಾನಂದದಿಂದ ಪೊನ್ನಾಂಬಲೇಶ್ವರನನ್ನು ನೆನಿಯುತ್ತ ಕೆಲವುಸಾರೆ ಉಚ್ಚವಾಗಿ ಆತನ ನಾಮವನ್ನು ಉಚ್ಚರಿಸುತ್ತ ಆ ಶಿವಾಲಯಕ್ಕೆ ಬರುತ್ತಲೆ ಇದುವೆ ವಾರಣಸಿಯೋ ಶ್ರೀಗಿರಿಯೋ ಪರಮಪವಿತ್ರಸ್ಥಾನವೋ ಎಂದು ಬಗೆಯುವಾಗ ಶ್ರೀ ಪೊನ್ನಾಂಬಲೇಶ್ವರನ ಪೂಜೆಯು ಮಂಗಲಮಯವಾಗಿ ನಡೆದಿತ್ತು. ಆ ಆನಂದಮಯವಾದ ಸಮಯದಲ್ಲಿ ಈ ವರಭಕ್ತನಿಗೆ ಈಶನ ಮೋಹವು ಹೆಚ್ಚಾಗಿ ದೇವಾಲಯದಲ್ಲಿ ಪ್ರವೇಶಿಸುವಾಗ ಎಡವುತ್ತೇನೆಂಬುವದು ಸಹ ಆತನಿಗೆ ತಿಳಿಯದು. ಯಾರಾದರೂ ಆತನನ್ನು ಕರೆದರೆ ಆತನ ಕಿವಿಗೆ ಕೇಳಿಸುತ್ತಿರಲಿಲ್ಲ. ಭಕ್ತಿ ಪರವಶತೆಯಿಂದ ಕುಣಿದಾಡುತ್ತ ಶಂಭು ಶಂಕರ ಮೃಡ ಎಂದು ಕೊಂಡಾಡಿದನು. ಜಯಪೊನ್ನಾಂಬಲಪತಿ ಜಯಪೊನ್ನಾಂಬಲೇಶ ಜಯಸಚ್ಚಿನ್ಮಯ ಜಯಪೊನ್ನಾಂಬಲದರಸೇ ಜಯಜಯ ಎನ್ನುತ್ತಿದ್ದನು. ಆ ಲಿಂಗಮೂರ್ತಿಯನ್ನು ಒಂದೇಸವನೇ ನಿರೀಕ್ಷಿಸುತ್ತ ಮಂಗಳವನ್ನು ಪಾಡುತ್ತಿರುವಾಗ ಅಶ್ರುಗಳು ಹೊರಟವು ಮೈಮರೆತನು. ಪೊನ್ನಾಂಬಲೇಶ್ವರನು ಇದನ್ನು ಕಂಡು ನಂದಿಗೆ ತಿರುನೋಳ್ಪವನಿಗೆ ಮಜ್ಜನಮಾಡಿದ ನೀರು ತಳಿಗೆ ಬಡಿ

ಯಲಿಕ್ಕೆ ಹೇಳಿದನು. ಆ ಅಮೃತಕೋಶದಿಂದ ಆತನ ಮಸ್ತಕಕ್ಕೆ ಸಿಂಪಡಿಸಲು ಈತನು ಭೂಸುರನಂತೆ ಪ್ರಕಾಶಮಯನಾಗಿ ಗಿರಿಜಾಪತಿಯನ್ನು ಪರಿಪರಿಯಿಂದ ಸ್ತುತಿಸಿದನು. ಗೌರೀಪತಿಯು ಮೆಚ್ಚಿ ನಿಜರೂಪತೋರಲು ಚರಿತ್ರಪುರುಷನು ಭಕ್ತಿಪರವಶತೆಯಿಂದ ಪೊನ್ನಾಂಬಲೇಶನ ಚರಣತಲದಲ್ಲಿ ಹೊರಳಾಡಿದನು. ಅಗಜಾಪತಿಯು ಕಾರುಣ್ಯದಿಂದ ಆತನನ್ನು ಹಿಡಿದೆತ್ತಿ ವ್ಯೋಮಯಾನವನ್ನು ಬರಮಾಡಿ ಅದರಲ್ಲಿ ಕುಳ್ಳಿರಿಸಿ ತಿರುನಾಳ್ಪೋವನಿಗೆ ಗಣಪದವಿಯನ್ನು ದಯಪಾಲಿಸಿದನು.



೭೦.

# ೨೪. ಏಣಾಧಿನಾಥರು.



ಧುರದಭಟನೊಳು ಭಸಿತವಿರೆ ಕಂಡು ತನ್ನೊಡಲ । ನಿರಿದಿತ್ತ ನಿಷ್ಠುರೆನಿಸಿ
ದೇಣಾಧಿ ನಾ । ಥರ ಚಾರನಾಗಿ ಬದುಕುವೆನು ॥

[ಶ್ರೀ ನಿಜಗುಣರು]



ನಾದ್ಯಂತನ ಮೈಬೆಳಗೆಂದು ಪ್ರಸಿದ್ಧಿಗೊಂಡಿರುವ ಪರಮ ಪವಿತ್ರವಾದ ವಿಭೂತಿಯು ಅನಂತ ಫಲಪ್ರದವಾದುದೆಂದು, ಅನಘನ ಸದ್ಯೋಜಾತಾದಿ ಪಂಚಮುಖಗಳಿಂದಲೇ ಉತ್ಪತ್ತಿಯಾದುದರಿಂದ ಅಮೋಘವಾದುದೆಂದು, ಶಿವಕವಿ ಪರಂಪರೆಯು ಬಹು ವಿಧವಾಗಿ ಯುಕ್ತಿಯುಕ್ತವಾಗಿ ಬಣ್ಣಿಸಿರುವದು ಸಕಲರೂ ಅರಿತ ಸಂಗತಿಯೇ ಆಹುದು. ಅಂತೆಯೆ ವಾಚಕರ ಸ್ಮರಣೆಯಲ್ಲಿರುವ ವ್ಯಾಸೋಕ್ತಿಯು ಬಹು ಬೋಧಪ್ರದವಾಗಿರುವದು.

ಧಿಗ್ಭಸ್ಮರಹಿತಫಾಲಂ । ಧಿಗ್ಗ್ರಾಮಮ-ಶಿವಾಲಯಂ ॥
ಧಿಗನೀಶಾರ್ಚನಂ ಜನ್ಮ । ಧಿಗ್ವಿದ್ಯಾಮ-ಶಿವಾಶ್ರಯಂ ॥

ವಿಭೂತಿಯಿಂದ ಯುಕ್ತವಾಗದ ಹಣೆಗೂ, ಶಿವಾಲಯಗಳಿಂದ ಶೋಭಿಸದ ಗ್ರಾಮಕ್ಕೂ, ಈಶಾರ್ಚನೆಯಿಲ್ಲದ ಜನ್ಮಕ್ಕೂ, ಶಿವಸಂಬಂಧವಿಲ್ಲದ ವಿದ್ಯೆಗೂ

ಧಿಕ್ಕಾರ ಧಿಕ್ಕಾರವಿರಲಿ; ಹೀಗೆ ಜ್ಞಾನಿಗಳು ಘಂಟಾಘೋಷವಾಗಿ ಸಾರಿರುವರು. ಮಾನವನ ಫಾಲದಲ್ಲಿ ಭೂಷಣವಾಗಿರುವ ಭಸಿತವು ಆತನ ಶಿವಭಕ್ತಿಯು ಮತ್ತು ಜಂಗಮ ನಿಷ್ಠೆಯ ಕುರುಹು. ಶ್ರದ್ಧೆಯಿಂದ ಭಕ್ತಿಪುರಸ್ಸರವಾಗಿ ಅಂಗದಲ್ಲಿ ಸಕ್ರಮವಾಗಿ ತೊಡೆದ ಭಸ್ಮವು ದುರಿತಗಳನ್ನೆಲ್ಲ ತೊಲಗಿಸಿ ಶುಭಪ್ರದವಾಗಿ ಪರಿಣಮಿಸಿ ಶಿವಾಚಾರ ನಿರತನನ್ನಾಗಿ ಸಜ್ಜುಗೊಳಿಸಿ ಶಿವಾಪೇಕ್ಷೆ, ಶಿವರತಿಯನ್ನು ವೃದ್ಧಿಪಡಿಸಿ ಪಂಚಾಚಾರಗಳನ್ನೇ ಪ್ರಾಣ ಸ್ವರೂಪವನ್ನಾಗಿ ಮಾಡಿ ಮಂಗಲದ ಸೂತ್ರವಾಗಿ ಸಕಲಾಭೀಷ್ಟವನ್ನು ನೆರವೇರಿಸುವದೇ ಸತ್ಯವು. ಯಾವ ಸತ್ಕ್ರಿಯಾಚರಣೆಯನ್ನೆಸಗಬೇಕಾದರೂ, ಕ್ಷಾರ, ರಕ್ಷೆ, ಭಸ್ಮ, ಭಸಿತ ಎಂಬ ಪರ್ಯಾಯ ನಾಮಗಳಿಂದೊಪ್ಪುವ ಅವಶ್ಯವಾದ ವಿಭೂತಿಯು ಶಿವಭಕ್ತನ ಚಿನ್ಹವೆಂಬುದು ಪಾಠಕಮಹಾಶಯರಲ್ಲಿ ಪುನಃ ಪುನಃ ಪ್ರಸ್ತಾಪಿಸುವದು ಇಲ್ಲಿಗೆ ಸಾಕು.

ಅವನೀತಲದಲ್ಲಿ ಪ್ರಸಿದ್ಧವಾದ ಚೋಳನಾಡಿನಲ್ಲಿ ಪ್ರಾಣಿದಯಾಪರನೂ, ಸದ್ಧರ್ಮ ಪರಿಪಾಲನ ವಿಚಕ್ಷನು ಆದ ಪಗಲ್ಚೋಳ ಮಹಾರಾಜನ ರಾಜಧಾನಿಯು ಕರಿಯೂರ ಎಂಬ ಪಟ್ಟಣವು. ಬಡವರ ಮನೆಯಲ್ಲಿ ಜನಿಸಿದವನಾದರೂ ಸದ್ವರ್ತನ ಸದಾಚಾರಪರರಾದ ಮಾತಾಪಿತರಿಂದ ಚನ್ನಾಗಿ ಶಿಕ್ಷಣವನ್ನು ಹೊಂದಿ ಗುರು-ಲಿಂಗ-ಜಂಗಮ ಸೇವಾಧುರೀಣನಾದ **ಏಣಾಧಿನಾಥ**ನೆಂಬ ಮಂಗಲವಾದ ನಾಮವನ್ನು ಧರಿಸಿದವನೇ ನಮ್ಮ ಚರಿತ್ರನಾಯಕನು. ಸುಶೀಲನು, ದೂರದರ್ಶಿಯು ಆದ ನಮ್ಮ ಕಥಾನಾಯಕನು ತನ್ನ ಮನಸ್ಸು ತೃಪ್ತಿಯಾಗುವಂತೆ ಜಂಗಮ ದಾಸೋಹವನ್ನು ಮಾಡುವದು ಸಾಧಿಸಬೇಕೆಂದು ಕರಿಯೂರ ಪಟ್ಟಣಕ್ಕೆ ಬಂದು ನಿಂತನು. ಉಗ್ರ ಶಿವಾಚಾರ ಭಕ್ತನಾದ ನಮ್ಮ ಕಥಾಪುರುಷನಿಗೆ ಶಿವಭಕ್ತರಲ್ಲದವರ ಸೇವೆಯು ಕನಸಿನಲ್ಲಿಯೂ ಕೂಡ ಸಲ್ಲದು. ಶಿವ, ಶಿವ, ಯಾವ ಕಾರ್ಯದಲ್ಲಿ ತೊಡಗಲಿ. ಶಿವಗಣ ಸಮೂಹವೇ? ನನಗೆ ಯಾವ ಕಾಯಕವನ್ನು ನಿಯೋಜಿಸುವಿರಿ ಎಂದು ಹಂಬಲಿಸುತ್ತ ವಿಶ್ವವ್ಯಾಪಿಯಾದ ಸರ್ವತೋಮುಖನಾದ ಸರ್ವಶಕ್ತಿಮಾನನಾದ, ಸರ್ವಜ್ಞನಾದ, ಲೋಕಶಂಕರನಾದ ಶಂಕರನನ್ನು ಸ್ಮರಿಸುತ್ತಲೆ ನಿದ್ರಾಪರವಶನಾಗಲು ಕೃಪಾಮಯನಾದ ಪ್ರಭುವಿನ ಕಾರುಣ್ಯದಿಂದ, ದಕ್ಷಾಧ್ವರಹರನಾದ ಶ್ರೀ ವೀರಭದ್ರನು ಆತನ ಕನಸಿನಲ್ಲಿ ಬಂದು ಒಂದು ಖಡ್ಗವನ್ನು ದಯಪಾಲಿಸಿ ಸಾಗಿದನು. ಚರಿತ್ರನಾಯಕನು ಎಚ್ಚತ್ತು ಕಣ್ದೆರೆದು ನೋಡುತ್ತಾನೆ! ಮಗ್ಗಲಲ್ಲಿ ಸ್ವಪ್ನದಲ್ಲಿ ಕಂಡ ಪ್ರಕಾಶಮಯವಾದ ದಿವ್ಯಖಡ್ಗವು ಹೊಳೆಯುತ್ತಿತ್ತು; ಹರಪ್ರಸಾದದಿಂದ ಈ ರೀತಿಯಾಗಿ ದೊರೆತಿರುವದರಿಂದ ಬವರ ಸಮಯ ಒದಗಿದಾಗೆಲ್ಲ ಭಸಿತ ರುದ್ರಾಕ್ಷಿಗಳನ್ನು ಧರಿಸದವರ ತಲೆಯನ್ನು ತರೆಯುತ್ತ ಧುರದ ಮುಖ

ದಿಂದ ಬಂದ ಧನದಿಂದಲೆ ಯಥೇಷ್ಟವಾಗಿ ಚರಲಿಂಗವೆಂದು ಹೆಸರ್ವಡೆದ ಪೂಜ್ಯ ಜಂಗಮ ವೃಂದಕ್ಕೆ ಅವರವರ ಇಚ್ಛಾನುಸಾರವಾಗಿ ಧನಕನಕ ವಾಹನ ವಸ್ತ್ರ ಧಾನ್ಯ ಮೊದಲ್ಗೊಂಡು ಸಮಸ್ತ ಪದಾರ್ಥಗಳನ್ನು ತ್ರಿಕರಣಪೂರ್ವಕವಾಗಿ ಅರ್ಪಿಸುತ್ತಾ ಶಿವಾನುರಾಗ ಪರಮೋತ್ಸಾಹಿಯಾಗಿ ಶಿವಚಿಂತನೆಯಿಂದಾಗುವ ನಿಜಾನಂದ ಪರವಶಭಾವದಿಂದ ಆಗುವ ಸುಖವನ್ನು ಶಿವಾರ್ಪಣಮಾಡುತ್ತ ಸಲ್ಲೀಲೆಯಿಂದ ಕಾಲಕಳೆಯುತ್ತ ಕೆಲವು ಸಂವತ್ಸರಗಳು ಸಾಗಲು ಆಹವದ ಪ್ರಸಂಗಗಳು ಕಡಿಮೆಯಾಗುವ ಕಾಲವು ಬರಲು ದೈವಗತಿಗನುಸಾರವಾಗಿ ಮಾರಾಂಕನೆಂಬ ಒಬ್ಬ ಅಲಿಂಗಿಯಾದ ವೀರನು ಹಗಲು ದೀವಟಿಗೆಯನ್ನು ಹಿಡಿಸಿಕೊಂಡು ಶರಭ ಭೇರುಂಡನೆಂಬ ಬಿರುದಿನಿಂದ ಹೊಗಳಿಸಿಕೊಳ್ಳುತ್ತ ನನ್ನೊಡನೆ ಕಾದುವ ಭಟರನ್ನು ಕಾಣೆ. ನನ್ನನ್ನು ಜಯಿಸಿದವರಿಗೆ ೭೦೦ ಹೊನ್ನುಗಳನ್ನು ಕೊಡುವೆನೆಂದು ಸಾರಿಸುತ್ತ ಆ ಹೊನ್ನುಗಳ ಚೀಲವನ್ನು ಒಂದು ಎತ್ತರವಾದ ಕೋಲಿಗೆ ಕಟ್ಟಿಸಿ ಉಬ್ಬಿದವನಾಗಿ ಮತ್ತಗಜದಂತೆ ಬಹಳ ಸೊಕ್ಕಿನಿಂದ ಬರುತ್ತಿದ್ದನು. ಇದನ್ನು ಕಂಡು ನಮ್ಮ ಚರಿತ್ರಪುರುಷನಿಗೆ ಬಹಳ ಸಂತೋಷವು, ಉತ್ಸಾಹವು, ವೀರಾವೇಶವು ಏಕಕಾಲಕ್ಕೆ ಉಂಟಾಗಿ ಥಟ್ಟನೆ ಜಿಗಿದು ಆ ಕೋಲಿನ ತುದಿಗೆ ಕಟ್ಟಿದ ಹೊನ್ನಿನ ಚೀಲವನ್ನು ತೆಗೆದು ಕೊಂಡು ಜಂಗಮ ದಾಸೋಹವನ್ನು ಮಾಡುವೆನೆಂದು ಹರ್ಷಪಟ್ಟು ಶಿವಭಕ್ತ ತಿಂತಿಣಿಗೆ ಅವರವರ ಬಯಕೆಯಂತೆ ತೃಪ್ತಿಪಡಿಸಿ ಗರ್ವದಿಂದ ಉಬ್ಬಿ ಬಂದ ಬಂಟನಿಗೆ ಎದುರಾಗಿ ಚಾತುರ್ಯದಿಂದಲೂ, ಸಾಹಸದಿಂದಲೂ ಆತನ ಏಟು ಗಳನ್ನು ತಪ್ಪಿಸಿಕೊಂಡು ಅದಕ್ಕೆ ಪ್ರತಿಯಾಗಿ ಅವನನ್ನು ಚನ್ನಾಗಿ ಜಡಿದು ಪ್ರಹರಿಸಿ ಅವನ ಶಿರಸ್ಸನ್ನು ಚಂಡಾಡಿ ಬಿಟ್ಟದ್ದನ್ನು ಜನಸಮುದಾಯವು ನೋಡಿ ಬೆರಗಾಯಿತು. ಶ್ರೀ ಪಗರ್ಪ್ಪೋಳ ಮಹೀಶನು ಮೆಚ್ಚಿ ಶೃಂಗರಿಸಿದ ಆನೆಯ ಮೇಲೆ ಏಣಾಧಿನಾಥನನ್ನು ಕುಳ್ಳಿರಿಸಿ ಧನಕನಕಾದಿಗಳನ್ನು ಪಾರಿತೋಷಕವಾಗಿ ಕೊಟ್ಟನು. ವರಶಿವಭಕ್ತನ ಕೈಯಿಂದ ಮಡಿದ ಮಾರಾಂಕನು ಊರ್ಧ್ವಲೋಕ ವನ್ನಡರಿದನು. ಆ ನಂತರ ನಮ್ಮ ಶರಣ ಲಲಾಮನು ಮನೆಗೆ ಬಂದು ನಿತ್ಯ ದಂತೆ ಶಿವಭಕ್ತರಿಗೆ ಅವರು ಬೇಡಿದುದನ್ನು ಕೊಡುತ್ತ ಶಿವಕಾಲಯಾಪನೆಯನ್ನು ಮಾಡುತ್ತಿದ್ದನು.

ನಮ್ಮ ಚರಿತ್ರಪುಂಗವನು ವೀರಾಗ್ರಣಿ ಎಂಬ ಕೀರ್ತಿಯು ನಾಲ್ಕೂ ಕಡೆಗೆ ಹಬ್ಬಲು ಕುಟಿಲ ಯಂತ್ರ ತಂತ್ರಬಲದಿಂದ ಗರ್ವಿತನಾದ ರಾಜಗುರು ಎಂಬ ಭಟನು ಸಾವಿರ ಹೊನ್ನುಗಳನ್ನು ಕಟ್ಟಿಕೊಂಡು ತನಗೆ ಧರೆಯೊಳಗೆ ಸಾಟಿಯಾದ ಕಲಿಯು ಉಂಟೇ ಎಂದು ಸಾರುತ್ತ ಬಹು ಅಟ್ಟಹಾಸದಿಂದ ಮೆರೆ ಯುತ್ತ ಬಂದನು. ಆಗಲಾ ಅಪ್ರತಿಮವೀರನಾದ ನಮ್ಮ ಕಥಾನಾಯಕನು

ವೈರಿಯ ಶೌರ್ಯಧೈರ್ಯವನ್ನು ತಗ್ಗಿಸಿ ಬಹು ವಿಕ್ರಮದಿಂದ ಆತನನ್ನು ಬಲ ಗುಂದಿಸಿ ಪ್ರಮಥ ಸಮೂಹವನ್ನು ಸ್ಮರಿಸುತ್ತ ನಿಜಗುರುಗಳನ್ನು ಧ್ಯಾನಿಸುತ್ತ ಆತನ ತಲೆಯನ್ನು ಸವರಿ ಬೊಬ್ಬಿರಿದು ಜಯಶೀಲನಾಗಿ ಆ ಸಾವಿರ ಹೊನ್ನು ಗಳನ್ನು ತೆಗೆದುಕೊಳ್ಳುವಾಗ ಶಿವಭಕ್ತಶಿಖಾಮಣಿಯಾದ ಚೋಳ ನೃಪತಿಯು ಅತಿಶಯವಾಗಿ ಮೆಚ್ಚಿದನು. ಕಥಾಪುರುಷನು ಮನೆಗೆ ಬಂದು ಮಹೇಶ್ವರರಿಗೆ ಮೊದಲಿನಂತೆ ತೃಪ್ತಿಪಡಿಸುತ್ತಿದ್ದನು.

ಇತ್ತಲಾ ತಂದೆಯ ಮರಣವನ್ನು ಕೇಳಿ ರಾಜಗುರುವಿನ ಮಗನು ಬಹಳ ಖತಿಗೊಂಡು ಮರಮರನೆ ಮರುಗಿ ತನ್ನ ತಾಯಿಗೆ ಜನಕನ ಹಗೆಯನ್ನು ಕೊಲ್ಲುವ ಬಗೆ ಹ್ಯಾಗೆ ಎಂದು ಕೇಳಿದನು. ಆಗಲಾ ತಾಯಿಯು :—ಮಗನೇ ಏಣಾಧಿನಾಥನು ಅತಿ ಪರಾಕ್ರಮಶಾಲಿಯು. ಸಮರದಲ್ಲಿ ಕಾದಲನುವಾದ ಅರಿಗಳನ್ನು, ಕೆರಳಿದ ಸಿಂಹನಂತೆ ಆರ್ಭಟಿಸಿ ಲೀಲಾಮಾತ್ರವಾಗಿ ಸಂಹರಿಸು ವನು. ಆದರೆ ವಿಭೂತಿಯನ್ನು ತಳೆದವರನ್ನು ಮಾತ್ರ ಈಶ್ವರನೆಂದು ಪರಿ ಭಾವಿಸುವನು. ಆದ್ದರಿಂದ ಮಗನೇ ಭಕ್ತನ ವೇಷವನ್ನು ತಾಳಿದರೆ ಅವನನ್ನು ಗೆಲ್ಲಬಹುದೆಂದು ಸೂಚಿಸಿದಳು. ಈ ಹಂಚಿಕೆಯನ್ನು ಆಕೆಯ ಮಗನು ಕೇಳಿ ಒಳ್ಳೇ ಆಲೋಚನೆಯೆಂದು ಬಗೆದು ತನ್ನ ತಂದೆಯಂತೆ ಹೊನ್ನುಗಳನ್ನು ಕಟ್ಟಿ ಕೊಂಡು ಕರಿಯೂರಿಗೆ ಬಂದು ನಾಳಿನ ದಿವಸ ಕಾಳಗಕ್ಕೆ ಬರಬಹುದೆಂದು ನಮ್ಮ ಚರಿತ್ರನಾಯಕನಿಗೆ ಹೇಳಿಕಳುಹಿಸಿದನು. ಆಗ ಏಣಾಧಿನಾಥನು ಆ ಸಾವಿರ ಹೊನ್ನುಗಳನ್ನು ಸ್ವೀಕರಿಸಿ ಈ ವೃತ್ತಾಂತವನ್ನು ಪಗೆಚ್ಚೋಳ ರಾಜನಿಗೆ ಬಿನ್ನವಿಸಿ ಜಂಗಮ ದಾಸೋಹವನ್ನು ನೆರವೇರಿಸಿ ಶಿವಧ್ಯಾನದಿಂದ ಆ ದಿನದ ರಾತ್ರಿಯನ್ನು ಕಳೆದನು. ವಿಭೂತಿ ರುದ್ರಾಕ್ಷಮಾಲಾಭರಣಯುಕ್ತನಾಗಿ ಯಥಾ ಕ್ರಮವಾಗಿ ಶಿವಮಂತ್ರವನ್ನು ಭಕ್ತಿಯಿಂದ ಜಪಿಸಿ ಜಡ್ಗವನ್ನು ಜಳಪಿಸುತ್ತ ಬಂದನು. ವೈರಿಭಟನಾದ ರಾಜಗುರುವಿನ ಮಗನು ಸರ್ವಾಂಗದಲ್ಲಿ ಭಸ್ಮೋ ದ್ಧೂಳಿತನಾಗಿ ಕಂಠದಲ್ಲಿ ರುದ್ರಾಕ್ಷಗಳನ್ನು ಧರಿಸಿ ಪರಮ ಶಿವಭಕ್ತನಂತೆ ಕಪಟವೇಷವನ್ನು ತಳೆದು ಚರಿತ್ರಪುಂಗವನಿಗೆ ಎದುರಾಗಲು ಏಣಾಧಿನಾಥನು ತನ್ನ ಕೈಯಲ್ಲಿಯ ದಿವ್ಯ ಕತ್ತಿಯನ್ನು ಬಿಸುಟು ಹರಹರ ಶರಣಾರ್ಥಿ ಶರಣರೇ ಯಾವ ಕಡೆಯಿಂದ ದಯಮಾಡಿದಿರಿ, ನನ್ನ ದೇಹವನ್ನು ಕಡಿದಿಕ್ಕಿ ವಿನೋದ ವನ್ನು ಹೊಂದಬೇಕೆಂದು ಪ್ರಾರ್ಥಿಸಿದನು. ಆಗಲಾ ಕೃತಕವೇಷದ ಭಕ್ತನು ನಿಷ್ಕರುಣೆಯಿಂದ ಆ ರಣರಂಗದಲ್ಲಿ ಹದನವಾದ ಖಡ್ಗದಿಂದ ಚರಿತ್ರನಾಯಕನ ಅಂಗಾಂಗಗಳನ್ನೆಲ್ಲ ಸರಸರನೆ ಕೊಯ್ಯುತ್ತಿರಲು ಆತನು ಬಾರಿಬಾರಿಗೂ ಶಿವ ಶಿವ ಶರಣಾರ್ಥಿ ಎಂದು ಅನ್ನುತ್ತಿದ್ದನು. ವೈರಿಯು ಇದನ್ನು ಕಂಡು ಕತ್ತಿ ಯನ್ನು ಚಲ್ಲಿ ದಿಗ್ಭ್ರಾಂತನಾಗಿ ಓಡಿಹೋದನು. ಒಡನೆಯೆ ನಿಜಭಕ್ತರ

ಹೃದಯವನ್ನು ತಿಳಿಯುವ ಒರೆಗಲ್ಲಿನಂತಿರುವ ಪರಮಾತ್ಮನಾದ ಪರಮೇಶ್ವರನು, ಏಣಾಧಿನಾಥನು ಜಂಗಮರೂಪಕ್ಕೆ ಮಣಿದು ತನ್ನನ್ನೆ ಶಿವಾರ್ಪಣ ಮಾಡುವ ಛಲಕ್ಕೆ ವೊಲಿದು ನಿಜರೂಪವನ್ನು ತೋರಿ ಭಕ್ತನ ಅಂಗಾಂಗಗಳನ್ನು ಅಮೃತ ಹಸ್ತದಿಂದ ಸವರಿ ಕರುಣಾ ಕಟಾಕ್ಷದಿಂದೀಕ್ಷಿಸಲು ಏಣಾಧಿನಾಥನು ಧಟ್ಟನೆ ಎದ್ದುನಿಂತು ತಲೆವಾಗಿ ಅನೇಕ ವಿಧವಾಗಿ ಸ್ತುತಿಸಿ ಹರ್ಷಾತಿರೇಕದಿಂದ ಮೈ ಮರೆಯಲು ಜಗತ್ಪತಿಯು ಆತನ ಶಿವಭಕ್ತಿ ಛಲವನ್ನು ಕೊಂಡಾಡಿ ಪುಷ್ಪಕ ವಿಮಾನವನ್ನು ಬರಮಾಡಿ ಆತನನ್ನು ಅದರಲ್ಲಿ ಕುಳ್ಳಿರಿಸಿ ಶಿವಗಣ ಪದವಿ ಯನ್ನು ದಯಪಾಲಿಸಿ ವಿಷ ವಿಭೂಷಣನು ಅಂತರ್ಧಾನವನ್ನು ಹೊಂದಿದನು.



ಓಂ.

# ೨೫. ಸೇದಿರಾಜರು.



ಮುಳಿದು ಚರವೇಷಮಂತಳೆದು ಬಂದಿರಿಯೆ ಖಳ । ನಳುಕದೊಲವಾಂತ ಚಲ ಸೇದಿರಾಜ ನೆ । ನ್ನೊಳು ಶಾಂತಿಸುಖವ ನೆರೆಮಾಳ್ಕೆ ॥

[ಶ್ರೀ ನಿಜಗುಣರು]



ಮಂಡಲದಲ್ಲಿ ಪ್ರಸಿದ್ಧಪುರುಷರ ಆವಾಸಸ್ಥಾನವೆಂದು ಖ್ಯಾತಿಯನ್ನು ಪಡೆದಿರುವ ದೇಶವೆಂದರೆ ಆರ್ಯಾವರ್ತ ವೆಂದು ಹೆಸರ್ಗೊಂಡ ಭರತಖಂಡವು. ಈ ದೇಶದ ತೆಂಕಣದಲ್ಲಿ ಪುಣ್ಯವಾಹಿನಿಯಾದ ಕಾವೇರಿಯ ಪಾರ್ಶ್ವದಲ್ಲಿ ಅನೇಕ ಶಿವಾಲಯಗಳಿಂದ ಕಂಗೊಳಿ ಸುವ ನಾಡಿನಲ್ಲಿ ಶಿವಭಕ್ತಿ ಸಂಪನ್ನರೆಂದು ಸತ್ಕೀರ್ತಿ ಯುತರಾದ ಚೋಳರಾಜ ವಂಶದಲ್ಲಿ ಮಹಾಮಹಿಮನಾದ ಸೇದಿರಾಜನೊಬ್ಬನು ಪ್ರಕಾಶಮಯನಾದವನು ಅಹುದು. ಈ ಪ್ರಖ್ಯಾತ ವಿಭುವು ಶಿವಭಕ್ತಿಯಲ್ಲಿ ಬಲ್ಲಿದನು, ಶಿವಜ್ಞಾನ ಧುರಂಧರನು, ಶಿವಶಾಸ್ತ್ರಗಳಲ್ಲಾಸಕ್ತನು, ಜಂಗ ಮವೇ ಪರದೈವವೆಂದು ಧೃಡವಾಗಿ ನಂಬಿದವನು, ಶಿವಲಾಂಛನಗಳನ್ನು ಧರಿ ಸಿದವರಲ್ಲಿ ಬಹು ಶ್ರದ್ಧೆಯುಳ್ಳವನು, ಶಿವತೇಜವೆಂಬ ಕಾಂತಿಯಿಂದ ವಿರಾಜಿ

ತನು, ಸದ್ಧರ್ಮ ಪರಿಪಾಲನ ಕುಶಲನು, ಸಮಸ್ತ ರಾಜನೀತಿ ವಿಶಾರದನು, ಸದ್ವರ್ತನ ಸದಾಚಾರನಿಧಿಯು, ದುಷ್ಟರನ್ನು ಶಿಕ್ಷಿಸುವದರಲ್ಲಿ ಪರಾಕ್ರಮಿಯು, ಆಶ್ರಿತರನ್ನು ರಕ್ಷಿಸುವದರಲ್ಲಿ ಅತಿದಕ್ಷನು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಅರಿಷಡ್ವರ್ಗಗಳನ್ನು ಗೆದ್ದವನು, ಕಣ್ಣು-ಮೂಗು-ನಾಲಿಗೆ-ಕಿವಿ-ತ್ವಕ್ಕು ಎಂಬ ಪಂಚೇಂದ್ರಿಯಗಳನ್ನು ಸಂಪೂರ್ಣವಾಗಿ ಜಯಿಸಿದವನು, ಅಕ್ಷಯನಾದ ಆನಂದಮಯನಾದ, ಇಂದುಶೇಖರನಾದ, ಈಶನಾದ, ಉಪಾಧಿ ರಹಿತನಾದ, ಕಾರುಣ್ಯನಿಧಿಯಾದ ಮಂಗಲಪ್ರದನಾದ ವಿಶ್ವೇಶ್ವರನನ್ನು ಅನನ್ಯ ಮನಸ್ಕರಾಗಿ ಸದಾವಕಾಲದಲ್ಲಿಯೂ ಪೂಜಿಸುವ ಯೋಗಿಗಳ ಶ್ರೇಣಿಯಲ್ಲಿ ಶೋಭಿಸುವವನು ಹೀಗೆ ನಮ್ಮ ಚರಿತ್ರಪುಂಗವನು ಒಪ್ಪುತ್ತಿದ್ದುದರಿಂದ ಈ ಕ್ಷಿತಿಪನ ಯಶೋದುಂದುಭಿಯು ನಾಲ್ಕೂಕಡೆಗೆ ಮೊಳಗಿತ್ತು. ಹೀಗೆ ಸುಗುಣ ಮಣಿ ಭೂಷಿತನಾದ ದೊರೆಯು ಆಳಲ್ಪಟ್ಟ ಚೋಳಧರಿತ್ರಿಯು ಪ್ರಾಣಿಗಳಿಗೆ ಅವಶ್ಯವಾದ ಜಲಸಿಧಿಗಳಿಂದಲೂ ಸರ್ವವಿಧವಾದ ಬೆಳಸಿನಿಂದಲೂ, ಭದ್ರ ವಾದ ದುರ್ಗಗಳಿಂದಲೂ, ಶೂರರಾದ ಯೋಧರಿಂದಲೂ, ಸನ್ಮಾರ್ಗಾವಲಂಬಿ ಗಳಾದ ಪ್ರಜಾಸಮೂಹದಿಂದಲೂ ಮೆರೆಯುತ್ತಿತ್ತು. ಸುಖದ ನಿವಾಸವಾಗಿ, ಧರ್ಮದಾಗರವಾಗಿ, ಸಿರಿವಂತರ ತವರ್ಮನೆಯಾಗಿ, ಶಿವಭಕ್ತರಿಂದ ತುಂಬಿ ತುಳುಕುವ ತಿರುಪ್ಪೋವುಲು ಎಂಬ ಪಟ್ಟಣವೇ ನೇದಿರಾಜನ ರಾಜಧಾನಿಯು. ನಮ್ಮ ಕಥಾನಾಯಕನಿಗೆ ಶಿವಭಕ್ತರೆ ಪಂಚಪ್ರಾಣವಾಗಿದ್ದರು. ಶಿವಭಕ್ತರು ಬಂದೊಡನೆ ಹಿಗ್ಗುವನು; ಅವರನ್ನು ಕಂಡೊಡನೆ ಉಬ್ಬುವನು. ಶಿವಭಕ್ತಿ ತತ್ಪರರ ಒಡನಾಟದಲ್ಲಿ ಆತನಿಗೆ ಪರಮೋತ್ಸಾಹವು. ನಿರ್ಮಲವಾದ ಆತನ ಅಂತಃಕರುಣವು ಭಕ್ತಿರಸೋದ್ರೇಕದಿಂದ ನಲಿದಾಡುತ್ತಿದ್ದುದರಿಂದ ಹರ ಭಕ್ತರು ಬೇಡಿದುದನ್ನು ಪ್ರೀತಿಪೂರ್ವಕವಾಗಿ ನಿರ್ವಂಚನೆಯಿಂದ ಕೊಡುವದ ರಲ್ಲಿ ಹೆಸರಾಗಿದ್ದನು.

ಮನುಜನು ತನ್ನ ಗುಣ, ಸಾಮರ್ಥ್ಯ, ಯೋಗ್ಯತೆಯ ಬಗ್ಗೆ ಹೆಮ್ಮೆಪಡ ಲಾಗದು; ಆದರೆ ಸಚ್ಛೀಲ, ಗುರುಭಕ್ತಿ, ದೇವತಾಸ್ತೋಮದಲ್ಲಿ ಉಪಮಾನ ರಹಿತನಾದುದರಿಂದ ಊರ್ಜಿತನಾದ ಮಹಾದೇವನಲ್ಲಿ ಅಕುಟಿಲವಾದ ಪ್ರೇಮ ಇವುಗಳ ಬಗ್ಗೆ ಅಭಿಮಾನ ತಾಳಬಹುದು. ಆದರೆ ಪರರ ಶ್ರೇಯಸ್ಸಿಗೆ ಮತ್ಸರ ಪಡುವದು ಅತಿಹೇಯವಾದುದು. ಇಷ್ಟೇ ಏಕೆ ಅತಿ ಪಾಪಕರವಾದುದು.

ನಮ್ಮ ಚರಿತ್ರನಾಯಕನ ಖ್ಯಾತಿಗೆ ಅಸೂಯೆಗೊಂಡ, ಮತ್ಸರವೇ ಪುರುಷಾಕಾರವನ್ನು ತಾಳಿದೆಯೋ ಎಂಬಂತಿರುವ ಖಳನಾದ ಮನ್ನೆ ಎಂಬ ರಾಜನು ತನ್ನ ಸಮಸ್ತ ಚತುರಂಗ ಬಲದೊಡನೆ ದಂಡೆತ್ತಿ ಬಂದನು. ಅಪ್ರತಿಮ

ಕಲಿಯಾದ ಸೇದಿರಾಜನು ಸೇನಾಸಮೇತನಾಗಿ ರಣಮುಖದಲ್ಲಿ ಅರಿ ಸಮೂಹವನ್ನು ಎದುರಾಗಿ ಕೋಪಾಟೋಪದೊಡನೆ ವೈರಿಗಳನ್ನು ತರಿದಿಕ್ಕುತ್ತ ದೇವ ತೋತ್ರಮನನ್ನು ನೆನೆಯುತ್ತಲೆ ತನ್ನ ಭುಜಬಲದಿಂದ ಹಗೆಯನ್ನು ನಿರ್ವಿಣ್ಣಗೊಳಿಸಲು ಆತನು ಪರಾಜಿತನಾಗಿ ಸಂಗ್ರಾಮದಿಂದ ಪಲಾಯನ ಸೂತ್ರವನ್ನು ಪಠಿಸಿದನು.

ಸದ್ಗುಣಶಾಲಿಯಾದ ಕಥಾನಾಯಕನು ಧರ್ಮಸೂತ್ರಾನುಸಾರವಾಗಿ ರಾಜ್ಯಭಾರವನ್ನು ವಹಿಸಿ ಶಿವಾನಂದಪರನಾಗಿ ಒಡ್ಡೋಲಗದಲ್ಲಿ ಕುಳಿತಿರಲು ಮುಖಭಂಗಿತನಾದ ಮನ್ನೆ ಎಂಬ ಶತ್ರುನೃಪನು ಚತುರೋಪಾಯದಿಂದಲೂ ಸೇದಿರಾಜನು ತನಗೆ ಅಂಕಿತನಾಗುವ ಬಗೆಯನ್ನು ಕಾಣದೆ ತುಚ್ಛವಾದ ದುಷ್ಟೋಪಾಯವನ್ನು ಚಿಂತಿಸಿ ಹಾಗೆ ಮಾಡಿದರೆ ತಾನು ರಾಜ್ಯದಲ್ಲಿ ಸುಖದಿಂದ ಬಾಳ್ವೆನೆಂದು ನನೆಸಿ ಕುಹಕ ತಪಸ್ವಿ ವೇಷವನ್ನು ತಾಳಿ ಕೃತ್ರಿಮ ಜಡೆಯನ್ನು ಧರಿಸಿ ಕಾವಿಯನ್ನು ಹೊದ್ದು ತ್ರಿಪುಂಡ್ರಭೂಷಿತನಾಗಿ ದೇಹವನ್ನು ರುದ್ರಾಕ್ಷಗಳಿಂದಲಂಕರಿಸಿಕೊಂಡು ಶಿವಾಗಮಜ್ಞನಂತೆ ನಟಿಸುತ್ತ ನೀಚಾತ್ಮನ ಕುಟಿಲಮನಸ್ಸು ಗೋಪ್ಯವಾಗಿರುವ ಪರವೆಯೋ ಎಂಬಂತೆ ಒಂದು ಹದನವಾದ ಕಠಾರಿಯನ್ನು ತನ್ನ ವಿಶಾಲವಾದ ಕಫನಿಯೊಳಗೆ ಕಂಕುಳಲ್ಲಿ ಬಚ್ಚಿಟ್ಟುಕೊಂಡು ಈ ಕಪಟಿಯು ಯತಿಯ ಆಡಂಬರವನ್ನು ಬೀರುತ್ತ ನಮ್ಮ ಚರಿತ್ರಪುರುಷನ ರಾಜಮಂದಿರವನ್ನು ಪ್ರವೇಶಿಸಲು, ಶಿವಭಕ್ತರಲ್ಲಿ ನಿಸ್ಸೀಮವಾದ ಆದರವನ್ನು ತಾಳಿದ ಸೇದಿರಾಜನು ಇದಿರೆದ್ದು ಹೋಗಿ ನೂತನವಾಗಿ ಬಂದ ತಾಪಸಿಗೆ ಸಾಷ್ಟಾಂಗವಾಗಿ ಮಣಿದು ರತ್ನಪೀರದಲ್ಲಿ ಮುಹೂರ್ತಗೊಳಿಸಿ ಪ್ರೇಮಾತಿಶಯದಿಂದ ಚರಣ ತೀರ್ಥವನ್ನು ಮಸ್ತಕದೊಳಾಂತು ಪರಮಾನಂದವನ್ನು ಹೊಂದಿ ಮೈಗೂದಲು ನೆಟ್ಟಗಾಗಿ ಹರ್ಷಪಡುತ್ತ, ಮಹನೀಯರೇ ನಿಮ್ಮಡಿದಾವರೆಗಳ ದರ್ಶನದಿಂದ ಧನ್ಯನಾದೆನೆಂದು ಕೈಮುಗಿದು ತಾವು ಇಲ್ಲಿಗೆ ಬಿಜಯಮಾಡಿಸಿರುವ ಕಾರ್ಯವಾವುದೆಂದು ಬಿನ್ನೈಸಿಕೊಂಡನು.

ಆಗ ವೇಷಧಾರಿಯಾದ ಯೋಗಿಯು—ನಮಗೆ ಸಾರವತ್ತಾದ ಘನ ಶೈವಾಗಮವು ದೊರೆತಿರುವದು; ಅದನ್ನು ಅವಲೋಕಿಸಲು ನೀನಲ್ಲದೆ ಮತ್ತಿನ್ನಾರು ಯೋಗ್ಯರೆಂದು ನಮ್ಮ ದಿವ್ಯದೃಷ್ಟಿಯಿಂದಾ ತಿಳಿದು ನಿನಗೆ ಕೃಪೆಮಾಡಬೇಕೆಂದು ಬಂದದ್ದಾಗಿದೆ. ರಹಸ್ಯವಾದ ಶ್ರೇಷ್ಠವಾದ ಆಗಮವನ್ನು ನಿನಗೆ ಏಕಾಂತದಲ್ಲಿಯೇ ಬೋಧಿಸಬೇಕಾಗಿರುವದು. ಅಷ್ಟರಲ್ಲಿ ಇನ್ನು ಮುಂದೆ ನಡೆಯುವ ದುಃಸಹವಾದ ಕಾರ್ಯವನ್ನು ನೋಡಲಾಗದೆಂದೆಣಿಸಿ ಭಾನುವು ಪಶ್ಚಿಮಾದ್ರಿಗೆ ತೆರಳಿದನು. ಕಥಾಪುರುಷನು ಕುಹಕ ಮುನಿಯನ್ನು ನಿಜಮಂದಿರಕ್ಕೆ ಕರಕೊಂಡು ಹೋಗಿ ಸ್ನಾನವನ್ನು ಮಾಡಿಸಿ ಶಿವಪೂಜಾಗೃಹದಲ್ಲಿ ಗದ್ದುಗೆಯನ್ನು

ಹಾಕಿ ಅರ್ಚನ ಸಾಮುಗ್ರಿಗಳನ್ನು ಅಣಿಮಾಡಿಕೊಡಲು ತಂತ್ರಿಗಾರನು ಪೂಜಾ ಕ್ರಮವನ್ನು ತಿಳಿದವನಂತೆ ನಟಿಸುತ್ತ, ಬೇಂಟೆಯು ಕೈವಶವಾಗುವದಕ್ಕಾಗಿ ಒಕವು ಧ್ಯಾನಮಾಡುವಂತೆ ಜಪಮಾಡುತ್ತಿದ್ದನು. ನೂತನವಾಗಿರುವ ಆಗಮ ವನ್ನು ತಿಳಿಯಲು ಆತುರಪಡುತ್ತ ತನ್ನ ಶಿವಾರ್ಚನೆಯನ್ನು ಪೂರೈಸಿ ಚರಿತ್ರ ಪುಂಗವನು—ತಾಪಸೋತ್ತಮರೇ ನೀವು ತಂದಿರುವ ಅಪೂರ್ವವಾದ ಆಗಮ ವನ್ನು ಕೃಪೆಮಾಡಿ ನನ್ನನ್ನು ಬೇಗನೆ ಅನುಗ್ರಹಿಸಿರೆಂದು ಪ್ರಾರ್ಥಿಸಿದನು. ಮಧ್ಯರಾತ್ರಿಯಾದದ್ದನ್ನು ಈ ಮುನಿಯು ಅರಿತು ಪರಮ ರಹಸ್ಯವಾದ ಶೈವಾ ಗಮವನ್ನು ನಿನಗೆ ಗೋಪ್ಯವಾಗಿ ತಿಳಿಸಬೇಕಾದುದರಿಂದ ನಿನ್ನ ಪರಿಜನರನ್ನು ಹೊರಗೆ ಕಳುಹಿಸಿ ಬಿಡು ಎಂದು ಅಪ್ಪಣೆಮಾಡಲು ಆ ಪ್ರಕಾರ ಕಥಾನಾಯ ಕನು ಎಲ್ಲರನ್ನು ದೂರ ಕಳಿಸಿ ನರ್ಸಿನ ಯೋಗೀಂದ್ರನ ಸಮೀಪದಲ್ಲಿ ನಿಂತು ಬಹು ವಿನಯದಿಂದ ಕೃಪೆಮಾಡಿರೆಂದು ವಿಜ್ಞಾಪಿಸಲು ಆ ಕಪಟ ಯತಿಯು ಸೇದಿರಾಜನಿಗೆ ಪ್ರಶಾಂತವಾದ ಮನಸಿನಿಂದ ಸಾಷ್ಟಾಂಗವಾಗಿ ನಮಸ್ಕರಿಸೆಂದು ಹೇಳಲು ಭಯಭಕ್ತಿಯಿಂದ ಭೂಮಿಯಲ್ಲಿ ಮೈಯಿಕ್ಕಿದ ಭೂವರನನ್ನು ಕಂಡು ಕಠಿಣಾತ್ಮನಾದ ಕುಹಕಿಯು ಬಚ್ಚಿಟ್ಟುಕೊಂಡಿದ್ದ ಸುರಗಿಯನ್ನು ಮೆಲ್ಲನೆ ಹೊರಗೆ ತೆಗೆದು ಆ ಅರಸನ ಬೆನ್ನಮೇಲೆ ಬಲವಾಗಿ ಇರಿದು ಬೆಚ್ಚಿ ಬೆಬ್ಬಳ ನಾದನು. ದಿಗ್ಭ್ರಾಂತನಾದ ಪಾಪಿಯನ್ನು ನಮ್ಮ ಶರಣ ಲಲಾಮನು ಕಂಡು ಎಲೆ ದೇವಾ ಈ ತನುವು ನಿಮ್ಮದು: ನಿಮ್ಮ ಹಸ್ತವು ನೋವಾಗಿರಬಹುದು. ಈ ದೇಹವನ್ನು ನಿಮ್ಮಡಿಗಳಿಗೆ ಒಪ್ಪಿಸಿರುವೆನು. ಏನೊಂದು ಶಂಕಿಸಲಾಗದು. ಭೀತಿಪಡಲು ಕಾರಣವಿಲ್ಲೆಂದು ಹೇಳಿ ಮೆಲ್ಲನೆ ಎದ್ದು ಹೊಟ್ಟೆಯಲ್ಲಿ ಪಾರಾಗಿ ರುವ ಅಲಗನ್ನು ನೋಡಿ ಆ ಸುರಗಿಗೆ ಶರಣಾರ್ಥಿ ಎನ್ನುತ್ತ ಮೈತುಂಬ ಮುಡಿ ಯನ್ನು ಹೊದ್ದುಕೊಂಡು ಇತರರಿಗೆ ಗೋಚರವಾಗದ ಅಸಾಧಾರಣವಾದ ಶಿವ ರಹಸ್ಯವನ್ನು ಕರುಣಿಸಿದಿರಿ. ನಾನು ನಿಜವಾಗಿಯೂ ಕೃತಾರ್ಥನಾದೆನು. ಎಂದು ಹೇಳಿ ಬೆಳಗಾಗುತ್ತಲೆ ಈ ಅಪೂರ್ವಮುನಿಯೊಡನೆ ಒಡ್ಡೋಲಗಕ್ಕೆ ಬಂದು ಸರ್ವಸಿದ್ಧಿಯನ್ನು, ಚತುರ್ವಿಧ ಮುಕ್ತಿಯನ್ನುಂಟುಮಾಡುವ ಸಾಧ ನವು ಇವರಿಂದ ಲಭಿಸಿತೆಂದು ಉತ್ಸಾಹವನ್ನು ತಳೆದು ಆತನ ಮಹಿಮೆಯನ್ನು ಕೊಂಡಾಡಿ ಸಚಿವನಿಂದ ಯತಿವರನಿಗೆ ಭೂರಿದಕ್ಷಿಣೆಯನ್ನು ಕೊಡಿಸಿ ಜಾಗ ರೂಕಾಗಿ ಬಹು ಎಚ್ಚರದಿಂದ ಕಳುಹಿಸಿ ಬರಲಿಕ್ಕೆ ಅಪ್ಪಣೆಮಾಡಿ ಆ ಅಮಾ ತ್ಯನು ತಿರುಗಿಬರಲು ಸರ್ವಮಂತ್ರಿಗಳನ್ನು, ಆಪ್ತೇಷ್ಟರನ್ನು ಪುರಪ್ರಮುಖ ರನ್ನು ಕರಿಸಿಕೊಂಡು ಶೈವಾಗಮದ ಸಿದ್ಧಿಯನ್ನು ತೋರಿಸುವದಕ್ಕೆ ಧೈರ್ಯದ ಗೌಸಣಿಕೆಯನ್ನು ತೆರೆಯುವನೊ ಎಂಬಂತೆ ತಾನು ಹೊದ್ದುಕೊಂಡ ವಸ್ತ್ರವನ್ನು ತೆಗೆದು ಆ ಶಸ್ತ್ರದ ಅಲಗನ್ನು ನೋಡಿ ಮೆಚ್ಚುತ್ತಿರಲು ನೆರೆದ ಜನರೆಲ್ಲರು ಹಾ

ಹಾರಿ ಬೆದರಲು ಚರಿತ್ರಪುಂಗವನು ಅವರಿಗೆ ಅಭಯವೆಂದು ಹೇಳಿ ಶಿವಧ್ಯಾನ ಪರನಾಗಿ ಒಬ್ಬ ಶಿವಭಕ್ತನನ್ನು ಕರೆದು ಆ ಅಲಗನ್ನು ಹಿರಿದು ತೆಗೆಯಲಿಕ್ಕೆ ಹೇಳಿದನು. ಸಭಾಜನರು ಆಶ್ಚರ್ಯಚಕಿತರಾಗಿ ಧೃತಿಗೆಟ್ಟು ಕಣ್ಮುಚ್ಚಿದರು. ಆಗ ಅಲಗನ್ನು ಹೊರಗೆ ತೆಗೆದು ಗಾಯದ ದ್ವಾರದಿಂದ ಶಿವಚಿನ್ಹಾಂಕಿತರಾದವರಲ್ಲಿ ಶಿವತಾದಾತ್ಮ್ಯಭಾವವನ್ನು ತಳೆಯುವ ಆತನ ಉಗ್ರವಾದ ಭಕ್ತಿಗೆ ಶಿವಾಗಮಕ್ಕೆ ಆದಿಕಾರಣನಾದ ಪುರುಷ ಶ್ರೇಷ್ಠನಾದ ಉಮೇಶನು ಪ್ರತ್ಯಕ್ಷನಾದನು. ಸೇದಿರಾಜನು ಹರ್ಷಾಬ್ಧಿಯಲ್ಲಿ ಮುಳುಗಿ ಆನಂದದ ಒಬ್ಬುಳಿಯೇ ತಾನಾಗಿ ಅರ್ಧೇಂದು ಶೇಖರನನ್ನು ಸ್ತುತಿಸಿ ಬಹು ಪರಿಯಿಂದ ಕೊಂಡಾಡಿದನು. ಆಗ ಸುರರು ಉಘೆ ಉಘೆ ಎನ್ನುವಾಗ ಪೂವಿನ ಮಳೆಯಾಗಲು ಒಡನೆಯೆ ಪ್ರಕಾಶಮಯವಾದ ವಿಮಾನವು ಬರಲು ಅದರಲ್ಲಿ ಚರಿತ್ರನಾಯಕನನ್ನು ಕುಳ್ಳಿರಿಸಿ ಶಿವಗಣ ಪದವಿಯನ್ನನುಗ್ರಹಿಸಿ ಶಿವಾರಮಣನು ಇಚ್ಛಾನುಸಾರವಾಗಿ ಸಾಗಿದನು.

ಓಂ.

# ೨೬. ಪೂಸಲೆಯಾಂಡರು.

ಮಿಸುಪಲಿಂಗಕ್ಕೆ ಮಾ। ನಸದಲ್ಲಿ ಗುಡಿಗಟ್ಟಿ ಒಸೆದು ಸಂಪೂಜ್ಯನಹ
ಪೂಸಲೆಯಾಂಡ ಸೀ। ನಸಮ ಪುಣ್ಯವೆನೆ ನೆರೆಮಾಳ್ಕೆ ॥

[ಶ್ರೀ ನಿಜಗುಣರು]



ತಿ ಸಾಗರನು, ವಿವೇಕ ನಿಧಿಯು, ಸುಗುಣಾರ್ಣವನು, ಅಹಿಂಸಾ ತತ್ವವನ್ನು ಚನ್ನಾಗಿ ತಿಳಿದು ಮನೋವಾಕ್ಕಾಯಂಗಳಿಂದ ಯಾರಿಗೂ ನೋವಾಗದಂತೆ ಎಳ್ಳಷ್ಟಾದರೂ ದುಃಖವಾಗದಂತೆ ಎಚ್ಚರವಾಗಿದ್ದು ಪ್ರಾಣಿಕೋಟಿಯ ಉದ್ಧಾರವನ್ನು ಬಯಸುವವನು, ಶಿವಯೋಗ ಬಲ್ಲಿದನು, ಭಾವನಾ ಸಾಮರ್ಥ್ಯದಲ್ಲಿ ಘಟ್ಟಿಗನು, ಶಿವಾನುರಾಗಿಯು ಆದ ಪೂಸಲೆಯಾಂಡನೆಂಬ ಯೋಗಿಯು ತನಗೆ ಶಿವಾಪೇಕ್ಷೆಯಾದಂತೆ ಚೋಳಧರೆಯಲ್ಲಿ ವರ್ತಿಸುತ್ತಿದ್ದನು.

ಘನಪರಾಕ್ರಮಿಯು ಅಂದರೆ ತನ್ನ ಇಂದ್ರಿಯಗಳನ್ನು ಹಾಗೂ ವೈರಿಭೂಪರ ತಲೆಗಳನ್ನು ಬಗ್ಗಿಸುವವನು ಶೈವ ಕುಲದೀಪಕನು ಸಚ್ಚರಿತ್ರನು ಆದ ಪಗಲ್ಕೋಳನೆಂಬ ನೃಪತಿಲಕನು ವಿಬುಧರು ಒಪ್ಪುವಂತೆ ಜನತೆಯು ಮೆಚ್ಚುವಂತೆ ಸುಕರವಾಗಿ ಆಳುತ್ತ ಸರ್ವೋತ್ಕೃಷ್ಟವಾದ ಶಿವಾಲಯವನ್ನು ಕಟ್ಟಿಸುವ ಹಂಬಲವುಂಟಾಗಿ ತನ್ನ ನಾಡಿನಲ್ಲಿರುವ ಕುಶಲರಾದ ಶಿಲ್ಪಿಗರನ್ನು ಹಾಗೂ ಅನುಭವಿಕರಾದ ಜಾಣರಾದ ಉಪ್ಪಾರರನ್ನು ಕರತಂದು ತನ್ನ ರಾಜಧಾನಿಯಾದ ಕರಿಯೂರಲ್ಲಿ ವಿಶಾಲವಾದ ಪೌಳಿಗಳಿಂದಲೂ, ರಮಣೀಯವಾದ ಮತ್ತು ಮಂಗಲವನ್ನು ಬೀರುವ ಗೋಪುರಗಳಿಂದಲೂ ಮತ್ತು ಪ್ರೇಕ್ಷಕರಿಗೆ ಆಸ್ತಿಕ್ಯವನ್ನುಂಟುಮಾಡುವ ಚಿತ್ತಾಕರ್ಷಕವಾದ ಉನ್ನತವಾದ ಶಿಖರದೊಂದಿಗೆ ಇಂದ್ರಭವನದಂತೆ ಕಂಗೊಳಿಸುವ ಹಾಗೆ ಚಲ್ವಾದ ಗುಡಿಯನ್ನು ಕಟ್ಟಿಸಿದನು. ಈ ಗುಡಿಯ ಸೊಬಗನ್ನು ನೋಡಿ ಬಣ್ಣಿಸದೇ ಇರುವವರು ಅಥವಾ ಸಂತೋಷವನ್ನು ಹೊಂದದೇ ಇರುವವರು ದುರ್ಲಭ. ಮಹಾರಾಜನ ಕೀರ್ತಿಯನ್ನು ಕೇಳಿ ಉತ್ಸಾಹವು ಇಮ್ಮಡಿಯಾಗಿ ನಮ್ಮ ಚರಿತ್ರನಾಯಕನು ಅಲ್ಲಲ್ಲಿ ವಿಹರಿಸುತ್ತ ಕರಿಯೂರ ಪಟ್ಟಣದ ಹೊರಭಾಗದಲ್ಲಿರುವ ರಮ್ಯಾರಾಮದಲ್ಲಿ ಕೆಲವು ದಿವಸ ನೆಲಿಸಿ ಶಿವಾನಂದದಲ್ಲಿರುವಾಗ ಮೇಲೆ ಉದಹರಿಸಿದ ಶಿವಮಂದಿರವು ಪೂರ್ಣವಾದದ್ದನ್ನು ಅರಿತು ಆ ಗುಡಿಯ ಹೊರಬದಿಗೆ ಸಮೀಪವಾಗಿರುವ ಮಹಾವೃಕ್ಷದ ಬುಡದಲ್ಲಿ ಸುಖಾಸೀನನಾಗಿ ಆ ಶಿವಾಲಯದ ಎಣೆ ಇಲ್ಲದ ಅಂದವನ್ನು ಕಂಡು ಮೇರೆದಪ್ಪಿ ಸಂತೋಷಪಟ್ಟು ಭಾವನಾಬಲದಿಂದಲೇ ತನ್ನ ಮನೋಮಂದಿರದಲ್ಲಿ ಅಂದರೆ ಶರೀರವನ್ನೆ ಪ್ರಶಸ್ತಸ್ಥಾನವೆಂದು ಬಗೆದು ತನ್ನ ದೇಹದಲ್ಲಿಯೆ ಶ್ರೀ ಪಗಲ್ಕೋಳನು ಕಟ್ಟಿಸಿದ ಮನೋಹರವಾದ ಶಿವಾಲಯದಂತೆ ಗುಡಿಯನ್ನು ನಿರ್ಮಿಸಿ ಕೊನೆ ಇಲ್ಲದಷ್ಟು ಸಂತೋಷಾತಿಶಯವನ್ನು ಹೊಂದಿ ಬಾರಿಬಾರಿಗೂ ಹರ್ಷಾತಿರೇಕದ ಸಮಸ್ತ ಚಿನ್ಹಗಳನ್ನು ತೋರ್ಪಡಿಸುತ್ತ ಬಹು ಪರಿಯಾಗಿ ಹಿಗ್ಗುತ್ತಿದ್ದನು. ಇದನ್ನು ಕಂಡು ಅತ್ತಕಡೆಯಿಂದ ಹೋಗಿಬರುವ ಜನರು ತಮ್ಮೊಡೆಯನಾದ ರಾಜನಿಗೆ ನಿವೇದಿಸಲು ಅರಸನು ತಟ್ಟನೆ ಅಲ್ಲಿಗೆ ಬಂದು ಶಿವಯೋಗಿಗಳ ನಿಜಾನಂದವನ್ನು ಕಂಡು ಭೋ ಸ್ವಾಮಿನ್ ಇದೇನು ವಿಶೇಷವೆಂದು ನಯವಿನಯದಿಂದ ಬಿನ್ನವಿಸಲು ಶೈವಕುಲಾಬ್ಧಿವರ್ಧಕನೇ ನೀನು ಕಟ್ಟಿಸಿದ ಶ್ರೇಷ್ಠವಾದ ಶಿವಮಂದಿರವನ್ನು ನೋಡಿ ನನಗೊಂದು ಪರಿಯಾದ ಮೋಹವುಂಟಾಗಿ ಅದಕ್ಕೆ ಸಮಾನವಾದ ಶಿವಾಲಯವು ನನ್ನಲ್ಲಿಯೆ ಭಕ್ತಾಭಿಮಾನಿಯಾದ, ಪುಣ್ಯಮೂರ್ತಿಯಾದ ಪರಮಾತ್ಮನು ಕೃಪೆಯಿಂದ ವಿರಾಜಿಸುವದನ್ನು ಕಂಡು ನಾನು ಆನಂದದ ಕಡಲಿನಲ್ಲಿ ತೇಲಾಡುತ್ತೇನೆ. ಯತಿವರೇಣ್ಯರೇ ನೀವು ನಿರ್ಮಿಸಿದ ಅಪ್ರತಿಮ ಶಿವಾಗಾರದ ಸೌಂದರ್ಯವನ್ನು ನನಗೂ ತೋರಿಸುವ ಕೃಪೆಯಾಗ

ಬೇಕೆಂದು ಪ್ರಾರ್ಥಿಸುತ್ತೇನೆಂದು ಭೂಕಾಂತನು ನಿವೇದಿಸಲು ದಯಾನಿಧಿಯಾದ ಯೋಗೀಶ್ವರನು ಅಗಾಧ ಶಕ್ತಿಯಿಂದ ತನ್ನ ಒಡಲನ್ನೆ ಬಿಚ್ಚಿ ಪಗಳ್ಳೋಳನಿಗೆ ತೋರಿಸಲು ಆತನು ಸಂತುಷ್ಟನಾಗಿ ವಿರಗಾದನು. ಆಗಲೇ ಸರ್ವಸಾಕ್ಷಿ ಭೂತನಾದ ದೇವನು (ಅಂದರೆ ಪ್ರಕಾಶಮಯನಾದವನು) ನಂದಿವಾಹನನಾಗಿ ನಮ್ಮ ಚರಿತ್ರ ಪುರುಷನಿಗೆ ಪ್ರತ್ಯಕ್ಷನಾಗಿ ಆ ವರಭಕ್ತನ ಕಲ್ಪನಾಶಕ್ತಿಗೂ ಶಿವಯೋಗ ಪ್ರೇಮಕ್ಕೂ ಒಲಿದು ಗಣಪದವಿಯನ್ನು ಕರುಣಿಸಿದನು.

ಪಾಠಕ ಮಹಾಶಯರ ಸದ್ವಾಸನೆಯು ಬಲಿತು, ಶಿವರತಿಯು ಕ್ರಮೇಣ ಹೆಚ್ಚಾಗಿ ಮಹಾಪ್ರಮಥರ ಒಡನಾಟವಾನಂದಸುಖವು ದೊರೆಯಲೆಂದು ಅನಂತ ಮಹಿಮನನ್ನು ಲೇಖಕನು ಪ್ರಾರ್ಥಿಸುತ್ತಾನೆ.

ಈ ಕಥಾನಾಯಕನಿಗೆ ಊರ್ಧ್ವ ಸಿಲೆಯಾಂಡರು ಎಂದು ಪಾಠಾಂತರವುಂಟು.



ಓಂ.

# ೨೭. ಕಂಗುಲಿಯ ಕಲಿಯಾಂಡರು.



ನಲಿದಿಕ್ಕಿ ಧೂಪಮಂ ನೆಲನರಿಯೆ ಶಿವಲಿಂಗ । ದೊಲವಿ ನೊಯ್ದ್ಯಾರವನೆ
ತಿರ್ಬದವುಳ ಕಂ । ಗುಲಿಯ ಕಲಿಯರ್ಗೆ ಮಣಿಯುವೆನು ॥

[ಶ್ರೀ ನಿಜಗುಣರು]



ವಭಕ್ತರ ಸಮೂಹದಿಂದೊಪ್ಪುವ ಚೋಳಭೂಮಿಯು ನೀತಿಯ ಬೀಡಾಗಿ, ಸತ್ಕಾರ್ಯ ಪ್ರೇಮಿಗಳ ನಿಲಯವಾಗಿ, ಸಕಲ ಸಂಪತ್ಸಮೃದ್ಧಿಗಳಿಂದ ವಿರಾಜಿಸುತ್ತಿದ್ದುದರಿಂದಲೂ, ಅನೇಕ ಕಂಗೊಳಿಸುವ ಶಿವಾಲಯಗಳಿಂದ ನಿಬಿಡವಾಗಿದ್ದುದರಿಂದಲೂ ಭೂಲೋಕದ ಹರನ ನಿವಾಸಸ್ಥಾನವೋ ಎಂಬಂತೆ ರಮಣೀಯವಾಗಿ ಶೋಭಿಸುತ್ತಿತ್ತು. ಆ ಮನೋಹರವಾದ ನಾಡಿನಲ್ಲಿ ವಿವೇಕಯುತರಾದ, ಕರ್ತವ್ಯದಕ್ಷರಾದ ಪ್ರಜೆಗಳಿಂದಲಂಕೃತವಾದ ಕಡವೂರೆಂಬ ಸತ್ಪುರವು ಎಸೆಯುತ್ತಿತ್ತು. ಆ ಹೆಸರಾದ ಪಟ್ಟಣದಲ್ಲಿ ಶಿವಕೃಪಾಪಾತ್ರನಾದ ಕಲಿಯಾಂಡನೆಂಬ

ಭಾಗ್ಯಶಾಲಿಯಾದ ಶೈವನು ಧನ ಧಾನ್ಯ ಕನಕ ಮೊದಲಾದ ಸಂಪತ್ತಿನಿಂದ ಮೆರೆಯುತ್ತಿದ್ದನು. ಅಂತರಂಗ ಬಹಿರಂಗದಲ್ಲಿಯೂ ಪರಿಶುದ್ಧನಾದ ಈ ವರ ಭಕ್ತನು ಒಂದು ನಿಯಮವನ್ನು ಹಿಡಿದಿದ್ದನು. ಆತನು ದಿನಾಲು ಕಡವೂರೀಶ್ವ ರಾಲಯಕ್ಕೆ ಬಹು ಪ್ರೀತಿಯಿಂದ ಹೋಗಿ ಭಕ್ತಿರಸವೆಂಬ ಉದಕದಿಂದ ಮಜ್ಜನ ವನ್ನು ಮಾಡಿ ಶಾಂತಿಯೆಂಬ ಕ್ಷೀರದಿಂದ ಅಭಿಷೇಕವನ್ನು ಮಾಡಿ ಬಹು ನಿರ್ಮ ಲಮನಸ್ಕನಾಗಿ ದಿನಾಲು ೨ ತೊಲೆ ಧೂಪವನ್ನು ತಪ್ಪದೆ ಮಹಾಲಿಂಗಕ್ಕರ್ಪಿಸಿ ಆನಂದ ತುಂದಿಲನಾಗಿ ಅತಿ ಸಂಭ್ರಮದಿಂದ ಮನೆಗೆ ಬರುತ್ತಿದ್ದನು ಈತನ ಲ್ಲಿಯ ನಿಸರ್ಗವಾದ ದೇವತಾಪ್ರೇಮವು ಅವಿಚ್ಛಿನ್ನವಾದ, ಅನವರತವಾದ, ನಿರ ರ್ಗಳವಾದ ಸದ್ವಾಸನೆಯಿಂದೊಡಗೂಡಿದ ಈಶ್ವರಾನುರಾಗವು ಅಭಿವೃದ್ಧಿಗೊ ಳ್ಳುವ ಪರಿಯಿಂದ, ನಿತ್ಯ ಧೂಪ ಸಮರ್ಪಣೆಯಿಂದ ಈ ಅಪ್ರತಿಮವಾದ ಪರಿಮ ಳದ ಕಂಪು ಕೈಲಾಸಕ್ಕೆ ಅಡರಿ ಶಿವಗಣ ನಿಕರಕ್ಕೆ ಹರ್ಷವಾಯಿತು. ವಿಶ್ವವ್ಯಾ ಪಕನಾದರೂ ಭಕ್ತಹೃತ್ಕುಂಜವಾಸಿಯೆಂಮ, ಯೋಗಗಮ್ಯನೆಂದು ಪ್ರಖ್ಯಾತ ನಾದ ತ್ರಿಪುರಾರಿಯು ಮೆಚ್ಚಿ ತಲೆದೂಗಿದನು. ಈ ರೀತಿಯಾಗಿ ಕೆಲವು ಸಂವ ತ್ಸರಗಳಾಗಲು ಈತನ ನಿಯಮದ ಪರಿಯನ್ನು ನೋಡಬೇಕೆಂಬ ಶೈಲಜಾ-ವಲ್ಲ ಭನ ಸಂಕೇತದಂತೆ ಚರಿತ್ರನಾಯಕನ ಧನವೆಲ್ಲವೂ ಬಯಲಾಗಿ ಬಡತನವು ಆವರಿಸಿದರೂ ತನ್ನ ಛಲದಲ್ಲಿ ಧೀರತನವನ್ನು ಮಾತ್ರ ಬಿಡಲಿಲ್ಲ. ಧನದ ಅಭಾ ವದ ಮೂಲಕ ಧೂಪವು ದೊರೆಯದಿರಲು ಎಷ್ಟೋ ದಿವಸ ಉಪವಾಸವನ್ನು ಮಾಡಿ ಕೆಲವು ದಿವಸಗಳು ಕಳೆಯಲು ಧೂಪದ ಬಗ್ಗೆ ಹಣವನ್ನು ಗಳಿಸಬೇ ಕೆಂದು ಕೆಲವು ಪಟ್ಟಣಗಳನ್ನು ಸುತ್ತುತ್ತಾ ತಿರುಪನಂದನ ಪುರಕ್ಕೆ ಬಂದನು. ಆಗ ಆಸ್ತಿಕಶಿಖಾಮಣಿಯಾದ ಚೋಳಭೂಪತಿಯು ಅಲ್ಲಿಯ ಶಿವಾಲಯದ ಉತ್ಸವವನ್ನು ನಡೆಸಿದ್ದನು. ದೈವವಶಾತ್ ಅಲ್ಲಿಯ ಲಿಂಗವು ಉತ್ತರ ದಿಕ್ಕಿಗೆ ಕೊಂಕಿತು. ಇದನ್ನು ತಿಳಿದು ಶೈವರಾಜೇಂದ್ರನಾದ ಚೋಳನು ಖತಿಗೊಂಡು ವಿಸ್ಮಯಪಟ್ಟನು. ಬಲವಾದ ಹಗ್ಗಗಳನ್ನು ತರಿಸಿ ಆ ಲಿಂಗಕ್ಕೆ ತೊಡಕಿಸಿ ಆನೆ ಗಳಿಂದ ಜಗ್ಗಿಸಿದನು. ಆದರೂ ಆ ಪವಿತ್ರಲಿಂಗವು ಅಣುಮಾತ್ರವಾದರೂ ಸರಿ ಯದಿರಲು ಚೋಳನೃಪತಿಯು ಶಾಂತಿಯನ್ನು ತಳೆದು ವಿವೇಕವನ್ನು ತಾಳಿ ಅಚಲವಾದ ಲಿಂಗವನ್ನು ಅಲ್ಲಾಡಿಸುವದು ಮರುಳತನವೇ ಸರಿ ಎಂದು ತನ್ನ ಮಂತ್ರಿಗೆ ಹೇಳಿದನು. ನಿಷ್ಕಪಟವಾದ, ಸರಳವಾದ, ಅನುರಾಗಯುಕ್ತವಾದ, ಭಕ್ತಿಪುರಸ್ಸರವಾದ ವಿನಯವು ಇಲ್ಲದೆ ಹೋದರೆ, ಸುರಶ್ರೇಷ್ಠನೆಂದು ಜಗತ್ ಸೃಷ್ಟಿಕರ್ತನೆಂದು ಹೆಸರಾದ ಬ್ರಹ್ಮನು ಮತ್ತು ದಾನವಾರಿಯೆಂದು ಸ್ಥಿತಿಕರ್ತ ನೆಂದು ಪ್ರಸಿದ್ಧನಾದ ಹರಿಯೂ ಸಹಾ ಶಿವಲಿಂಗವನ್ನು ಇಷ್ಟದಂತೆ ಕಾಣುವದು ಅಳವಲ್ಲದಿರುವಾಗ ಬೇರೆ ಯಾರಿಗೆ ತಾನೇ ಸಾಧ್ಯವಾದೀತು. ಸಮರ್ಥರಾದ

ಹರಭಕ್ತರ ಭಕ್ತಿ ಎಂಬ ಬಲವಾದ ಪಾಶದಿಂದ ನಿತ್ಯನಾದ ಜಗತ್ಪತಿಯು ಕರೆದಲ್ಲಿ ಬರ್ಪನು. ಇದು ಚರಿತ್ರೇತಿಹಾಸಗಳಲ್ಲಿ ಬಹು ಪ್ರಸಿದ್ಧವಾದ ಸಂಗತಿಯು. ಆಗ ಪಗಲ್ಪೋಳರಾಜನು ನಿಜಮಂತ್ರಿಯಾದ ಗಾಂಗೇಯನೊಡನೆ ಆಲೋಚನೆಯನ್ನು ಮಾಡಿ ಲಿಂಗವನ್ನು ಸಂಪಡಿಸುವವರಿಗೆ ನಾಲ್ಕುಸಾವಿರ ಹೊನ್ನು ಕೊಡುವೆನೆಂದು ಡಂಗುರವನ್ನು ಸಾರಿ ಆ ವರಹಗಳ ಚೀಲವನ್ನು ಗುಡಿಯ ಮಹಾದ್ವಾರದಲ್ಲಿ ಕಟ್ಟಿಸಿದನು. ಈ ವೃತ್ತಾಂತವನ್ನು ತಿಳಿದು ನಮ್ಮ ಚರಿತ್ರನಾಯಕನು ಕಡುಸಂತೋಷವನ್ನು ಹೊಂದಿ ಬೇಗನೆ ಅಲ್ಲಿಗೆ ಬಂದು ತಟ್ಟನೆ ಹಾರಿ ಆ ಹೊನ್ನಿನ ಚೀಲವನ್ನು ತೆಗೆದುಕೊಂಡು ಆ ಹಣದಿಂದ ಧೂಪವನ್ನು ಕೊಂಡುಕೊಂಡು ಗುಗ್ಗಳ ಧೂಪದ ಹೊರೆಯನ್ನು ಕಟ್ಟಿಸಿಕೊಂಡು ಭರದಿಂದ ಆ ಶಿವಾಲಯಕ್ಕೆ ಶಿವತೇಜದ ರೀತಿಯಿಂದಲೂ ತನ್ನ ನಿಯಮವನ್ನು ಪೂರೈಸುವ ಆನಂದದಿಂದಲೂ ಉತ್ಸಾಹಯುತನಾಗಿ ಬಂದನು ಆ ಶಿವಮಂದಿರವನ್ನು ಪ್ರವೇಶಿಸಿ ಬಹು ಪ್ರೀತಿಯಿಂದ ಶಿವಭಕ್ತರಿಗೆ ಸಹಜವಾದ ಅಲಂಕಾರಗಳಾದ ವಿಭೂತಿ, ರುದ್ರಾಕ್ಷಗಳನ್ನು ಸ-ಕ್ರಮವಾಗಿ ಧರಿಸಿ ಆಗಮೋಕ್ತವಾಗಿ ಪೂಜಿಸಿ ತರತರದ ಪತ್ರಪುಷ್ಪಾದಿಗಳನ್ನು ಧರಿಸಿ ಶಿವಮಂತ್ರವನ್ನು ಪ್ರೇಮಪರವಶತೆಯಿಂದ ವಿಧ್ಯುಕ್ತವಾಗಿ ಜಪಿಸಿ ಹರನಾಮ ಸಂಕೀರ್ತನವನ್ನು ಮಾಡಿ ಪರಮಾನುರಾಗದಿಂದ ಹಾಡಿ ಪಾಡಿ ಸಂತಸಪಟ್ಟು ಇದುವರೆಗೆ ತಾನು ಸಮರ್ಪಿಸದೆ ಬಾಕಿ ಆಗಿರತಕ್ಕ ಧೂಪಕ್ಕಿಂತಲೂ ಮಿಗಿಲಾಗಿ ತಾನು ತಂದಿರುವ ಯಾವತ್ತೂ ಧೂಪವನ್ನು ಭಕ್ತಿರಸಾವೇಶದಿಂದ ಸಮರ್ಪಿಸಿ ಪರಿಮಳವನ್ನು ಸ್ವೀಕರಿಸಬೇಕೆಂದು ದಯಾಘನಮೂರ್ತಿಯಾದ ಮಹಾದೇವಂಗೆ ಬೇಡಿಕೊಂಡು ಅನಂತಾನಂತ ಪ್ರಣಾಮಗಳನ್ನು ಮಾಡುತ್ತ ನನ್ನ ಇಷ್ಟಸಿದ್ಧಿಯನ್ನು ಕರುಣಿಪುದೆಂದು ಪ್ರಾರ್ಥಿಸಿ ನಲಿದಾಡಿ ಲಿಂಗದೇವನೇ ಈ ರೀತಿಯಾಗಿ ಒಂದೇ ಮಗ್ಗಲಿಗೆ ಬಾಗಿರುವದರಿಂದ ನಿನ್ನ ಕೋಮಲವಾದ ಶರೀರವು ನೋಯದೆ? ಇದನ್ನು ಕಂಡು ನಿನ್ನ ಭಕ್ತರು ಹ್ಯಾಗೆ ಸಹಿಸುವರು ಎಂದು ಹಂಬಲಿಸಿ ಕೈಯಲ್ಲಿ ಕಠಾರಿಯನ್ನು ತೆಗೆದುಕೊಳ್ಳಲು ಪಗಲ್ಪೋಳರಾಜನು ಚಕಿತನಾದನು. ಕಠಾರಿಯ ತುದಿಯನ್ನು ತನ್ನ ಕೊರಳಿಗೆ ಹಚ್ಚಿಕೊಂಡು ಆ ಕಠಾರಿಯ ಹಿಂದಿನ ಎರಡನೇ ತುದಿಯ ಮಗ್ಗಲಿಗೆ ಭದ್ರವಾದ ಸೂತ್ರವನ್ನು ಅಂಟಿಸಿ ಆ ಬಲವಾದ ಸೂತ್ರವನ್ನು ಆ ಲಿಂಗದ ಕೊಂಕಿರುವ ಭಾಗಕ್ಕೆ ಸುತ್ತಿ ಪ್ರಮಥಾದಿಪನನ್ನು ಬಾರಿಬಾರಿಗೂ ಸ್ಮರಿಸುತ್ತ ದಿವ್ಯ ಲಿಂಗಮೂರ್ತಿಯನ್ನು ಅನಿಮಿಷದೃಷ್ಟಿಯಿಂದ ನೋಡುತ್ತ ವೀರೋದ್ರೇಕ ಭಕ್ತಿಯನ್ನಾಂತು ಅಳತೆಗೆ ಸರಿಯಾಗಿ ಚತುರತನದಿಂದ ಮೇಲೆ ವರ್ಣಿಸಿದ ಕಂಠಸೂತ್ರದಿಂದ ಜಗ್ಗಿದನು. ನೆರೆದವರೆಲ್ಲರೂ ಮಹದಾಶ್ಚರ್ಯವನ್ನು ಹೊಂದುತ್ತಿರುವಾಗ ಆ ಘನಲಿಂಗಮೂರ್ತಿಯು ಆ ಕ್ಷಣವೇ ಪೂರ್ವದಂತೆ

ಸರಿಯಾಯಿತು. ಈ ಅಪೂರ್ವ ಸಾಹಸದ ಉಗ್ರಭಕ್ತಿಗೆ ಅಧರ್ಮಿಗಳನ್ನು ಶಿಕ್ಷಿಸುವದರಲ್ಲಿ ಉಗ್ರನೆಂದು ಪ್ರಖ್ಯಾತನಾದ ಶಂಕರನು ಪ್ರಕಟನಾಗಿ ಆ ಪ್ರಿಯಭಕ್ತನನ್ನು ಕೊಂಡಾಡಿ ಆತನ ಶಿರವನ್ನು ಆಘ್ರಾಣಿಸಿ ಅಭಯವನ್ನೀಡಿ ಸಂಸ್ತೈಸಿ ಕಾಂತಿಯುಕ್ತವಾದ ದೇವಯಾನದಲ್ಲಿ ಕುಳ್ಳಿರಿಸಿ ಉನ್ನತವಾದ ಗಣಪದವಿಯನ್ನು ದಯಪಾಲಿಸಿದನು.



ಓಂ.

# ೨೮. ಇರಿಭಕ್ತರು.



ಗಿರಿಶನರ್ಚನೆಗೆ ತರುವರಳ ನೀಡಾಡೆ ಮುಪ । ಕರಿಯನಪ್ಪಳಿಸಿದಿರಿ ಭಕ್ತ
ರೆನ್ನನು । ದ್ಧರಿಸಲೀ ಭವದಿ ನೊಲವಿಂದೆ ॥

[ಶ್ರೀ॰ ನಿಜಗುಣರು]




ವರಣ-ಚರಣ-ಶುಶ್ರೂಷಾಪರಾಯಣನು, ಇಹಪರವೆಂಬುಭಯ ವಿದ್ಯಾ ಆಶ್ರಯದಾತನು, ಸಮಯಾಚಾರಪ್ರಧ್ವಾನ್ವಿತನು, ಪ್ರಜಾರಂಜಕನು, ನ್ಯಾಯಪರಿಪಾಲನ ವಿಚಕ್ಷಣನು ಆದ ಪಗಲ್ಚೋಳನು ಚೋಳಮಂಡಲಾಧೀಶ್ವರನಾಗಿ ಮೆರೆಯುತ್ತಿದ್ದನು. ಈ ಅರಸು ಧರ್ಮಿಷ್ಠನಾದುದರಿಂದ ಮಳೆ ಬೆಳೆಗಳು ಸಕಾಲಕ್ಕೆ ತೃಪ್ತಿಕರವಾಗಿ ಒದಗುತ್ತಿದ್ದವು. ಪ್ರಜೆಗಳು ಗುರುದೇವತಾ ಭಕ್ತಿಯುತರು, ಗುಣೈಕ ಪಕ್ಷಪಾತಿಗಳು, ಸಾಹಸಿಗಳು, ದೀರ್ಘಪ್ರಯತ್ನಶಾಲಿಗಳಾಗಿದ್ದುದರಿಂದ ಚೋಳರಾಜ್ಯವು ಸುಖಶಾಂತಿಗಳ ನಿಲಯವಾಗಿ ಒಪ್ಪುತ್ತಿತ್ತು. ಈ ನೃಪನ ರಾಜಧಾನಿಯಾದ ಕರಿಯೂರಿಗೆ ವೀರರಸವು ತಾನು ಪುರುಷರೂಪವನ್ನು ತಾಳಿದೆಯೊ ಎಂಬಂತಿರುವ ಇರಿಭಕ್ತನೆಂಬ ಜೀವದಯಾಪರನು, ಸತ್ಯಪ್ರಿಯನು, ವಿನಯಶಾಲಿಯು, ಸದಾಚರದರ್ಪಣನು, ಹರಸೇವಾಧುರಂಧರನು ಆದ ಶೈವಪುಂಗವನು ಬಂದು ನೆಲಸಿದನು. ನಮ್ಮ ಚರಿತ್ರನಾಯಕನಾದ ಇರಿ

ಭಕ್ತನು ಶಿವಭಕ್ತರನ್ನು ರಕ್ಷಿಸುವದರಲ್ಲಿ ಬಹಳ ಕುತೂಹಲಯುಕ್ತನು, ಅವರ ಬಯಕೆಗಳನ್ನು ಸಫಲಗೊಳಿಸುವದರಲ್ಲಿ ದಕ್ಷನು, ಶಿವನುಡಿಗಳನ್ನು ಕೇಳುವುದ ರಲ್ಲಿ ಆದರವುಳ್ಳಾತನು, ಶಿವಸಂಬಂಧಿಗಳ ಒಡನಾಟದ ಪ್ರಬಲವಾದ ಕಾಂಕ್ಷೆ ಯುಳ್ಳವನು, ಶಿವನಿಂದೆಗಳನ್ನು ಕಿವಿಯಿಂದ ಕೇಳದವನು, ಶಿವಘೋಷವನ್ನು ಆಲಿಸಲು ಪರಮೋತ್ಸಾಹಿಯು, ಶಿವಭಕ್ತಿಯ ಚಿಹ್ನಗಳಿಲ್ಲದ ಭವಿಗಳ ಸಂಗ ದಿಂದ ದೂರನಾಗಿ, ಶಿವಪ್ರತಾಪನಿಧಿಯಾಗಿ ರಂಜಿಸುತ್ತಿದ್ದನು.

ಗುರು-ಲಿಂಗ-ಜಂಗಮ-ವಿಭೂತಿ-ರುದ್ರಾಕ್ಷಿ-ಮಂತ್ರ-ಪಾದೋದಕ-ಪ್ರಸಾ ದಗಳೆಂಬ ಅಷ್ಟಾವರಣಗಳು ಶಿವಭಕ್ತನಿಗೆ ಶರೀರದ ಮುಖ್ಯ ಅವಯವಗಳಂತಿ ರುವವು; ಮತ್ತು ಶರೀರಕ್ಕೆ ಪ್ರಾಣವು ಹ್ಯಾಗೆ ಪ್ರಧಾನವೊ ಅದೇರೀತಿಯಾಗಿ ಸದಾಚಾರ-ಶಿವಾಚಾರ-ಲಿಂಗಾಚಾರ-ಭೃತ್ಯಾಚಾರ-ಗಣಾಚಾರಗಳೆಂಬ ಪಂಚಾ ಚಾರಗಳಿರುವವು. ಈ ಐದು ನಿಯಮಗಳನ್ನು ಆಚರಿಸುತ್ತ ಗಣಾಚಾರವನ್ನು ತನ್ನ ಪ್ರಾಮುಖ್ಯವಾದ ಛಲವನ್ನಾಗಿ ಕಥಾನಾಯಕನು ಮಾಡಿಕೊಂಡಿದ್ದನು. ಶಿವನಿಂದೆ-ಅಷ್ಟಾವರಣನಿಂದೆ-ಶಿವಾಚಾರನಿಂದೆ-ಶಿವಧರ್ಮನಿಂದೆ-ಶಿವಗ್ರಂಥಗಳ ನಿಂದೆ ಯಾವ ಪರಿಯಿಂದಲಾದರೂ ಕೇಳದೆ ಯಥಾಶಕ್ತಿಯಿಂದ ನಿರ್ವಂಚನೆಯಿ ಲ್ಲದೆ ನಿಂದಕರನ್ನು ನಿವಾರಿಸುವದೇ ಗಣಾಚಾರದ ಭಾವವು.

ನಮ್ಮ ಕಥಾಪುರುಷನು ಕರಿಯೂರೇಶ್ವರಾಲಯಕ್ಕೆ ಭಕ್ತಿ ಪುರಸ್ಸರವಾಗಿ ಹೋಗಿ ಪ್ರೇಮದಿಂದರ್ಚಿಸಿ ಸಾತ್ವಿಕವಾದನುರಾಗದಿಂದ ಪುನಃ ಪುನಃ ಮಣಿದು ಬದ್ಧಾಂಜಲಿಪುಟನಾಗಿ ಕಲ್ಯಾಣಕ್ಕಾಸ್ಪದನಾದ ಪ್ರಭುವೇ, ಕರುಣಾಕರನೇ ಪಂಚಾಚಾರಗಳಲ್ಲೊಂದಾದ ಗಣಾಚಾರವನ್ನೇ ಮುಖ್ಯ ನಿಯಮವಾಗಿಟ್ಟುಕೊ ಳ್ಳುವೆನು. ಅದಕ್ಕೋಸ್ಕರ ನಿಶಿತವಾದ ಪರಶುವನ್ನು ಧರಿಸುವೆನು. ಈ ಛಲ ವನ್ನು ಪಾಲಿಸುವದೇ ನನಗೆ ಬಲವಾದ ಶಿವಸಾಧನವು. ಶಿವದೂಷಕರನ್ನು ಭೂಮಿಯಲ್ಲಿ ನಿರ್ಮೂಲಗೊಳಿಸುವದೇ ನನ್ನ ಕಾಯಕವು. ಇದನ್ನು ನೀನು ಹರಿಸುವದು ಎಂದು ಮಹಾಕಾಲಮೂರ್ತಿಗೆ ಪೊಡಮಟ್ಟು, ವೀರೋದ್ರೇಕದಿಂದ ಬರುತ್ತ, ಭಸಿತಾದಿ ಶುಭಲಕ್ಷಣಗಳುಳ್ಳವರನ್ನು ಕಂಡೊಡೆ ನಲಿದಾಡುತ್ತ, ಶಿವ ನಿಂದಕರನ್ನು ಖಂಡಿಸುತ್ತ, ಈ ರೀತಿಯಾದ ಉದ್ದಂಡವೃತ್ತಿಪರನಾಗಿ ಶೋಭಿ ಸುತ್ತಿದ್ದನು.

ಒಂದು ದಿನ ಗರ್ವಿಷ್ಠನಾದ ದುರುಳನೊಬ್ಬನು ನಮ್ಮ ಚರಿತ್ರನಾಯಕನ ಸಮೀಪಕ್ಕೆ ಬರಲು, ಆಗ ಆತನು ಆ ಭವಿಗೆ ಬೇಗನೆ ವಿಭೂತಿಯನ್ನು ಧರಿಸಿ ದನು. ಪರಮ ಪವಿತ್ರವಾದ ಅನಂತ ಫಲದಾಯಕವಾದ ವಿಭೂತಿಯ ಅಸಾ ಧಾರಣ ಮಹಿಮೆಯನ್ನು ಆ ದುಷ್ಟನು ಹೇಗೆ ತಾನೆ ತಿಳಿಯುವನು? ಆಗ ಶಿವ

ಭಕ್ತಿವಿಹೀನನಾದ ಆ ಕಾಪುರುಷನು ಮಹಿಮನು ತೊಡೆದ ಭಸಿತವನ್ನು ಸಿಟ್ಟಿನಿಂದ ಹೀನೈಸಿ ಒರಸಿಬಿಟ್ಟನು; ಮತ್ತು ನಿಂದಾಯುಕ್ತವಾದ ಕಠಿಣೋಕ್ತಿಗಳನ್ನಾಡಲು, ಪರಸಮಯದವರೆಲ್ಲರೂ ನೋಡುತ್ತಿರಲು, ಆ ನಿಂದಕನ ಮುಂದಲೆಯನ್ನು ಹಿಡಿದೆಳೆದು ಆತನ ಶಿರವನ್ನು ಹರಿದುಬಿಡಲು, ನೆರೆದವರೆಲ್ಲರೂ ಬೆದರಿದರು. ತಲೆಯನ್ನು ಕಳಕೊಂಡ ಮೂರ್ಖನ ಆಪ್ತಪರಿಜನರು ಆಕ್ರೋಶವನ್ನು ಮಾಡುತ್ತಾ, ಹಾ ಹಾ ಕಾರವನ್ನು ಗೈಯುತ್ತಾ ಆ ಶವವನ್ನು ಹೊತ್ತುಕೊಂಡು ರಾಜಸ್ಥಾನಕ್ಕೆ ತಂದು, ವೃತ್ತಾಂತವನ್ನು ವಿವರಿಸಿ ಪಗಳ್ಳೋಳಭೂಪನಿಗೆ ವಿಚಾರಣೆಯನ್ನು ಮಾಡಬೇಕೆಂದು ಮೊರೆ ಇಟ್ಟರು. ಅದೆಂತೆನೆ:—

ಸದಸದ್ವಿವೇಕವುಳ್ಳ ವಿಚಾರಪರನಾದ ಪ್ರಭುವೇ, ಹರಭಕ್ತನಲ್ಲವೆಂದ ಮಾತ್ರಕ್ಕೆ ನಿಷ್ಕಾರಣವಾಗಿ ನಿರಪರಾಧಿಯಾದವನನ್ನು ಇರಿಭಕ್ತನು ಕೊಡ್ಲಿಯಿಂದ ತರಿದಿಕ್ಕಿದನು. ಇಂಗಿತಜ್ಞನೂ, ದೂರದರ್ಶಿಯೂ, ಪರಮಭಕ್ತನೂ, ಶಿವಾಚಾರನಿಷ್ಠನೂ ಆದ ಪಗಳ್ಳೋಳ ಧೊರೆಯು ತನ್ನ ಮನದಲ್ಲಿಯೇ ಮೆಚ್ಚಿ, ಶಿವನಲ್ಲದೆ ಬೇರೆ ದೈವವಿಲ್ಲೆಂಬ ಇರಿಭಕ್ತನ ವಿಚಾರಸರಣಿಯನ್ನು ಹಾಗೂ ಆತನ ವೀರಗಣಾಚಾರ ವೃತ್ತಿಯನ್ನು ತಿಳಿದು, ತನ್ನೊಳಗೆ ಸಂತೋಷವನ್ನು ಹೊಂದುತ್ತಾ ದೂರನ್ನು ಹೇಳುತ್ತಿರುವ ಜನರ ಸಮ್ಮುಖದಲ್ಲಿಯೇ ಕಥಾನಾಯಕನನ್ನು ಕರತರುವದಕ್ಕೆ ಕರಣೀಕರನ್ನು ಕಳುಹಿಸಿದನು. ಆಗ ಆ ರಾಜನ ನಿರೂಪವನ್ನು ತೆಗೆದುಕೊಂಡು ಬಂದ ಕರಣೀಕರು ಇರಿಭಕ್ತನನ್ನು ಕಂಡು:-"ದೇವಾ, ನಿಮ್ಮನ್ನು ಮಹಾರಾಜರು ಕಾಣಬೇಕೆಂದು ಆತುರಪಡುವರು. ಬಿಜಯಮಾಡುವ"ದೆಂದು ಬಿನ್ನಪವನ್ನು ಮಾಡಲು, ಪರಶುಸಮೇತನಾಗಿ ಬಂದು ಅರಸನ ಸನ್ನಿಧಾನದಲ್ಲಿ ಚರಿತ್ರನಾಯಕನು ಕುಳಿತುಕೊಂಡನು. ರಾಜನು:—"ಶಿವಭಕ್ತರೇ, ಈ ನಿರಪರಾಧಿಯಾದವನನ್ನು ಹೀಗೆ ಮಾಡಿದ ಕಾರಣವೇನು?" ಇರಿಭಕ್ತನು:—"ಈತನು ಹಣೆಯಲ್ಲಿ ಭಸ್ಮವಿಲ್ಲದೆ ಬರುತ್ತಿದ್ದುದರಿಂದ ಆಗ ನಾನು ವಿಭೂತಿಯನ್ನು ಹಚ್ಚಲು ಈತನು ಅದನ್ನು ಅಳುಕಿಸಿ ಈಶ್ವರನಿಂದೆಯನ್ನು ಮಾಡಿದ್ದಕ್ಕಾಗಿ ನಾನು ಇವನನ್ನು ಇರಿದೆನು." ಆಗ ನರಪತಿಯು:—ಭಸಿತವಿಲ್ಲದ ಶಿವದ್ರೋಹಿಗಳನ್ನು ಕಡಿದಿಕ್ಕುವದೇ ನಿಮ್ಮ ನಿಯಮವೊ? ಈಗ ಅಸುವನ್ನು ನೀಗಿರುವ ವ್ಯಕ್ತಿಗೆ ಪುನಃ ಈಗ ಭಸ್ಮವನ್ನು ಧರಿಸಿದರೆ ಪ್ರಾಣವನ್ನು ಮರಳಿ ಪಡೆಯುವನೋ? ಶರಣಲಲಾಮನು:—ಇವನ ಬಳಗದವರೆಲ್ಲರೂ ಈಶ್ವರಭಕ್ತಿಯನ್ನು ತಳೆದರೆ, ಭಸಿತವನ್ನು ಧರಿಸಿದರೆ, ಪ್ರಾಣಗತನಾಗಿರುವ ವ್ಯಕ್ತಿಯು ಶಿವಭಕ್ತರ ಕೃಪೆಯಿಂದ ಪುನಃ ಏಳುವನು. ಆಗ ದೂರನ್ನು ಹೇಳಲಿಕ್ಕೆ ಬಂದ ಪರಸಮಯದವರು ಹರಭಕ್ತರಾಗಲಿಕ್ಕೆ ಒಪ್ಪಿ, ಶಿವಭಕ್ತಿಯನ್ನು ತಳೆದು, ಶಿವಭಾವದಿಂದ ಭೂಷಿತರಾಗಿ, ತಮ್ಮವನ ಜೀವವನ್ನು ದಯಪಾಲಿಸ

ಬೇಕೆಂದು ಮೈಯಿಕ್ಕಿ ಬೇಡಿಕೊಂಡರು. ಆಗ ಕಥಾನಾಯಕನು ಆ ಪ್ರೇತವನ್ನು ಪ್ರೇಮಭಾವದಿಂದ ನೋಡಿ, ಪ್ರಮಥರ ಚರಣಸರಸಿಜಗಳನ್ನು ತನ್ನ ಮಸ್ತಕದಲ್ಲಿರಿಸಿಕೊಂಡು ತನ್ನ ಪಾದದಿಂದ ಆ ಶವವನ್ನು ಮುಟ್ಟಿದನು. ಎಲ್ಲರೂ ನೋಡನೋಡುತ್ತಿರಲು, ಭೂವರನು ಬೆರಗಾಗುತ್ತಿರಲು, ಮೊದಲು ಇರಿಭಕ್ತನನ್ನು ದೂಷಿಸಿದ ವ್ಯಕ್ತಿಯು, ಮಲಗಿದವನು ಎದ್ದಂತೆ ಎದ್ದು ಆ ವೀರಭಕ್ತನನ್ನು ಭಕ್ತಿಯಿಂದ ನಮಸ್ಕರಿಸಿದನು. ಜೀವವನ್ನು ಪಡೆದ ವ್ಯಕ್ತಿಗೆ ಆಶೀರ್ವಾದಪೂರ್ವಕ ನೋಡಿ, ವಿಭೂತಿಯನ್ನಿಟ್ಟು, ಆತನ ಬಳಗದವರನ್ನು ಶಿವಭಕ್ತರನ್ನಾಗಿ ಅನುಗ್ರಹಿಸಲು, ಶಿವಭಕ್ತರು ಮೆಚ್ಚಿದರು; ಪರವಾದಿಗಳು ಕಣ್ಮುಚ್ಚಿದರು. ಈ ಗಣಾಚಾರ ವೃತ್ತಿಗೆ ಧರಣೀಶನು ಸಾನಂದವಾಗಿ ಕೌತುಕಪಟ್ಟು ಆತನನ್ನು ಶ್ಲಾಘಿಸಿ, "ಈ ಬಂಟನೇ ಪರಸಮಯದವರ ಗಂಡ"ನೆಂದು ಸಾರಿಸಲು, ಶಿವಭಕ್ತಿಯು ಹೆಚ್ಚಾಗಿ ನೆಲೆಗೊಂಡು ಶಿವಭಕ್ತರ ಸಂಖ್ಯೆಯು ಬೆಳೆಯಿತು. ಮಲೆತು ಬಂದ ಪರಸಮಯದವರನ್ನು ಕೊಲ್ಲುತ್ತಾ, ಶರಣಾಗತರನ್ನು ರಕ್ಷಿಸುತ್ತಾ, ಶಿವಭಕ್ತರಲ್ಲದೆ ನಿಗ್ರಹಾನುಗ್ರಹ ಸಮರ್ಥರು ಅನ್ಯರು ಇರುವದಿಲ್ಲೆಂದು ತೋರಿಸುತ್ತಾ ಸತ್ಕೀರ್ತಿಯುತನಾಗಿ ಒಪ್ಪುತ್ತಿದ್ದನು.

ಚರಿತ್ರನಾಯಕನು ನಿತ್ಯದಂತೆ ಒಂದು ದಿನ ಬ್ರಾಹ್ಮೀಮುಹೂರ್ತದಲ್ಲಿ ಪಾತ್ರರ್ವಿಧಿಗಳನ್ನು ಪೂರೈಸಿ, ಸ್ನಾನಾದಿಸತ್ಕ್ರಿಯಾಚಾರಗಳನ್ನು ಆಚರಿಸಿ ಶಿವಪೂಜೆಯನ್ನು ಮಾಡಿ ಸಂತೋಷದಿಂದ ರಾಜಬೀದಿಯಲ್ಲಿ ಬರುತ್ತಿದ್ದನು. ಆಗ ಶಿವಗಾಮಿಯೆಂಬ ಒಬ್ಬ ದ್ವಿಜನು ಶಿವಾರ್ಚನೆಗಾಗಿ ಸುಗಂಧವಾದ ಹೂವುಗಳನ್ನು ಎತ್ತಿಕೊಂಡು, ಕರಡಿಗೆಯಲ್ಲಿಟ್ಟುಕೊಂಡು ಕರಿಯೂರೇಶ್ವರನ ಪೂಜೆಗಾಗಿ ಅದೇ ದಾರಿಯಿಂದ ಬರುತ್ತಿದ್ದನು. ಇತ್ತ ರಾಜನ ಪಟ್ಟಸಾನೆಯು ಆಕಸ್ಮಿಕವಾಗಿಯೋ ಅಥವಾ ದೈವವಿಲಾಸದಿಂದಲೋ ಮದವೇರಿ ಮದೋದಕವು ಕುಂಭಸ್ಥಳದಿಂದ ಸುರಿಯುತ್ತಿರಲು, ಭ್ರಮರ ಸಮೂಹವು ಆ ಕುಂಭಸ್ಥಳವನ್ನು ಮುತ್ತಲು, ಆ ಸಂಕಟಕ್ಕೆ ಆ ಮತ್ತಗಜವು ಕಾಲಿಗೆ ಕಟ್ಟಿದ ಸರಪಣಿಯನ್ನು ಹರಿದೊಗೆದು, ಮಾವುತನನ್ನು ಘಾತಿಸಿ ಆತನನ್ನು ಸದೆಬಡೆದು ಪುರವೀಧಿಗಳನ್ನು ಹಾಳುಮಾಡುತ್ತಾ ಸಮೀಪಕ್ಕೆ ಸಿಕ್ಕವರನ್ನು ಕೆಡವುತ್ತಾ ಭಯಂಕರವಾಗಿ ಆರ್ಭಟಿಸುತ್ತಾ ಅಲ್ಲಿ ಬರುವ ಶಿವಗಾಮಿ ಎಂಬ ಬ್ರಾಹ್ಮಣನನ್ನು ಕಂಡು ಆತನ ಹಸ್ತದಲ್ಲಿರುವ ಕುಸುಮಗಳ ಕರಡಿಗೆಯನ್ನು ಸೊಂಡಿಯಿಂದ ತೆಗೆದುಕೊಂಡು ನೆಲಕ್ಕೆ ಕೆಡವಿತು. ಆಗ ಆ ಶೈವನು:—ಶಿವಪೂಜೆಗಾಗಿ ತಂದ ಪುಷ್ಪಗಳು ನಿಷ್ಫಲವಾದವೇ? ಶಿವ ಶಿವಾ! ಕೇಳುವವರಾರೂ ಇಲ್ಲವೆ? ಶಿವನೇ ಶಿವನೇ! ಎಂದು ಉಚ್ಚಸ್ವರದಿಂದ ಸಾರಿದನು. ಈ ಪರಿಯಾಗಿ ಮೊರೆ ಇಡುವದನ್ನು ಕೇಳಿ ಇರಿಭಕ್ತನು ಓಡಿಬಂದು ನೋಡುತ್ತಾನೆ, ಭೂಮಿಯಲ್ಲಿ ಬಿದ್ದಿರುವ ಹೂ-

ಗಳ ರಾಶಿಯನ್ನು ನೋಡಿ ಶಿವಗಾಮಿ ಎಂಬವನಿಂದ ಸಕಲ ಸಂಗತಿಯನ್ನು ತಿಳಿದು ಅಲ್ಲಿಯೇ ಹೋಗುತ್ತಿರುವ ಆನೆಗೆ ಎದುರಾಗಿ ಹೋಗಿ ಸರಿಯಾಗಿ ಗುರಿ ಇಟ್ಟು ತನ್ನ ಪರಶುವಿನಿಂದ ಅದರ ಶುಂಡಿಲವನ್ನು ಕತ್ತರಿಸಿ ಬೊಬ್ಬಿರಿಯಲು ಅಷ್ಟರಲ್ಲಿ ಗಜವು ದೊಪ್ಪನೆ ನೆಲಕ್ಕುರುಳಿತು. ಈ ಆನೆಯ ಅವಸ್ಥೆಯನ್ನು ರಾಜನ ಆಳುಗಳು ಕಂಡು ವೇಗದಿಂದ ಓಡಿಹೋಗಿ ತಮ್ಮ ಒಡೆಯನಿಗೆ ಹೇಳಿದರು. ಆಗ ವಿಚಾರಪರನಾದ ಅರಸನು ಭಯ ಭಕ್ತಿಯನ್ನು ತಾಳ್ದು ನನ್ನ ಬಲಶಾಲಿಯಾದ ಗಜವನ್ನು ಕೊಲ್ಲುವದಕ್ಕೆ ಸಾಮಾನ್ಯರಿಗೆ ಸಾಧ್ಯವಿಲ್ಲ. ಆನೆಯನ್ನು ಕೊಂದವನು ಮರ್ತ್ಯನಲ್ಲವೆಂದು ನಿರ್ಧರಿಸಿ ಪಾದಚಾರಿಯಾಗಿ ಬರುತ್ತಾ ಪಾಪಿಯಾದ ಆನೆಯು ಶಿವಭಕ್ತರನ್ನು ಯಾವ ಪ್ರಕಾರ ಘಾಸಿ ಮಾಡಿತೋ ಎಂದು ಬಹುಪರಿಯಾಗಿ ಮರುಗುತ್ತಾ, ರೌದ್ರಾವತಾರವನ್ನು ತಾಳಿದ ಪರಶು ಸಮೇತನಾದ ಇರಿಭಕ್ತನನ್ನು ಕಂಡು ಸಾಷ್ಟಾಂಗವಾಗೆರಗಿ:—ಮಹಸೀಯರೇ, ಭೃತ್ಯರು ಮಾಡಿದ ಅಪರಾಧಕ್ಕೆ ಸ್ವಾಮಿಯು ಶಿಕ್ಷೆಗೆ ಪಾತ್ರನು. ಆದ್ದರಿಂದ ಈ ತಪ್ಪಿಗೆ ಆನೆಗೆ ಶಿಕ್ಷೆಯಾಗಬಾರದು; ನನ್ನನ್ನು ದಂಡಿಸಿದರೆಂದು ಕೊರಳನ್ನೊಡ್ಡಿ ವಿನಯದಿಂದ ಪ್ರಾರ್ಥಿಸಿದನು.

ಆಗ ಈ ಪ್ರಜಾಪಾಲನ ವಿಚಕ್ಷಣನಾದ ಮಹಾರಾಜನ ಬಿನ್ನಹವನ್ನು ಕೇಳಿ ಚರಿತ್ರಪುಂಗವನು ಭಕ್ತಾಗ್ರಣಿಯಾದ ಶಿವಭಕ್ತರ ಪದಾರ್ಥವಾದ ಕರಿಯನ್ನು ನಾನೇಕೆ ಕೊಂದೆನೆಂದು ಮರುಗಿ ಶಿವಭಕ್ತರ ಸೂತ್ರನ್ನು ನಾಶಪಡಿಸಿದ್ದರಿಂದ ತನ್ನ ಸತ್ವವು ಬಯಲಾಯಿತೆಂದು ಖತಿಗೊಳ್ಳುತ್ತಾ, ಇನ್ನು ತಾನು ಇರಕೂಡದೆಂದು ನಿರ್ಧರಿಸಿ, ತನ್ನ ಅಪರಾಧಕೃತಿಗಾಗಿ ತನ್ನ ತಲೆಯನ್ನೇ ತರಿಯುವೆನೆಂದು ಕಡುಕೋಪವನ್ನು ಹೊಂದಿ ಕೊಡಲಿಯನ್ನು ಮೇಲಕ್ಕೆತ್ತಲು, ಸದ್ಧರ್ಮಮೂರ್ತಿಯಾದ ಪರಮಾತ್ಮನು ಆತನ ಹಸ್ತವನ್ನು ತಡೆದು ನಿಜರೂಪವನ್ನು ತೋರಿದನು. ಆಗ ಚರಿತ್ರನಾಯಕನು ಶರಣಜನಾನಂದಕರನಾದ ವಾಗೀಶನಾಗಿ, ವಾಕ್ಕುಗಳಿಗೆ ಸಿಲುಕದೆ ಇದ್ದರೂ, ಬಲ್ಲಿದ ಭಕ್ತರ ಪ್ರೇಮರಜ್ಜುವಿಗೆ ಆಧೀನನಾದ ಶಂಕರನನ್ನು ಮನದಣಿಯುವಂತೆ ಭಕ್ತಿಯ ಉದ್ರೇಕದಿಂದ ಸ್ತುತಿಸಿ, ಆನಂದಬಾಷ್ಪಗಳು ಉದುರುತ್ತಿರುವಾಗ "ಜಗದೀಶನೇ, ಈ ದಂತಿಯನ್ನು ಅನುಗ್ರಹಿಸಬೇ"ಕೆಂದು ಪ್ರಾರ್ಥಿಸಿದನು. ಮಹೇಶನ ದೃಷ್ಟಿಮಾತ್ರದಿಂದಲೇ ಆನೆಯು ಜೀವಕಳೆಯನ್ನು ಮುನ್ನಿನಂತೆ ಹೊಂದಿ ಸೊಂಡೆಯನ್ನೆತ್ತಿ ಪ್ರೇಮಾತಿರೇಕದಿಂದ ವಿನಯವನ್ನು ತೋರಿಸಿತು. **ಇರಿ**ಭಕ್ತನ ವೀರಗಣಾಚಾರವ್ರತಕ್ಕೆ ಸುರಶ್ರೇಷ್ಠನಾದ ಪಾರ್ವತೀಪತಿಯು ಮೆಚ್ಚಿ, ಥಳಥಳಿಸುವ ದಿವ್ಯ ವಿಮಾನವನ್ನು ಬರಮಾಡಿ ಆತನನ್ನು ಕುಳ್ಳಿರಿಸಿ, ಶ್ರೇಷ್ಠವಾದ ಗಣಪದವಿಯನ್ನು ಅನುಗ್ರಹಿಸಿದನು. ಮರಣವನ್ನು ಹೊಂದಿದ ಆನೆಗೆ ಪ್ರಾಣವು ಬಂದ

ದ್ದನ್ನು ಮತ್ತು ನೋಡನೋಡುತ್ತಿರುವಾಗ ಕಣ್ಣುಕುಕ್ಕುವ ಪ್ರಕಾಶದಲ್ಲಿಯೇ **ಇರಿ**ಭಕ್ತನು ಮಾಯವಾದದ್ದನ್ನು ಪಗಲ್ಪೋಳನು ಕಣ್ಣಾರೆ ನೋಡಿ, ಶರಣರ ಲೀಲೆಯನ್ನು ಕಂಡು ಆನಂದಪಟ್ಟನು.

ಓಂ.

# ೨೯. ಕಳಚಂಗ ಪೆರುಮಾಳೆಯರು.

ವರಶಲದಿಯಾಗಿ ಶಂಕರಪೂಜೆಗೈದು ಭಾ । ಸುರಗಣ ನಿಕಾಯದೊಳು ಸಂದ ಕಳಚಂಗ । ಪೆರುಮಾಳೆಯನಗೆ ದಯವಾಗು ॥

[ಶ್ರೀ ನಿಜಗುಣರು]



ತ್ಸಂಗದಿಂದ ಮನುಷ್ಯನ ಗುಣ-ಶೀಲ-ಆಚಾರ-ಧರ್ಮಗಳು ಪ್ರಗತಿಯನ್ನು ಹೊಂದುತ್ತ ಊರ್ಜಿತವಾಗುವದೆಂಬ ಸಂಗತಿಯು ಸಕಲರು ಅರಿತ ಸಂಗತಿಯಾಗಿರುವದು. ಸದ್ವರ್ತನೆ, ಸುಜನರ ಒಡನಾಟ ಸಂಸರ್ಗದಿಂದ ಪ್ರಾಣಿಗಳು ಉತ್ತರೋತ್ತರವಾಗುವದಾದರೂ ಸರ್ವ ವಿಶ್ರುತವಾಗಿರುವದಷ್ಟೆ; ಜೀವಿಗಳಲ್ಲಿ ಆ ವಾಸನೆಗಳು ನೆಲೆಗೊಂಡು ಉತ್ಕರ್ಷವನ್ನುಂಟುಮಾಡುವ ವಿಷಯವಾದರೂ ಸಹಜವಾಗಿರುವದು.

ಪೂರ್ವಕಾಲದಲ್ಲಿ ಸುಪ್ರಸಿದ್ಧವಾದ ಕಾವೇರಿಯ ತೀರದಲ್ಲಿ ವಿಶಾಲವಾದ ಜಂಬೂ ವೃಕ್ಷದಡಿಯಲ್ಲಿ ಒಂದು ಮನೋಹರವಾದ ಶಿವಲಿಂಗವು ಶೋಭಿಸುತ್ತಿತ್ತು. ಹಿಂದಿನ ಜನ್ಮದ ದುಷ್ಕರ್ಮ ಫಲದಿಂದ ಒಬ್ಬ ಶೈವನು ಶಲದಿಯಾಗಿ ಪುಟ್ಟಿ ಆ ಲಿಂಗದ ಹತ್ತರ ನೆಲಿಸಿ ಪೂರ್ವ ಸಂಸ್ಕಾರ ಬಲದಿಂದ ಶಿವಪ್ರೇಮವು ಅಂಕುರಿಸಿ ಕ್ರಮವಾಗಿ ಆ ಶಿವಲಿಂಗದಮೇಲೆ ಭಕ್ತಿಯು ವೃದ್ಧಿಯಾಗಿ ಆ ಲಿಂಗದ ಮಸ್ತಕದ ಮೇಲೆ ಕಸಕಡ್ಡಿ ಬೀಳಬಾರದೆಂದೆಣಿಸಿ ಮತ್ತು ರವಿಯ ಉಗ್ರವಾದ ಕಿರಣಗಳು ಬೀಳಬಾರದೆಂದು ಬಗೆದು ಆ ಜೇಡವು ತನ್ನ ಎಳೆಗಳಿಂದ ಯಥಾಶಕ್ತಿಯಾಗಿ ಜಾಳಿಗೆಯನ್ನು ಪ್ರೀತಿಯಿಂದ ಕಟ್ಟುತ್ತ ಈ ರೀತಿಯಾದ ಲಿಂಗಸೇವೆಯನ್ನು ಮಾಡುತ್ತ ನಿಜಕಾರ್ಯವನ್ನು ಮಾಡುವದರಿಂದಾ

ಗುವ ತೃಪ್ತಿ ಸಂತೋಷದಿಂದ ಆನಂದದಲ್ಲಿಯೇ ಕೆಲವು ವರ್ಷಗಳು ಆಗಲು ಆ ಹೊಳೆಯ ಪಾರ್ಶ್ವದ ಅಡವಿಯಲ್ಲಿರುವ ಒಂದು ಕರಿಯು ವಿಹರಿಸುತ್ತಾ ಆ ನದೀ ತೀರದಲ್ಲಿರುವ ಜಂಬೂಕುಜದ ಕಡೆಗೆ ಬಂದು ಆ ಥಳಥಳಿಸುವ ಲಿಂಗವನ್ನು ನೋಡಿದಾಕ್ಷಣವೇ ಪೂರ್ವ ವಾಸನೆಯಿಂದಲೋ ಅಥವಾ ಸಂಚಿತ ಪುಣ್ಯದಿಂದ ಲೋ ಆ ಲಿಂಗದಮೇಲೆ ಭಕ್ತಿಯು ಹುಟ್ಟಿ ಪೂಜಿಸಬೇಕೆಂಬ ಅಭಿಲಾಷೆಯಾಗಿ ಆ ಶಲದಿಯು ನೆಯ್ದ ಜಾಳಿಗೆಯನ್ನು ತೆಗೆದೊಗೆದು ಅಲ್ಲಿಯೇ ತಿಳಗೊಳದಲ್ಲಿ ರುವ ಜಲವನ್ನು ತನ್ನ ಸೊಂಡಿಯಲ್ಲಿ ತುಂಬಿಕೊಂಡು ಲಿಂಗಾಭಿಷೇಕವನ್ನು ಗೈದು ಅಲ್ಲಿರುವ ಕಾಡು ಪುಷ್ಪಗಳನ್ನು ಲಿಂಗದ ಮೇಲಿರಿಸಿ ಸಂತೋಷಪಡುತ್ತಾ ಇದೇ ರೀತಿಯಾಗಿ ಎಷ್ಟೋ ಮಾಸಗಳವರೆಗೆ ನಡಸಿತು. ಇದನ್ನು ಕಂಡು ಆ ಜೇಡವು ದಿನಾಲು ನಾನು ಮಾಡುವ ಲಿಂಗ ಪರಿಚರ್ಯವನ್ನು ಈ ಕಾಡಾನೆಯು ನಾಶಪಡಿಸುವದು ಇದನ್ನು ನಾನೆಂತು ಸೈರಿಸುವೆನೆಂದು ಬಗೆದು ಅದರ ನಿವಾ ರಣೆಗಾಗಿ ಚಿಂತಿಸಿ ಆ ಗಜವು ಬರುವದನ್ನೇ ಕಾಯುತ್ತ ಕುಳಿತುಕೊಂಡಿತು. ಆಗ ಎಂದಿನಂತೆ ದ್ವಿರದವು ಬಂದು ಲಿಂಗಕ್ಕೆ ಮಜ್ಜನವನ್ನು ಮಾಡಿ ಕುಸುಮ ಗಳನ್ನು ಧರಿಸಿ ಮುದವನ್ನು ತಾಳ್ದು ಆ ಆನೆಯು ತನ್ನ ಶುಂಡಿಲವನ್ನು ಲಿಂಗದ ಗದ್ದಿಗೆಯ ಮುಖಕ್ಕೆ ಚಾಚಿಕೊಂಡು ವಿಶ್ರಮಿಸಿತು. ಆಗ ಇದೆಲ್ಲವನ್ನು ಕಾಯ್ದು ನೋಡುತ್ತಾ ಹೊಂಚುಹಾಕಿ ಕುಳಿತಿರುವ ಶಲದಿಯು ತಕ್ಕವೇಳೆಯನ್ನು ಸಾಧಿಸಿ ಆ ಕಾಡಾನೆಯ ಮೂಗಿನಲ್ಲಿ ಸೇರಿಕೊಂಡು ಅದರ ಪ್ರಾಣವನ್ನು ತೆಗೆದುಕೊಂಡು, ತನ್ನ ಪ್ರೀತಿಯ ಲಿಂಗವನ್ನು ನೆನೆಯುತ್ತಲೇ ತಾನೂ ಪರಲೋಕವಾಸಿ ಯಾಯಿತು.

ಅಂತೆ ಯಾ ಮತಿಃ ಸಾ ಗತಿಃ (ಅಂದರೆ ಪ್ರಾಣಿಗೆ ತನ್ನ ಅಂತ್ಯಕಾಲ ದಲ್ಲಿ ಯಾವ ಪ್ರಕಾರ ವಾಸನೆಯು ಉಂಟಾಗುವದೋ ಅದೇ ಪ್ರಕಾರ ಗತಿ ಯಾಗುವದು.) ಎಂಬ ನಾಣ್ಣುಡಿಯಂತೆ ಅಂತ್ಯಕಾಲದಲ್ಲಿ ಲಿಂಗ ವಿರಹದಲ್ಲಿಯೇ ಅಸುವನ್ನು ತೊರೆದ ಸುಕೃತ ವಿಶೇಷದಿಂದ ಆ ಜೇಡವು ಸಕಲ ಸೌಭಾಗ್ಯದಿಂ ದೆಸೆವ ಭೂದೇವಿಗೆ ತಿಲಕಪ್ರಾಯವಾಗಿ, ಮಿಗಿಲಾಗಿ ಒಪ್ಪುವ ಚೋಳಧರಿತ್ರಿ ಯಲ್ಲಿ ಕಳಚಂಗ ಪೆರುಮಾಳ ನಾಮಕ ರಾಜಪುತ್ರನಾಗಿ ಪುಟ್ಟಿ ಬಾಲಸೂರ್ಯ ನೋಪಾದಿಯಲ್ಲಿ ಪ್ರಕಾಶಿಸಿದನು.

ಇತ್ತ ಆ ಜೇಡಹುಳದಿಂದ ಮೃತಿಯನ್ನೈದಿದ ದಂತಿಯು ವರ-ಯಕ್ಷ ಕುಲೋತ್ಪನ್ನವಾಗಿ ಸಂಭವಿಸಿತು.

ನಮ್ಮ ಚರಿತ್ರನಾಯಕನಾದ ಕಳಚಂಗಾಖ್ಯ ಅರಸು ಕುಮಾರನ ಸದ್ಗುಣ ಗಳನ್ನು ಬಣ್ಣಿಸಲು ಯಾರಿಗೆ ತಾನೇ ಉತ್ಸುಕತೆಯಾಗಲಿಕ್ಕಿಲ್ಲ? ಆ ನೃಪ ಸೂನುವು ಯಾವತರದ ಕ್ರೀಡೆಯನ್ನು ಆಚರಿಸಿದರೂ ಶಿವಧರ್ಮ ರತಿಯನ್ನತಿ

ಕ್ರಮಿಸದೆ ಸಕಲ ನೀತಿ ರಹಸ್ಯಗಳನ್ನು ತಿಳಿಯುವದರಲ್ಲಿ ಕುಶಲನಾಗಿ, ಸತ್ಕಾವ್ಯ ಪ್ರೌಢಿಮೆಯಲ್ಲಿ ಬಲ್ಲಿದನಾಗಿ, ಸಾಹಿತ್ಯ ಪ್ರೇಮಿಯಾಗಿದ್ದುದಲ್ಲದೆ, ಸಂಗೀತ ಪ್ರಿಯನಾಗಿ, ಶಿವಾನುಭವಿಗಳ ಸಂಗದಲ್ಲಿ ವಿಲಾಸವನ್ನು ಹೊಂದುತ್ತ ರಾಜ ಪುತ್ರರಿಗೆ ಯೋಗ್ಯವಾದ ಸಮಸ್ತ ಕಲಾನಿಪುಣನಾಗಿ ಶಿವಾನಂದ ಪರನಾಗಿ ರಂಜಿಸುತ್ತಿದ್ದನು. ಈ ರೀತಿಯಾಗಿ ಕೆಲವುಕಾಲ ಕಳೆಯಲು ಕಥಾನಾಯಕನಿಗೆ ಬೇಂಟೆಯಾಡುವ ಇಚ್ಛೆಯಾಗಿ ಪರಿಜನರೊಂದಿಗೆ ಅಡವಿಗೆ ಹೊರಟು ಆ ಕಾನನದ ಮಧ್ಯದಲ್ಲಿ ಒಂದು ಭಯಂಕರವಾದ ಮಹಾ ಬಿಲದ್ವಾರವು ದೃಷ್ಟಿಗೆ ಬೀಳಲು ತನ್ನ ಪರಿವಾರಕ್ಕೆ ಅದನ್ನು ಪ್ರವೇಶಿಸಲಿಕ್ಕೆ ಹೇಳಿದನು. ಆದರೆ ಅವರು ಅಂಜಿ ಒಪ್ಪಲಿಲ್ಲ. ಆಗ ಕಥಾನಾಯಕನು ಅಂಧಕಾರಮಯವಾದ ಬಿಲದಲ್ಲಿ ತನ್ನ ಆಭರಣಗಳ ಕಾಂತಿಯ ಬಲದಿಂದಲೇ ವೀರನಾದುದರಿಂದ ನಿರ್ಭೀತನಾಗಿ ಒಂದು ಯೋಜನ ಪರ್ಯಂತವಾಗಿ ನಡೆದುಬರಲು ಪ್ರಾಣಿಗಳು ನೋಡಿದಾಕ್ಷಣವೇ ಎದೆಯೊಡೆದು ನೀರಾಗುವಂತೆ ಭೀಕರವಾದ ರೌದ್ರಾವತಾರವನ್ನು ತಾಳಿದ ಕಿಡಿಗಣ್ಣಿನ ಸಮರ್ಥನಾದ ಮಲ್ಲನನ್ನು ಕಂಡನು. ಭೇತಾಳ ಸ್ವರೂಪವನ್ನು ತಾಳಿದ ಆ ಜಟ್ಟಿಗನು ಮುಂದೆಬಂದು ಅನ್ಯರಿಗೆ ಒಳಗೆ ಬರಲು ಸಾಧ್ಯವಲ್ಲದ ನನ್ನ ಗಂವ್ಹರದಲ್ಲಿ ನೀನು ಬಂದಕಾರಣ ನಿನ್ನನ್ನೀಗಲೇ ಯಮ ಸದನಕ್ಕಟ್ಟುವೆನೆಂದು ಕೋಪಾವೇಶದಿಂದ ಗರ್ಜಿಸಿದನು. ಚರಿತ್ರನಾಯಕನು— ಎಲೈ ಮಲ್ಲನೇ ನೀನು ಹೇಳುವ ಯಮನನ್ನು ಹರನು ನಿಗ್ರಹಿಸಿದುದು ಜಗತ್ ಪ್ರಸಿದ್ಧವಾಗಿರುವದು. ನಾನು ಶಿವನ ಬಂಟನಾದುದರಿಂದ ನಿನ್ನ ಹರಣವನ್ನು ಈಗಲೇ ತೆಗೆದುಬಿಡುವೆನೆಂದು ಬೊಬ್ಬಿರಿಸಿದನು. ಆಗಲೇ ಉಭಯ ವೀರರು ಭುಜಸ್ಫಾಲನಂಗೈದು ಮಲ್ಲಕಾಳಗ ಸನ್ನದ್ಧರಾಗಿ ಒಬ್ಬರನ್ನೊಬ್ಬರು ಕೆಣಕುತ್ತ ಸಮರ ಚಮತ್ಕಾರದಿಂದ ಪರಸ್ಪರವಾಗಿ ಘಾತಿಸುತ್ತ ಪ್ರತಿಭಟಿಸುತ್ತಿದ್ದರು. ಈ ರೀತಿಯಾಗಿ ಕೆಲವುವೇಳ ಸಮಬಲರಾಗಿ ಕಾದುತ್ತಿರಲು ಕಳಚಂಗ ವೀರನು ಧರ್ಮಪೀಠನಾದ ದೇವದಾನವಾದಿ ಸಮಸ್ತರಿಗೂ ಗುರುಸಾರ್ವಭೌಮನೆನಿಸಿದ ಗೌರೀಶನನ್ನು ಹೃತ್ಕಮಲದಲ್ಲಿ ದೈನ್ಯದಿಂದ ಪ್ರಾರ್ಥಿಸಿ ವೀರೇಶನೆಂಬುವ ಷಡಾನನನ್ನು ನೆನೆದು ಹೊತ್ತುಸಾಧಿಸಿ ವೈರಿಯ ಆಯಮೆಟ್ಟಿಗೆ ಬಲವಾಗಿ ಬಡಿದು ಆತನನ್ನು ನಿರ್ವೀರ್ಯನನ್ನಾಗಿ ಮಾಡಲು ನಮ್ಮ ವೀರನ ಸಾಹಸಕ್ಕೆ ಆ ಜಟ್ಟಿಗನು ಭಯಪಟ್ಟು ಸೋತನು. ಈ ರೀತಿಯಾಗಿ ಬೆದರಿದ ಜಟ್ಟಿಗನು ಮಲ್ಲಯುದ್ಧ ಸಾಹಸಕ್ಕೆ ಆಶ್ಚರ್ಯವನ್ನು ಹೊಂದಿ ತನ್ನ ನಿಜರೂಪವನ್ನು ತಾಳಿದನು. ಅದೆಂತೆನೆ—ಚಲ್ವಾದ ಕಾಂತಿಮಯವಾದ, ಮಣಿಹಾರದಿಂದಲೂ ಪ್ರಕಾಶಮಯವಾದ ಮುತ್ತಿನ ಸರಗಳಿಂದಲೂ, ಮಹಾರ್ಘವಾದ ವಸ್ತ್ರಾಲಂಕಾರಗಳಿಂದಲೂ ಯಕ್ಷರೂಪದಿಂದ ಪರಿಶೋಭಿಸಿದನು. ಮತ್ತು ಕಥಾ

ನಾಯಕನ ವಿಕ್ರಮಕ್ಕೆ ಮೆಚ್ಚಿ ಇಂತೆಂದನು—ಎಲೈ ಅರಸುಪುತ್ರನೇ ಈವರೆಗೆ ದುರ್ಗಮವಾದ ಈ ಬಿಲದಲ್ಲಿ ಯಾರೂ ಪ್ರವೇಶಿಸಲಿಲ್ಲ. ನಿನ್ನ ಪರಾಕ್ರಮಕ್ಕೆ ಮೆಚ್ಚಿದೆನು ಈ ಪರಿಯಾಗಿ ನೃಪನಂದನನನ್ನು ಕೊಂಡಾಡಿ ನಿನ್ನ ಪೂರ್ವ ಜನ್ಮದ ನೆನಪು ನಿನಗೆ ಉಂಟೋ ಎಂದು ಕೇಳಿದನು. ಆಗ ಚರಿತ್ರಪುರುಷ ನಿಗೆ ಶಿವಕಾರುಣ್ಯದಿಂದ ಮುನ್ನಿನ ಜನ್ಮದ ಅರಿವು ಉದಯಿಸಿ ಆ ಪೂರ್ವದ ಲಿಂಗಭಕ್ತಿಯು ಅಂಕುರಿಸಿ ಆ ಬಿಲದ್ವಾರದಿಂದ ಹೊರಗೆ ಬಂದು ಪೂರ್ವೋಕ್ತ ವಿಪಿನಕ್ಕೆ ಬಂದು ಆ ಘನ ಲಿಂಗವನ್ನು ತಡಕಿ ಅದನ್ನು ಕಂಡು ತಾಯಿಯನ್ನು ಕಳಕೊಂಡ ಕರವು ಪುನಃ ಹಡದವ್ವನನ್ನು ಕಂಡಂತೆ ಅತಿ ಸಂತೋಷಪಟ್ಟು ನಿನ್ನನ್ನಗಲಿ ಬಹಳ ದಿವಸಗಳಾದವೆಂದು ಆನಂದಾಶ್ರುಗಳಿಂದ ವಂದೇಸವನ ಎವೆ ಇಕ್ಕದೆ ನೋಡುತ್ತಿದ್ದನು ಶುಚಿರ್ಭೂತನಾಗಿ ಪೂಜೋಪಕರಣಗಳನ್ನು ಅಣಿಮಾಡಿಕೊಂಡು ಬಿಲ್ವದಲಗಳನ್ನು ಕೋಮಲವಾದ ಪಲ್ಲವಗಳನ್ನು ಸದ್ವಾಸನೆಯಿಂದ ಘಮಘಮಿಸುವ ಪುಷ್ಪಗಳನ್ನು ತಂದು ಆ ಪುರಾತನ ಲಿಂಗಕ್ಕೆ ಮಜ್ಜನಂ ಗೈದು ವಿಭೂತಿಯಂ ಲೇಪಿಸಿ ಅನಂತಾನಂತ ಶಿವನಾಮಗಳನ್ನು ಉಚ್ಚರಿಸುತ್ತ ಹೂಪತ್ರೆಗಳನ್ನು ಧರಿಸುತ್ತ ಆನಂದ ಪರವಶನಾಗಿ ಮೈಮರೆದು ಆತ್ಮಾರಾಮನಾದನು. ಇದು ಭಕ್ತಿಪ್ರಿಯನೂ ಭಕ್ತಪ್ರೇಮಿಯೂ ಆದ ಧೂರ್ಜಟಿಗೆ ವೇದ್ಯವಾಗಿ ಕಾವೇರೀ ಪ್ರವಾಹದ ಮಗ್ಗುಲಲ್ಲಿರುವ ಜಂಬೂವೃಕ್ಷದಡಿಯಲ್ಲಿ ಲಿಂಗವಿರುವ ಸ್ಥಳಕ್ಕೆ ಬಂದು ನಿಜಭಕ್ತನನ್ನು ನೋಂಕಿ ಜಲನಿಂದ ಅಭಿವಂಚಿಸಲು ಭಕ್ತೋತ್ತಮನು ಕಣ್ದೆರೆದು ಶಾಶ್ವತನಾದ ತಾಂಡವ ಪ್ರಿಯನಾದ ಉಮೆಯರಸನನ್ನು ನೋಡಿ ನಲಿವಾಡಿ ಭಕ್ತಿರಸೋದ್ರೇಕದಿಂದ ಪರಿಪರಿಯಾಗಿ ಸ್ತುತಿಸಿದನು. ಆಗ ಭಕ್ತ ಕಲ್ಪದೃಮನಾದ ಮೃಡಮೂರ್ತಿಯು ವರ ಭಕ್ತನ ಭಕ್ತಿಗೆ ಸಂತೋಷಪಟ್ಟು ಹೆಚ್ಚಾಗಿ ಹೊಳೆಯುವ ದೇವತಾಯೋಗ್ಯವಾದ ವಿಮಾನವನ್ನು ಇಚ್ಛಾಮಾತ್ರದಿಂದಲೇ ಬರಿಸಿ ಅದರಲ್ಲಿ ಕಳಚಂಗ ಪೆರುಮಾಳೆಯರನ್ನು ಕುಳ್ಳಿರಿಸಿ ವರಗಣ ಪದವಿಯನ್ನಿತ್ತು ತೆರಳಿದನು.



ಓಂ.

# ೩೦. ನಮಿನಂದಿಯರು.



ನಡೆತರುತೆ ಮಳೆಯೊಳಿರುಳಿಡಪಿ ಹರಹರಾ ಯೆಂ । ದೊಡನೆ ಬಂದೀಶ
ನೊಂದೆಂದ ನಮಿನಂದಿ । ಕೊಡಲೆನಗತಿ ಧರ್ಮರತಿಯನು ॥

[ಶ್ರೀ ನಿಜಗುಣರು]




ಗೊಂಚಲುಗಳಿಂದೊಪ್ಪುವ ಗಿಡಬಳ್ಳಿಗಳಿಂದಲೂ, ಫಲಗಳ ಭಾರದಿಂದ ಬಳಕುತ್ತಿರುವ ಅಸಂಖ್ಯ ವೃಕ್ಷಗಳಿಂದಲೂ ಕಣ್ಗೆಸೆವ ಶಾಲೀಗದ್ದೆಗಳಿಂದಲೂ, ನಯನ ಮನೋಹರವಾದ ಇಕ್ಷು-ತೆಂಗು-ಕದಳಿ ಮೊದಲಾದವುಗಳಿಂದೊಪ್ಪುವ ತೋಟಗಳಿಂದಲೂ, ಕೆರೆ-ಕಟ್ಟೆ-ಕಾಲುವೆ-ಹೊಳೆಗಳಿಂದ ಸಮೃದ್ಧಿಯಾದ ಚೋಳಭೂಮಿಯಲ್ಲಿ ಪಾಪಭೀರುಗಳಾಗಿಯೂ, ಕಾರ್ಯತತ್ಪರರಾಗಿಯೂ, ಈಶ್ವರ ಭಕ್ತಿಯಲ್ಲಿ ಅನುರಕ್ತರಾದ ಶೈವರಿಂದ ತುಂಬಿ ತಿರುವಾಲೂರೆಂಬ ಪುರವು ಶೋಭಿಸುತ್ತಿತ್ತು ಆ ಪುರದಲ್ಲಿ ನಮಿನಂದಿ ಎಂಬ ಶೈವನು ನಿರ್ಮಲನೂ, ಸ್ವಕಾರ್ಯದಕ್ಷನೂ, ಸತತೋದ್ಯೋಗಿಯೂ, ಆದುದರಿಂದ ಪ್ರಪಂಚಕ್ಕನುಕೂಲವಾಗುವಂತೆ ಹಣವನ್ನು ಸಹಜವಾಗಿ ಪಡೆದು ಶಿವಭಕ್ತರ ಇಷ್ಟಾನುಸಾರವಾಗಿ ಅವರಿಗೆ ತೃಪ್ತಿಪಡಿಸುತ್ತಿದ್ದನು. ಆತನು ನಿರಪೇಕ್ಷ ಬುದ್ಧಿಯಿಂದ ನಾಳಿನ ಚಿಂತೆಮಾಡದೆ, ಗಳಿಸಿದ ಸಂಪತ್ತನ್ನು ಈಶ್ವರಾರ್ಪಣ ಭಕ್ತಿಯಿಂದ ಹರಭಕ್ತರಿಗೆ ಯಥೇಚ್ಛವಾಗಿ ಕೊಡುತ್ತಿದ್ದುದರಿಂದ ಇವನೇನು ಮರುಳನೋ! ಎಂದು ಕೆಲವು ಅಪಕ್ವಮತಿಯುಳ್ಳವರು ಆಡಿಕೊಳ್ಳುತ್ತಿದ್ದರು. ಸದ್ಗುಣಿಯಾದ ನಮ್ಮ ಚರಿತ್ರನಾಯಕನು ಶಿವಪ್ರೇಮಿಯಾಗಿ ತನ್ನ ನಿಜಕಾರ್ಯ ಧುರಂಧರನಾಗಿದ್ದರೂ ಭಕ್ತವತ್ಸಲನಾದ ಪರಮಾತ್ಮನ ನೆನಹು ಸದಾವಕಾಲದಲ್ಲಿಯೂ ತಪ್ಪುತ್ತಿರಲಿಲ್ಲ. ಈತನು ಒಂದು ದಿನವೂ ಲೋಪವಿಲ್ಲದಂತೆ ಪ್ರತಿದಿವಸವೂ ಮುಂಜಾನೆ, ಮಧ್ಯಾಹ್ನ, ಸಂಧ್ಯಾಸಮಯದಲ್ಲಿ ತಿರುವಾಲೂರೇಶ್ವರಾಲಯಕ್ಕೆ ಹೋಗಿ ಭಯಭಕ್ತಿವಿನಯಾನ್ವಿತನಾಗಿ ಅಷ್ಟವಿಧಾರ್ಚನೆಯಿಂದ ಶಿವಕೈಂಕರ್ಯವನ್ನು

ಪೂರೈಸಿ ಶಿವಾನಂದ ಮಗ್ನನಾಗಿ ಬರುತ್ತಿದ್ದನು. ಈ ರೀತಿಯಾಗಿ ಶಿವಸೇವೆಯು ಅವಿಚ್ಛಿನ್ನವಾಗಿ ನಡೆದಿರಲು ಕೆಲವು ಸಂವತ್ಸರಗಳು ಸಾಗಲು ಒಂದು ದಿನ ಪ್ರದೋಷ ಕಾಲದಲ್ಲಿ ಶಿವಧ್ಯಾನ ತತ್ಪರನಾಗಿ ಆ ಉಲ್ಲಾಸದೊಡನೆ ಕಂಗೊಳಿಸುವ ರಮಣೀಯವಾದ ಆ ಶಿವಾಲಯವನ್ನು ಪ್ರವೇಶಿಸಿದನು. ಭಕ್ತ ಸಮೂಹದಿಂದ ದೇವಾಲಯವು ಕಿಕ್ಕಿರಿದಿತ್ತು. ಸಾಲುಸಾಲಾಗಿ ಹೆಚ್ಚಾಗಿ ದೀವಿಗೆಗಳು ಉರಿಯುತ್ತಿದ್ದುದರಿಂದ ಪ್ರಕಾಶವು ನಾಲ್ಕೂಕಡೆಗೆ ಅತಿಶಯವಾಗಿ ಪಸರಿಸಿತ್ತು. ಧೂಪದ ವಾಸನೆಯು ಚನ್ನಾಗಿ ಸುಗಂಧವನ್ನು ಬೀರುತ್ತಿತ್ತು. ಅರ್ಚಕನು ಅಂದವಾಗಿ ತರತರದ ಪುಷ್ಪಗಳನ್ನು ಲಿಂಗಕ್ಕೆ ಧರಿಸಿದ್ದುದರಿಂದಲೂ, ಭಕ್ತವ್ರಜದಿಂದ ಕೂಡಿದ್ದುದರಿಂದಲೂ ಆ ಶಿವಮಂದಿರವು ಮನೋಹರವಾಗಿ ಅತಿ ಮಂಗಲಮಯವಾಗಿ ಒಪ್ಪುತ್ತಿದ್ದುದರಿಂದ, ಕಲುಷಿತ ಮನುಜನು ಸಹಾ ಅಲ್ಲಿಗೆ ಬಂದರೂ ಆತನಿಗೆ ಪರಿಶುದ್ಧ ಭಾವನೆಯನ್ನು ತಂದುಕೊಟ್ಟು ದೇವಭಕ್ತಿಯನ್ನು ಆ ಕ್ಷಣವೇ ಉಂಟುಮಾಡುತ್ತಿತ್ತು. ಈ ಪರಿಯಾದ ಅಪರಿಮಿತ ಆನಂದೋತ್ಸಾಹ ಸಮಯದಲ್ಲಿ ಕಥಾನಾಯಕನು ತನ್ನ ನಿತ್ಯ ಕ್ರಮಾನುಸಾರವಾಗಿ ವಿಧ್ಯುಕ್ತವಾಗಿ ಭಕ್ತಿಪುರಸ್ಸರವಾಗಿ ಪ್ರೇಮಭರದಿಂದ ತದೇಕಚಿತ್ತನಾಗಿ ಲಿಂಗರೂಪದಿಂದೊಪ್ಪುವ ಸದಾನಂದಮಯನಾದ ಮುನಿಪ್ರಿಯನಾದ ಸಾಂಬನನ್ನು ಪೂಜಿಸಿ ನಿತ್ಯ ಸಂಖ್ಯಾನುಕ್ರಮವಾಗಿ ಶಿವಮಂತ್ರವನ್ನು ಪೂರೈಸಿ ಅತುಲವಾದ ಉತ್ಸಾಹ ಹರ್ಷಾತಿರೇಕಗಳಿಂದೊಡಗೂಡಿ ಗುಡಿಯ ಹೊರಗೆ ಬರಲು ಕಗ್ಗತ್ತಲೆಯು ಕವಿದಿತ್ತು. ಆ ಶಿವಾಲಯವನ್ನು ಬಿಟ್ಟು ಸ್ವಲ್ಪದೂರ ಬರುವದರೊಳಗಾಗಿಯೇ ಮೋಡವು ಕವಿದು ಗುಡುಗು ಮಿಂಚುಗಳು ಆರ್ಭಟಿಸುತ್ತಿದ್ದವು. ಆಕಾಶಕ್ಕೂ ಭೂಮಿಗೂ ಒಂದೇ ಧಾರೆಯಾಗಿ ಭಯಂಕರವಾಗಿ ಮಳೆಯು ಸುರಿಯುತ್ತಿತ್ತು. ಇಂಥ ದುರ್ಭರ ಕಾಲದಲ್ಲಿಯೆ ಏಕಾಂಗಿಯಾಗಿ ಶಿವೈಕಚಿತ್ತನಾದ ಚರಿತ್ರಪುಂಗವನು ಬರುವಾಗ ದಾರಿಯಲ್ಲಿ ಒಂದು ಕೊರಡನ್ನಡವಿ ಅತಿ ಕಷ್ಟಪಟ್ಟು ಹರ ಹರಾ ಎಂದು ಘಟ್ಟಿಯಾಗಿ ಆವೇಶದಿಂದ, ಭಕ್ತಿರಸವು ಮೇಲಕ್ಕೆ ಪುಟಿಯಿತೋ ಅನ್ನುವಹಾಗೆ ಉಚ್ಚರಿಸಲು ಒಡನೆಯೆ ಅಖಿಲ ವಿಶ್ವಸೂತ್ರಧಾರಕನಾದ ಗೌರೀರಮಣನು ಕಥಾನಾಯಕನ ಕೈಯ್ಯನ್ನು ಹಿಡಿದೆಬ್ಬಿಸಿ ಭಕ್ತನೇ ನೊಂದೆಯಾ ಎಂದು ಹೇಳುತ್ತ ನಿಜರೂಪದಿಂದ ಪ್ರಕಟನಾದನು.

ಭಕ್ತಪ್ರಿಯನೆಂದು, ಭಕ್ತವತ್ಸಲನೆಂದು, ಆರ್ತರಕ್ಷಾಮಣಿಯೆಂದು, ದೀನಬಂಧುವೆಂದು, ದಯಾಮಯನೆಂದು, ಸರ್ವಸಾಕ್ಷಿಭೂತನೆಂದು ಅನಾದಿಕಾಲದಿಂದಲೂ ಜಗತ್ಪ್ರಸಿದ್ಧನಾದ ಪರಶಿವಮೂರ್ತಿಯು, ತನ್ನ ಪ್ರೇಮಾತಿರೇಕದ ಶಿವಚಿಂತನೆಯಲ್ಲಿ ಬೆರತಿರುವ ಪ್ರಾಣಿಯು ದುಃಖಕ್ಕೆ ಈಡಾದುದನ್ನು ಹ್ಯಾಗೆ ತಾನು

ಸಹಿಸುವನು ? ಅಂತೆಯೇ ಆತನ ಕಷ್ಟವನ್ನು ನಿವಾರಿಸುವದಕ್ಕೆ ವಿದ್ಯುದ್ವೇಗವನ್ನ ತಿಕ್ರಮಿಸಿ ಮನೋವೇಗದಿಂದಲೇ ಶೀಘ್ರವಾಗಿ ಆ ಭಕ್ತನಿದ್ದ ಠಾವಿಗೈತಂದು ಆತ ನನ್ನು ಎತ್ತಿಹಿಡಿದನಲ್ಲವೇ? ಇದು ನಮಗೆ ಭೂಷಣವಾಗಿ ಕಾಣುವದಾದರೂ ಆ ಕಾರುಣ್ಯನಿಧಿಗೆ ಸಹಜವಾದುದು.

ಮೃತ್ಯುಂಜಯನನ್ನು ಕಂಡೊಡನೆ ನಮಿನಂದಿಯು ಆನಂದಾಶ್ರುಗಳನ್ನು ಸುರಿಸುತ್ತಾ ಗದ್ಗದ ಕಂಠಯುಕ್ತನಾಗಿ ಪರಿಪರಿಯಾಗಿ ಸ್ತುತಿಸಿ, ಮಹಿಮನನ್ನು ಕೊಂಡಾಡಿದನು. ಆ ದೇವಪತಿಯು ಭಕ್ತನ ಸ್ತೋತ್ರಗಳಿಂದ ಸಂತುಷ್ಟನಾಗಿ ಮಗನೇ ನಿನಗೆ ಬೇಕಾದ ವರವನ್ನು ಬೇಡು ಕೊಡುವೆನೆಂದು ಹೇಳಿದನು. ಆಗ ಈ ಶಿವಮರುಳನು ಶಂಕರನೇ ನೀನು ನನ್ನನ್ನು ಪ್ರೀತಿಸುವದಾದರೆ ಇಂಥಾ ಗಾಢಾಂಧಕಾರದಲ್ಲಿ ಈ ಪ್ರಕಾರ ಪ್ರಳಯ ಕಾಲದಂತೆ ಮೇಘಗಳು ಸುರಿಯು ತ್ತಿರುವಾಗ ಮನೆ ಬಾಗಿಲನ್ನು ಬಿಟ್ಟು ಹೊರಗೆ ಖಂಡಿತವಾಗಿಯೂ ಬರ ಕೂಡದು. ಇದೇ ನನ್ನ ಮನೋಭಿಷ್ಟವು ಎಂದು ಬಿನ್ನೈಸಿದನು. ಆಗ ಅಷ್ಟ ಮೂರ್ತಿಯಾದ ವಿಶ್ವಪತಿಯು ಭಕ್ತನ ಮುಗ್ಧಭಾವಕ್ಕೆ ಮೆಚ್ಚಿ ಹಾಗೆಯೇ ಆಗ ಲೆಂದು ಒಪ್ಪಿ ಪುಷ್ಪಕ ವಿಮಾನವನ್ನು ಬರಮಾಡಿ ಅದರಲ್ಲಿ ಆತನನ್ನು ಕುಳ್ಳಿರಿಸಿ ಅಸ್ಪೃಹಣೀಯವಾದ ಮರುಳ ಶಿವಭಕ್ತನಿಗೆ ಗಣಪದವಿಯನ್ನು ಅನುಗ್ರಹಿಸಿ ದನು. ಶಿವಭಕ್ತಿ ಸಾಮ್ರಾಜ್ಯದಲ್ಲಿ ನಲಿದಾಡುವವನಿಗೆ ಅದಕ್ಕೂ ಅಧಿಕವಾದ ಸುಖವನ್ನುಂಟುಮಾಡುವ ವಸ್ತುವು ಬೇರೆ ತಾನು ಯಾವದು ಕಂಡೀತು ?



ಓಂ.

# ೩೧. ಅಮರನೀತಿಗಳು.

ಹರನ ಕೌಪೀನಕ್ಕೆ ಸರಿಬಾರದಿರೆ ತನ್ನ । ಶರೀರಮಂ ತೂಗಿದಮರ ನೀತಿ
ಗಳ ಭಂ । ಟರ ಭಂಟರಂಘ್ರಿ ಬಿಡದಿರ್ಪೆ ॥

[ಶ್ರೀ ನಿಜಗುಣರು]



ಪರಿಮಿತ ತೇಜೋಮಯನಾದ, ಆನಂದಸಾಗರದ ಮೇರೆಯನ್ನು ಕಾಣದ, ಅಯೋನಿಜನಾದ ಹರನ ಸುಖ ಸಾಮ್ರಾಜ್ಯದಲ್ಲಿ ಮೆರೆವ ಆವಾಸಸ್ಥಾನವೆಂಬಂತೆ ಚೋಳ ಮಂಡಲದಲ್ಲಿ ಅನೇಕ ತಟಾಕಾದಿಗಳಿಂದಲೂ, ಪ್ರೇಕ್ಷಕರಿಗೆ ಮನೋಲ್ಲಾಸವನ್ನುಂಟುಮಾಡುವ ತೋಟಪಟ್ಟಿಗಳಿಂದಲೂ ಕಬ್ಬು ಮುಂತಾದ ಗದ್ದೆಗಳಿಂದಲೂ ವಿರಾಜಿಸುವ ತಿರುನಲ್ಲೂರೆಂಬ ಪ್ರಖ್ಯಾತವಾದ ಪಟ್ಟಣವು ಒಪ್ಪುತ್ತಿತ್ತು. ಬಲಾಢ್ಯರಿಗೂ ಕೂಡ ದುರ್ಗಮವಾದ ಪ್ರಾಕಾರಗಳಿಂದಲೂ, ಭಕ್ತ ಸಮೂಹದಿಂದ ಮಿನಗುವ ಶಿವಾಗಾರಗಳಿಂದಲೂ, ಪ್ರಕಾಶಮಯವಾದ ಅರಮನೆಗಳಂತೊಪ್ಪುವ ಕಟ್ಟಡಗಳಿಂದಲೂ ದಿವ್ಯ ಗುಡಿಗಳಿಂದಲೂ ಆ ಪ್ರಸಿದ್ಧ ತಿರುನಲ್ಲೂರು ಶೋಭಿಸುತ್ತಿತ್ತು. ಶಿವಕಥನ, ಶಿವಗೀತೆ, ಶಿವನೃತ್ಯ, ಶಿವಭಜನೆ, ಶಿವಾರ್ಚನೆಯ ಕಾಲಕ್ಕೆ ಮೊಳಗುವ ಘಂಟಾನಾದ ಇತ್ಯಾದಿ ಮಂಗಲಕರವಾದ ಶಿವವಿಲಾಸಗಳು ಸೂರ್ಯನ ಅಪ್ರತಿಹತವಾದ ಅವಿಶ್ರಾಂತವಾದ ಚಲನೆಯಂತೆ ಸಾಗುತ್ತಿದ್ದರಿಂದ ಆ ಪುರವು ಶಿವಮಯವಾಗಿ ರಂಜಿಸುತ್ತಿತ್ತು. ಇಂತೆಸೆವ ಆ ಶಿವಪುರದಲ್ಲಿ ಧನಾಢ್ಯನು, ದಾನಶೌಂಡನು, ಸತ್ಯನಿಷ್ಠನು, ಮತ್ತು ಅತುಲವಾದ ಶಿವಭಕ್ತಿ ಸಂಪತ್ತಿನಿಂದ ಅಲಂಕೃತನು ಆದ ಅಮರನೀತಿ ಎಂಬ ಮನೋಹರವಾದ ಹೆಸರನ್ನು ತಳೆದ ಶೈವನು ಒಪ್ಪುತ್ತಿದ್ದನು. ಆ ಶಿವದ್ವಿಜನು ಲಾವಣ್ಯವತಿಯಾದ ಕನಕಮಾಲೆ ಎಂಬ ಅನುಕೂಲೆಯಾದ ಸಹಧರ್ಮಚಾರಿಣಿಯಿಂದಲೂ, ಗುಣಮಣಿ ಭೂಷಿತನಾದ ಧನದತ್ತನೆಂಬ ಮಗನಿಂದಲೂ ಸಂಸಾರವನ್ನು ಸಾಗಿಸುತ್ತ ತನ್ನ ಸುತನಿಗೆ ಹೊಸ ಬಟ್ಟೆಗಳ ವ್ಯವಹಾರವನ್ನು ಹಚ್ಚಿಕೊಟ್ಟು ಗುರುಲಿಂಗ ಜಂಗಮ ಭಕ್ತನಾಗಿ ಖ್ಯಾತಿವಂತನಾಗಿ ಅಸಮೋತ್ಸಾಹ ಭರಿತನಾಗಿ

ಶಿವಾನಂದದಲ್ಲಿ ಲೋಲಾಡುತ್ತ ಲಿಂಗದ ಮುಖವೇ ಜಂಗಮವೆಂದು ತಿಳಿದು ಆ ಪರಿಯಾದ ಭಕ್ತಿಭಾವವು ಘನವಾಗಿ ಬೆಳೆದು ಆ ರೀತಿಯಾಗಿ ಸತ್ಕ್ರಿಯಾಚರಣೆಗಳನ್ನು ಆಚರಿಸುತ್ತಿದ್ದನು. ಈ ರೀತಿಯಾದ ಶಿವಾರ್ಪಣ ವೈಭವದಿಂದಿರುತ್ತಿರಲು ಕೆಲವು ಸಂವತ್ಸರಗಳು ಸಾಗಲು ಆತನಿಗೆ ಒಂದು ಶುಭಯೋಚನೆಯು ಉಂಟಾಯಿತು. ಈವರೆಗೆ ಹಿಂದಿನ ಭಕ್ತರು ಲಿಂಗಮೂರ್ತಿಗೂ ಗುರು-ಜಂಗಮರಿಗೂ, ಪತ್ರ-ಪುಷ್ಪಾದಿಗಳನ್ನು ಧರಿಸಿ ಪೂಜಿಸಿರುವರು. ಆದರೆ ನಾನು ದಿವ್ಯ ವಸ್ತ್ರಗಳಿಂದ ಶ್ರೇಷ್ಠವಾದ ಪೂಜೆಯನ್ನು ಮಾಡುವೆನೆಂದು ಬಗೆದನು. ತಿರುನಲ್ಲೂರಾಧಿಪತಿಯಾದ ಶಿವನಿಲಯಕ್ಕೆ ಬಂದು ಶುಚಿರ್ಭೂತನಾಗಿ ಮಹಾಭಕ್ತಿಯಿಂದ ಶಂಕರ ಸನ್ನಿಧಾನದಲ್ಲಿ ಸಕ್ರಮವಾಗಿ ಆಸನವನ್ನಿಕ್ಕಿ ಆಗಮೋಕ್ತವಾಗಿ (ಪ್ರೇಮದಿಂದ ಸ್ಮರಿಸುವವರಿಗೂ, ಸದ್ಭಕ್ತಿಯಿಂದ ಧರಿಸುವವರಿಗೂ ಶುಭವನ್ನುಂಟು ಮಾಡತಕ್ಕ) ವಿಭೂತಿ-ರುದ್ರಾಕ್ಷಗಳನ್ನು ಧರಿಸಿ ನಿರ್ಮಲೋದಕದಿಂದ ಮಜ್ಜನಂಗೈದು ಭಸ್ಮಗಂಧಾಕ್ಷತೆಗಳಿಂದ ಸಮಂತ್ರಕವಾಗಿ ಅಷ್ಟೋತ್ತರಶತ ಬಿಲ್ವದಳ, ನವೀನ ಕುಸುಮ ಪಲ್ಲವಾದಿಗಳನ್ನು ಧರಿಸಿ ಧೂಪದೀಪಾದಿಗಳನ್ನು ಸಮರ್ಪಿಸಿ ಕರ್ಪೂರವನ್ನು ಬೆಳಗಿ ನೀರಾಜನವನ್ನು ಮಾಡಿ ನೈವೇದ್ಯ ತಾಂಬೂಲಾದಿಗಳನ್ನೊಪ್ಪಿಸಿ ಅನೇಕ ನವೀನವಾದ ಚಿತ್ರತರವಾದ ಹೊಸಹೊಸ ಬಟ್ಟೆಗಳನ್ನು ಮಹಾಲಿಂಗಮೂರ್ತಿಗೆ ಪೂಜೆಗಟ್ಟಿ? ಅಷ್ಟತನುಗಳಿಂದೊಪ್ಪುತ್ತ, ಕಾರ್ಯಗೌರವಕ್ಕಾಗಿ ಸಮಯೋಚಿತವಾಗಿ ವಿರಾಡ್ರೂಪಿಯೂ, ಅಣುಮೂರ್ತಿಯೂ, ಅನಂತರೂಪಿಯೂ, ಇಚ್ಛಾಮೂರ್ತಿಯೂ ಆದರೂ ಲಿಂಗಮೂರ್ತಿಯಾಗಿ ಸದ್ಭಕ್ತರ ಅರ್ಚನೆಯನ್ನು ಕೈಕೊಳ್ಳುವ ಶಿವಲಿಂಗ ಮೂರ್ತಿಯನ್ನು ನೋಡಿ ಹರ್ಷಾತಿರೇಕವನ್ನು ಹೊಂದಿ ಶಿವಮಂತ್ರವನ್ನು ವಿಧ್ಯುಕ್ತವಾಗಿ ಜಪಿಸಿ ನಲಿದಾಡಿಪಾಡಿ ಪರಮೋತ್ಸಾಹಭರಿತನಾಗಿ ಬಾಷ್ಪೋದಕವನ್ನು ಸುರಿಸುತ್ತ ಪುನಃ ಪುನಃ ಪ್ರದಕ್ಷಿಣೆಯನ್ನು ಗೈದು ಸಾಷ್ಟಾಂಗವಾಗಿ ನಮಸ್ಕರಿಸಿ ಪ್ರೇಮವಶದಿಂದ ಕೈಗಳನ್ನು ಮುಗಿಯುತ್ತ ದೇವಾ ಈ ರೀತಿಯಾದ ವಸ್ತ್ರಾರ್ಚನೆಯನ್ನು ಯಾರಾದರೂ ಮಾಡಿರುವರೋ ಎಂದು ಬಿನ್ನವಿಸುತ್ತ ಸಂತಸವನ್ನು ಹೊಂದಿ ನಿಜಗೃಹಕ್ಕೆ ಬಂದು ಜಂಗಮಾವಳಿಗೂ ಇನ್ನಿತರ ಅರ್ಹರಾದ ಯಾಚಕರಿಗೂ ಅವರವರ ಇಚ್ಛೆಗಿಂತಲೂ ಹೆಚ್ಚಾಗಿ ವಸ್ತ್ರಗಳನ್ನು ಕೊಡುತ್ತ ಅವರನ್ನು ಸಂತೋಷಪಡಿಸುತ್ತ ಇರುತ್ತಿದ್ದನು. ಶ್ಲಾಘನೀಯವಾದ ಈ ರೀತಿಯ ಶಿವಾರ್ಪಣ ವಿಲಾಸಯುಕ್ತನಾಗಿ ವಸ್ತ್ರದಾನವನ್ನು ಮಾಡುವ ಕೊಡಗೈ ದೊರೆಯಾಗಿ ಎಷ್ಟು ಬಟ್ಟೆಗಳನ್ನು ಕೊಟ್ಟರೂ ಎಳ್ಳಷ್ಟು ಬೇಸರಿಯದೆ ಮತ್ತೆ ಮತ್ತೆ ಬೇಡುವವರು ಹೆಚ್ಚೆಚ್ಚಾಗಿ ಬರಲೆಂದೂ ಬಯಸುತ್ತಿದ್ದನು. ಈ ಪರಿಯಾಗಿ ಶಿವಭಾವನೆಯು ಘನವಾಗಿ, ಅಸಮವಾಗಿ ಪರಿಣಮಿಸಿ ಕಥಾಪುರುಷನು ನಿರ್ಮ

ಲಾಂತಃಕರಣಪೂರ್ವಕವಾಗಿ ಸರಳ ಮನಸಿನಿಂದ ನಿರಪೇಕ್ಷ ಬುದ್ಧಿಯುತನಾಗಿ ಮಾಡುತ್ತಿರುವ ವಸ್ತ್ರದಾನ ಮಹಿಮೆಯಿಂದ ಪರಶಿವಮೂರ್ತಿಯು ಕೈಲಾಸದಲ್ಲಿ ಪ್ರಮಥರೊಡನೆ ಒಡ್ಡೋಲಗದಲ್ಲಿರುವಾಗ ತಾನು ಉಟ್ಟಿರುವ ವಸನವು ಗಜ ಚರ್ಮವಾಗದೆ ಮನೋಹರವಾದ ಬಟ್ಟೆಯಾಗಿ ಪರಿಣಮಿಸಿತ್ತು. ಹಾಗೂ, ಜಗದಂಬೆಯು ಧರಿಸಿದ ವಸ್ತ್ರವಾದರೂ ದಿವ್ಯಾಂಬರವೇ ಆಗಿತ್ತು. ಮತ್ತ ಗಣಸಮೂಹವು ಮಹಾಘನವಾದ ಮತ್ತು ಶೋಭಾಯಮಾನವಾದ ವಸನ ಗಳಿಂದ ಕಂಗೊಳಿಸುತ್ತಿತ್ತು. ಇದನ್ನೆಲ್ಲ ನೋಡಿ ಪರಮಾತ್ಮನು ವಿಸ್ಮಯಪಟ್ಟು ನಮ್ಮ ಶರಣನ ಭಕ್ತಿಯನ್ನು ನೋಡಬೇಕೆಂದು ಬಗೆದನು. ಚರಿತ್ರನಾಯಕನ ಭಕ್ತಿಯನ್ನು ತೂಗಿನೋಡಿ ಅವನ್ನು ಜನಸಮುದಾಯಕ್ಕೆ ಪ್ರಕಟವಮಾಡಬೆ ಕೆಂದು ವೃದ್ಧತಾಪಸಿಯ ವೇಷವನ್ನು ತಾಳಿ ಜೋಳದೇಶಕ್ಕೆ ಕಥಾನಾಯಕ ನಿರುವ ಸ್ಥಳಕ್ಕೆ ಬರುತ್ತಿದ್ದನು.

ನಿತ್ಯದಂತೆ ತಿರುನಲ್ಲೂರಾಧಿಪತಿಯ ನಿಲಯಕ್ಕೆ ಹೋಗಿ ಪ್ರೇಮದಿಂ ದರ್ಶಿಸಿ ಮನೆಗೆ ಬಂದು ಮಾಗಿಯ ಕಾಲವಾದ್ದರಿಂದ ಶೀತ ಪರಿಹಾರಕ್ಕೋಸುಗ ಬೇಡುವವರಿಷ್ಟದಂತೆ ಅನೇಕ ವಸ್ತ್ರಗಳನ್ನು ಕೊಡುತ್ತಾ ಸಂಭ್ರಮದಿಂದಿರು ವಾಗ ಮಹೇಶನು ಅತಿವೃದ್ಧ ಮುನಿವೇಷದಿಂದ ಅತ್ಯಲ್ಪವಸನಯುಕ್ತನಾಗಿ ಚರಿತ್ರಪುರುಷನು ವಸ್ತ್ರದಾನವನ್ನು ಮಾಡುತ್ತಿರುವ ರಾಪಿಗೆ ಬಂದು ವಸನ ಗಳನ್ನು ಇಸಕೊಳ್ಳುತ್ತಿರುವ ಜನವೃಂದದಲ್ಲಿ ಸೇರಿ ಅಮರ ನೀತಿಯನ್ನು ನೋಡಿ ಶಿವಭಕ್ತ ಸಮೂಹಕ್ಕ ಯಥೇಚ್ಛವಾಗಿ ಪಟ್ಟಾವಳಿಗಳನ್ನು ಕೊಟ್ಟು ತೃಪ್ತಿಪಡಿಸಿ ಸಂತೋಷ ಹೊಂದುತ್ತಿರುವದನ್ನು (ಶಂಕರನು) ಕಂಡನು. ಚಳಿಯಲ್ಲಿ ನಡಗು ತ್ತಿರುವ ನಮ್ಮ ಕೃತಕ ತಾಪಸಿಯನ್ನು ಚರಿತ್ರಪುಂಗವನು ಕಂಡು ಆತನ ಪಾದ ಕ್ಕೆರಗಿ ಉಡುಗರಗಳನ್ನು ವಿನಯದಿಂದ ಆತನೆಡೆಯಲ್ಲಿಟ್ಟು ಈ ಹೊಸ ವಸ್ತ್ರ ಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಲು ತಾಪಸಿಯುಃ—ನಾನು ಭಿಕ್ಷುಕನು ನನಗೆ ನಿನ್ನ ವಸ್ತ್ರರಾಶಿಗಳಿಂದೇನು ಪ್ರಯೋಜನವು?

ಭಗವಂತನನ್ನು ಸ್ಮರಿಸುತ್ತ ಕೈಮುಗಿದುಕೊಂಡು ನಿಂತಿರುವ ಕಥಾನಾಯ ಕನನ್ನು ನೋಡಿ ಪುನಃ ಮುನಿಯು—ನಿನ್ನ ಉಡುಗರೆಯು ಹಾಗೂ ನೀನು ಕೊಡುವ ಧನವು ನನಗೆ ಬೇಡ; ಅದು ನನಗೆ ಇಷ್ಟವಿಲ್ಲ. ಇಷ್ಟೆ ಅಲ್ಲ. ಅದ ರಿಂದ ನಮಗೆ ಅರಿಷ್ಟವಾಗುವದು. ಅಭ್ಯಾಗತನಾದ ಜಂಗಮನು ಹೀಗೆನ್ನಲು ಕಥಾಪುರುಷನು—ಎಲೆ ದೇವಾ ನಿಮಗೆ ಪಟ್ಟಾವಳಿ ಬೇಡವಾದರೆ ಮತ್ತಾವುದು ತಮ್ಮ ಬಯಕೆಯು ಅದನ್ನು ನಿರೂಪಿಸಿರಿ ಎಂದು ಪುನಃ ಕೈಗಳನ್ನು ಜೋಡಿಸಿ ಕೊಂಡು ನಿಂತನು. ಆಗ ನಮ್ಮ ನೂತನ ಜಂಗಮವರ್ಯನು—ಪರಮ ಶಿವೈಕ್ಯನೇ ನೀನು ಪ್ರೀತಿಯಿಂದಲೇ ವಸನ ಧನಗಳನ್ನು ಕೊಡುವ ಅಭಿ

ಲಾಷೆಯು ಗೋಚರವಾಯಿತು. ಆದರೆ ನಮಗೆ ಇಂದು ಔತಣಕ್ಕಾಗಿ ಹೋಗ ಬೇಕಾದ ಕಾರ್ಯಗೌರವವು [?] ಇರುವದು; ನನ್ನ ಹತ್ತರ ಬಂಧುರತರವಾದ ಕೋಪಣವು [ಅಂದರೆ ಲಂಗೋಟಿಯು] ಇರುವದು. ಅದನ್ನು ನೀನು ನಿನ್ನ ಮನೆಯಲ್ಲಿ ಜಾಗ್ರತೆಯಿಂದ ಭದ್ರವಾಗಿರಿಸಿ ನಾನು ತಿರುಗಿ ಬಂದಾಗ ಕೊಡ ಬೇಕೆಂದು ಹೇಳಿ ಪುನಃ ಈ ರೀತಿಯಾಗಿ ನುಡಿದನು. ದಾಸಿಯೇ ಈ ಕೌಪಿನದ ಪರಿಯು ಸಾಧಾರಣ ನರರ ಪದಾರ್ಥದಂತೆ ಅಲ್ಲ. ಇದು ಅಷ್ಟಸಿದ್ಧಿಯನ್ನು × ಈಯುವದು ಈ ರೀತಿಯಾಗಿ ಕೌಪೀನದ ಮಹಿಮೆಯನ್ನು ವರ್ಣಿಸಿ ಆ ಅಪೂರ್ವ ಭಿಕ್ಷುಕನು ಸಾಗಿದನು.

ನನ್ಯಾದಿಗಳಿಗೆ ಚೇತನವನ್ನು ನೀಡುವ ಹಾಗೂ ಪ್ರಾಣಿಗಳಿಗೆ ಉತ್ಸಾಹ ವಿಕಾಸವನ್ನು ಪಡೆಸುವ ರವಿಯು ಮುಳುಗಿದನು. ರಾತ್ರಿಕಾಲವು ಆವರಿಸಿತು. ರಾತ್ರಿ ಸಮಯವೆಂದರೆ ಸುಖವನ್ನುಂಟು ಮಾಡುವ ವೇಳೆಯು. ಚರಿತ್ರ ಪುರುಷನ ವಿಭವನ್ನು ಮುಂಚಿತವಾಗಿ ಸೂಚಿಸುವದಕ್ಕಾಗಿಯೊ ಎಂಬಂತೆ ನಿಶಾದೇವಿಯು ಸುಳಿದಾಡಹತ್ತಿದಳು. ಆಗಲೇ ನಮ್ಮ ಕಥಾನಾಯಕನು ನಿಜಮಂದಿರಕ್ಕೆ ಭರದಿಂದ ಬಂದು ನಡೆದ ಸಂಗತಿಯನ್ನೆಲ್ಲ ಸತಿ ಸುತರಿಗೆಲ್ಲ ವಿಸ್ತರಿಸಿ ತನ್ನ ಜವಳಿಯ ದಿಂಡಿನಲ್ಲಿ ಕೋಪಣವನ್ನು ಬಚ್ಚಿಟ್ಟು ಶಿವ ಶರಣ ಚರಿತ್ರವನ್ನು ಕೊಂಡಾಡುತ್ತ ರಾತ್ರಿಕಾಲವೆಲ್ಲ ಕಾಯ್ದರು. ಪೂರ್ವದ ಗಣವೃಂದವನ್ನು ಸ್ಮರಿಸುತ್ತ ಪ್ರಾತಃಕಾಲದಲ್ಲೆದ್ದು ಮಿಂದು ಶುಚಿಯಾಗಿ ದಿನ ಕ್ರಮದಂತೆ ತಿರುನಲ್ಲೂರಾಧಿಪನೆಡೆಗೆ ಬಂದು ಭಯಭಕ್ತಿಯಿಂದಾರಾಧಿಸಿ ನಾನಾ ವಿಧ ವಸ್ತ್ರಪೂಜೆಯನ್ನು ಮಾಡಿ ಬಹು ಸಂತೋಷಪಟ್ಟು ತನ್ನ ಜವಳಿಯ ಮನೆಗೆ ಬಂದು ಬಟ್ಟೆಗಳನ್ನು ಕೊಟ್ಟು ಶಿವಭಕ್ತರನ್ನು ತೃಪ್ತಿಗೊಳಿಸುತ್ತಿರುವಾಗ ಆ ಭಕ್ತರನ್ನೆಲ್ಲ ದಾಂಟುತ್ತಾ ವೇಗದಿಂದ ಆ [ಪೂರ್ವೋಕ್ತ] ತಾಪಸಿಯು ಬರುವದನ್ನು ಕಂಡು ಆ ಭಕ್ತರು ಈ ಯೋಗಿ ವೇಷದ ವ್ಯಕ್ತಿಯ ಉರುವಣೆಯೆಷ್ಟೆಂದು ನಗುತ್ತಿದ್ದರು ಹೀಗೆ ಭಕ್ತಸಮೂಹವು ತನ್ನನ್ನು ಕಂಡು ನಗುತ್ತಿರುವದನ್ನು ಕಂಡು ವೃದ್ಧ ಮುನಿಪನು ಕೋಪಿಸುತ್ತ—ಅಯ್ಯಾ ಭಕ್ತನೇ ಬೇಗನೆ ನನ್ನ ಕೌಪೀನವನ್ನು ಎಚ್ಚರದಿಂದ ತರಿಸಿಕೊಡು; ನನ್ನ ಜೊತೆಯ ತಪಸ್ವಿಗಳು ಶೀಘ್ರವಾಗಿ ಹೋಗುವರು. ಭವವನ್ನು ನೀಗಿ ಅಭವನನ್ನು ಕೂಡಿಕೊಳ್ಳಲನುವಾದ ನಮ್ಮ ವರಭಕ್ತನು ಆ ತಾಪಸಿಯ ಮಾತನ್ನು ಕೇಳಿ ಹಸಾದವೆಂದು ಹೇಳಿ ತಾನು ಬಚ್ಚಿಟ್ಟಿರುವ ಜವಳಿಯ ದಿಂಡನ್ನು ತರಿಸಿ ನೋಡುತ್ತಿರುವಾಗ (ಕೈಯೊಳಗಿನ ಪದಾರ್ಥವು ನೋಡ ನೋಡುವಷ್ಟರಲ್ಲಿ

---

× ೧. ಆರೋಗ್ಯ, ೨ ಕರ್ತವ್ಯದಕ್ಷತೆ, ೩. ಧನ, ೪ ಸಂತತಿ, ಶಿವಭಕ್ತಿ, ೬. ಶಿವಜ್ಞಾನ, ೭. ವೈರಾಗ್ಯ, ೮. ಮುಕ್ತಿ.

ಒಮ್ಮಿಂದೊಮ್ಮೆಲೆ ಅಡಗಿತೋ ಏನೊ ಎಂಬಂತೆ) ಆ ಕೋಪಣವು ಮಾಯವಾ ದದ್ದನ್ನು ನೋಡಿ ಆಶ್ಚರ್ಯಪಟ್ಟು ಬೆರಗಾಗಿ ಭಯಪಟ್ಟು ನೆರೆದ ಭಕ್ತರ ಸಮ್ಮುಖದಲ್ಲಿ ಉಳಿದ ಗಂಟುಗಳನ್ನೆಲ್ಲ ಸಹ ಬಿಚ್ಚಿನೋಡುತ್ತಿರುವಾಗ ಆ ಸಭೆ ಯಲ್ಲಿ ಶಿವಯೋಗಿ ವೇಷವನ್ನು ತಳೆದ ಶಂಕರನು:—ಜವಳಿಯ ಗಂಟುಗಳ ನ್ನೆಲ್ಲ ಬಿಚ್ಚಿ ಕೌಪವನ್ನು ಹುಡುಕುತ್ತಿರುವ ಭಕ್ತನೇ ಅಯ್ಯೋ ನನ್ನ ಕೌಪೀ ನವು ಎಲ್ಲಿ ಹೋಯಿತು? ನೀನು ವಸ್ತ್ರದಾನಿಗಳಲ್ಲಿ ಬಲ್ಲಿದನು. ಬೇಡಿದವರಿಗೆ ಅವರ ಇಚ್ಛಾನುಸಾರವಾಗಿ ಜವಳಿಯನ್ನು ಕೊಡುವವರಲ್ಲಿ ಮೇಲಾದವನು. ನನ್ನ ಕೋಪಣವನ್ನು ನಿನ್ನಲ್ಲಿಟ್ಟರೆ ನೀನು ಅಪಹರಿಸಲಿಕ್ಕಿಲ್ಲವೆಂದೆಣಿಸಿ ನಿನಗೆ ಕೊಟ್ಟರೆ ಮುಚ್ಚಿಟ್ಟುಕೊಂಡು ಈಗ ಕೊಡದೆ ಇರುವೆಯಾ? ಹೀಗೆ ಆಕ್ರೋಶ ದಿಂದ ನುಡಿದು ಜನರಲ್ಲಿ ದೂರು ಹೇಳುತ್ತಿರುವಾಗ ಚರಿತ್ರನಾಯಕನು:— ಶಿವನಾಣೆಯಾಗಿ ನೀನು ನನ್ನಲ್ಲಿ ಇಟ್ಟ ಕೋಪಣವು ಅಡಗಿಹೋಗಿದೆ. ಅದಕ್ಕೆ ಪ್ರತಿಯಾಗಿ ದಿವ್ಯ ವಸ್ತ್ರಗಳನ್ನು ಕೊಡುವೆನು. ಹೀಗೆನ್ನಲು ಮುನಿಪನು:— ನೀನು ಕೊಡುವ ತರತರದ ವಸ್ತ್ರಗಳಲ್ಲಿ ಯಾವೂ ನನ್ನ ಕೌಪಕ್ಕೆ ಸಾಟಿಯಾಗ ಲಾರವು; ನಾನು ಈತನಿಗೆ ಅದರ ವರ್ಣನೆಯನ್ನು ಮತ್ತು ಮಹತ್ತರವಾದ ಮಹಿಮೆಯನ್ನು ಬಿಚ್ಚಿ ಹೇಳಿದ್ದರಿಂದ ಅದಕ್ಕೆ ಮರುಳಾಗಿ ಅದನ್ನು ಈತನು ಕೊಡಲಾರದೆ ಇಟ್ಟುಕೊಂಡಿರುವನು. ಆದುದರಿಂದ ನನ್ನ ಕೋಪಣವು ದೊರೆಯದ ಬಳಿಕ ನನ್ನ ಶರೀರವನ್ನೇ ಬಿಡುವೆನು. ಹೀಗೆ ಕೊರಚಾಡಿ ಕಾಡುವ ಮುನಿಗೆ ಅಲ್ಲಿ ನೆರೆದ ಶಿವಭಕ್ತರು:—ಶಿವಭಕ್ತರಿಗೆ ಕೊಡಗೈ ದೂರ ಯಾಗಿರುವ ಈ ಸನ್ಯಾಸ್ಯನಿಗೆ ಈ ಪರಿಯಾಗಿ ಮನನ್ನು ನೋಯಿಸುವರೇ ನಿಮ್ಮ ಕೌಪದ ಪ್ರತಿಯಾಗಿ ಕೊಡುವ ಬಟ್ಟೆಯನ್ನು ತಗೆದುಕೊಳ್ಳಬಹುದು. ಸಭಾ ಜನರಿಗೆ ಮುನಿಪನು—ಆತನು ಕೊಡುವ ಬಟ್ಟೆಯು ನನ್ನ ಕೌಪೀನಕ್ಕೆ ಸರಿ ಹೋಲುವದೇ? ಈ ಜಗತ್ತಿನಲ್ಲಿ ಜನರು ದಾನಿಯ ಪರವಾಗಿ ಮಾತನಾಡು ವರು; ಆದರ ಅನಾಥನ (?) ಮಾತನ್ನು ಯಾರು ಕಿವಿಯಲ್ಲಿ ಹಾಕಿಕೊಳ್ಳು ವರು. ನನ್ನ ಬಂಧುರವಾದ ಕೌಪೀನಕ್ಕೆ ಕಲ್ಪವೃಕ್ಷವಾಗಲಿ ಅಥವಾ ಚಿಂತಾ ಮಣಿಯಾಗಲಿ ಇಲ್ಲವೆ ಕಾಮಧೇನುವಾಗಲಿ ಸರಿಯಾಗಬಹುದೇ? ಈ ರೀತಿ ಯಾಗಿ ಸಭಾಜನರನ್ನು ಸಹಾ ಜರಿದನು. ಸಭಾಜನರು.—ಈ ಪರಿಯಾಗಿ ಆಕ್ಷೇಪಗೊಳ್ಳುವವರನ್ನು ಮತ್ತು ಕೋಪಗೊಳ್ಳುವವರನ್ನು ನಾವು ಈ ಹಿಂದೆ ನೋಡಿಲ್ಲವೆಂದು ಹೇಳುತ್ತಿರುವಾಗ ಚರಿತ್ರನಾಯಕನು:— ನನ್ನೊಡೆಯರು ನನಗೆ ಕೊಟ್ಟಿರುವರು; ನಾನು ತೆಗೆದುಕೊಂಡಿರುವೆನು; ಅವರು ಕಾಡುವರು ನಾನು ಕಾಡಿಸಿಕೊಳ್ಳುವೆನು; ಹೊತ್ತು ಹೋಗುವದು. ನೀವು [ಅಂದರೆ ಸಭಿ ಕರು] ಶಿವಾರ್ಚನೆಗಾಗಿ ಹೋಗಿರಿ. ಎನ್ನಲು ಕೆಲವರು:—ಈ ಕಾರ್ಯವು

ನಮ್ಮಿಂದ ಬಗೆಹರಿಯುವದಿಲ್ಲೆಂದು ತೆರಳಿದರು; ಉಳಿದವರು ಏನು ಸಂಗತಿಯೋ ಶಿವನೇಬಲ್ಲನೆಂದು ಹೋಗಲಿಕ್ಕೆ ಅಪೇಕ್ಷಿಸದೆ ಅಲ್ಲಿಯೇ ನಿಂತುಕೊಂಡು ಬಿಟ್ಟರು. ಆಗ ಮುನಿಯು ನೀನು ಕೊಡುವದಿಲ್ಲೆಂದು ಹಟತೊಟ್ಟರೆ ನಾನು ಬಿಡುವದಿಲ್ಲೆಂದು ನನ್ನ ಛಲವು (ಅದೆ); ಆದ್ದರಿಂದ ನನ್ನ ಕೌಪೀಣವನ್ನು ತೂಗಿ ಅದಕ್ಕೆ ಸಮವಾಗಿ ವಸ್ತ್ರವನ್ನು ಕೊಡುವದೆಂದು ಆರ್ಭಟಿಸಲು ಅದಕ್ಕೆ ಸಭಾಜನರೊಪ್ಪಿ ಸಂತೋಷಪಟ್ಟು ಈ ನಿರ್ಣಯವು ಚನ್ನಾಗಿರುತ್ತದೆ. ಇದನ್ನು ಅನುಸರಿಸತಕ್ಕದ್ದೆಂದು ಉದ್ಗಾರ ತೆಗೆದರು. ಕಥಾನಾಯಕನು ಆನಂದದಿಂದ ಸಮ್ಮತಿಸಿ ಸೂಕ್ಷ್ಮವಾದ ತ್ರಾಸನ್ನು ತರಿಸಿ ಮುನಿಯ ಹತ್ತರ ಇದ್ದ ಇನ್ನೊಂದು ಕೌಪವನ್ನು ಇಸಕೊಂಡು ಅದರಲ್ಲಿಟ್ಟು ಎರಡನೇ ಪರಡಿಯಲ್ಲಿ ಜವಳಿಯನ್ನು ತರಿಸಿಟ್ಟು ತೂಗಿ ನೋಡಲು ಆ ತ್ರಾಸು ದೊಪ್ಪನೆ ಬಿದ್ದು ಮುರಿದು ಹೋಗಲು ಆಶ್ಚರ್ಯ ಪಟ್ಟನು. ಆಗ ಬಲವಾದ ಎರಡು ಕಂಬಗಳನ್ನು ನಡಿಸಿ ಒಳ್ಳೇ ಘಟ್ಟಿಮುಟ್ಟಾದ ದಂಡಿಗೆಯನ್ನು ತರಿಸಿ ದೊಡ್ಡ ದೊಡ್ಡ ಕೊಪ್ಪರಿಗೆಗಳನ್ನು ಪರಡಿಗಳನ್ನಾಗಿ ಮಾಡಿ ಒಂದು ಪರಡಿಯಲ್ಲಿ ಆಕೌಪೀಣವನ್ನಿಟ್ಟು ಇನ್ನೊಂದು ಪರಡಿಯಲ್ಲಿ ಜವಳಿಯನ್ನು ತರಿಸಿ ಒಟ್ಟುತ್ತಿದ್ದನು. ತನ್ನಲ್ಲಿರುವ ಜವಳಿಮುನಿಯ ವಸ್ತ್ರಗಳನ್ನೆಲ್ಲ ಇರಿಸಿದನು. ಆದರೆ ಆ ಪರಡಿಯು ಮೇಲಕ್ಕೇಳದಿರಲು ಈ ಅದ್ಭುತವನ್ನು ಸಭಾಜನರು ನೋಡಿ ದಂಗುಬಟ್ಟು ಇದು ಮಾಯದ ಕೌಪವೆಂದು ಚಿಂತಿಸುತ್ತಿದ್ದರು. ಇದೆಲ್ಲವನ್ನು ಚರಿತ್ರ ಲಲಾಮನು ವಿಚಾರಮಾಡಿ ನೋಡಿ ಇದು ಶಿವನ ಕೃತಿಯಲ್ಲದೆ ಬೇರೊಂದಿಲ್ಲವೆಂದು ಬಗೆದು ಇದಕ್ಕಾಗಿ ಪುತ್ರರನ್ನು, ನಿಜರಮಣಿಯನ್ನು ಕಡೆಗೆ ತನ್ನ ಶರೀರವನ್ನೇ ತೂಗಿಕೊಟ್ಟು ಈ ಅಸಾಧಾರಣವಾದ ಮುನಿಯನ್ನು ಮೆಚ್ಚಿಸುವನೆಂದು ನಿರ್ಧರಿಸಿದನು. ಪತ್ನಿಯನ್ನೂ ಮಗನನ್ನೂ ಕರೆಯಿಸಿಕೊಂಡು ಅವರಿಗೆ ಈ ದಿವಸ ನಿತ್ಯದ ವ್ಯಾಪಾರಕ್ಕಿಂತಲೂ ವಿಶೇಷ ವ್ಯವಹಾರವು ಸಂಘಟಿಸಿರುವದು ಎಂದು ಹೇಳಿ ಶಿವನ ಕೌಪಕ್ಕೆ ನಾವು ಭರ್ತಿಮಾಡಿ ಕೊಡಬೇಕಾಗಿದೆ; ಇದಕ್ಕಾಗಿ ಅಂಜಲಾಗದೆಂದು ಹೇಳುತ್ತ ಆತ್ಮಜನಾದ ಧನದತ್ತನಿಗೆ ವಿಭೂತಿ ರುದ್ರಾಕ್ಷಿಗಳಿಂದಲಂಕರಿಸಿ ಭಕ್ತ್ಯಾವೇಶದಿಂದ ಆ ಜವಳಿಯನ್ನೊಟ್ಟಿದ ಕೊಪ್ಪರಿಗೆಯ ಪರಡಿಯಲ್ಲಿ ಮಗನನ್ನೂ ಕೂಡ್ರಿಸಿದನು. ಪರಡಿಯು ಸ್ವಲ್ಪ ಮಾತ್ರ ಮೇಲಕ್ಕೇಳಲು ಭಕ್ತನು ಸಂತೋಷಪಟ್ಟು ನಾನು ಇನ್ನು ಹೆದರನೆಂದು ಹೇಳಿ ತನ್ನ ಕಾಂತಾಮಣಿಯನ್ನು ಅದೇ ಪರಡಿಯಲ್ಲಿ ಹತ್ತಿಸಿ ತೂಕವು ಸರಿಬಾರದಿದ್ದರೆ ನಾನು ಸಹ ತಕ್ಕಡಿಯನ್ನೇರುವೆನೆಂದು ಪ್ರತಿಜ್ಞೆಗೈದು ತನ್ನ ವಲ್ಲಭೆಯನ್ನು ವಸ್ತ್ರಾಭರಣಗಳಿಂದಲಂಕರಿಸಿ ಆ ಪರಡಿಯಲ್ಲಿ ಮಂಡಿಸಿದನು. ಆಗ ಆ ಪರಡಿಯು ಮತ್ತೆ ಸ್ವಲ್ಪ ಮೇಲಕ್ಕೆ ಬಂದಿತು. ಅದನ್ನು ನಮ್ಮ ಚರಿತ್ರ ಪುಂಗವನು ಕಂಡು ನಲಿದಾಡುತ್ತ ಮುನಿಪನಿಗೆ ಕೈಮು

ಗಿಯುತ್ತ ನಾನು ಶಿವಾರ್ಪಣ ಮಾಡುವ ಪಟ್ಟಾವಳಿ ಪೂಜೆಯು ಇಂದು ಸಂಪೂರ್ಣವಾಗುವದೆಂದು ನೆರೆದ ಶಿವಭಕ್ತರಿಗೆ ಪ್ರೇಮಾತಿಶಯದಿಂದ ಪೊಡವಟ್ಟು ಭಕ್ತಿರಸ ವಿಶೇಷವಾಗಿ ಉಬ್ಬುತ್ತ ಆ ಮಹಾ ಚಿಂತಾಲಿನ ಹತ್ತರ ಬಂದು ಶಿವ ಗಣ ಸಮೂಹವನ್ನು ಮರಳಿ ಮರಳಿ ಸ್ಮರಿಸುತ್ತ ಪರಡಿಯನ್ನೇರಲು ತಟ್ಟನೆ ಆ ತ್ರಾಸಿನ ಮುಳ್ಳು ನಮವಾಗಿ ಬಂದು ಪರಡಿಗಳು ಸರಿಯಾಗಿಹೋದವು. ಜನರೆಲ್ಲರು ಬೆರಗಾದರು; ದೇವತೆಗಳು ಅಚ್ಚರಿಪಟ್ಟರು. ಕಪಟರೂಪವನ್ನು ಧರಿಸಿದ ಯೋಗಿವರನು ವೃಷಭವಾಹನನಾಗಿ ನಿಜರೂಪದಿಂದ ಮೆರೆದನು. ಸಕಲ ಬ್ರಹ್ಮಾಂಡಕ್ಕೆ ಅಧಿಪತಿಯಾದ ಮಹೇಶನು ತನ್ನ ಭಕ್ತರು ತನಗೆ ಸರಿಯಾದರೆಂದು ಜಗತ್ತಿಗೆ ತೋರ್ಪಡಿಸಿದನು. ನಿರ್ಜರರು ಅಮರನೀತಿಗಳ ಮೇಲೆ ಹೂಮಳೆಯನ್ನು ಕರೆದರು. ಸದ್ಭಕ್ತಲಲಾಮನು ಸಾಂಬನನ್ನು ಕಂಡು ಕ್ಷಣಕ್ಷಣಕ್ಕೆ ಮಣಿಯುತ್ತ ಆನಂದಸಾಗರದಲ್ಲಿ ಲೋಲಾಡುತ್ತ ಈಶನನ್ನು ಪರಿಪರಿಯಾಗಿ ಸ್ತುತಿಸುತ್ತ ಹಿಗ್ಗುತ್ತಿರಲು ಆತನ ಮಹತ್ತರವಾದ ಭಕ್ತಿಗೆ ಪರಮಾತ್ಮನೊಲಿದು ಆ ತಕ್ಕಡಿಯ ಪರಡಿಯನ್ನೆ ಪ್ರಕಾಶಮಯವಾದ ಪುಷ್ಪಕ ವಿಮಾನವನ್ನಾಗಿ ಮಾಡಿ ನಮ್ಮ ಶ್ರೇಷ್ಠ ಭಕ್ತನಿಗೂ ಆತನ ಸತಿಸುತರಿಗೂ ಗಣಪದವಿಯನ್ನು ಅನುಗ್ರಹಿಸಿದನು. ಕರುಣಾನಿಧಿಯಾದ ನಾಗೇಂದ್ರ ಕುಂಡಲನು ಪಾಠಕ ಮಹಾಶಯರಲ್ಲಿ ಇಂಥ ಅಮೋಘವಾದ ಭಕ್ತಿಯನ್ನು ಆಶೀರ್ವದಿಸಲೆಂದು ಆ ದಯಾಮಯನಾದ ಶರ್ವನನ್ನು ಲೇಖಕನು ಪ್ರಾರ್ಥಿಸುವನು.



ಓಂ.

# ೩೨. ಕಲಿಕಂಭನು.



ಚರವೇಷಮಂ ತಳೆದ ಚರನ ಚರಣವ ತೊಳೆಯ । ದಿರೆ ತನ್ನ ಸತಿಯ
ಕರವರಿದ ಕಲಿಕಂಭ । ರಿರಿಸ ರಿನ್ನುವನೆ ಸುಖದಲ್ಲಿ ॥

[ಶ್ರೀ ನಿಜಗುಣರು]



ಅಷ್ಟೈಶ್ವರ್ಯ ಸಂಪದ್ಯುಕ್ತವಾದ ಮುಕ್ತ್ಯಂಗನೆಯ ವಿಲಾಸಸ್ಥಾನವೆಂಬಂತೆ ಮೆರೆಯುವ ಚೋಳ ಧರಣಿಯು ಆರ್ಯಾವರ್ತದ ದಕ್ಷಿಣದಲ್ಲಿ ಕಂಗೊಳಿಸುತ್ತಿತ್ತು. ಇಂತೆಸೆವ ಆ ನಾಡಿನಲ್ಲಿ ತಿರುಮರೆಯೆಂಬ ಸತ್ಪುರವು ಅನಂತನ ಕಟಾಕ್ಷದಿಂದ ರಂಜಿಸುತ್ತಿತ್ತು. ಆ ಮನೋಹರವಾದ ಪಟ್ಟಣದ ಸೊಬಗನ್ನು ವರ್ಣಿಸಲು ಯಾರು ತಾನೆ ಉತ್ಸಾಹವನ್ನು ಹೊಂದಲಿಕ್ಕಿಲ್ಲ? ಆ ಸ್ಥಳವು ಕಂತುಹರನಾಲಯಗಳಿಂದಲೂ, ಸದ್ವರ್ತನವೇ ಪ್ರಧಾನವಾಗುಳ್ಳ ಪ್ರಜರಿಂದಲೂ ಲೌಕಿಕ, ಧಾರ್ಮಿಕ, ಮಾನಸಿಕ, ಆಧ್ಯಾತ್ಮಿಕ ಮುಂತಾದ ಅನೇಕ ಬಗೆಯ ಸದ್ವಿಚಾರಪರಿಪ್ಲುತರಾದ ಜನ ಸಮೂಹದಿಂದಲೂ, ಭೂಮಿಯ ಖನಿಜವನ್ನು ಮತ್ತು ಭೂಸಾರವನ್ನು ಅನುಭವಿಸುವ ಉದ್ಯಮಶೀಲರಿಂದಲೂ, ಪರಾವಲಂಬನೆ ಇಲ್ಲದಿರುವ ಮೇಧಾವಿಗಳಾದ ಉದ್ಯೋಗತತ್ಪರರಿಂದಲೂ, ಸದ್ಭಕ್ತ ತಿಂತಿಣಿಯಿಂದಲೂ, ಇನ್ನೂ ಅನೇಕ ಸಭ್ಯ ಸಾತ್ವಿಕ ಸ್ತ್ರೀಪುರುಷರಿಂದಲೂ ತುಂಬಿ ತುಳುಕುತ್ತ ಶೋಭಾಯಮಾನವಾಗಿ ಒಪ್ಪುತ್ತಿತ್ತು.

ಆ ಚೆಲ್ವಾಗಪುರದಲ್ಲಿ ಮನ್ನೆಯ ವಂಶದಲ್ಲಿ ಜನಿಸಿದ ವೀರಧೀರನಾದ ಈಶ್ವರಾನುಗ್ರಹಕ್ಕೆ ಪಾತ್ರನಾದ ಸಕಲ ಸೌಖ್ಯಗಳಿಂದ ಪೂರಿತನಾದ ಕಲಿಕಂಭನಾಮಕ ಶಿವಪ್ರೇಮಿಯಾದ ಪರಭಕ್ತನು ಪ್ರಕಾಶಿಸುತ್ತಿದ್ದನು. ಸದ್ಬೋಧೆಯಿಂದಲೋ ಅಥವಾ ಲೋಹಚುಂಬಕವು ತನ್ನ ಆಧೀನಕ್ಕೊಳಪಟ್ಟ ವಸ್ತುಗಳನ್ನು ಬಲವತ್ತರವಾಗಿ ಸೆಳೆದುಕೊಳ್ಳುವಂತೆ ಸದಾಚರಣೆಯನ್ನು ಕೃತಿಯಲ್ಲಿ ತಂದು ಜನತೆಯನ್ನು ಸನ್ಮಾರ್ಗದಲ್ಲಿ ಸಹಜವಾಗಿ ತರುವ ಮಹಾತ್ಮರ ಸಹಚರ್ಯದಿಂದಲೋ ಅಥವಾ ಸಂಚಿತಪುಣ್ಯದಿಂದಲೋ ಅಥವಾ ದೃಢತರವಾದ ಹಿಂದಿನ

ವಾಸನಾ ಬಲದಿಂದಲೋ ನಮ್ಮ ಕಥಾನಾಯಕನಿಗೆ ಶಿವಭಕ್ತರಿಗೊಪ್ಪುವ ಅಷ್ಟಾವರಣಗಳಲ್ಲಿಯೂ, ಹಾಗೂ ಪಂಚಾಚಾರಗಳಲ್ಲಿಯೂ ಭಕ್ತಿಯು ಚನ್ನಾಗಿ ಬೇರೂರಿತ್ತು. ಸದ್ವರ್ತನಶೀಲನಾಗಿ ತನಗೆ ಪ್ರಭುವು ಅನುಗ್ರಹಿಸಿದ ಸಂಪತ್ತನ್ನು ಆಸ್ತಿಕ ಮಹಾಶಯರು ಒಪ್ಪುವಂತೆ ವಿನಿಯೋಗಿಸುತ್ತಿದ್ದನು.

ಗುರುಹಿರಿಯರು ತಮ್ಮ ಶಿಷ್ಯ-ಮಕ್ಕಳ ಮೇಲೆ ತೋರಿಸುವ ಪ್ರೀತಿಗೆ ವಾತ್ಸಲ್ಯವೆಂದು ಕರೆಯುವರು. ಚಿಕ್ಕವರು ವರಿಷ್ಠರಾದ ಪೂಜ್ಯರಲ್ಲಿ ಇಟ್ಟಿರುವ ಅನುರಾಗಕ್ಕೆ ಭಕ್ತಿಯೆಂದು ಸನಾತನ ಕಾಲದಿಂದಲೂ ಪ್ರಸಿದ್ಧವಾಗಿದೆ. ಯಾವ ವ್ಯಕ್ತಿಯಲ್ಲಿರುವ ಪ್ರೇಮವಾದರೂ ಸಹಜವಾದುದು, ನಿರ್ದುಷ್ಟವಾದುದು, ನಿಷ್ಕಪಟವಾದುದು, ಆದರೆ ಮಾತ್ರ ಪರಸ್ಪರ ಹಿತವು, ನಿಸ್ಸಂಶಯವಾಗಿ ಘಟಿಸುವದು. ಲಿಂಗ ಮುಖವೇ ಜಂಗಮವೆಂದು ನೆರೆ ನಂಬಿದ ನಮ್ಮ ಕಥಾ ಪುರುಷನಿಗೆ ನಿಷ್ಕಲಂಕವಾದ ಮತ್ತು ನಿಸ್ಸೀಮವಾದ ಭಕ್ತಿಯು ಜಂಗಮಾವಳಿಯಲ್ಲಿ ಘನವಾಗಿ ಅಳವಟ್ಟಿತ್ತು.

ಕಾಲವರಿತು ಜಂಗಮರಿಗೆ ಶೀತೋಷ್ಣ ಜಲದಿಂದ, ಬೇಸಿಗೆಯಲ್ಲಿ ಪನ್ನೀರಿನಿಂದ, ಚಳಿಗಾಲದಲ್ಲಿ ಉಷ್ಣೋದಕದಿಂದ ಮಜ್ಜನವನ್ನು ಮಾಡಿಸಿ ಅವರ ಇಚ್ಛಾನುಸಾರವಾಗಿ ವಸ್ತ್ರಾದಿಗಳನ್ನು ಪೂರೈಸುತ್ತ ಅವರ ಬಯಕೆಯಂತೆ ಒಡವೆಗಳನ್ನು ಕೊಡುತ್ತ, ಸುಗಂಧಾದಿ ಲೇಪನಗಳನ್ನರ್ಪಿಸುತ್ತ, ಅವರಿಷ್ಟದಂತೆ ಪಕ್ವಾನ್ನಗಳಿಂದ ಲಿಂಗಾರ್ಚನೆಯಾಗುತ್ತಲೆ ತೃಪ್ತಿಗೊಳಿಸಿ ಶಿವಗೀತೆ ಸಂಗೀತಾದಿಗಳಿಂದ ಸಂತೋಷಗೊಳಿಸಿ ವಾಹನಾದಿಗಳನ್ನು ಕೊಡುತ್ತ ಅವರಿಗೆ ಸರಿಯಾದ ದಾಂಪತ್ಯಾನುಕೂಲತೆಯನ್ನು ಒದಗಿಸಿಕೊಡುವದರಲ್ಲಿ ಆತುರನಾಗಿದ್ದನು. ಈ ರೀತಿಯಾಗಿ ಎಷ್ಟೋ ವರ್ಷಗಳಿಂದಲೂ ಶಿವಾರ್ಪಣಧುರಂಧರನಾಗಿ ಕರ್ತವ್ಯದಕ್ಷತೆಯಿಂದಾಗುವ ತೃಪ್ತಿಯ ವಿಲಾಸ ಸುಖವನ್ನು ಆದಿಪುರುಷನೆಂದು ಭಕ್ತೋದ್ಧಾರಕನೆಂದು ಪ್ರಸಿದ್ಧನಾದ ಕಾಲಾತೀತನಾದ ಶಂಭುವಿಗೆ ನಿವೇದಿಸುತ್ತ ದಾಸೋಹಂಭಾವದಿಂದ ಜಂಗಮ ಭಕ್ತನಾಗಿ ಉಚಿತ ಸಮಯದಲ್ಲಿ ಸತ್ಪಾತ್ರದಲ್ಲಿ ಮನವಾರೆ ಧನವನ್ನೀಯುತ್ತಾ ಛಾಯಾನುವರ್ತಿಯಾದ ಸತಿಯೊಡನೆ ಸತ್ಕಾಲಕ್ಷೇಪವನ್ನು ಮಾಡುತ್ತಿರುವಾಗ ಭಕ್ತಚಿಂತಾಮಣಿಯೆಂದು ಹೆಸರ್ಪಡೆದ ನಾಗಭೂಷಣನು ಚರಿತ್ರನಾಯಕನನ್ನು ಉದ್ಧರಿಸಬೇಕೆಂದು ಬಯಸಿದ್ದರಿಂದ ಶಿವಸಂಕೇತದಂತೆ ಒಂದು ವಿಚಿತ್ರತರವಾದ ಸಂಗತಿಯು ಜರಗಿತು ಅದೆಂತೆನೆ:—

ಸುಮಾರು ಇಪ್ಪತ್ತು ವರ್ಷದ ಮೊದಲು ನಮ್ಮ ಚರಿತ್ರ ನಾಯಕನ ಮನೆಯಲ್ಲಿ ಒಬ್ಬ ಆಳುಮಗನು ಇದ್ದವನು ಕಾರಣಾಂತರದಿಂದ ಅವರನ್ನು ಬಿಟ್ಟು ಬೇರೆಡೆಯಲ್ಲಿ ಹೋಗಿದ್ದನು. ಆತನು ದುಡಿದು ದುಡಿದು ಬೇಸತ್ತು

ಹೀಗೆ ಎಷ್ಟು ವರ್ಷ ಕೆಲಸ ಮಾಡಿದರೂ ನನಗೆ ಸಾಕಷ್ಟು ದುಡಿಮೆಯಾಗುವದಿಲ್ಲ. ನನ್ನ ಪೂರ್ವದ ಯಜಮಾನನಾದ ಕಲಿಕಂಭನು ಭೂರುದ್ರರೆನಿಸುವ ಜಂಗಮ ಮೂರ್ತಿಗಳಲ್ಲಿ ಕಡು ಪ್ರೇಮಿಯು; ಅವರನ್ನು ಕಂಡೊಡನೆ ಪರಮ ಸಂತೋಷವನ್ನು ತಾಳಿ ಕಲ್ಯಾಣಪ್ರದವಾದ ಪಾದ ತೀರ್ಥವನ್ನು ಸವಿದು ಅವರ ಮನದಣಿಯುವಂತೆ ಬೇಕಾದ ಭೋಗ್ಯ ವಸ್ತುಗಳನ್ನು ಸಾದರದಿಂದ ಕೊಟ್ಟು ಬಿಡುವನು. ಆದುದರಿಂದ ನಾನಿನ್ನು ಜಂಗಮನಾಗುವದೇ ಮೇಲೆಂದು ನಿರ್ಧರಿಸಿ ಆಪರಿಯಾಗಿ ವೇಷವನ್ನು ತಾಳಿ ಚರಿತ್ರ ಪುರುಷನಿಗೆ ಅವನ ಮನೆಯ ಹತ್ತರವೇ ಎದುರಾದನು. ಆಗಲೇ ನಮ್ಮ ಚರಿತ್ರ ಪುಂಗವನು.—ನನ್ನೊಡೆಯರು ಬಂದರು; ನನ್ನ ಸದ್ಗತಿಗೆ ಕಾರಣರಾದ ಪುರುಷಶ್ರೇಷ್ಠರು ದಯಮಾಡಿದರು; ನನ್ನ ಭವಾಂತಕರಾದ ಜಂಗಮವರ್ಯರು ಬಿಜಯ ಮಾಡಿದರು. ಹೀಗೆ ನಿರ್ಮಲ ಮನಸಿನಿಂದ ಅನ್ನುತ್ತಾ ಅಪೂರ್ವೋತ್ಸಾಹವನ್ನು ತಳೆದು ಸಂಪೂರ್ಣವಾಗಿ ಜಂಗಮ ಭಾವನೆಯು ಚನ್ನಾಗಿ ಅಳವಟ್ಟು ಅವರಿಗೆ ಪುನಃ ಪುನಃ ಸಾಷ್ಟಾಂಗವಾಗೆರಗಿ ಮಂಗಲಕರವಾದ ಮಹಾ ಪಾದಾಭಿಷೇಕಕ್ಕಾಗಿ ಅಗ್ಗಣಿಯನ್ನು ತರುವದಾಗಿ ತನ್ನ ಅರ್ಧಾಂಗಿಯಾದ ಸಖಿಯಳಿಗೆ ಆಜ್ಞಾಪಿಸಿದನು. ಆಗ ಆ ಸತಿಯಳು ಉದಕದ ಕುಂಭದೊಡನೆ ಬಂದುನೋಡಿ ಈತನು ನಮ್ಮ ಮೊದಲಿನ ಆಳು; ನಮ್ಮಲ್ಲಿ ಕೆಲಸಕ್ಕೆ ಇದ್ದ ಚಾಕರನು ಈತನ ಪಾದಗಳನ್ನು ನಾನು ತೊಳೆಯಲಾರೆನು; ಖಂಡಿತವಾಗಿ ಈ ಕೃತಕ ವೇಷದ ಜಂಗಮ ಪಾದಪೂಜೆಯನ್ನು ಮಾಡಲಾರೆನೆಂದು ಸುಮ್ಮನೆ ನಿಂತುಬಿಟ್ಟಳು. ಆಗಲಾ ನಮ್ಮ ವೀರಚರಿತ್ರ ನಾಯಕನು ಹೆಂಡತಿಯ ಮಾತುಗಳನ್ನು ಕೇಳಿ ಕಿವಿಗಳನ್ನು ಮುಚ್ಚಿಕೊಂಡು ಜಂಗಮ ನಿಂದೆಯನ್ನು ಕೇಳಿದ್ದರಿಂದ ಕಣ್ಣುಗಳಿಂದ ಕಿಡಿಗಳನ್ನು ಕಾರುತ್ತ ಅತಿ ರೋಷಗೊಂಡು ತೀಕ್ಷ್ಣವಾದ ಗಣಾಚಾರವನ್ನು ಕೈಕೊಂಡನು. ಪರುಷ ಸೋಂಕಿದ ಬಳಿಕ ಕಬ್ಬಿಣದ ಮುಂಚಿನ ಗುಣವನ್ನು ಅರಸುವದುಂಟೇ? ಎನೆಲೆ ಅವಿವೇಕಿ ಪ್ರಭುಸ್ವರೂಪನಾದ ನನ್ನ ಮುಕ್ತಿಗೆ ಕಾರಣನಾದ ಜಂಗಮನಿಗೆ ಹೀಗೆ ತುಚ್ಛವಾಗಿ ಮಾತಾಡುತ್ತಿರುವೆಯಾ ಎಂದು ಮಗ್ಗಲಲ್ಲಿರುವ ಹದನವಾದ ಖಡ್ಗವನ್ನು ಬೇಗನೆ ತೆಗೆದುಕೊಂಡು ಒಂದೇಟಿಗೆ ತನ್ನ ಕಾಂತೆಯ ಹಸ್ತವನ್ನು ಕಡಿದು ಬಿಟ್ಟನು. ಇದೆಲ್ಲವನ್ನು ಲಕ್ಷಗೊಟ್ಟು ನೋಡುತ್ತಿದ್ದ ಸರ್ವತೋಮುಖನಾದ ಸರ್ವಜ್ಞನು ತಟ್ಟನೆ ನಿಜರೂಪದಿಂದ ಕಥಾ ನಾಯಕನಿಗೆ ಕಾಣಿಸಿಕೊಂಡನು. ಆಗ ಕಲಿಕಂಭನು ಮಹಾ ಸ್ವಾಮಿಯ ದಿವ್ಯಪಾದಕ್ಕೆ ಬಾರಿಬಾರಿಗೂ ಮಣಿಯುತ್ತ ರಮಾಹರಿಪೂಜಿತವಾದ ಚರಣಗಳಲ್ಲಿ ಹೊರಳಾಡುತ್ತ ಭಕ್ತ್ಯಾವೇಶದಿಂದ ಸ್ತುತಿಸುತ್ತ ರೋಮಾಂಚನಗೊಂಡು ಬಾಷ್ಪೋದಕಗಳನ್ನು ಸುರಿಸುತ್ತ ಆನಂದದ ಭರದಲ್ಲಿ ಮೈಮರೆತನು. ಗಿರಿಜಾವರನು ಆತನ

ಮೈಮೇಲೆ ತನ್ನ ಅಮೃತಹಸ್ತವನ್ನಿಡಿ ಉನ್ನತವಾದ ಗಣಪದವಿಯನ್ನು ದಯೆ ಪಾಲಿಸಿದನು.

ಓಂ.

# ೩೩. ಕಣ್ಣಪ್ಪನು.

ಮೃಡನ ದೃಷ್ಟಿಯೊಳು ರುಜೆಯಡರಿತೆಂದತಿ ಭೀತಿ । ಪಿಡಿದು ನಿಜಲೋಚ
ನನನಿತ್ತ ಕನ್ನಪ್ಪ । ನಡಿಗಳಂ ಪೊತ್ತು ಬಿಡದಿರ್ಪೆ ॥

[ಶ್ರೀ ನಿಜಗುಣರು]



ಗಿಲಾದ ಸಿರಿಯಿಂದೊಪ್ಪುವ ಜೋಳಧರೆಯಲ್ಲಿ ಕಾಲತ್ತಿ ಎಂಬ ಮಹಾಕ್ಷೇತ್ರವು ವಿರಾಜಿಸುತ್ತಿತ್ತು. ಪ್ರಾಣಿಕೋಟಿಗೆ ಆಧಾರಭೂತವಾದ ನದೀ ನದಗಳಿಗ ಉಗಮಸ್ಥಾನವಾಗಿ, ಅನೇಕ ವನಚರಗಳಿಗೆ ಆಶ್ರಯವಾಗಿ, ನೆರೆಯಲ್ಲಿರುವ ದಟ್ಟವಾದ ಕಾನನಗಳಿಂದ ಯುಕ್ತವಾಗಿ, ವನದೇವತೆಯ ಶೃಂಗಾರದ ನೆಲಮನೆಯಾಗಿ, ಭೀಕರವಾದ ಮದಿಸಿದ ಮೃಗಗಳಿಂದ ಭಯಾನಕವಾದ ಬೀಡಾಗಿ, (ಅಖಿಲ ವಿಶ್ವಕ್ಕಧಿಪತಿಯಾದುದರಿಂದ ಜ್ಯೋತಿರ್ಮಯನಾದ ವಿಶ್ವಮೂರ್ತಿಯೆಂದು, ಬ್ರಹ್ಮಾಂಡವನ್ನೆಲ್ಲ ಬಗೆ ಬಗೆಯಿಂದ ವ್ಯಾಪಿಸಿರುವದರಿಂದ ಅಷ್ಟಮೂರ್ತಿಯೆಂದು ಪ್ರಸಿದ್ಧಿಗೊಂಡು ಯಾರಿಂದಲೂ ಬಣ್ಣಿಸಲಳವಲ್ಲದ ಮಹಿಮೆಯಿಂದ ಕೂಡಿದ ಶಂಕರಮೂರ್ತಿಯೇ ತಿರಕಾಲನಾಥನೆಂಬ ಅಭಿಧಾನದಿಂದಿರುವ) ವಿಖ್ಯಾತವಾದ ಲಿಂಗದ ನಿಲಯವಾಗಿ ಆ ಗಿರಿಯು ಅನೇಕ ವಿಧವಾಗಿ ಅಲಂಕೃತವಾಗಿತ್ತು. ಸೃಷ್ಟಿಸೌಂದರ್ಯದ ಸೊಬಗಿನಿಂದ ಅಲ್ಲಿಯ ರಮಣೀಯವಾದ ವನಗಳು ಕವಿಗಳ ವರ್ಣನಾಸಾಮರ್ಥ್ಯವು ಸಾಲದಷ್ಟು ಶೋಭಾಯಮಾನವಾಗಿ ಕಂಗೊಳಿಸುತ್ತಿದ್ದವು. ಅಲ್ಲಿರುವ ಪುಷ್ಪಗಳ ಮಕರಂದದಿಂದ ಆ ಸ್ಥಾನವೆಲ್ಲ ಸುಗಂಧಮಯವಾಗಿ ಸದ್ವಾಸನೆಯು ದಶದಿಕ್ಕುಗಳಲ್ಲಿಯೂ ಬೀಸುತ್ತಿತ್ತು.

ಆ ಘೋರವಾದ ಅಡವಿಯಲ್ಲಿ ಹರಭಕ್ತಿಯ ಕಣ್ಣಿನಂತೆ ವಿಜೃಂಭಿಸುವ ಬೇಡರನಾಯಕನಾದ ಕಣ್ಣಪ್ಪನೆಂಬ ಪುಳಿಂದನು ಬಲವಂತನಾಗಿ ಸೊಕ್ಕಿದ, ಮಲಿತ ಪ್ರಾಣಿಗಳ ಅಂತಕನಾಗಿ ತನ್ನ ಶಬರವೃತ್ತಿಗನುಗುಣವಾಗಿ ವೀರನಾಗಿ ಒಪ್ಪುತ್ತಿದ್ದರೂ, ಲುಬ್ಧಕರಲ್ಲಿ ಜನಿಸಿದ್ದರಿಂದ ಮೋಡದ ಮರೆಯಲ್ಲಿರುವ ಸೂರ್ಯನಂತೆ ಪ್ರಕಾಶಿಸುತ್ತಿದ್ದನು. ಈ ರೀತಿಯಾಗಿ ಕೆಲವು ವರ್ಷಗಳು ಕಳೆದು ಒಂದು ದಿನ ಒಂದು ಬೇಂಟೆಯು ದೊರಕಲು ಇದು ಶುಭಸೂಚಕವೋ ಏನೋ ಎಂಬಂತೆ ಬಹಳ ಹರ್ಷವನ್ನು ಹೊಂದಿ ತಿರಕಾಲತ್ತಿ ಎಂಬ ಭೂಧರದ ಪಾರ್ಶ್ವದಲ್ಲಿ ಉತ್ಸಾಹದಿಂದ ಬರುತ್ತಿದ್ದನು. ಆಗ ಸರ್ವಪಾಪವಿಚ್ಛೇದಕನು, ಮಂಗಲಮಯನು, ದಯಾರಸದ ಮೂರ್ತಿಯೂ ಆದ ಗೌರೀಪತಿಯೂ ತಾನು ಆಜ್ಞಾಪಿಸಿ ಇಳೆಗೆ ಕಳುಹಿದ ಗಣವರನು ವ್ಯಾಧನಾಗಿ ಕಣ್ಣಪ್ಪನೆಂಬ ಹೆಸರನ್ನು ಧರಿಸಿ ವನಪಾಲನಾಗಿರುವನು. ಆತನು ಇನ್ನು ಹೆಚ್ಚಾಗಿ ಹೆಚ್ಚಳವನ್ನು ಪಡೆದು ನಿತ್ಯಸುಖಿಯಾಗಲೆಂದು ಬಯಸಿ ಆತನೆಡೆಗೆ ಮಾಯಾಮೃಗವನ್ನು ಅಟ್ಟಿದನು.

ಯಾರನ್ನೂ ಲಕ್ಕಿಸದೆ ವೇಗದಿಂದ ಆ ಮೃಗವು ಓಡುವುದನ್ನು ನೋಡಿದೊಡನೆ ಕಥಾನಾಯಕನು ಬಾಣಪ್ರಯೋಗವನ್ನು ಮಾಡಲು ಅದು ಅದನ್ನು ತಪ್ಪಿಸಿಕೊಂಡು ಮೇಲಕ್ಕೆ ಪುಟನೆಗೆದು ಓಡಹತ್ತಿತು. ಭರದಿಂದ ಆ ಮೃಗದ ಬೆನ್ನು ಹತ್ತಿ ಕಲ್ಲು-ಮುಳ್ಳುಗಳನ್ನು ಲೆಕ್ಕಿಸದೆ ಇಕ್ಕಟ್ಟಾದ ಬಿಕ್ಕಟ್ಟಾದ ಸ್ಥಳಗಳಲ್ಲಿ ಬೆಂಬಿಡದಟ್ಟುತ್ತಿರಲು, ಆ ಪ್ರಾಣಿಯು ಪಲಾಯನಮಾಡುತ್ತ ತಿರಕಾಲತ್ತಿನಾಥನಾಲಯವನ್ನು ಪ್ರವೇಶಿಸಿ ಆ ಸೋಮಸೂರ್ಯಾಗ್ನಿಲೋಚನನಾದ ಮುಕ್ಕಣ್ಣನ ಮಹಾಲಿಂಗದಲ್ಲಿಯೇ ಅಡಕವಾಯಿತು. ಕಥಾಪುರುಷನು ಇದನ್ನು ಸೋಜಿಗದಿಂದ ನೋಡುವಷ್ಟರಲ್ಲಿ ಆ ಗುಡಿಯ ಬಾಗಿಲುಗಳು ಮುಚ್ಚಿಕೊಂಡವು. ಆಗ ಅತ್ತಿತ್ತ ನೋಡಿ ಮೃಗವನ್ನು ಕಾಣದೆ ದೇವಾಲಯದ ದ್ವಾರದ ಮುಂಭಾಗದಲ್ಲಿ ಬಂದು ನಿಂತು:—ನನ್ನವನೇ, ಒಡೆಯನೆ, ಬಾಗಿಲನ್ನು ತೆರೆ, ಎಂದು ಬಿನ್ನವಿಸಲು, ಶಿವಕಟಾಕ್ಷದಿಂದ ಕದಗಳು ತಾವಾಗಿಯೇ ತೆರೆದುವು. ಆಗ ಚರಿತ್ರನಾಯಕನು ಸಂತೋಷಬಟ್ಟು ಲಿಂಗವನ್ನು ನಿರೀಕ್ಷಿಸುತ್ತ —ನನ್ನವನೇ, ನನ್ನವನೇ, ನನ್ನಪ್ಪನೇ, ನನಗೆ ಆ ಮೃಗವು ದೊರಕಿದರೆ ನಿನಗೆ ಅದರ ಭಾಗವನ್ನು ಸಲ್ಲಿಸುವೆನು; ನಾನು ನಿನ್ನವನು ಆಗುವೆನು. ಈ ಪರಿಯಾಗಿ ನಾನಾವಿಧದಿಂದ ಮೋಹಪಾಶದಿಂದ ಬಿಗಿಯಲ್ಪಟ್ಟವನಾಗಿ ಕರುಣಾತಿರೇಕದಿಂದ ಬೇಡಿಕೊಳ್ಳುತ್ತ "ನನಗೆ ನೀನು ಗತಿಯು; ನಿನಗೆ ನಾನು ಗತಿಯು. ಹಗಲಿರುಳು ನಿನ್ನ ನೆರೆಯಲ್ಲಿಯೇ ಇರುವೆನು." ಹೀಗೆ ಲುಬ್ಧಕನು ಹೇಳುತ್ತಿರುವಾಗ ಘನಲಿಂಗದ ಕಾರುಣ್ಯದಿಂದ ಆ ಮಾಯಾಮೃಗವು ಅಲ್ಲಿಯೇ ಒಮ್ಮಿಂದೊಮ್ಮೆಲೇ ಕಾಣಿಸಿತು. ಆಗ ಶಿವಲಿಂಗದಮೇಲೆ ಆ ಶಬರನ ನಂಬಿಗೆಯು ದ್ವಿಗುಣಿತವಾಗಿ,

ಹೆಚ್ಚಾಗಿ ಉಬ್ಬಿದವನಾಗಿ, ದೇವರನ್ನು ಕೊಂಡಾಡುತ್ತ ಆ ಹರಿಣಕ್ಕೆ ಗುರಿಯಿಟ್ಟು ಹೊಡೆಯಲು ಅಗಣಿತ ಮಹಿಮೆಯಿಂದೊಪ್ಪುವ ಪರಶಿವ-ಪಂಚಾಕ್ಷರಿಯನ್ನು ಸಾರುವ ವಿಶಿಷ್ಟಸಾಧನವಿಶೇಷವೋ ಎಂಬಂತಿರುವ ಬಾಣದ ಅಲಗಿನಿಂದ ಆ ಜಿಗರಿಯು ನೆಲಕ್ಕುರುಳಿತು. ಅದನ್ನು ಚನ್ನಾಗಿ ಪಾಕಮಾಡಿ ಭಕ್ತ್ಯಾತಿಶಯದಿಂದ ಲಿಂಗಮೂರ್ತಿಗೆ ತೋರಿಸುತ್ತ ಅದನ್ನು ಸೇವಿಸಬೇಕೆಂದು ಬಹು ದೈನ್ಯದಿಂದ ಶ್ರೋತೃಗಳ ಹೃದಯವು ಕರಗಿ ನೀರಾಗುವಂತೆ ಪ್ರಾರ್ಥಿಸುತ್ತಿರಲು, ಮಹೇಶನು ಮುಗ್ಧಭಕ್ತನ ಪಾಶಕ್ಕೊಳಗಾಗಿ ನಿರುಪಾಯನಾಗಿ ಆ ಎಡೆಯನ್ನು ಆರೋಗಿಸಿದಂತೆ ಮಾಡುತ್ತ ಆ ಭಕ್ತನಿಗೆ ಕಾಣಿಸದಂತೆ ತನ್ನ ಭೂತಗಳಿಗೆ ಆ ಪಾಕವನ್ನು ಕೊಟ್ಟುಬಿಟ್ಟನು! ಶಂಕರನು ಉಂಡನೆಂದು ಗ್ರಹಿಸಿದ ನಮ್ಮ ವರ ಶಬರನು ಬಹುಸಂತೋಷಪಟ್ಟು "ನನ್ನವನೇ, ನನ್ನೊಡೆಯನೇ, ಈ ಅರಣ್ಯದಲ್ಲಿ ನೀನು ಏಕಾಕಿಯಾಗಿದ್ದು ಇದುವರೆಗೆ ಉಪವಾಸದಿಂದ ಇದ್ದು ಬಡವಾಗಿರುವೆ. ಇನ್ನು ನೀನು ಅಂಜದಿರು ನಿನ್ನ ಹೊಟ್ಟೆಯನ್ನು ನಾನು ಅನುದಿನವು ನಡಿಸುವೆನು" ಎಂದು ಲಿಂಗಾಭಿಮುಖನಾಗಿ ಕುಳಿತು ಉಬ್ಬುಬ್ಬಿ ಹೇಳಿ ಆನಂದಪಡುತ್ತಿದ್ದನು. ಹೀಗೆ ಈಶ್ವರಸನ್ನಿಧಾನದಲ್ಲಿ ಹಿಗ್ಗುತ್ತಿರುವಷ್ಟರಲ್ಲಿ ದಿನಮಣಿಯು ಅಡಗಿದನು. ಕತ್ತಲೆಯು ಮೆಲ್ಲನೆ ಬರಲನುವಾಯಿತು. ಗಾಡಾಂಧಕಾರವಾದದ್ದನ್ನು ಕಂಡು ಭಯಂಕರವಾದ ಈ ವಿಪಿನದಲ್ಲಿ ಉಗ್ರವಾದ ಹಿಂಸ್ರ ಪಶುಗಳು ನಿಬಿಡವಾಗಿರುವವೆಂದು ಹಂಬಲಿಸಿ, ನನ್ನವನನ್ನು ಒಬ್ಬನನ್ನೇ ಬಿಟ್ಟುಹೋಗುವದು ಸರಿಯಲ್ಲವೆಂದು ಬಗೆದು, ಗುಡಿಯ ಹತ್ತರದಲ್ಲಿ ಬಿದ್ದಿರುವ ಒಣಕಟ್ಟಿಗೆಗಳನ್ನು ಆರಿಸಿ ತಂದು ಹೊತ್ತಿಸಿ ಬೆಳಕು ಮಾಡಿ ಸಂತೋಷದ ಭರದಲ್ಲಿ ಕೈಚಪ್ಪಾಳೆಯನ್ನಿಕ್ಕುತ್ತ, ನನ್ನೊಡೆಯನೇ ಸುಖವಾಗಿ ನಿದ್ರೆಯನ್ನು ಗೈಯುವದೆಂದು ಬೇಡುತ್ತಿದ್ದನು. ನಮ್ಮ ಚರಿತ್ರನಾಯಕನ ದೋಷವು ಹರಿದು ಹೋಯಿತೆಂಬಂತೆ ತಮವು ಹರಿಯಿತು. ನಮ್ಮ ಮಹಾ ಪುಳಿಂದನ ಪುಣ್ಯವು ಪ್ರಕಾಶಿಸಲಾರಂಭಿಸಿತೆನ್ನುವಂತೆ ತೇಜೋಮಯನಾದ ಭಾಸ್ಕರನು ಉದಯಲಾರಂಭಿಸಿದನು. ಉಷಃಕಾಲದಲ್ಲೆದ್ದು:—ನನ್ನವನೇ ನಿದ್ರೆಯಾಯಿತೇ? ಹಸಿದಿಯೋ? ತಡಮಾಡದೆ ನಿನ್ನಾರೋಗಣೆಗೆ ಹೊಸ ಮೃಗದ ಮಾಂಸವನ್ನು ತಂದೊಪ್ಪಿಸುವೆನು, ಎಂದು ಲಿಂಗಮೂರ್ತಿಯನ್ನು ಪ್ರೇಮಾತಿಶಯದಿಂದ ಬಿಗಿದಪ್ಪಿ ಮುದ್ದಿಟ್ಟು, ಸ್ವಲ್ಪ ನಡೆದು ಹೋಗಿ ಭಕ್ತಿಯ ಆವೇಶದಿಂದ ತಿರಿಗಿ ನೋಡುತ್ತ ಅಲ್ಲಿಂದಲೇ ವಿನಯವಾಗಿ ಪೊಡಮಟ್ಟು, ಶಿವಾರ್ಪಣೆಗಾಗಿ ಆಹಾರವನ್ನು ತರುವದಕ್ಕೆ ಹೊರಟನು.

ಆ ಸಮಯದಲ್ಲಿ ಫಣೆಯಲ್ಲಿ ಪ್ರಕಾಶಮಯವಾದ ತ್ರಿಪುಂಡ್ರವನ್ನು ಧರಿಸಿದ, ಕಂಠದಲ್ಲೊಪ್ಪುವ ರುದ್ರಾಕ್ಷ—ಮಾಲೆಯಿಂದ ವಿಭೂಷಿತನಾದ ಬ್ರಾಹ್ಮ

ಣನು ಪೂಜೋಪಕರಣಗಳನ್ನು ತೆಗೆದುಕೊಂಡು ತಿರಕಾಲತ್ತಿನಾಥನ ದೇವಾಲಯವನ್ನು ಪ್ರವೇಶಿಸಿ ಮಾಂಸದ ಚಿಕ್ಕಚಿಕ್ಕ ತುಂಡುಗಳನ್ನು ಅಲ್ಲಲ್ಲಿ ಬಿದ್ದಿರುವದನ್ನು ಕಂಡು, ನೊಂದು ಆಶ್ಚರ್ಯ ಭಯ ಚಕಿತನಾಗಿ ನಿಂತನು. ಆ ಬಳಿಕ ಶಾಂತಿಯನ್ನು ತಳೆದು ಸಮ್ಮಾರ್ಜನೆಯನ್ನು ಮಾಡಿ ಸು-ಜಲವನ್ನು ತಂದು, ಅಭಿಷೇಕಿಸಿ ದೇವಾಲಯವನ್ನೆಲ್ಲ ಶುದ್ಧಗೊಳಿಸಿ, ಕ್ರಮವಾಗಿ ಪೂಜಿಸಿ, ಮೋದಗೊಂಡು, ನೀರಾಜನವನ್ನು ಮಾಡಿ, ನಾನಾ ವಿಧವಾಗಿ ವೇದಮಂತ್ರಗಳಿಂದ ಸ್ತುತಿಸಿ:—ಎಲೆ ದೇವಾ ಸರ್ವಶಕ್ತಿವಂತನೇ, ನಿತ್ಯನಾದ ಅಕ್ಷರನಾದ ಭಗವಂತನೇ ಬೇಡಿಕೊಳ್ಳುವೆನು. ದುರಾಚಾರಿಗಳನ್ನು ಇಲ್ಲಿ ಒಳಗೆ ಬರಗೊಡದಂತೆ ಮಾಡು. ಈ ರೀತಿಯಾಗಿ ಈಶ್ವರನನ್ನು ಪ್ರಾರ್ಥಿಸಿ, ಶಿವಾಲಯದ ಬಾಗಿಲಗಳನ್ನು ಭದ್ರವಾಗಿ ಮುಚ್ಚಿ, ಬಲವಾಗಿ ಬೀಗವನ್ನು ಹಾಕಿ ಆ ಶಿವದ್ವಿಜನು ಸ್ವಸ್ಥಾನಕ್ಕೆ ತೆರಳಿದನು.

ಇತ್ತ ಸಮರ್ಥನಾದ ಬೇಡನು ಲಗುಬಗೆಯಿಂದ ರುಚಿಯಾಗಿರುವ ಮಾಂಸವುಳ್ಳ ಮೃಗವನ್ನು ತಡಕಿ, ಅದನ್ನು ಚನ್ನಾಗಿ ಬೇಯಿಸಿ, ದೇವಾಲಯಕ್ಕೆ ಬಂದು ದ್ವಾರವು ಮುಚ್ಚಿರಲು, ಅಂತಃಕರಣಪೂರ್ವಕವಾಗಿ ಮನಕರಗಿದವನಾಗಿ:—ನನ್ನವನೇ-ನನ್ನವನೇ, ಬಾಗಿಲನ್ನು ತೆರೆ-ಬಾಗಿಲನ್ನು ತೆರೆ, ಎಂದು ಮಗನು ತಂದೆಗೆ ವಿಜ್ಞಾಪಿಸುವಂತೆ ಬೇಡಿಕೊಂಡನು.

ಸರ್ವವೂ ವೇದ್ಯವಾಗುತ್ತಿರುವ ಸರ್ವಜ್ಞನಾದ ಲಿಂಗಮೂರ್ತಿಯ ಕಾರುಣ್ಯದಿಂದ ಕೀಲಿಯು ಕಳಚಿ ಬಿದ್ದು, ಬಾಗಿಲಗಳು ತಾವೇ ತೆರದುಬಿಟ್ಟವು! ಆನಂದದಿಂದ ಗುಡಿಯನ್ನು ಹೊಕ್ಕು, ಪ್ರೇಮದಿಂದ ತನ್ನ ಪಾದ ಪಲ್ಲವದಿಂದಲೇ ಮೊದಲಿನ ಅರ್ಚಕನು ಮಾಡಿದ ಪೂಜೆಯನ್ನು ಇಳುಹಿ, ನಿರ್ಮಾಲ್ಯವನ್ನು ತೆಗೆದು, ಬಾಯಿಯೊಳಗೆ ತುಂಬಿಕೊಂಡು ಬಂದ ಉದಕದಿಂದ ಲಿಂಗಾಭಿಷೇಕವನ್ನು ಮಾಡಿ, ತಲೆಯಲ್ಲಿಟ್ಟುಕೊಂಡು ಬಂದ ಕಾಡು ಪುಷ್ಪಾದಿಗಳನ್ನು ಧರಿಸಿ, ಹಸ್ತದಲ್ಲಿ ತಂದಿರುವ ಹೊಸ ಮಾಂಸವನ್ನು ಈಶ್ವರನ ಮುಂದಿಟ್ಟು, ಭಕ್ತಿಯ ಉದ್ರೇಕದಿಂದ:—ನನ್ನವನೇ-ನನ್ನೊಡೆಯನೇ, ತೆಗೆದುಕೊಳ್ಳಬೇಕೆಂದು ಪ್ರಾರ್ಥನೆ ಮಾಡಲು, ಜಗತ್ಪತಿಯು ಈ ಪೂರ್ವದಲ್ಲಿ ಅರ್ಪಣೆ ಮಾಡಿದಂತೆ ತನ್ನ ಭೂತಗಳಿಗೆ ಅದನ್ನು ಕೊಡಲು, ಚರಿತ್ರನಾಯಕನು ಲಿಂಗಮೂರ್ತಿಯು ಸ್ವೀಕರಿಸಿದನೆಂದು ಬಗೆದು, ಮಹದಾನಂದವನ್ನು ಹೊಂದಿ, ಉಬ್ಬುಬ್ಬಿ, ಕುಣಿದಾಡಿ, ಅತಿಶಯವಾದ ಸಂತಸವನ್ನು ಹೊಂದಿ, ರಾತ್ರಿಯ ಊಟಕ್ಕಾಗಿ ಮತ್ತೆ ಭಕ್ಷ್ಯವನ್ನು ತರುವದಕ್ಕಾಗಿ ಸಾಗಿದನು.

ಇತ್ತ ಸಂಧ್ಯಾಸಮಯದಲ್ಲಿ ಪುನಃ ಆ ಪುಣ್ಯಸ್ಥಾನಕ್ಕೆ ಆ ಶಿವದ್ವಿಜನು ಬಂದು, ಮೊದಲಿನಂತೆಯೇ ಶಿವನಿಲಯವು ಅಶುಚಿಯಾದದ್ದನ್ನು ನೋಡಿ, ಎದೆ-

ದೆ ಬಡಕೊಂಡು ಅಸಹ್ಯಪಟ್ಟು:-ಎಲೆ ದೇವಾ, ಮರಳಿ ಮರಳಿ ಈರೀತಿಯಾಗಿ ರಾಚಾರಿಗೆ ಆಶ್ರಯ ಕೊಡುವದುಚಿತವೇ? ಎಂದು ಕೊರಗುತ್ತಾ, ಮುನ್ನಿ ಂತೆ ಶುದ್ಧಿಗೊಳಿಸಿ, ಆಗಮೋಕ್ತವಾಗಿ ಪೂಜಿಸಿ, ಶಿವ ಮಂತ್ರವನ್ನು ಜಪಿಸಿ, ನಂದನಾಗಿ ಪೂರ್ವದಂತೆ ಬಾಗಿಲಗಳನ್ನು ಗಟ್ಟಿಯಾಗಿ ಮುಚ್ಚಿ, ಇನ್ನೊಂದು ರೆ ಆ ಪುಳಿಂದನು ಇಲ್ಲಿಗೆ ಬಂದರೆ ಆತನನ್ನು ತುಂಡರಿಸಿಬಿಡುವೆನೆಂದು ಹೇಳಿ ನ್ನ ಗೃಹಕ್ಕೆ ತೆರಳಿದನು.

ಅಪೂರ್ವ ಶಬರನ ಪೂಜೆಯನ್ನು ಮತ್ತು ಮಹಾಬ್ರಾಹ್ಮಣನು ಮಾಡುವ ಪೂಜೆಯನ್ನು ಅಗಜೆಯು ನೋಡಿ ತನ್ನ ಪತಿಗೆ.—ಕಾಂತನೇ, ಪ್ರತ್ಯಕ್ಷವಾಗಿ ಮವಾಗಿ ಮಾಡುವ ದ್ವಿಜನ ಪೂಜೆಗಿಂತಲೂ ಈ ಬೇಡನ ಸೇವೆಯು ನಿನಗೆ ಂಗಲಕರವಾಗಿ ಕಾಣುವದೋ? ಆತನು ಬಾಯಿಮುಕ್ಕಳಿಸುವ ನೀರು ನಿನ್ನ ಜ್ಜನಕ್ಕೆ ಒಪ್ಪುವದಿಲ್ಲವೇ? ಅವನು, ನಿನಗ "ನನ್ನವನೇ-ನನ್ನವನೇ" ಂದು ಸಂಬೋಧಿಸುವದೇ ಮಂತ್ರವಾಗಿರುವದೇ? ಇದೆಲ್ಲವು ವಿಚಿತ್ರವು! ಎಂದು ರಿದಳು. ಆಗ ಸೋಮನು.—ಶೈಲಜೆಯೇ, ಪ್ರಾಣಿಗಳ ಮೇಲೆ ಯೋಗಿ ಶ್ವರ ಅವ್ಯಾಜ ಪ್ರೇಮವಿರುವ ಹಾಗೆ ಸಹಜವಾದ ಭಕ್ತಿಯಿಲ್ಲದ ಪೂಜೆ, ಡಂಬರದ ಭಕ್ತಿ, ಅಥವಾ ನಾಟಕಸ್ಥ ಭಕ್ತಿರಹಿತವಾದ ಪೂಜೆಯು ನನಗೆ ಲ್ಲುವ ಬಗೆಯು ಎಂತು? ನನಗೆ ಅಕುಟಿಲವಾದ ಮನೋವಾಕ್ಕಾಯಂಗಳಿಂದ ಮಾಡಿದ ಪ್ರೇಮಾತಿರೇಕದ ಕಿರಾತನ ಪೂಜೆಯು ಇಷ್ಟವಾದುದು. ನಿನಗೆ ನ್ನು ಆ ವ್ಯಾಧನ ಭಕ್ತಿ ಮತ್ತು ಶ್ರದ್ಧೆಯನ್ನು ತೋರಿಸುವೆನೆಂದು ಹೇಳುವಷ್ಟ ಲ್ಲಿಯೇ ಆತನು ದೇವಾಲಯಕ್ಕೆ ಬಂದು ಪ್ರಾಪಮುಟ್ಟನು. ಭಕ್ತಿಪುರಃಸರ ಾಗಿ ಲಿಂಗನಿರೀಕ್ಷಣೆಮಾಡುವಾಗ (ಲಿಂಗದ) ಒಂದು ಕಣ್ಣಿನಲ್ಲಿ ನೀರು ಬರು ಲೇ ರಕ್ತಪ್ರವಾಹವು ಬರಹತ್ತಿತು. ಆಗ ಈ ಪುಳಿಂದನು ಕೈಕಾಲನ್ನು ಬಿಟ್ಟು, ಾಹಾರಿದವನಾಗಿ, ಬಹು ಚಿಂತೆಯನ್ನು ಮಾಡುತ್ತ;-ನನ್ನವನಿಗೆ ಕಣ್ಣು ರೋಗವಾಗಿದೆ, ಎಂದು ಬಗೆದು ಖತಿಗೊಂಡು, ಏನುಮಾಡಬೇಕೆಂಬುದು ಗೋಚ ವಾಗದೆ ನೊಂದುಕೊಳ್ಳುತ್ತಾ, ಹಾ ಇದಕ್ಕೊಂದು ಉಪಾಯವನ್ನು ಕಂಡೆನೆಂ ಬ್ಬಿ ಸ್ವಾಮಿಯ ಕಣ್ಣಿಗೆ ಪ್ರತಿಯಾಗಿ ನನ್ನ ನೇತ್ರವನ್ನು ಕೊಡುವೆನೆಂದು ರ್ಧರಿಸಿ, ಕೈಯೊಳಗಿನ ಅಲಗಿನಿಂದ ತನ್ನ ಅಕ್ಷಿಯನ್ನು ಮೀಟಿ ತೆಗೆದು ಲಿಂಗದ ಣ್ಣಿಗೆ ಕೂಡ್ರಿಸಲು, ಅದು ಸರಿಯಾಗಿ ಹೊಂದಿ ಶೋಭಿಸುತ್ತಿರಲು, ಎರಡನೇ ಣ್ಣಿಗೆ ಬೇನೆಯು ಬಂದು ಮೊದಲನೇ ಕಣ್ಣಿನಂತೆ ರಕ್ತಸ್ರಾವವಾಗುವದನ್ನು ಂಡನು. ಇದಕ್ಕಿನ್ನು ಹೆದರುವೆನೇ? ಧೈರ್ಯೋತ್ಸಾಹವನ್ನು ತಾಳಿ, ತನ್ನ ಣ್ಣನ್ನು ಮೀಟುತ್ತಿರುವಷ್ಟರಲ್ಲಿಯೇ ಸ್ವಾಮಿಯು ಆತನ ಹಸ್ತವನ್ನು ಹಿಡಿದು:- ಾಹಸವನ್ನು ಮಾಡಬೇಡೆಂದು ತಡೆದು, ಗಿರಿಜೆಯೊಡನೆ ನಿಜರೂಪದಿಂದ

ಪ್ರಕಟನಾದನು! ಬೇಡರವನು ಆನಂದಾಶ್ರುಗಳನ್ನು ಸುರಿಸುತ್ತ ದೇವೋತ್ತಮ ನನ್ನು ಕಣ್ತುಂಬಾ ನೋಡುತ್ತ, ಗದ್ಗದಕಂಠದಿಂದ ಬಾರಿ ಬಾರಿಗೂ ಕೊಂಡಾಡುತ್ತ, ಅಡಿಗಡಿಗೆ ದಿವ್ಯಪಾದಕ್ಕೆರಗುತ್ತಿರಲು ದೇವತೆಗಳು ಕುಸುಮವೃಷ್ಟಿ ಯನ್ನು ಕರೆದರು! ಆಗಲೇ ಝುಗಝುಗಿಸುವ ವಿಮಾನವು ಈಶಾಜ್ಞೆಯಿಂದ ಅಲ್ಲಿಗೆ ಬಂದಿತು! ನಿರ್ಲೇಪನಾದ-ಪಂಚಬ್ರಹ್ಮಮಯನಾದ ಶಿವಾವಲ್ಲಭನು ಚರಿತ್ರ ಲಲಾಮನನ್ನು ದೇವಯಾನದಲ್ಲಿ ಕುಳ್ಳಿರಿಸಿ, ಆತನಿಗೆ ಉನ್ನತಗಣಪದವಿಯನ್ನು ಅನುಗ್ರಹಿಸಿ ಬಿಜಯಮಾಡಿದನು.

**ಪಾಠಾಂತರವು**.—ಶ್ರೀಬಾದರಾಯಣ ಪ್ರಣೀತ ಸಂಸ್ಕೃತ ಬಸವ ಪುರಾಣದಲ್ಲಿ ಹೀಗೆ ಹೇಳಿರುತ್ತದೆ —ಶ್ರೀಕಾಳಹಸ್ತಿ ಎಂಬ ಊರಲ್ಲಿ ಉಡು ಮೂರು ಎಂಬ ಕುಲೋತ್ಪನ್ನನಾದ ಶ್ರೇಷ್ಠ ಭಕ್ತನಾದ ಕನ್ನಪ್ಪನು ಚೌರ್ಯ ವೃತ್ತಿಯನ್ನವಲಂಬಿಸಿದ ಕಿರಾತನಿದ್ದನು. ಹಾಗಿದ್ದರೂ ಆತನು ಉದಾರಿಯೂ, ದಯೆಯುಳ್ಳವನು, ನತ್ಯನಿಷ್ಠನು ಹಾಗೂ ವಿರಾಗಿಯು ಆಗಿದ್ದನು. ನಿರ್ಜನ ವಾದ ಅರಣ್ಯದಲ್ಲಿ ಒಂದು ದಿನ ದಣಿದು ಮಲಗಿಕೊಂಡನು. ಆಗ ಸದಾಶಿವನು ಭಸ್ಮರುದ್ರಾಕ್ಷ ವಿಭೂಷಿತನಾಗಿ ಶಿವಭಕ್ತನ ವೇಷವನ್ನು ತಳೆದು ಆ ಬೇಡನ ಕನಸಿನಲ್ಲಿ ಬಂದು ಅವನಿಗೆ ಪವಿತ್ರೋದಕವನ್ನು ಸಿಂಪಡಿಸಿ, ಹಣೆಗೆ ಭಸ್ಮ ವನ್ನು ಧರಿಸಿ, “ಭಕ್ತನೇ ನಾಳೆ ಮುಂಜಾನೆ ಉತ್ತಮಲಕ್ಷಣಯುಕ್ತವಾದ ಲಿಂಗವು ನಿನ್ನ ದೃಷ್ಟಿಗೆ ಬೀಳುವದು. ಅದನ್ನು ನೀನು ಪ್ರಾಣಲಿಂಗವೆಂದು ಪೂಜಿಸು” ಹೀಗೆ ಹೇಳಿ ಅದೃಶ್ಯನಾದನು. ಪ್ರಾತಃಕಾಲದಲ್ಲಿ ಮೇಲೆ ಉಪಹ ರಿಸಿದಂತೆ ಯಾವತ್ತೂ ಪರಿಣಮಿಸಿತು.

ಪೂರ್ವದಲ್ಲಿ ಶ್ರೀನಂದವರ ಮತ್ತು ಮಹಾಕಾಯ ಎಂಬ ಇಬ್ಬರು ಬಲ ವಂತರಾದ ರಾಕ್ಷಸರು ಪರಮೇಶ್ವರನನ್ನು ತಪಶ್ಚರ್ಯದಿಂದ ಒಲಿಸಿಕೊಳ್ಳಲು, ಆ ಭಕ್ತವತ್ಸಲನು ಅವರಿಗೆ ಪ್ರಸನ್ನನಾಗಿ ನಿಮಗೆ ಬೇಕಾದ ವರಗಳನ್ನು ಕೇಳಿ ರೆಂದು ಹೇಳಿದನು. ಆಗ ಉಭಯತರು ನಮಗೆ ಬೇರೆ ಯಾವ ವರವೂ ಬೇಡ ನಮ್ಮಿಬ್ಬರ ಶರೀರವು ಶಿವಾರ್ಪಣವಾಗಬೇಕೆಂದು ಬೇಡಿದರು. ಚಂದ್ರಶೇಖ ರನು.—ಕಾಳಹಸ್ತಿ ದೇವಾಲಯದ ಹತ್ತರ ನನ್ನ ಭಕ್ತನಾದ ಕಣ್ಣಪ್ಪನಿರು ವನು; ನೀವು ಆತನೆಡೆಯಲ್ಲಿ ಮೃಗರೂಪದಿಂದ ನುಳಿದಾಡಿರಿ; ಅಂದರೆ ನಿಮ್ಮ ಇಷ್ಟಸಿದ್ಧಿಯಾಗುವದು.

ಉಳಿದ ಸಂಗತಿಯು ಮೇಲೆ ಕಾಣಿಸಿದ ಸುರಂಗ ಮಹಾಕವಿಗಳ ಆಖ್ಯಾ ಯಿಕೆಯಂತೆಯೇ ಇರುವದು.



೩೦.

# ೩೪. ನಾಟ್ಯಮಿಗೆತಾಂಡಿಯು.

ಅಗಿವ ಕೊಳನಂ ಜರಿದು । ನಗುವ ಜಿನಸಮಯಿಗಳ ವಗಿಯಲೋ ।
ಸುಗವೆ ನಯನಂಬಡೆದ ನಾಟ್ಯ । ಮಿಗೆತಾಂಡಿ ಮುದವ ನೊದವಿಸು ॥

[ಶ್ರೀ ನಿಜಗುಣರು]



ವಿಕ ಮಹಾಶಯರ ಭೂಮಿಯಾದ ಭರತಖಂಡದ ದಕ್ಷಿಣದಲ್ಲಿರುವ ಮನೋಹರವಾದ ಪಾಂಡ್ಯರಾಜ್ಯದಲ್ಲಿರುವ ಸುಪ್ರಸಿದ್ಧವಾದ ಮಧುರಾನಗರದಲ್ಲಿ **ನಾಟ್ಯನಮಿತಂಡಿ** ಎಂಬ ಶಿವಭಕ್ತನು ಅಷ್ಟಾವರಣ ನಿಷ್ಠನಾಗಿ ಪಂಚಾಚಾರ ಪರಾಯಣನಾಗಿ ರಂಜಿಸುತ್ತಿದ್ದನು. ಮನೆತನದಿಂದ ಬಡವನಾದರೂ ಆತನು ಶಿವಭಕ್ತಿಯಲ್ಲಿ ಬಲ್ಲಿದನಾಗಿ ಹಾಗೂ ಗಣಾಚಾರ ಧುರಂಧರನಾಗಿ ಮೆರೆಯುತ್ತಿದ್ದನು. ಆತನಿಗೆ ಅನುಕೂಲಳಾದ ಅರ್ಧಾಂಗಿಯೂ ವಿಧೇಯನಾದ ಮಗನೂ ಇದ್ದುದರಿಂದ ಬಡತನದಲ್ಲಿದ್ದರೂ ಆತನ ಆಚಾರಕ್ಕೆ ತಿಲಮಾತ್ರವೂ ಲೋಪ ಬರುತ್ತಿದ್ದಿಲ್ಲ. ವಿಧಿವಶದಿಂದಲೋ ಅಥವಾ ಬೇರೊಂದು ಕಾರಣದಿಂದಲೋ ಕಥಾನಾಯಕನ ದೃಷ್ಟಿಗೆ ಸೂರ್ಯನ ಪ್ರಕಾಶವಾಗಲಿ ಮತ್ತಾವ ವಸ್ತುವಾಗಲಿ ಬೀಳದಂತೆ ಇದ್ದರೂ ಶಿವಪ್ರಸಾದದಿಂದ ಶಿವಜ್ಞಾನವು ಲಭಿಸಿತ್ತು. ಶಿವನಲ್ಲದೆ ಅನ್ಯದೈವವನ್ನು ಭಜಿಸುವವರು ಬಳಿಸುವ ಭಾವಿಯ ನೀರನ್ನು ಆತನು ಲಿಂಗಾಭಿಷೇಕಕ್ಕೆ ತೆಗೆದುಕೊಳ್ಳದ ಛಲದವನಾಗಿ ಪ್ರತಿದಿವಸವೂ ಭಾವಿಯ ಹೊಸಹೊಸ ಜಲವನ್ನು ಉಪಯೋಗಿಸುತ್ತಿದ್ದನು. ಚರಿತ್ರ ಪುರುಷನು ದಿನಾಲು ಭಕ್ತಿಪುರಸ್ಸರವಾಗಿ ಶಿವಲಿಂಗಕ್ಕೆ ಮಜ್ಜನವನ್ನು ನೀಡುವಾಗ ಆತನ ಅಂತಃಕರಣದಲ್ಲಿ ಸಂಪೂರ್ಣವಾಗಿ ಮನಕರಗಿ ಕರುಣಾರಸವು ಪ್ರಾಣಾಂತರ್ಗತವಾದ (ಪ್ರಾಣ) ಲಿಂಗದಮೇಲೆ ಧಾರೆಯಾಗಿ ಸುರಿಯುತ್ತಿತ್ತು. ಚರಿತ್ರನಾಯಕನ ಶೀಲವು ಹೆಚ್ಚೆಚ್ಚಾಗಿ ನಿತ್ಯ ನಿತ್ಯ ಹೊಸ ಭಾವಿಯನ್ನು ತೋಡುವದರಲ್ಲಿ ತೊಡಗಿದನು.

ಪರಪಂಥದವರ ನಡೆನುಡಿ ಆಚಾರ ವಿಚಾರ ಶೀಲಗಳ ಗೊಡವೆಗೆ ಹೋಗದೆ ಸಹಿಸಿಕೊಂಡು ಸುಮ್ಮನಿರುವದು ಒಳ್ಳೇದು. ಇಲ್ಲವಾದರೆ ಅನ್ಯರ

ವಿಚಾರ ಹಾಗೂ ರೂಢಿಗಳನ್ನು ಖಂಡಿಸಿ ತಮ್ಮ ಮಾರ್ಗವನ್ನು ಮಂಡಿಸಿ ಪ್ರತಿಸ್ಪರ್ಧಿಗಳನ್ನೊಡಂಬಡಿಸಿ ಅವರನ್ನು ಉಚಿತವಾದ ಹಾದಿಗೆ ತಂದು ಸುಸಂಸ್ಕೃತರನ್ನಾಗಿ ಮಾಡುವದು ಹೆಚ್ಚು ಪ್ರಶಸ್ತವಾದುದು, ಅನ್ಯೋನ್ಯ ಶ್ರೇಯಸ್ಕರವಾದುದು ಎಂದು ಒಪ್ಪತಕ್ಕ ಸಂಗತಿಯೇ ಅಹುದು. ಇದೆಲ್ಲವನ್ನೂ ಬಿಟ್ಟು ಕೇವಲ ವಿಚಾರ ಶೂನ್ಯರಾಗಿ, ದುಷ್ಟರಾಗಿ, ದುರ್ಮಾರ್ಗರಕರಾಗಿ ಪರಧರ್ಮಿಗಳನ್ನು ಹಳಿಯುವದು ಅವರ ಆಚಾರಕ್ಕೆ ಆತಂಕವನ್ನುಂಟುಮಾಡುವದು ಮತ್ತು ಇಲ್ಲದಸಲ್ಲದ ಪೀಡೆಗಳನ್ನುಂಟುಮಾಡುವದು ಅನಿಷ್ಟಕಾರಕವಾದದ್ದು ಮತ್ತು ಪಾಪರಾಶಿಯನ್ನೇ ತಲೆಯಮೇಲೆ ಹೊತ್ತುಕೊಳ್ಳುವ ಸುಲಭಸಾಧನವೆಂದೇ ನಿರಾತಂಕವಾಗಿ ಹೇಳಬಹುದು. ಇಂಥ ನೀಚರಾದ ಪರಸಮಯಿಗಳು ನಮ್ಮ ಸದ್ಭಕ್ತನು ದಿನದಿನದಲ್ಲಿಯೂ ಹೊಸ ಭಾವಿಗಳನ್ನು ತೋಡುವದನ್ನು ಕಂಡು ಸಹಿಸಲಾರದೆ ವಾರಿಯನ್ನು ಕದಡಿ ಕೆಡಿಸುತ್ತಿದ್ದುದರಿಂದ ಆ ಸ್ಥಳವನ್ನೇ ತೊರೆದು ಮಧುರಾಪುರದ ಜಲವೇ ಬೇಡವೆಂದು ಶಿವಪ್ರೇರಣೆಯಿಂದ ಆ ಊರಿನಿಂದ ೨ ಗಾವುದದ ಅಂತರದ ಮೇಲಿರುವ ಗಹನಕ್ಕೆ ತಕ್ಕ ಸನ್ನಾಹದಿಂದ ಸತಿಸುತರೊಡಗೂಡಿ ಹೊರಟುಹೋದನು.

ಈಶ್ವರಾರ್ಪಣೆಗೆ ಸುಯಿದಾನವಪ್ಪ ಅಂದರೆ ಸುಖಕರವಾಗುವ (ಅಂದರೆ ನಿರ್ಮಲವೂ ವಿಶುದ್ಧವೂ ಅಂತೆಯೇ ಹಿತಕರವಪ್ಪ) ಅಗ್ಗಣಿಗೋಸುಗ ಅಲ್ಲಿ ತನ್ನ ಜಾಯಾಪುತ್ರರೊಡನೆ ಕಥಾಪುರುಷನು ಭಾವಿಯನ್ನು ತೋಡುತ್ತಿದ್ದನು. ವಿಶ್ವಗರ್ಭನನ್ನೇ ತನ್ನ ಹೃದಯದಲ್ಲಿರಿಸಿಕೊಂಡು ಆ ಪ್ರೇಮದೊಬ್ಬುಳಿಯಿಂದಲೇ ಉತ್ಸಾಹವನ್ನು ತಾಳುತ್ತ ಹಗಲಿರುಳೆನ್ನದೆ ಕೂಪವನ್ನು ತೋಡುತ್ತಿರಲು ಭಕ್ತಿಸುಲಭನಾದ ಗೌರೀಪತಿಯು ದಯಗೊಂಡು ಉದಕವನ್ನು ಆಶೀರ್ವದಿಸಲು ಅದನ್ನು ಕಂಡು ಕಥಾನಾಯಕನು ಬಹಳ ಸಂತೋಷಪಟ್ಟು ಕೆಸರಿನ ಪುಟ್ಟಿಗಳನ್ನು ಮೇಲಕ್ಕೆ ಜಗ್ಗುತ್ತಿದ್ದನು. ಇದೆಲ್ಲವನ್ನು ಕೆಲವು ಖಳರಾದ ಸವಣರು ತಿಳಿದು ಶಿವಭಕ್ತನಾದ ಈ ಹುಟ್ಟುಗುರುಡನು ಅನ್ಯರು ಮುಟ್ಟಿದ ನೀರು ಅಪವಿತ್ರವೆಂದು ಭಾವಿಸುತ್ತ ಮತ್ತೆ ಹೊಸದಾಗಿ ತನ್ನ ಅಧಿದೈವತೆಯ ಮಜ್ಜನಕ್ಕೆ ಈ ವನಾಂತರದಲ್ಲಿ ಭಾವಿಯನ್ನು ತೆಗೆಯುತ್ತಿರುವನು ಎಂದು ಗರ್ವದಿಂದ ನುಡಿಯುತ್ತ ಕೆಲವು ಜೈನ ಉಪ್ಪಾರರನ್ನು ಕರೆದು ಆ ಶೈವನು ಭಾವಿಯಲ್ಲಿ ಶೇದುವಾಗ ಆತನು ಹಳ್ಳಕ್ಕೆ ಬೀಳುವಂತೆ ಹಗ್ಗವನ್ನು ಕತ್ತರಿಸಿ ಹಾಕಿರೆಂದು ಕಳಿಸಿಕೊಟ್ಟರು. ಹೀಗೆ ಮಾಡಿದರೆ ಆ ಶಿವಭಕ್ತನು ಅಂತ್ಯವನ್ನು (?) ಐದುವನೆಂದು ಭಾವಿಸಿದರು. ದುರ್ಜನರಿಂದ ಪ್ರೇರಿಸಲ್ಪಟ್ಟ ಕೀಟಕರು ಶಸ್ತ್ರಪಾಣಿಗಳಾಗಿ ಅಲ್ಲಿಗೆ ಬಂದು ತಮಗೆ ಹೇಳಿದಂತೆಯೇ ಮಾಡಿಬಿಟ್ಟರು. ಆಗ ಚರಿತ್ರಪುಂಗವನು ಕೂಪದಲ್ಲಿ ಬೀಳುವಷ್ಟರಲ್ಲಿಯೇ ಆತನು ಶಿವಮಂತ್ರವನ್ನು ಸ್ಮರಿಸುತ್ತ ಮೆಲ್ಲಮೆಲ್ಲನೆ ಮಂಗಲಕರವಾದ ಆ ನುಡಿಯನ್ನೆ ಅನ್ನುವಾಗ ಆಕ್ಷಣವೇ ಭಕ್ತ

ಚಿಂತಾಮಣಿಯಾದ ಸಾಂಬನು ಜೈನರ ಅಸಹ್ಯವಾದ ಅನುಚಿತ ಕಾರ್ಯವನ್ನು ನೋಡಿ ನಮ್ಮ ಹುಟ್ಟುಗುರುಡನಿಗೆ ಚಕ್ಷುಗಳನ್ನು ಅನುಗ್ರಹಿಸಿದನು. ಆಗಲಾ ಕೆರಳಿದ ಸಿಂಹನಂತೆ ನಮ್ಮ ವೀರ ವಿಕ್ರಮನಾದ ಸದ್ಭಕ್ತ ಲಲಾಮನು ಆವೇಶ ದಿಂದ ತನ್ನ ಬಳಿಯಲ್ಲಿರುವ ಹಾರಿ ಗುದ್ದಲಿಗಳಿಂದ ಪಾಪರತರಾದ ಜೈನರ ಕೈ ಕಾಲುಗಳನ್ನು ಮುರಿದನು; ಶಿರಗಳನ್ನು ತರಿದನು. ತಲೆಯನ್ನು ತಪ್ಪಿಸಿ ಕೊಂಡು ಹೋಗುವ ಸವಣರನ್ನು ಬೆನ್ನುಹತ್ತಿ ಅವರನ್ನೆಲ್ಲ ತರಿದನು. ಸದ್ಭಾ ವನಾ ಪೂರಿತನಾದ ನಮ್ಮ ವರಭಕ್ತನ ತೀಕ್ಷ್ಣಗಣಚಾರಕ್ಕೂ ಆತನ ಸತ್ಕಾರ್ಯ ಪ್ರವರ್ತನೆಗೆ ಸರ್ವ ವಿಧದಲ್ಲಿಯೂ ಛಾಯಾನುವರ್ತಿಗಳಾಗಿ ಸಹಾಯಕರಾದ ಸತಿಸುತರ ಪರಿಶುದ್ಧವಾದ ಭಾವನೆಗೂ ಆಗಲೇ ಮಹೇಶನು ಒಲಿದು ಪ್ರತ್ಯಕ್ಷ ನಾಗಲು ಶ್ರೀ ನಿಜಗುಣರು ನಾಟ್ಯಮಿಗೆತಾಂಡಿ ಎಂದು ಕರದಿರುವ ಮತ್ತು ಸುರಂಗ ಮಹಾಕವಿಯಿಂದ ನಾಟ್ಯಮಹಿತಂಡಿಯರು ಎಂದು ನೆರಬಣ್ಣಿಸಲ್ಪಟ್ಟ ಭಕ್ತನು ಮತ್ತು ಆತನ ಪತ್ನಿ ಪುತ್ರರು ಪರಮಾನಂದವನ್ನು ಮಹಾದೇವನಿಗ ಉಕ್ಕೇರಿದ ಭಕ್ತಿ ಜಲದಿಂದ ದಿವ್ಯ ಪಾದಾಭಿಷೇಕವನ್ನು ಮಾಡುತ್ತ ಪುನಃಪುನಃ ತಲೆಬಾಗಿ ಸ್ತುತಿಸುತ್ತಿರಲು ಪರಮಾತ್ಮನು ಅವರೆಲ್ಲರನ್ನೂ ತಾನು ಬರಿಸಿದ ದಿವ್ಯ ವಿಮಾನದಲ್ಲಿ ಕುಳ್ಳಿರಿಸಿ ಅವರಿಗೆ ಗಣಪದವಿಯನ್ನು ದಯಪಾಲಿಸಿದನು.

ನಾಟ್ಯಮಿಗೆತಾಂಡಿಯೂ ಹಾಗೂ ನಾಟ್ಯನಮಿತ್ತಂಡಿಯೂ ಬೇರೆ ಬೇರೆ ಯಾಗಿರುವರು.

**ಪಾಠಾಂತರವು** —ಶ್ರೀ ವ್ಯಾಸೋಕ್ತ ಬಸವ ಪುರಾಣದಲ್ಲಿ ಈತನಿಗೆ (ನಮ್ಮ ಕಥಾನಾಯಕನಿಗೆ) ಇರುವತ್ತಾಂಡಿ ಎಂದು ವರ್ಣಿತವಾಗಿದೆ. ಭೀಮ ಕವಿಕೃತ ಕನ್ನಡ ಬಸವಪುರಾಣದಲ್ಲಿ ಇರುತ್ತಾಂಡಿಯೆಂದು ಬರೆದಿದೆ. ಗುರು ರಾಜಕವಿಕೃತ ಪಂಡಿತಾರಾಧ್ಯ ಚರಿತ್ರದಲ್ಲಿ ಇರಿತ್ತಾಂಡರಿ ಎಂದು ಇರುವದು. ವ್ಯಾಸರು ಹಾಗೂ ಭೀಮಕವಿಯು ಈತನ ಊರು ತಿರುವಾಲೂರು ಎಂದು ಬರೆ ದಿರುವರು; ಆದರೆ ಗುರುರಾಜಕವಿಯು ಯಾವ ಊರೆಂಬುವದನ್ನು ಕಾಣಿಸಿರು ವದಿಲ್ಲ. ಈ ಮೂರು ಗ್ರಂಥಗಳಲ್ಲಿಯೂ ಉಗ್ರ ಶಿವಭಕ್ತನಾದ ಚರಿತ್ರ ನಾಯ ಕನು ಹುಟ್ಟುಗುರುಡನಾಗಿದ್ದನೆಂತಲೂ ಈತನಿಗೆ ಜೈನರು ತ್ರಾಸು ಕೊಟ್ಟದ್ದ ರಿಂದ ಶಿವಕೃಪೆಯಿಂದ ಕಣ್ಣುಗಳನ್ನೂ ಪಡೆದು ಕ್ಷಪಣಕರನ್ನೆಲ್ಲ ಸದೆಬಡೆದನೆಂ ತಲೂ ಉಲ್ಲೇಖವಿದೆ.

ವ್ಯಾಸರ ಬಸವ ಪುರಾಣದಲ್ಲಿ ಮತ್ತು ಭೀಮಕವಿಯ ಬಸವ ಪುರಾಣದಲ್ಲಿ ವರ್ಣಿತವಾದ ನಾಟ್ಯನಮಿತ್ತಂಡಿಯ ಕಥೆಯು ಒಂದೇ ಆಗಿರುವದು. ಈ ಎರಡು ಪುರಾಣಗಳಲ್ಲಿಯೂ ಕಥಾನಾಯಕನ ಊರು ಮಧುರೆ ಎಂಬದಾಗಿ

ಬರೆದದೆ. ಕಥಾಪುರುಷನು ಅಲ್ಲಿಯ ಶಿವಾಲಯಕ್ಕೆ ಹೋಗಿ ಅಲ್ಲಿಯ ತಾಂಡವ ಮೂರ್ತಿಯನ್ನು ನೋಡಿ ಗಾಬರಿಯಾಗಿ ಇದು ಹೀಗೆ ಏಕೆ ಇರುವದು. ಎಂದು ಪೂಜಕನನ್ನು ಕೇಳಲು ಆ (ವಂಚಕನಾದ) ಅರ್ಚಕನು ರೋಗದಿಂದ ಹೀಗೆ ಆಗಿದೆ. ಎಂದು ಹೇಳಲು ರೋಗಪರಿಹಾರ ಮಾಡಲೆಂದು ಆ ಪೂಜಕನಿಗೆ ತನ್ನ ಸರ್ವಸ್ವವನ್ನೆಲ್ಲ ಕೊಟ್ಟುಬಿಟ್ಟನು. ಯಾವಲೇಪನ ಮಾಡಿದಾಗ್ಯೂ ಆ ಮೂರ್ತಿಯು ವಾಶಿಯಾಗದಿರಲು ಚರಿತ್ರಪುರುಷನು ತನ್ನ ಜೀವವನ್ನೇ ಕೊಡುವಷ್ಟರಲ್ಲಿ ವಿಶ್ವರೂಪನೂ, ವಿಶ್ವನಾಭಿ ಹೃದಯನೂ ಆದ ಭಗವಂತನು ಪ್ರತ್ಯಕ್ಷನಾಗಿ ಆತನನ್ನು ಸಂತೈಸಿ ತನ್ನ ತಾಂಡವಲೀಲೆಯನ್ನು ಸವಿಸ್ತಾರವಾಗಿ ತಿಳಿಸಿ ಆತನಿಗೆ ಗಣಪದವಿಯನ್ನು ಅನುಗ್ರಹಿಸಿದನು.



ಓಂ.

# ೩೫. ಒಲಘಂಡ ಮೂರ್ತಿಗಳು.



ಅಗಜೇಶನಿಗೆ ತಮ್ಮ । ಸೊಗಸುತಿಹ ಮೊಳಕೈಯ್ಯೊಳೊಗೆದ ।
ಗಂಧವನೆ ಸಲಿಸಿದೊಲಘಂಡ ಮೂ । ರ್ತಿಗಳನ್ನು ಪರಷಸುರಭೂಜರ್ ॥

[ಶ್ರೀ ನಿಜಗುಣರು]



ಶಿವಭಕ್ತಿಯಿಂದ ಮಿನಗುವ ಚೋಳ ಮಂಡಲದಂತೆ ಸುಂದರ ಪಾಂಡ್ಯನ ರಾಜ್ಯದಲ್ಲಿ ಈಶ್ವರ ಭಕ್ತಿಯು ನೆಲಿಸಿದ್ದುದರಿಂದ ಜಲತರು ಸಸ್ಯಾದಿಗಳಿಂದ ಪೂರಿತವಾಗಿ ಐಶ್ವರ್ಯವಂತರಿಂದ ಆ ಧರೆಯು ಶೋಭಿಸುತ್ತಿತ್ತು. ಆ ಭೂಮಿಯಲ್ಲಿ ಮಧುರಾ ಎಂಬ ಪುರವು ಅನೇಕ ಶಿವಾಲಯಗಳಿಂದ ನಯನ ಮನೋಹರವಾಗಿ ಒಪ್ಪುತ್ತಿತ್ತು. ಅಲ್ಲಿ ರಂಜಿಸುವ ದೇವಾಲಯಗಳಲ್ಲಿ ಚೊಕ್ಕನಾಯಿನಾರಲಿಂಗ ಗುಡಿಯೇ ಅತಿ ಪ್ರಸಿದ್ಧವಾದುದು. ಆ ಈಶ್ವರಾಲಯವು ರಮಣೀಯವಾಗಿ ಕಟ್ಟಲ್ಪಟ್ಟು ಬಹು ವಿಶಾಲವಾಗಿದ್ದುದರಿಂದ ಭಕ್ತವ್ರಜವು ಅಲ್ಲಿ ವಿಶೇಷವಾಗಿ ನೆರೆಯುತ್ತಿತ್ತು. ಧೂಪಾದಿ ಸುಗಂಧ ದ್ರವ್ಯಗಳಿಂದ ಅನುದಿನವು ಆ ದೇಗುಲವು ಘಮಘಮಿಸುತ್ತ ಭಕ್ತ ಸಮೂಹಕ್ಕೆ ಚಿತ್ತಾಕರ್ಷಕವಾಗಿತ್ತು.

ಪ್ರೇಮದಿಂದ ಗೋವೃಂದವನ್ನು ಚನ್ನಾಗಿ ಸಲಹುತ್ತಾ, ಶಿವಭಕ್ತಿ ಸಂಪತ್ತಿನಿಂದ ವಿರಾಜಿಸುವ ಶಿವಭಕ್ತರಿಗೆ ಅವರಿಗಿಷ್ಟವಾದ ಸಕಲ ವಸ್ತುಗಳನ್ನು ನಿರಪೇಕ್ಷ ಸದ್ಭಾವನೆಯಿಂದ ಒದಗಿಸಿಕೊಡುತ್ತ ಹೆಸರಾದ ಒಲಘುಂಡನೆಂಬ ಶೈವನು ಬಹು ಧನಾಢ್ಯನಾಗಿ ಆ ಪಟ್ಟಣದಲ್ಲಿ ಅಲಂಕಾರ ಪ್ರಾಯನಾಗಿ ಯಶೋವಂತನಾಗಿ ಮೆರೆಯುತ್ತಿದ್ದನು. ಆತನು ದಿನಾಲು ತ್ರಿಕಾಲದಲ್ಲಿಯೂ ಆ ವಿಖ್ಯಾತವಾದ, ಮೃಗಪಾಣಿಯಾದ ಶೂಲಿಯ ನಿಲಯಕ್ಕೆ ಹೋಗಿ ಅಷ್ಟ ವಿಧಾರ್ಚನೆಯನ್ನು ಆಗಮೋಕ್ತವಾಗಿ ಮಾಡಿ ಶಿವನಿರ್ಮಾಲ್ಯವನ್ನು ಶಿರಸ್ಸಿನಲ್ಲಿ ತಳೆದು ಜಾಗರೂಕನಾಗಿ ಆ ಶಿವಶೇಷ (ನಿರ್ಮಾಲ್ಯ)ವನ್ನು ಜನರು ತುಳಿದಾಡದ ಸ್ಥಳದಲ್ಲಿಯಾಗಲಿ, ಪವಿತ್ರ ಜಲಾಶಯಗಳಲ್ಲಿಯಾಗಲಿ ನಿಕ್ಷೇಪಿಸುತ್ತಿದ್ದನು. ಶಿವ ಪಂಚಾಕ್ಷರ ಮಹಾಮಂತ್ರವನ್ನು ಜಪಿಸುವಾಗ ಆತನು ಹೊಸ ಗೋಮಯದಿಂದ ಸಾರಣೆಯನ್ನು ಮಾಡಿದ ಸ್ಥಳದಲ್ಲಿಯೇ ಆಸನವನ್ನು ಹಾಕುತ್ತಿದ್ದನು. ಮುಕ್ತಿನಾಥನ ಮೈ ಬೆಳಗೆಂದು ಜಗತ್ತ್ರಯದಲ್ಲಿಯೂ ಹೆಸರಾದ ವಿಭೂತಿಯನ್ನು ಧರಿಸಲೋಸುಗ ತೆಗೆದುಕೊಳ್ಳುವಾಗ (ಆ ಅಪ್ರತಿಮ ಭಸಿತದ ಬಹುಸೂಕ್ಷ್ಮವಾದ ಕಣಗಳು ಕೆಳಗೆ ಉದರಬಾರದೆಂದು ಮತ್ತು ಆ ಜಿನುಗಾದ ಸಣ್ಣಸಣ್ಣ ಕಣಗಳನ್ನು ದಾಟುವದರಿಂದ ಮಹಾದೋಷ ಸಂಘಟಿಸುವದೆಂದರಿತು) ಬಹು ಎಚ್ಚರಿಕೆಯಿಂದ ಮಡಿಯ ಬಟ್ಟೆಯಲ್ಲಿಟ್ಟುಕೊಂಡಾಗಲಿ ಅಥವಾ ಅದರ (ಅಂದರೆ ವಿಭೂತಿಘಟ್ಟಿಯ) ಅಳತೆಗೆ ಸರಿಯಾಗಿರುವ ಪಾತ್ರೆಯಲ್ಲಾಗಲಿ ಇಟ್ಟುಕೊಂಡು ಅನಂತ ಮಹಿಮನ ದಿವ್ಯನಾಮಗಳನ್ನು ಸ್ಮರಿಸುತ್ತ ಭಕ್ತಿಯಿಂದ ನಕ್ರಮವಾಗಿ ತಳೆಯುತ್ತಿದ್ದನು. ಆತನ ಸದಾಚಾರದಲ್ಲಿ ಮುಖ್ಯವಾದ ನಿಯಮವೆಂದರೆ ಪ್ರತಿದಿನವು ಅತ್ಯಂತ ಸುವಾಸಿಕವಾದ ನವಗಂಧವನ್ನು ಈಶ್ವರನಿಗೆ ಅರ್ಪಿಸುವದಾಗಿತ್ತು. ಈ ರೀತಿಯಾಗಿ ಕೆಲವು ಸಂವತ್ಸರಗಳು ಸಾಗಲು ನಮ್ಮ ವರಭಕ್ತನು ನಿಷ್ಕಾಪಟ್ಯದಿಂದ ನಿಸರ್ಗಜನ್ಯವಾದ ಅನುರಾಗದಿಂದ ದಿನದಿನದಲ್ಲಿಯೂ ಆ ಚೊಕ್ಕನಾಯಿನಾರ ಮಹಾಲಿಂಗ ಮೂರ್ತಿಗೆ ಹೊಸ ಗಂಧವನ್ನು ಸಮರ್ಪಿಸುತ್ತಿರಲು ಆ ಸುಗಂಧದ ಕಂಪು ಕೈಲಾಸದವರೆಗೆ ವ್ಯಾಪಿಸಲು ನಿಜಜ್ಞಾನದಾಗರನಾದ ನೀಲಕಂಠನಿಗೆ ವೇದ್ಯವಾಗಿ ಆ ಕೃಪಾಸಿಂಧುವಿನ ಇಚ್ಛೆಗನುಗುಣವಾಗಿಯೋ ಏನೋ ಎಂಬಂತೆ ನಮ್ಮ ಚರಿತ್ರನಾಯಕನಿಗೆ ದಿನಕ್ರಮದಲ್ಲಿ ಬಡತನವು ಆವರಿಸಿತು. ಬರಬರುತ್ತ ಕಥಾಪುರುಷನಿಗೆ ಹೀನಸ್ಥಿತಿಯು ಪ್ರಾಪ್ತವಾಗಿ ನಿರ್ಗತಿಕನಾಗಲು ಮಹಾದೇವನಿಗೆ ಉತ್ತಮವಾದ ಚಂದನವನ್ನು ಧರಿಸುವ ವ್ರತಕ್ಕೆ ಭಂಗಬರಲು ಆತನು ಧೈರ್ಯಗೆಡದೆ ಇಪ್ಪತ್ತೆರಡು ಉಪವಾಸವನ್ನು ಮಾಡಿದನು. ದಯಾಮಯನಾದ ಸರ್ವೇಶ್ವರನೇ ಧನಾಭಾವ, ಶರೀರಜಾಡ್ಯ, ಬಂಧುಜನವಿಯೋಗ, ಸ್ವದೇಶೋಚ್ಚಾಟನೆ, ಇನ್ನೂ ಅನೇಕ ತರತರದ ಕಷ್ಟಗಳನ್ನು

ತಂದೊಡ್ಡಿ ನಿಜಭಕ್ತರನ್ನು ಅನೇಕ ಪರಿಯಾಗಿ ಪರೀಕ್ಷಿಸುವದು ನಿನ್ನ ಹುಟ್ಟು ಗುಣವಾಗಿರುವದಲ್ಲವೇ? ಇದಕ್ಕೆ ನಾನಂಜೆನು. ನಾನಂಜೆನು ಎಂದು ಧೀರತನದಿಂದ ಶಿವಚಿಂತನೆಯಲ್ಲಿಯೇ ಮಗ್ನನಾಗಿರಲು ಕಾರುಣ್ಯನಿಧಿಯಾದ ತ್ರಿಪುರಾರಿಯು ಆ ಭಕ್ತನ ಕನಸಿನಲ್ಲಿ ಬಂದು ವಿವೇಕಶಾಲಿಯಾದ ಶರಣನೇ ನೀನು ಈ ರೀತಿಯಲ್ಲಿ ಕಳವಳಿಸುವದೇತಕ್ಕೆ? ನಿನ್ನ ಶ್ರೇಷ್ಠವಾದ ಮೊಳಕೈಯ್ಯಲ್ಲಿಯೇ ದಿವ್ಯ ಗಂಧವಿರುತಿರಲು ಬೇರೆ ಕೊರಡನ್ನು ಅರಸುವದು ಹಿತವೋ ಎಂದು ಅಪ್ಪಣೆ ಮಾಡಿ ಮೃಡಾಣೀಪತಿಯು ಮಾಯವಾದನು. ಆಗಲಾ ನಮ್ಮ ಚರಿತ್ರಪುಂಗವನು (ಆಗರ್ಭ ಅಂಧಕನು ಸಂಕಟ ಸಮಯದಲ್ಲಿ ನಯನಗಳನ್ನು ಪಡೆದರೆ ಎಷ್ಟು ಆನಂದಪಡುವನೋ ಅದಕ್ಕೂ ಅತಿಶಯವಾಗಿ) ಪರಮ ಸಂತೋಷಗೊಂಡು ಪ್ರತಿದಿವಸವೂ ಪೂಜಿಸುವ ಶಂಕರನ ನಿವಾಸಕ್ಕೆ ಬಂದು (ಜಲ, ಗಂಧ, ಅಕ್ಷತೆ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲವೆಂಬ) ಅಷ್ಟವಿಧಾರ್ಚನೆಯನ್ನು ಮಾಡಿ ನೂತನವಾಗಿ ಕಂಡುಹಿಡಿದ ಅಪೂರ್ವ ಗಂಧವನ್ನು ಮಿಗಿಲಾದ ಪ್ರೀತಿಯಿಂದ ಅಣಿಮಾಡಿ ಬಿಲ್ವದಳಗಳಿಗೆ ಲೇಪಿಸಿ ಭಕ್ತಿದರವಶತೆಯಿಂದ ಆ ಪವಿತ್ರ ಬಿಲ್ವದಳಗಳನ್ನು ಶಿವನಾಮ ಸಂಕೀರ್ತನ ಪೂರ್ವಕವಾಗಿ ಧರಿಸುತ್ತ ಇನ್ನು ನನ್ನ ಗಂಧದ ನಿಯಮಕ್ಕೆ ಲೋಪಬರುವದುಂಟೀ? ಎಂದು ಹೇಳುತ್ತ ಪ್ರೇಮರಸವು ಉಕ್ಕೇರುತ್ತ, ನಲಿದಾಡುತ್ತ ಮೈಯ್ಯಲ್ಲಿ ಕಂಪವಾಗಿ ಆನಂದಾಶ್ರುಗಳು ತಮ್ಮಿಂದತಾವೇ ಹರಿಯಹತ್ತಿದವು. ವಿಶ್ವಚಕ್ಷುವಾದ ಸದಾಶಿವನಿಗೆ ನಮ್ಮ ಭಕ್ತಲಲಾಮನ ಸ್ಥಿತಿಯು ವೇದ್ಯವಾಗದೆ ಉಳಿಯುವದೆಂತು? ಆಗಲೇ, ಮುಪ್ಪನ್ನು ಮತ್ತು ಮರಣವನ್ನುಗೆದ್ದು ಮೃತ್ಯುಂಜಯನೆಂದು ಕೀರ್ತಿಯುತನಾದ ಮುಕ್ತಿಪತಿಯೆನಿಸಿದ ಶಂಕರನು ಭಕ್ತನ ಸಹಜವಾದ ಮತ್ತು ಪವಿತ್ರವಾದ ಭಕ್ತಿಭಾವಕ್ಕೆ ಮೆಚ್ಚಿ ನಿಜರೂಪದಿಂದ ಪ್ರಕಟನಾಗಲು (ನಿರ್ಜನಾರಣ್ಯದಲ್ಲಿ ಪಾಂತಸ್ಥನು ಗಾಢಾಂಧಕಾರದಲ್ಲಿ ದುಃಖಿಸುವ ವೇಳೆಯಲ್ಲಿ ಸ್ವಚ್ಛವಾದ ಪೂರ್ಣಚಂದ್ರೋದಯವಾಗಲು ಆ ಪ್ರಯಾಣಿಕನು ಹಿಗ್ಗುವಂತೆ) ಕಥಾನಾಯಕನು ಆನಂದಾಬ್ಧಿಯಲ್ಲಿ ತೇಲಾಡುತ್ತ ಭಕ್ತ್ಯಾವೇಶದಿಂದ ಸ್ತುತಿಸುತ್ತ ಸ್ಮರಹರನ ಅಂಘ್ರಿಗಳಲ್ಲಿ ಹೊರಳಾಡಿದನು. ನಿಜಭಕ್ತನನ್ನು ಹಿಡಿದೆತ್ತಿ ಮೈದಡವಿ, ಸಂತೈಸಿ ಮಹೋನ್ನತವಾದ ಗಣಪದವಿಯನ್ನು ಆಶೀರ್ವದಿಸಿ ಯೋಗಿಶ್ರೇಷ್ಠನಾದ ಉಮೇಶನು ಅಂತರ್ಧಾನನಾದನು.



ಓಂ.

# ೩೬. ಅಃಪೂತಿಯರು.



ಬಿಡದೆ ವಾಗೀಶನಂ ಮೃಡನೆಂಬ ನಿಷ್ಠೆಯನು । ಪಿಡಿದು ಗಣಪದವ
ನೊಡನೈದಿದಃಪೂತಿ । ಯಡಿಯರಂ ಕೀರ್ತಿಸುವೆನೊಪ್ಪಿ ॥

[ಶ್ರೀ ನಿಜಗುಣರು]




ವಿಗಳಿಗೆ ಜೀವನವಾಗಿರುವ ಜಲ-ಧಾನ್ಯ ಸಮೃದ್ಧಿಯಿಂದ ಹೊಲ-ಗದ್ದೆ-ವನಗಳು ರಮಣೀಯವಾಗಿ ಕಂಗೊಳಿಸುತ್ತಿದ್ದುದರಿಂದ ಚೋಳಧರೆಯು ಪುಣ್ಯಭೂಮಿಯಾಗಿ ವಿರಾಜಿಸುತ್ತಿತ್ತು. ಅಂತು ಮೆರೆಯುವ ನಾಡಿನಲ್ಲಿ ಸಕಲ ಸಂಪದಗಳಿಂದ ಮೆರೆಯುವ, ಅನೇಕ ಶಿವಾಲಯಗಳಿಂದೊಪ್ಪುವ ಹರ ಭಕ್ತರಿಂದಲಂಕೃತವಾದ ತಿರುವಣ್ಣೂರ ಎಂಬ ಪುರವು ಸುಶೋಭಿಸುತ್ತಿತ್ತು. ಇಂತೆಸೆವಾಪಟ್ಟಣದಲ್ಲಿ ಸಿರಿಯರಸನಂತೆ ಸೌಭಾಗ್ಯಾತಿಶಯದಿಂದ ಕೀರ್ತಿಯುತನಾದ **ಅಃಪೂತಿ** ಎಂಬ ಅಭಿಧಾನದಿಂದ ಹೆಸರ್ವಡೆದ ನರೋತ್ತಮನು ಸದ್ಭಕ್ತರ ಸಂಗದಲ್ಲಿ ಯಾವಾಗಲೂ ಪ್ರೀತಿಯಿಂದ ಕಲೆಯುತ್ತಿದ್ದುದರಿಂದ ಆತನಲ್ಲಿ ಈಶ್ವರ ಭಕ್ತಿಯು ಅಂಕುರಿಸಿ, ಭವಾರಣ್ಯವನ್ನು ಅತಿಕ್ರಮಿಸಿ ನಿರಾಕಾರ ಮೂರ್ತಿಯೂ, ನಿಷ್ಕಲನೂ, ನಿಃಸಂಗನೂ, ಆದ ಪಶುಪತಿಯೆನಿಸುವ ನೀಲಕಂಠನ ಸಾಮೀಪ್ಯವನ್ನು ಪಡೆಯಬೇಕೆಂದು ಹವಣಿಸಿ ಸಮರ್ಥನಾದ ವರಗುರುವಿನಿಂದ ಉಪದೇಶವನ್ನು ಹೊಂದಬೇಕೆಂಬ ಉತ್ಕಟೇಚ್ಛೆಯುಂಟಾಗಿ ಹಗಲಿರುಳೆನ್ನದೆ ತದೇಕಜ್ಞಾನ ಪರನಾಗಿದ್ದನು. ಈಶ್ವರೀ ತಂತ್ರವು ಅತ್ಯಾಗಾಧವಾದುದೇ ಸರಿಯು :—ನಮ್ಮ ಚರಿತ್ರನಾಯಕನೆಡೆಗೆ ಓರ್ವ ಶಿವಭಕ್ತನು ಬಂದು, **ತಿರಿವರಿಗೆ** ಎಂಬ ನಗರದಲ್ಲಿ ಮೊದಲು ಜಿನಭಕ್ತನಾಗಿದ್ದು ನಂತರ ಪ್ರೌಢ ಶಿವಭಕ್ತನಾಗಿ ಭಕ್ತಿ-ಜ್ಞಾನ-ವೈರಾಗ್ಯ ವಿಭೂಷಿತನಾಗಿ ಈಶ್ವರ ಕೃಪಾಪಾತ್ರನಾಗಿ **ವಾಗೀಶ**ನೆಂಬ ಮಂಗಲನಾಮದಿಂದ ಮೆರೆಯುವ ಮಾನವಶ್ರೇಷ್ಠನು ಶಿವಭಕ್ತ ಸಮೂಹಕ್ಕೆ ಆಭರಣನಾಗಿ ಪ್ರಕಾಶಿಸುವನು; ಆತನಿಂದಲೆ ನಿನಗೆ ಗತಿಯು

ಎಂದು ಉಸುರಿದನು. ಇದನ್ನು ಕೇಳಿದೊಡನೆ ಕಥಾನಾಯಕನು ಪರಮಾನಂದವನ್ನು ಹೊಂದಿ **ವಾಗೀಶ**ಪುಂಗವನೇ ನನಗೆ ಗುರುವೆಂದು ಮನಸ್ಸಾಕ್ಷಿಯಾಗಿ ಭಾವಿಸಿ ಅವರನ್ನು ಕಾಣುವ ಸಮಯವನ್ನೇ ಸಾಧಿಸುತ್ತ ಬೇರೊಂದನ್ನು ಚಿಂತಿಸದೆ, ಬಯಸದೆ ತನ್ನ ಮಗನಿಗೆ ಆ ಸದ್ಗುರುವಿನ ಪವಿತ್ರ ನಾಮವನ್ನಿಟ್ಟು ತನ್ನ ಅನೇಕ ಸೊತ್ತು-ಪದಾರ್ಥಗಳಿಗೆ ವಾಗೀಶ ಎಂದು ಪರಿಶುದ್ಧವಾದ ಭಕ್ತಿಯಿಂದ ಹೆಸರಿಟ್ಟು ಹರ್ಷಪಡುತ್ತಿದ್ದನು ಈ ರೀತಿಯಾಗಿ ಅತುಲವಾದ ಶಿವ ಸಂಭ್ರಮದಿಂದಿರುತ್ತಿರಲು ಶೈವಕುಲದೀಪಕನಾದ ಶಿವಭಕ್ತಿಯಿಂದ ಪ್ರಜ್ವಲಿಸುವ ವಾಗೀಶನು ನಾಡಿನಲ್ಲಿರುವ ಸಮಸ್ತ ಶಿವಾಲಯಗಳನ್ನು ಸೇರಿ ಫಲಾಪೇಕ್ಷೆಯಿಲ್ಲದೆ ನಿಷ್ಕಲಂಕವಾದ ಅಚ್ಚಳಿಯದ ಭಕ್ತಿಯಿಂದ ಶಿವಲಿಂಗಗಳನ್ನು ಅರ್ಚಿಸುತ್ತ ನಮ್ಮ ಚರಿತ್ರಪುರುಷನ ಸ್ಥಳವಾದ **ತಿರುವಣ್ಣೂರ** ಪಟ್ಟಣದ ಹೊರಭಾಗದಲ್ಲಿರುವ ಉದ್ಯಾನದಬಳಿಯಲ್ಲಿ ಬರುತ್ತ ಇದು ಯಾರ ತೋಟವೆಂದು ಅಲ್ಲಿ ಎದುರಿಗೆ ಬರುವ ಜನರನ್ನು ಕೇಳಿದನು. ಅವರು ಇದು ವಾಗೀಶ ಆರಾಮವು, ಇದು ವಾಗೀತ ಛತ್ರಶಾಲೆಯು, ಇದು ವಾಗೀಪ ಭುವನವು, ಇದು ವಾಗೀಶ ಗ್ರಂಥಭಾಂಡಾರವು, ಇದು ವಾಗೀಶ ಪಾಠಶಾಲೆಯು, ಇದು ವಾಗೀಶ ವ್ಯಾಯಾಮ ಮಂದಿರವು ಹೀಗೆ ವಾಗೀಶ ನಾಮದಿಂದಲೇ ಕರೆಯಲ್ಪಡುವ ಸ್ಥಲಗಳನ್ನು ಪದಾರ್ಥಗಳನ್ನು ಉತ್ಸಾಹದಿಂದ ಮನೋಹರವಾಗಿ ವರ್ಣಿಸುವದನ್ನು ಕೇಳಿ ಸಂತೋಷಭರಿತನಾದನು.

ಊರಮುಗ್ಗಲಲ್ಲಿರುವ ನಂದನ ವನದಂತಿರುವ ಉದ್ಯಾನದಲ್ಲಿ ಪುರುಷಪುಂಗವನಾದ **ವಾಗೀಶನು** ಕೃಪೆಯಿಂದ ದಯಮಾಡಿಸಿರುವನೆಂಬ ಕಲ್ಯಾಣಪ್ರದವಾದ ಸಂಗತಿಯನ್ನು ಕೇಳಿ ಚರಿತ್ರನಾಯಕನು ಬಹಳ ಆನಂದಪಟ್ಟು ಪುರವನ್ನು ಶೃಂಗರಿಸಿ ಶಿವಭಕ್ತರನ್ನೊಡಗೊಂಡು ಅತಿಥಿರೂಪದಿಂದ ಶೋಭಿಸುವ ಗುರುಗಳನ್ನು ಇದಿರ್ಗೊಂಡು ಅವರಿಗೆ ದೂರದಿಂದಲೆ ಸಾಷ್ಟಾಂಗವಾಗೆರಗಿ ಬಳಿಸಾರ್ದು ಚರಣ ಕಮಲಗಳಿಗೆ ಉಕ್ಕೇರುತ್ತಿರುವ ಭಕ್ತಿಯಿಂದಾನತನಾಗಿ ಗದ್ಗದ ಕಂಠದಿಂದ ತೊದಲಿಸುತ್ತ ಗುರುವರ್ಯರೇ ನಿಜಗೃಹಕ್ಕೆ ದಯಮಾಡಿಸಿರೆಂದು ಬಿನ್ನವಿಸಿ ತನ್ನ ಮನೆಗೆ ಕರೆದುಕೊಂಡು ಬಂದು ಉಚ್ಚವಾದ ಸಿಂಹಾಸನದ ಮೇಲೆ ಮುಹೂರ್ತಗೊಳಿಸಿ ಮಹಾಪಾದಾಭಿಷೇಕವನ್ನು ಭಕ್ತಿ ಪುರಸ್ಸರವಾಗಿಗೈದು ಕ್ರಮವಾಗಿ ಪೂಜೆಯನ್ನು ಪೂರೈಸಿ ಸಮಯವನ್ನು ನಿರೀಕ್ಷಿಸಿ ಸ್ವಾಭಾವಿಕ ವಿನಯ ಪೂರ್ವಕವಾಗಿ ದೈನ್ಯದಿಂದ:—ಭೋ ಗುರುವರ್ಯನೇ ತಡೆ ಇಲ್ಲದೆ ಆ ಚಂದ್ರಾರ್ಕವಾಗಿ ತಿರುಗುವ ಭವಮಾಲೆಯಲ್ಲಿ ಪರಿಮಿತಿ ಇಲ್ಲದೆ ಎಷ್ಟು ಕಾಲ ನಿಜಬೋಧೆ ಇಲ್ಲದೆ ಕಾತರಿಸಲಿ, ಬಳಲಲಿ, ಕೊರಗಲಿ ಪ್ರತ್ಯಕ್ಷ ಶಿವನಾಗಿರುವ ಗುರುರೂಪ ಧರಿಸಿರುವ ಮಹಾ ಪ್ರಭುವೇ ಸದ್ಬೋಧೆಯನ್ನು ಮಾಡಿ ನನ್ನನ್ನು

ಉದ್ಧರಿಸರಿ ಎಂದು ಅಡಿಗಡಿಗೆ ಪ್ರಣಾಮವನ್ನು ಮಾಡುತ್ತ ಪ್ರಾರ್ಥಿಸಿದನು. ನಿರ್ಮಲ ಹೃದಯದಿಂದ ಶರಣಾಗತನಾಗಿ ತಲೆಬಾಗಿ ಆಚಾರ್ಯನ ಅಡಿಗಳಲ್ಲಿಯೆ ದೃಷ್ಟಿಯನ್ನು ನೆಲೆಗೊಳಿಸಿ ನಿಂತಿರುವ ಶಿಷ್ಯನನ್ನು ವಾಗೀಶನು ಹಸನ್ಮುಖನಾಗಿ ಕರುಣಾಕಟಾಕ್ಷದಿಂದ ನೋಡಿ ನೀತಿಯನ್ನೂ, ಸದಾಚಾರವನ್ನೂ, ಶಿವಧರ್ಮ ರಹಸ್ಯವನ್ನೂ ತಿಳಿಸಿ ಪರಾ-ಪಶ್ಯಂತಿ-ಮಧ್ಯಮಾ-ವೈಖರಿ ಎಂಬ ಶಿವ ಸ್ಮರಣೆ, ಈಕ್ಷಣೆ, ಸ್ತುತಿ, ಪೂಜೆ ಇವುಗಳ ಪರಿಯನ್ನು ವಿವರಿಸಿ ನಿರಂತರ ಮುಕ್ತಿದಾಯಕವಾದ (ವಟಬೀಜದಂತೆ) ಅತಿ ಸೂಕ್ಷ್ಮರೂಪದಲ್ಲಿದ್ದು ಪಠಿಸುವ ಭಕ್ತನಿಗೆ ಮಂಗಲಾತಿಶಯವನ್ನು ಒದಗಿಸುವ) ಪರಶಿವ ಮಹಾಮಂತ್ರವನ್ನು ಕಾಲವರಿತು ಉಚಿತಸ್ಥಾನದಲ್ಲಿ ಉಪದೇಶಿಸಿ ಈ ನಿಯಮವನ್ನು ನಿರ್ವಿಘ್ನವಾಗಿ ಪಾಲಿಸುವದೆಂದು ಕಟ್ಟುಮಾಡಿದನು.

ಆಗಲಾ ಪರಿ ಪಕ್ವದೆಶೆಯಲ್ಲಿ ಅಡಿ ಇಟ್ಟ ಶಿಷ್ಯೋತ್ತಮನಿಗೆ ಮೋಕ್ಷಪ್ರದವಾದ ಘನ ಗುರುವಿನ ಮಂತ್ರೋಪದೇಶವು ಕೂಡಲೇ ಫಲಿಸಿತೋ ಎಂಬಂತೆ ಆತನಲ್ಲಿ ಶೀಘ್ರವಾಗಿ ಗುರು ಕಾರುಣ್ಯವು ನೆಲೆಗೊಂಡು ಮಾಯೆಯಳಿದು ಸಮಸ್ತ ಬಂಧು ಬಾಂಧವ ಇಷ್ಟಮಿತ್ರ ಪರಿವಾರವನ್ನೆಲ್ಲ ಬಿಟ್ಟು ಗುರುಪಾದ ಸೇವೆಯನ್ನೆ ಮಾಡಿಕೊಂಡು ಇರುವೆನೆಂದು ನಿಶ್ಚೈಸಿ ಆ ರೀತಿಯಾಗಿ ಅವರನ್ನು ಮೊರೆಹೊಕ್ಕನು. ಕಾರ್ಯತಃ ಆಚಾರ್ಯನಾಗಿರುವ ಮಹಾನುಭಾವನ ಪರಿಚರ್ಯವನ್ನು ಮಾಡುತ್ತ ಕೈಂಕರ್ಯದಲ್ಲಿ ನಿರತನಾಗಿದ್ದು ಸದ್ಗುರುವಾದ ವಾಗೀಶನು ಪಾಡುವ ತಿರುಪಾಡುಗಳನ್ನು ಅತಿ ಶ್ರದ್ಧೆಯಿಂದ ಕಲಿತು ಸಂಗೀತದ ಪರಿಯನ್ನು ಚನ್ನಾಗಿ ಪರಿಚಯಮಾಡಿಕೊಂಡು ಪ್ರೇಮೋದ್ರೇಕದಿಂದ ಲಿಂಗದೇವನನ್ನು ಆ ತಿರುಪಾಡುಗಳಿಂದ ಬೇಸರಿಲ್ಲದೆ ಅನುದಿನವೂ ಸ್ತುತಿಸುತ್ತ ಅರ್ಪಣಾನುಕ್ರಮವನ್ನು ಅರಿತವನಾದುದರಿಂದ ಆ ಶಿವಗೀತೆಯಿಂದ ಉದಯಿಸುವ ಅನುಪಮಾನಂದವನ್ನು ಶಿವಾರ್ಪಣಮಾಡುತ್ತ ಶಿವಲೀಲೆಯಿಂದ ಇರುತ್ತಿದ್ದನು.

ಸಾಮಗಾನ ಪ್ರಿಯನಾದ ಸಾಂಬನು ಕೈಲಾಸದಲ್ಲಿ ತನ್ನ ಗಣಸಮೂಹದೊಡನೆ ತುಂಬುರರೆಂಬ ಸಂಗೀತ ವಿದ್ಯಾವಿಶಾರದರಿಂದ ಅವರ ಕರ್ಣಾನಂದಕರವಾದ ರಾಗಗಳ ನೈಪುಣ್ಯವನ್ನು ಪರೀಕ್ಷಿಸುತ್ತ ಸುಖಾಸೀನನಾಗಿರುವದು ಸಕಲರು ತಿಳಿದ ಸಂಗತಿಯು. ನಮ್ಮ ಚರಿತ್ರಪುಂಗವನ ತಿರುಪಾಡುಗಳ ಮಂಜುಳವಾದ ಗಾನದ ಮಾಧುರ್ಯವು ತುಂಬುರರ ನಾದಕ್ಕಿಂತಲೂ ಮಿಗಿಲಾಗಿರುವದೆಂದು ಸರ್ವಸಾಕ್ಷಿಭೂತನಾದ ವಿಶ್ವನಾಥನು ತನ್ನ ರಸಿಗೆ ಹೇಳಲು ಕಾತ್ಯಾಯನಿಯು ಆತನನ್ನು ಇಲ್ಲಿಗೆ ಕರಿಸಬೇಕೆಂದು ಪ್ರಾಣನಾಥನಿಗೆ ನಿವೇದಿಸಿದಳು.

ಮಂಗಲಪ್ರದನಾದ ಮಹೇಶನ ಮಹಾ ವಾಕ್ಯಗಳನ್ನು ಪಾಲಿಸುವದಕ್ಕಾಗಿ

ನಂದೀಶನು ಚೋಳಧರೆಗೆ ಪುಷ್ಪಕವಿಮಾನದೊಡನೆ ಬಂದು ತಿರಿನಾವುಕರ * ಪೂಜಾನಿಲಯದಲ್ಲಿ ಗುರುಧ್ಯಾನಪರನಾದ ಅಃಪೂತಿಯನ್ನು ನೋಡಿ ಸಂತೋಷಗೊಂಡು ಆತನ ಗುರುಮೂರ್ತಿಗಳಿಗೆ:—ನೀವು ಪಾಡಿದ ತಿರುಪಾಡುಗಳನ್ನು ರಾಗ ರಸಗಳನ್ನು ಅರಿತು ಚನ್ನಾಗಿ ಹಾಡಬಲ್ಲನಾದ ನಿಮ್ಮ ಶಿಷ್ಯನಾದ **ಅಃಪೂತಿಯ** ಗಾನವನ್ನು ರುದ್ರಾಣಿಯು ಕೇಳಲಿಕ್ಕೆ ಅಪೇಕ್ಷಿಸುತ್ತಿರುವುದರಿಂದ ಆತನನ್ನು ಶಿವಲೋಕಕ್ಕೆ ತರುವದಾಗಿ ಈಶನು ಅಪ್ಪಣೆಮಾಡಿರುವನು. ಆದ್ದರಿಂದ ನೀವು ಅದರಂತೆ ಅನುಕೂಲಿಸಬೇಕೆಂದು ಹೇಳಲು ಧ್ಯಾನಸಮಾಧಿಯಲ್ಲಿದ್ದ ಶಿಷ್ಯನನ್ನು ವಾಗೀಶನು ಎಚ್ಚರಿಸಿದನು. ಆಗ ಚರಿತ್ರನಾಯಕನು ನೈಸರ್ಗಿಕವಾದ ಘನಭಕ್ತಿಭಾವದಿಂದ ಗುರುಪಾದ ಸರಸಿಜಗಳಿಗೆ ಪೊಡಮಟ್ಟು ಪ್ರಭು ಆಜ್ಞೆಯನ್ನು ನಿರೀಕ್ಷಿಸುತ್ತಿದ್ದನು. ಕಾರುಣ್ಯರಸದಿಂದ ವಾಗೀಶನು:—ಎಲೆ ಮಗನೇ ನೀನು ನಮ್ಮ ತಿರುಪಾಡುಗಳನ್ನು ರಾಗರಸಗಳನ್ನರಿತು ಹಾಡುವದನ್ನು ತಿಳಿದು ಮಹಾಕಾಲ ಮೂರ್ತಿಯು ಮೆಚ್ಚಿ ತನ್ನರಸಿಯಾದ ಗೌರಿಯ ಸಮ್ಮುಖದಲ್ಲಿ ಹಾಡುವದಕ್ಕಾಗಿ ಕರತರುವದಕ್ಕೆ ಈ ನಂದಿನಾಥನನ್ನು ಕಳಿಸಿರುವನು. ನೀನು ಧನ್ಯನಾದೆ ಹೋಗೆನಲು ಮಹಾ ಪ್ರಸಾದವೆಂದು ಗುರುಚರಣ ಯುಗ್ಮಕ್ಕೆ ಮಣಿದು ನಂದಿನಾಥನ ಪಾದಕ್ಕೆರಗಲು ಯಾವಾಗಲೂ ನಂದಿಸುತ್ತಿರುವ ನಂದಿನಾಥನು ಅಃಪೂತಿಯನ್ನು ದಿವ್ಯವಿಮಾನದಲ್ಲಿ ಕುಳ್ಳಿರಿಸಿದನು. ದೇವಯಾನವು ಕ್ಷಣಾರ್ಧದಲ್ಲಿಯೇ ಪ್ರಮಥರ ಸಮುದಾಯದಲ್ಲಿರುವ ಶಿವಶಿವೆಯರ ಸನ್ನಿಧಿಗೆ ಬಂದು ಇಳಿಯಿತು. ತಾಯಿತಂದೆಗಳಾದ ಪಾರ್ವತೀ ಪರಮೇಶ್ವರರನ್ನು ನಮ್ಮ ಸದ್ಭಕ್ತ ಲಲಾಮನು ಕಂಡು ಮೇರೆದಪ್ಪಿದ ಪ್ರೇಮದಿಂದ ಪುನಃ ಪುನಃ ನಮಸ್ಕರಿಸಿ ಹರ್ಷದಿಂದ ಸ್ತುತಿಸಿ ಕರಗಳನ್ನು ಜೋಡಿಸಿ ನಿಂತುಕೊಳ್ಳಲು ಆಗ ಆ ಮಾತಾಪಿತರು ತಿರುಪಾಡುಗಳನ್ನು ಪಾಡೆಂದು ಅಪ್ಪಣೆಮಾಡಿದರು. ಚರಿತ್ರನಾಯಕನ ಅಪ್ರತಿಮ ಶಿವಭಕ್ತಿಯುಕ್ತವಾದ ಅದ್ವಿತೀಯವಾದ ಗಾನಕ್ಕೆ ಜಗಜ್ಜನನೀಜನಕರು ಮೆಚ್ಚಿ ಆತನಿಗೆ ಗಣಪದವಿಯನ್ನು ಅನುಗ್ರಹಿಸಿದರು.



* ತಿರಿನಾವುಕ ಎಂಬುವದು ವಿಶ್ವಾಭಿರಾಮನಾದ ಶಂಕರನು ವಾಗೀಶನಿಗೆ ಇಟ್ಟ ಹೆಸರು. ಈ ವಿಷಯವು ವಾಗೀಶನ ಲೇಖದಲ್ಲಿ ಬರುವದು.

ಓಂ.

# ೩೭. ವಾಗೀಶನು.



ಕಲುಷರೂಪಿನ ಜೈನ ಕುಲಪಂಕಮಂ ದಾಂಟಿ । ಮಲಹರನ ಚರಣ
ವಿಡಿದ ವಾಗೀಶ ನೀ । ನೆಲಿಸು ವದನಾಂಬುಜದೊಳೆನ್ನ ॥

[ಶ್ರೀ ನಿಜಗುಣರು]



ಸುಪ್ರಸಿದ್ಧವಾದ ಚೋಳ ಧರೆಯ ಪಕ್ಕದಲ್ಲಿರುವ, ಬಲಾಢ್ಯವಾದ ಪಾಂಡ್ಯ ರಾಜ್ಯದಲ್ಲಿ ಮಧುರೆ ಎಂಬ ವಿಖ್ಯಾತವಾದ ಪಟ್ಟಣವು ಜೈನರಿಂದ ನಿಬಿಡವಾಗಿತ್ತು. ಆ ಪುರದಲ್ಲಿ ಇಹಲೋಕ ವಿದ್ಯಾವಿಶಾರದನಾಗಿ ಕವಿತಾಶಕ್ತಿಯನ್ನು ಸಂಪಾದಿಸಿಕೊಂಡು ವಾಗ್ವೈಖರಿಯಿಂದ ಹೆಸರ್ಪಡೆದ, ಸವಣರಲ್ಲಿ ಜನಿಸಿದ ವಾಗೀಶನೆಂಬ ಪಂಡಿತನು, ಮದುವೆಯಾಗದೆ, ಧರ್ಮಶೇಖರಸೂರಿ ಎಂಬ ನಾಮವನ್ನು ತಾಳ್ದು, ಕ್ಷಪಣಕರಿಗೆ ತರ್ಕ, ತಂತ್ರ, ವ್ಯಾಕರಣಾದಿಗಳನ್ನು ಕಲಿಸುತ್ತ, ಅನೇಕ ಶಿಷ್ಯರಿಂದ ಸೇವೆಯನ್ನು ಕೈಗೊಳ್ಳುತ್ತ ಜೈನ ಮುನಿಭೂಪನಾಗಿ ಸುಖವಾಗಿದ್ದನು.

ಪೂರ್ವ ಸಂಸ್ಕಾರ ಬಲದಿಂದ ಮತ್ತು (ಜಿನ ಧರ್ಮಾವಲಂಬಿಗಳ ಪ್ರಾಬಲ್ಯ ಮಧ್ಯದಲ್ಲಿದ್ದರೂ) ಅಕಸ್ಮಾತ್ತಾಗಿ ಕಲೆತ, ಶಿವದ್ವಿಜರ ಗೌಪ್ಯವಾದ ಸಹಚರ್ಯದಿಂದ ಬಾಲ್ಯದಲ್ಲಿಯೆ ವಿವೇಕವು ತಲೆದೋರಿ ಕ್ಷಪಣಕರ ಮತವನ್ನು ಹುರಳಿಲ್ಲದ ಪಂಥವೆಂದು ಅದನ್ನು ಅತಿಗಳೆದು ಮಾಯಾತೀತನಾದ ಮಹರ್ಷಿಯೇ (ಆದಿ ಪ್ರಮಥನಾದ) ಶಂಕರನೆಂಬುವ ವಾಸನೆಯು ಬಲಿತು, ಸಮಯವನ್ನು ಸಾಧಿಸಿ ಚಿಕ್ಕಂದಿನಲ್ಲಿಯೇ ಸಾಹಸದಿಂದ ಸವಣರ ಪೀಡೆಯಿಂದ ಪಾರಾಗಿ, ತಿರಿವರಿಗೆ ಎಂಬ ನಗರಕ್ಕೆ ಬಂದು, ವಿಶ್ವ ಪ್ರಪಂಚಕ್ಕೆಲ್ಲ ಅದ್ವಿತೀಯನಾದ ಜಯಶಾಲಿಯಪ್ಪ ದೇವೋತ್ತಮನಾದ ಭವ್ಯವಾದ ಸೋಮೇಶನ ನಿಲಯವನ್ನು ಹೊಂದಿ, ಸದ್ಧರ್ಮ ಪ್ರವರ್ತನೆಯ ಪಾರಿತೋಷಕವೋ ಎಂಬಂತೆ ಜ್ಞಾನೋದಯವಾಗಿ ವಿರಾಗಿಣಿಯಾದ ತೆಲ್ಲಿವಲ್ಲಿನಾಚಿ ಎಂಬ ಚರಿತ್ರನಾಯಕನ ಜೇಷ್ಠ ಭಗಿನಿಯು ಪುರಹರನನ್ನು ಭಜಿಸುತ್ತ, ಆನಂದದಿಂದ ಇರುತ್ತಿದ್ದಳು.

ಕುಟುಂಬದಲ್ಲಿ ಒಂದು ವ್ಯಕ್ತಿಯಾದರೂ, ನಿಷ್ಕಲಂಕವಾದ ಸದಾಚಾರವನ್ನು ಆತ್ಮ ಸಾಕ್ಷಿಯಾಗಿ ಪಾಲಿಸುತ್ತ ಭವತಾರಕನಾದ (ಪೃಥ್ವಿ-ಅಪ್-ತೇಜ-ವಾಯು-ಆಕಾಶಗಳೆಂಬ) ಪಂಚಭೂತಾತ್ಮನಾದ, ಕಾರುಣ್ಯವೇ ಮೂರ್ತೀಭವಿಸಿ ಶಂಭುವೆಂಬ ಶುಭನಾಮವನ್ನು ಧರಿಸಿದ, (ಕಮಲಸಂಭವನಾದ ಬ್ರಹ್ಮನಿಂದಲೂ ಆತನ ಪಿತನಾದ ಶೌರಿಯಿಂದಲೂ ಪೂಜಿಸಲ್ಪಟ್ಟ) ಧೂರ್ಜಟಿಯ ಕೈಂಕರ್ಯವನ್ನು ವಹಿಸಿ, ಅಗಣಿತ ಅಪಾರಮಹಿಮನಾದ ಸದಾಶಿವನನ್ನು ತ್ರಿಸಂಧ್ಯೆಗಳಲ್ಲಿಯೂ ಅಷ್ಟೇ ಏಕೆ? ನಿಮಿಷಮಾತ್ರವನ್ನು ಬಿಡದೆ ಸ್ಮರಿಸುತ್ತ, ಆ ದಯಾಘನನನ್ನು ಪರಿಸ್ಥಿತಿಗನುಗುಣವಾಗಿ ಮನದಿಂದಾಗಲಿ, ವಾಕ್ಕಿನಿಂದಾಗಲಿ, ಕಾಯದಿಂದಾಗಲಿ ಆರಾಧಿಸುತ್ತ ತನ್ನನ್ನೇ ಅಭವನಿಗೆ ಸೂರೆಗೊಟ್ಟಿರುವ ಸ್ಪೃಹಣೀಯವಾದ, ವ್ಯಕ್ತಿಯ ಕೃಪಾಬಲದಿಂದ ಪತಿತನಾದರೂ ಸದ್ಗತಿಯನ್ನು ಪಡೆಯುವದರಲ್ಲಿ ಸಂದೇಹವಿಲ್ಲವೆಂಬುವದು ಪಾಠಕಮಹಾಶಯರು ಈ ಆಖ್ಯಾಯಿಕೆಯನ್ನು ಪರಾಮರಿಸುತ್ತಲೆ ತಟ್ಟನೆ ಹೊಳೆಯದೆ ಇರಲಾರದು.

ನಮ್ಮ ಸಾಧ್ವೀ ಶಿರೋಮಣಿಯು ಮೇಲೆ ಉದಹರಿಸಿದ ಶಿವನಿಲಯಕ್ಕೆ ದಿನಾಲು ತಪ್ಪದೆ ತ್ರಿಕಾಲದಲ್ಲಿಯೂ ಹೋಗಿ ಭಗವಂತನಿಗೆ ಅಷ್ಟವಿಧಾರ್ಚನೆಯನ್ನು ಭಕ್ತಿಯಿಂದ ಮಾಡಿ, ಸುಮಂಗಲೆಯಲ್ಲಿ ತೋರಿಬರುವ ಕಕ್ಕುಲತೆಯಿಂದ ಕೈಗಳನ್ನು ಮುಗಿದು, ಲಲ್ಲೆಗರೆದು ಬಾರಿಬಾರಿಗೂ ನಮಸ್ಕರಿಸುತ್ತ ಸಂತೋಷದ ಭರದಿಂದ, ತಿರುಪಾಡುಗಳನ್ನು ಕಿವಿಗಿಂಪಾಗುವಂತೆ ಭಕ್ತಿರಸದಿಂದ ಪಾಡುತ್ತ, ಕರುಣಾಕರನಾದ ಮೃಡನೇ! ನನ್ನ ತಮ್ಮನಾದ ವಾಗೀಶನೆಂಬವನು ಇದುವರೆಗೆ ಪರಸಮಯವಾದ, ಜೈನಮತಾವಲಂಬಿಯಾಗಿಯೇ ಉಳಿದು ೯೦ ವರ್ಷಗಳು ಕಳೆದು ಹೋದವು; ಅವನನ್ನು ಶಿವಭಕ್ತನನ್ನಾಗಿ ಮಾಡಿದರೆ ನಾನು ಕೃತಕೃತ್ಯಳೇ ಸರಿ. ಹೀಗೆ ಆಗಾಗ್ಗೆ ಪರಮದಯಾಕರನಾದ ನಂದಿವಾಹನನಿಗೆ ಬಿನ್ನವಿಸುತ್ತ ಕೆಲವು ಸಂವತ್ಸರಗಳು ಸಂದಿದವು; ಕಾಮಿತ ಫಲವನ್ನು ಈಯುವದರಲ್ಲಿ ಉತ್ಸುಕನಾದ, ಯೋಗಿಜನಕೂಟಸ್ಥನಾಗಿರುವ, ಭಕ್ತವತ್ಸಲನಾದ ಫಾಲಾಕ್ಷನಿಗೆ ನಿಜಭಕ್ತೆಯಾದ ಆರ್ಯಳಲ್ಲಿ ಕರುಣೆಯುಂಟಾಗಿ, ಆ ಪಾವನಶೀಲೆಯ ಅಪೇಕ್ಷೆಯನ್ನು ಪೂರೈಸುವುದಕ್ಕಾಗಿ ಕಥಾನಾಯಕನ ಉದರದಲ್ಲಿ ಉರಿಯನ್ನು ಮಾಡಿದನು.

ಇತ್ತ ಮಧುರಾಪುರದಲ್ಲಿ ಈಶಾಜ್ಞೆಯಮೇರೆಗೆ ಜಠರನಾದ ವಾಗೀಶನ ಜಠರದಲ್ಲಿ ತೀಕ್ಷ್ಣವಾದ ಶೂಲೆಯುಂಟಾಗಿ, ಹೊರಳಾಡುತ್ತ ತನಗೆ ವೃದ್ಧಾಪ್ಯದಲ್ಲಿ ಈ ರೀತಿಯಾಗಿ ರುಜೆಯಡರಬಹುದೇ? ಎಂದು ಜೈನ ತೀರ್ಥಂಕರರನ್ನೆಲ್ಲ ಸ್ಮರಿಸಿದನು, ಸವಣರು ಭಜಿಸುವ ದೇವತೆಗಳನ್ನೆಲ್ಲ ನೆನೆದನು. ಕೀರ್ತಿವಂತ

ನಾದುದರಿಂದ ಅನೇಕ ವೈದ್ಯರು, ಮಂತ್ರಜ್ಞರು, ಮುಂತಾದ ಹಿತಾಪೇಕ್ಷಿಗಳು ನೆರೆದು, ಹೊಟ್ಟೆಯೊಳಗೆ ಉಂಟಾದ ಬೇನೆಯನ್ನು ನಿವಾರಿಸಬೇಕೆಂದು ಪ್ರಯತ್ನಿಸಿ ನಿಷ್ಫಲರಾದರು. ಸಹಿಸಲಶಕ್ಯವಾದ ನೋವಿನಿಂದ ವಾಗೀಶನು ಖತಿಗೊಂಡು, ತನ್ನ ಬಂಧುಗಳಲ್ಲೊಬ್ಬರು ಇರುವದನ್ನು ನೆನಪಿಗೆ ತಂದು, ತಿರಿವರಿಗೆಗೆ ಅಕ್ಕನ ಹತ್ತರ ನನ್ನನ್ನು ಹೊತ್ತುಕೊಂಡು ಹೋಗಿರಿ, ಎಂದು ಪರಿಜನರಿಗೆ ಹೇಳಿದನು. ನಿಶಾಕಾಲಕ್ಕೆ ತಿರಿವರಿಗೆಯ ಸೋಮೇಶ ನಿಲಯಕ್ಕೆ ಬಂದೊಡನೆ, ಕಥಾಪುರುಷನಿಗೆ ಶಿವಭಕ್ತಿಯು ಉದಯವಾಯಿತು; ರಾತ್ರಿಯೆಲ್ಲ ಶೈವನಾಗಿ ಕಾಲಕಳೆದದ್ದರಿಂದ ಕ್ರಮೇಣ ಉದರ ಶೂಲಿಯು ಪರಮಾತ್ಮನ ಕೃಪೆಯಿಂದ ಕಡಿಮೆಯಾಗಹತ್ತಿತು.

ಪರಿಚಾರಿಕೆಯರು ಅರುಣೋದಯಕ್ಕಿಂತಲೂ ಮುಂಚಿತವಾಗಿ ಶಿವಾಲಯದಲ್ಲಿ ಪೂಜಾದ್ರವ್ಯಗಳನ್ನಿಟ್ಟುಬಂದು ಶಿವಮಂದಿರದಲ್ಲಿ ವಾಗೀಶನೆಂಬುವ ತಮ್ಮ ಮಹಾಪಾದದ ಸಹೋದರನು ಬಂದು, ನಿಮ್ಮ ದಯಾದೃಷ್ಟಿಗೆ ಪಾತ್ರನಾಗಬೇಕೆಂದು ಹಂಬಲಿಸುವನೆಂದು ತೆಲ್ಲಿವಲ್ಲಿನಾಚಿಯರಿಗೆ ಬಿನ್ನವಿಸಿದರು. ಆಗ ಆಕೆಯು "ಪಾಪಿಯು ಇಲ್ಲಿಗೆ ಬಂದಿರುವನೇ" ಎಂದು ಕೋಪದಿಂದ ಗರ್ಜಿಸಲು, ಕುಶಲಳಾದ ಒಬ್ಬ ಭಾಮಿನಿಯು—"ಅಕ್ಕಾ! ಜಿನಧರ್ಮವನ್ನು ಧಿಃಕರಿಸಿ, ತರುಣೇಂದು ಶೇಖರನ ಭಕ್ತನಾಗಬೇಕೆಂದು ಬಂದಿರುವನೆಂದು ವಿನಯವಾಗಿ ನಿವೇದಿಸಿದಳು." ಇದನ್ನು ಕೇಳಿ ಸಂತೋಷಪಟ್ಟು ಚತುರಳಾದ ಜಾಣೆಗೆ ಯೋಗಿನಿಯು—ಆಗಮಿಸಿದ ವ್ಯಕ್ತಿಗೆ ಮಂತ್ರೋದಕದಿಂದ ಶಿಂಪಡಿಸಿ, ಆತನ ಮೈಗೆ ನಿರ್ಮಲವಾದ ವಿಭೂತಿಯನ್ನು ಪೂಸಿದರೆ ನಾನಲ್ಲಿಗೆ ಬರುವೆನೆಂದು ಹೇಳಲು, ಆ ಆಜ್ಞೆಯಂತೆಯೇ ಆ ಸುಮುಖಿಯು ವಾಗೀಶನಿಗೆ ಮಾಡಲು, ದಾರುಣವಾದ ಉದರ ಶೂಲಿಯು ಸಂಪೂರ್ಣವಾಗಿ ವಾಸಿಯಾಗಲು ಆತನು ಈಶ್ವರನ ನಾಮಗಳನ್ನು ಕೀರ್ತಿಸುತ್ತ ಉತ್ಸಾಹಗೊಂಡನು. ಆ ಬಳಿಕ ತಪಸ್ವಿನಿಯಾದ, ತೆಲ್ಲಿವಲ್ಲಿನಾಚಿಯು ಈಶ್ವರಾರ್ಚನೆಗೆ ಆ ದೇವಾಲಯಕ್ಕೆ ಬರಲು, ಆಕೆಯ ಪಾದಗಳನ್ನು ಚರಿತ್ರನಾಯಕನು ಘಟ್ಟಿಯಾಗಿ ಹಿಡಿದು, ಪುನಃ ಪುನಃ ಪೊಡಮಟ್ಟು ಎಲೈ! ತಾಯಿಯೇ! ಮರುಳಾಗಿ ಹೋದ ಈ ವಿವೇಕ ಶೂನ್ಯನಿಗೆ ಕರುಣಿಪುದೆಂದು ಅಂಗಲಾಚಿ ಬೇಡಿಕೊಂಡನು. ಆಗ ದಯಾರ್ದ್ರ ಹೃದಯಳಾದ ಸಹೋದರಿಯು ತಮ್ಮನನ್ನು ಕೃಪಾದೃಷ್ಟಿಯಿಂದ ಅವಲೋಕಿಸಿ, ಕೈ ಹಿಡಿದೆತ್ತಿ ಆತನನ್ನು ದೇವಜಲಕೂಪದಲ್ಲಿ ಮುಳುಗಿಸಿ ಮೇಲಕ್ಕೆತ್ತಲು. ತಕ್ಷಣವೇ ಶಿವಜ್ಞಾನೋದಯವಾಗಲು, ವಿಭೂತಿ ರುದ್ರಾಕ್ಷಗಳನ್ನು ತಳೆದು ಶಿವಮೂರ್ತಿಗೆ ದೀರ್ಘದಂಡದಂತೆ ಆನತನಾಗಿ ಸ್ತುತಿಸಿ, ಸ್ತೋತ್ರಭರದಲ್ಲಿ ಆನಂ

ದಾಶ್ರುಗಳು ಹರಿದವು. ಈ ವೊದಲು ನಾನು ನೀರಿನಲ್ಲಿ ಬೆಣ್ಣೆಯನ್ನು ಉಸುಕಿನಲ್ಲಿ ಎಣ್ಣೆಯನ್ನು ಅರಿಸಿದಂತೆ ನನ್ನ ಬಾಳ್ವೆ ಆಗಿತ್ತೆಂದು ಅನ್ನುತ್ತ ಅಡಿಗಡಿಗೆ * ಶಿವನೇ! ಶಂಕರನೇ! ಶಂಭುವೇ! ಮೃಡನೇ! ಉದ್ಧರಿಸು, ಉದ್ಧರಿಸು, ಎಂದು ಪ್ರಾರ್ಥಿಸಿದನು. ನಿತ್ಯದಲ್ಲಿ ತಿರಿವರಿಗೆಯಧಿಪತಿಯಾದ ಸೋಮೇಶ್ವರಾಲಯಕ್ಕೆ ಹೋಗಿ, ಆಗಮೋಕ್ತವಾಗಿ ಪೂಜಿಸಿ (ಹುಳುಕಾಗದ, ಜೇಡುಗಟ್ಟದ, ಚೆನ್ನಾಗಿ ಬೆಳದಿರುವ) ಮಂಗಲಕರವಾದ ಬಿಲ್ವದಳಗಳನ್ನು ಧರಿಸುತ್ತ ಪ್ರಭುವನ್ನು ಸ್ತುತಿಸುತ್ತ ಶಿವಾನಂದದಲ್ಲಿದ್ದನು.

ಚರಿತ್ರನಾಯಕನು ತಿರಿವರಿಗೆಯಲ್ಲಿ ಈಶಭಕ್ತನಾಗಿರುವ ಸಂಗತಿಯನ್ನು ಕರ್ಣಾಕರ್ಣಿಕೆಯಿಂದ ಜೈನರು ತಿಳಿದು ಕವಿಕುಲತಿಲಕನು, ವಾಗ್ಮಿಯು ಜೈನವಿಭೂಷಣನು ಆದ ವಾಗೀಶನು ಅನ್ಯಮತಾವಲಂಬಿಯಾದನೆಂದು ಖತಿಗೊಂಡು, ಮತ್ಸರವನ್ನು ತಾಳಿ "ಅಹಿಂಸಾ ಪರಮೋಧರ್ಮಃ" ಎಂದು ನುಡಿಯುತ್ತಿರುವ ಸವಣರು, ಆತನನ್ನು ಉಪಾಯದಿಂದ ಮಧುರೆಗೆ ತರಬೇಕೆಂದು ಬಗೆದರು. ಜೈನ ಮಹಾ ಜನರಿಂದ ಕಾರ್ಯಗೌರವಕ್ಕಾಗಿ ಬಹುಮಾನವನ್ನು ಪಡೆದ ಸವಣರು, ಕಥಾಪುರುಷನ ಸನ್ನಿಧಾನಕ್ಕೆ ಬಂದು ಬಹು ವಿನಯವನ್ನು ನಟಿಸಿ, ತಂತ್ರವನ್ನೆಸಗಿ ಯುಕ್ತಿಯುಕ್ತವಾಗಿ ಮಾತಾಡಿ ಜುಲುಮೆಯಿಂದ ಆತನನ್ನು ಕರೆತಂದರು. ಪುರದಲ್ಲಿರುವ ಜೈನರು ಸೇರಿ ಶೈವದೀಕ್ಷೆಯನ್ನು ಪಡೆದದ್ದು ಅನುಚಿತವೆಂದು ಮತ್ತು ಜನನೀಜನಕರ ಮತವೇ ಧರ್ಮವೆಂದು ಬಹುಪರಿಯಾಗಿ ವಾಗೀಶನಿಗೆ ಹೇಳಿ, ಅದಕ್ಕೆ ಒಡಂಬಡಬೇಕೆಂದು. ಯಾಚಿಸಿದರು. ಅದಕ್ಕೆ ನಮ್ಮ ಚರಿತ್ರಪುಂಗವನು ಒಪ್ಪುವನೇ ಎಂದೆಂದೂ ಆಗದ ಮಾತು. ದುಷ್ಟರಿಗೆ ಪರಪೀಡೆಯು ಸಹಜಗುಣವಾದಂತೆ ಅಸಮಾಧಾನವನ್ನು ತಾಳಿದ ಆ ಕ್ಷಪಣಕರಲ್ಲಿ ಕೆಲವು ಅತಿ ಖಳರು ಭಕ್ತಿಯನ್ನು ತೋರ್ಪಡಿಸುತ್ತ, ಮಾಯಾಜಾಲವನ್ನು ಬೀರಿ ವಿಪಿನಕ್ಕೆ ಕಥಾನಾಯಕನನ್ನು ಹೊರಡಿಸಿ, ವಿಚಿತ್ರ ಹಿಂಸೆಗಳನ್ನು ಕೊಡಬೇಕೆಂದು ಸಂಕಲ್ಪಿಸಿ, ಕಾನನದಲ್ಲಿ ಆ (ಬೂದಿಮುಚ್ಚಿದ ಕೆಂಡದಂತಿರುವ) ಶೈವನನ್ನು ಕರತಂದು ಕಾಳಸರ್ಪಗಳನ್ನು ಶಿಟ್ಟಿಗೆಬ್ಬಿಸಿ, ಆತನಮೇಲೆ ಬಿಟ್ಟರು; ಮದವೇರಿದ ಆನೆಗಳನ್ನೂ ಆತನ ಮೇಲೆ ಬಿಟ್ಟರು. ಆತನ ಮಸ್ತಕದಮೇಲೆ ಬೆಂಕಿಯನ್ನು ಸುರಿದರು. ಘೋರವಾದ ಮಡುವಿನಲ್ಲಿ ನುಗಿಸಿದರು.

---

* ಈ ನಾಲ್ಕು ನಾಮುಗಳು ಪರಮಾತ್ಮ ವಾಚಕವಾಗಿದ್ದು ಶಬ್ದಾರ್ಥವು ಒಳಿತನ್ನು ಮಾಡುವವನು; ಕಲ್ಯಾಣವನ್ನು ಅನುಗ್ರಹಿಸುವವನು ಎಂದು ಆಗುವದು. ಇದು ವಾಚಕರು ತಿಳಿದ ವಿಷಯವು.

ಏನು ಮಾಡಿದರೂ ಸರ್ವೋತ್ಕೃಷ್ಟವಾದ ಮಂಗಲಕರವಾದ ಶಿವಧ್ಯಾನ ಪರ ನಾದ ವಾಗೀಶನಿಗೆ ಸೂಜಿಯ ಮೊನೆಯಷ್ಟು ಸಹ ಅಪಾಯವು ಸಂಭವಿಸದೆ, ಆತನ ತೇಜವು ವೃದ್ಧಿಯಾಯಿತು. ಇದನ್ನೆಲ್ಲ ಆ ಧನಲೋಭಿಗಳಾದ ಪಾಪಾತ್ಮರು ಕಂಡು, ಕಡು ಭೀತರಾಗಿ, ಈತನು ಮಹಾ ಪುರುಷನೆಂದು ಮನಗಂಡು ಈ ಯಾವತ್ತು ವೃತ್ತಾಂತವನ್ನು ಮಧುರಾಪುರಿಗೆ ಬಂದು ಜೈನಸಮೂಹಕ್ಕೆ ಶ್ರುತಪಡಿಸಿದರು. ನೂತನ ವಿಷಯವನ್ನು ಕೇಳುತ್ತಲೆ, ಬೆರಗಾದ ಸವಣರ ಬಳಗವು ಕಥಾಪುರುಷ ಸಿಂಹನನ್ನು ತಿರಿವರಿಗೆಗೆ ಹೊರಡಿಸಿದರು. ವಾಗೀಶನು ತಿರಿವರಿಗೆಗೆ ಬರುವಾಗ ದಾರಿಯಲ್ಲಿ ಹಳ್ಳದ ದಂಡೆಯಲ್ಲಿ ನೋಡಿದರೆ ಅಸಹ್ಯಪಡುವಂಥ ಒಬ್ಬ ಕುಷ್ಠರೋಗಿಯನ್ನು ಕಂಡನು. ಅಂಥ ಹೀನದೆಸೆಯಲ್ಲಿದ್ದ ಮಹೇಶ್ವರನಿಗೆ ಕಥಾನಾಯಕನು ಸಾಷ್ಟಾಂಗವಾಗೆರಗಿ, ಕೈಮುಗಿಯಲು ನನಗೆ ಈ ಹಳ್ಳವನ್ನು ದಾಟಿಸಿದರೆ ಸಾಕೆಂದು ಕುಷ್ಠನು ಹೇಳಿದನು. ಆಗ ನಮ್ಮ ಭಕ್ತಲಲಾಮನು ಹಸಾದವೆಂದು ಹೇಳ ಭಯಭಕ್ತಿಯಿಂದ ಆತನ ಕರಪಲ್ಲವಗಳನ್ನು ಮೆಲ್ಲಗೆ ಹಿಡಿದು ಆ ಪ್ರವಾಹದಾಚೆಗೆ ಕರತಂದು ಮುಟ್ಟಿಸಲು, ವಾಗೀಶನ ಭಕ್ತಿಭಾವಕ್ಕೆ ಮೆಚ್ಚಿ ಕಪಟವೇಷದ ಯತಿಯಾಗಿ ಬಂದ ಶಂಕರನು ಚರಿತ್ರನಾಯಕನಿಗೆ ತಿರಿನಾವುಕರೆಂದು ಪೆಸರಿಟ್ಟು ಅದೃಶ್ಯನಾಗಿ ಹೋಗಲು, ವಾಗೀಶನು ತಿರಿವರಿಗೆಗೆ ಬಂದು ಅಲ್ಲಿಯ ಮಹಾಲಿಂಗವನ್ನು ಆರಾಧಿಸುತ್ತ ಶಿವಸೇವಾಮುದದಿಂದಿರುತ್ತಿದ್ದನು. ಈ ಪರಿಯಾಗಿ ಶಿವಾನಂದ ವೈಭವದಲ್ಲಿರುತ್ತಿರಲು, ಒಂದು ದಿನ ಒಬ್ಬ ಭಕ್ತನು ಬಂದು ಪರಿಮಳಿಸುವ ಚೆಂಗಣಿಗಿಲೆಯ ಗೊಂಚಲವನ್ನು ತಂದುಕೊಟ್ಟು, ಈಶ್ವರಾರ್ಪಣಗೈಯ್ಯುವದೆಂದು ಬೇಡಿಕೊಂಡನು. ಆ ಪುಷ್ಪಗಳನ್ನು ಲಿಂಗಕ್ಕೆ ಧರಿಸಬೇಕೆಂದು ಕರ್ಣ ಮನೋಹರವಾಗಿ ತಿರುಪಾಡುಗಳನ್ನು ಹಾಡುತ್ತ, ಈಶ್ವರನ ಗದ್ದುಗೆಯ ಸಮೀಪಕ್ಕೆ ಕೈ ಚಾಚುತ್ತಿರಲು, ಆ ಶಿವಲಿಂಗದಿಂದ "ಪೂವಿಷ್ಟಸಿದರ್" ಎಂಬ ಶಬ್ದವು ಹೊರಡಲು, ಕಥಾನಾಯಕನು ಬೆರಗಾಗಲು, ಲಿಂಗಮುಖದಿಂದ ವಾಗೀಶ್ವರಾ ನಿನಗೆ ಉಪದೇಶವಿಲ್ಲದೆ, ನನ್ನನ್ನೆಂತು ಮುಟ್ಟುವೆ? ಹೀಗೆ ಶಬ್ದವು ಹೊರಟಿತು. ಆಗ ಕಥಾಪುರುಷನು ಆ ಕೆಂಪು ಕಣಿಗಿಲೆಯ ಹೂವುಗಳನ್ನು ಅಲ್ಲಿಯೇ ಬಿಟ್ಟು ವಿಶ್ವಕ್ಕೆಲ್ಲ ಗುರುವು ನೀನಲ್ಲದೆ ಬೇರೆ ಆಚಾರ್ಯರೆನಗುಂಟೇ! ಎಂದು ಮೊದಲೇ ಸೂರಿಯಾದುದರಿಂದ ತನ್ನ ಕವಿತಾ ಸಾಮರ್ಥ್ಯದಿಂದ ಪದ್ಯಗಳನ್ನು ರಚಿಸಿ, ಭಕ್ತಿಪೂರ್ವಕವಾಗಿ ಸರಾಗವಾಗಿ ಪಾಡಿದನು. ಜಗದ್ರಕ್ಷಕನೆನಿಸಿದ ಮಹಾ ಸ್ವಾಮಿಯು ಗುರು ರೂಪವನ್ನು ತಾಳಿ ಬಂದು, ಶಿಷ್ಯೋತ್ತಮನಿಗೆ ವಿಭೂತಿಯನ್ನು ಧರಿಸಿ ತಲೆಯಮೇಲೆ ತನ್ನ ವರದ ಹಸ್ತವನ್ನಿರಿಸಿ ಕ್ರಿಯಾದೀಕ್ಷೆಯನ್ನು ಕೊಟ್ಟು ಅಂತರ್ಧಾನನಾಗಲು, ಶಿವನಿಂದ ಉಪದೇಶ ಪಡೆದು ಕೃತಾರ್ಥನಾದ ಚರಿತ್ರನಾಯ

ಕನು, ಚೋಳಮಂಡಲವನ್ನೆಲ್ಲ ಸುತ್ತುತ್ತಾ, ಅಲ್ಲಲ್ಲಿರುವ ಶಿವಲಿಂಗಗಳನ್ನು ಮನವಾರೆ ಪೂಜಿಸುತ್ತ, ತಿರುಪಾಡುಗಳನ್ನು ಪಾಡಿ ನಲಿಯುತ್ತ ನಾದಪ್ರಿಯ್ಯನನ್ನು ಮೆಚ್ಚಿಸುತ್ತ ಶಿವಕೀರ್ತಿಯಿಂದ ವಿರಾಜಮಾನನಾಗಿ ಬೆಳಗುತ್ತಿದ್ದನು.

ಶಿವಸಂಕೇತದಂತೆ ಚರಿತ್ರಪುಂಗವನು ತಿರುವಣ್ಣೂರಿಗೆ ಹೋಗಿ ಅಲ್ಲಿ ಒಂದು ತೋಟದಲ್ಲಿ ವಿಶ್ರಮಿಸುವಾಗ ಈತನು ಬಂದದ್ದನ್ನು ಕೇಳಿ ಅಃಪೂತಿ ಎಂಬ ಆಸ್ತಿಕ ಶಿರೋಮಣಿಯಾದ ಧನಿಕನೊಬ್ಬನು ಭಕ್ತಿಯಿಂದ ಆ ಉದ್ಯಾನಕ್ಕೆ ಬಂದು, ಆ ಗುರೂತ್ತಮನನ್ನು ಮನೆಗೆ ಕರತಂದು ವಿನಯದಿಂದ ಪ್ರಾರ್ಥಿಸಿ, ಅವರಿಂದ ಸದ್ಗತಿದಾಯಕವಾದ, ಮಂತ್ರೋಪದೇಶವನ್ನು ಸಾಂಗವಾಗಿ ಪಡೆದನು. ವಿಚಾರಪರನಾದ ಅಃಪೂತಿಗೆ ಸಂಸಾರದಲ್ಲಿ ಹೇಯವು ತಲೆದೋರಿ, ವಿರತಿಭಾಪವು ಅಳವಟ್ಟು, ಪತ್ನೀ ಪುತ್ರ ಮುಂತಾದವರನ್ನೆಲ್ಲ ಬಿಟ್ಟು ಆ ಶ್ರೇಷ್ಠನಾದ ಸದ್ಗುರುರಾಯನೆಡೆಯಲ್ಲಿರುತ್ತ ಆತನ ಸೇವೆಯನ್ನು ಮಾಡುತ್ತ ಆತನು ಪಾಡುವ ತಿರುಪಾಡುಗಳನ್ನು ಕಲಿತು, ಅತಿ ಮನೋಹರವಾಗಿ ಹಾಡುತ್ತ ಈಶ್ವರನನ್ನು ಆರಾಧಿಸುತ್ತಿದ್ದನು. ಜಗನ್ಮಾತಾಪಿತರಾದ ಪಾರ್ವತೀ ಪರಮೇಶ್ವರಿಗೆ ಅಃಪೂತಿಯ ಗಾಯನವು, ಬಹು ಪ್ರೀತಿಕರವಾಗಿ ಪರಿಣಮಿಸಿದ್ದರಿಂದ ಶ್ರೀ ನಂದಿಯನ್ನು ವಾಗೀಶನ ಕಡೆಗೆ ಕಳಿಸಿ ಆತನ ಶಿಷ್ಯನಾದ ಅಃಪೂತಿಯನ್ನು ಕರಿಸಿಕೊಂಡರು.

ಅಃಪೂತಿಯು ಶಿವಸನ್ನಿಧಿಗೆ ತೆರಳಲು ಚರಿತ್ರನಾಯಕನಿಗೆ ಶಿಷ್ಯನ ಉತ್ಕರ್ಷವನ್ನು ಕಂಡು, ಸಂತೋಷವೂ, ಪ್ರಶಂಸನೀಯವಾದ ಉತ್ತಮಶಿಷ್ಯನು ಅಗಲಿದನೆಂದು ಸ್ವಲ್ಪ ವ್ಯಾಕುಲವೂ ಏಕಕಾಲಕ್ಕೆ ಉಂಟಾಗಿ, ತಿರಿವರಿಗೆಯಧಿಪತಿಯಾದ ಸೋಮನಾಥನೆಡೆಗೆ ಬಂದು ಶಾಸ್ತ್ರೋಕ್ತವಾಗಿ ಪೂಜಿಸಿ ತನ್ನ ಪ್ರತಿಭಾ ಶಕ್ತಿಯಿಂದ ಕವಿತಾರೂಪವಾಗಿ ಶಿವಭಕ್ತಿ ರಸವು ಪ್ರವಾಹವಾಗಿ ಹರಿಯುವಂತೆ ಲಿಂಗಮೂರ್ತಿಯನ್ನು ಮನದಣಿಯುವಂತೆ ಸ್ತುತಿಸಿದನು. ಚರಿತ್ರಪುಂಗವನ ಪ್ರೇಮಾತಿಶಯದ ತಿರುಪಾಡುಗಳಿಗೆ ವರಪೂತ್ಮನು ಸಂತೋಷವಾಗಲು, ಆ ಲಿಂಗಮುಖದಿಂದ ಬಾಎಂದು ಧ್ವನಿಯಾಗಿ ಲಿಂಗದ ಬಾಯ್ದೆರೆಯಲು, ವಾಗೀಶನು ಹರಹರ ಶರಣಾರ್ಥಿ ಎಂದು ಆ ಮಹಾಲಿಂಗ ಮುಖದಲ್ಲಿ ಸುಖವಾಗಿ ಬೆರತುಬಿಟ್ಟನು. ಧನ್ಯನಲ್ಲವೇ ? ರಜತಾದ್ರಿಯಲ್ಲಿ ಭರ್ಗನು ತನ್ನ ಒಡ್ಡೋಲಗದಲ್ಲಿ ವಾಗೀಶನ ಪರಿಚಯವನ್ನು ಪ್ರಮಥರಿಗೆ ಮಾಡಿಸಿ ಆತನಿಗೆ ಸಾಯುಜ್ಯ ಪದವಿಯನ್ನು ಕೊಟ್ಟನು.



೭೦.

# ೩೮. ಪಿಳ್ಳೈನಾಯನಾರು ಅಥವಾ

# ತಿರುಜ್ಞಾನ ಸಂಬಂಧಿಗಳು.



ಬೆಂಬಿಡದೆ ಬತ್ತಲೆಗರಂಬಡೆದು ಭಸಿತವನೊ । ಡಂಬಡಲು ಧರೆಯೊಳೆಸ ಗಿದ ತಿರುಜ್ಞಾನ । ಸಂಬಂಧಿ ನಿಜವನರುಹೆನಗೆ ॥

[ಶ್ರೀ ನಿಜಗುಣರು]



ಜಂಬೂ ದ್ವೀಪದಲ್ಲಿ ಕಲ್ಮಷ ಹಾರಿಣಿಯಾದ ಕಾವೇರಿ ನದಿಯ ಸಮೀಪದಲ್ಲಿ ಪಾಂಡ್ಯರಾಜ್ಯವು ಸಕಲ ವೈಭವಗಳಿಂದ ಶೋಭಿಸುತ್ತಿತ್ತು. ಆದರೆ ಸ್ವಲ್ಪದರದಲ್ಲಿ ಹೇಳಬೇಕಾದರೆ ನಾಡೆಲ್ಲ ಜಿನಮಯವಾಗಿತ್ತು. ಶಿವಭಕ್ತರು ಮಾತ್ರ ಅತಿ ವಿರಳರಾಗಿದ್ದರು, ಹರಭಕ್ತರು ಪರಧರ್ಮ ಸಹಿಷ್ಣುಗಳಾಗಿ ಬೇರೆಯವರ ಗೊಡವೆಗೆ ಹೋಗದೆ ಸ್ವಕೀಯ ಕಾರ್ಯತತ್ಪರರಾಗಿದ್ದರೂ ಕೂಡ ಆ ಧರೆಯ ದೊರೆಯಾದ ಕೂನಪಾಂಡ್ಯನು ಜೈನನಾಗಿದ್ದುದರಿಂದ ಅವನ ಬೆಂಬಲವು ತಮಗೆ ನೆರವಾಗುವದೆಂದು ತಿಳಿದು ಸವಣರು (ಗುರುಕಾರುಣ್ಯ ರೂಪವಾದ ಮತ್ತು ಸರ್ವ ಸಂಪತ್ಕರವಾದ) ವಿಭೂತಿಯನ್ನು ನಿಂದಿಸುವದು, ಮಹಾದೇವನನ್ನು ಹಳಿಯುವದು, ಶಿವಭಕ್ತರನ್ನು ಕೀಳರನ್ನಾಗಿ ಎಣಿಸುವದು ಹೀಗೆ ಅನುಚಿತವಾದುದನ್ನು ಮಾಡುವದರಲ್ಲಿ ಉತ್ಸುಕರಾಗಿದ್ದರು. ಇಂಥ ಗರ್ವಾಂಧರಾದ, ಕಠಿಣ ಹೃದಯರಾದ ಕ್ಷಪಣಕರ ಸಂಖ್ಯೆಯು ರಾಜಧಾನಿಯಾದ ಮಧುರೆಯಲ್ಲಿ ಹನ್ನೆರಡು ಸಾವಿರದ ವರೆಗೆ ವ್ಯಾಪಿಸಿತ್ತು.

ಶೀಲದಿಂದಲೇ ಪುಣ್ಯವಂತರೆನಿಸಿದ ಹರಭಕ್ತರೊಡನೆ ದೇವಶ್ರೇಷ್ಠನಾದ ಶಂಕರನು ಕೈಲಾಸದಲ್ಲಿ ಸುಖವಾಗಿರುವ ಸಮಯದಲ್ಲಿ, ತ್ರಿಲೋಕಸಂಚಾರಿಯಾಗಿ ಪರಹಿತಕ್ಕಾಗಿಯೇ ವಿನೋದಶೀಲನಾಗಿ ಅನವರತವೂ ಪರಮಾತ್ಮನ ನಾಮ ಸಂಕೀರ್ತನ ಪರನಾಗಿರುವ ನಾರದ ಮುನೀಶ್ವರನು ಬಂದು ಪ್ರಮಥಾ

ಧಿಪನಿಗೆ ಮೈಯ್ಯಿಕ್ಕಿ ಚಿಂತಾತುರನಾಗಿ ಕುಳಿತುಕೊಳ್ಳಲು ಪಂಚಾಸ್ಯನು:—ನಾರದನೇ ಖಿನ್ನವದನನಾಗಿರುವ ವಿಶೇಷವೇನು. ನಾರದನು:—ಸರ್ವಾಧಿಪತಿಯೇ ಚೋಳ ಮಂಡಲದಲ್ಲಿಯ ಶಿವಭಕ್ತಿ ಪ್ರಾಶಸ್ತ್ಯವನ್ನು ಕಂಡು ಕಡುಹರ್ಷಿತನಾಗಿ ಅಲ್ಲಿಂದ ಕೂನಪಾಂಡ್ಯನ ರಾಜ್ಯಕ್ಕೆ ಬಂದು ಅಲ್ಲಿಯ ಮುಖ್ಯನಗರವಾದ ಮಧುರೆಗೆ ಬಂದೆನು; ಅಲ್ಲಿ ನಡೆಯುವ ಶಿವದೂಷಣೆಯನ್ನೂ, ಜೈನರ ಹೀನತರವಾದ ನಡೆಯನ್ನು ನೋಡಿ ಕಳವಳಿಸಿ ಬೆಂದು ಬೆಂಡಾಗಿ ಆ ಪಾಪ ವಿಮೋಚನೆಗಾಗಿ ಸಕಲ ಯಜ್ಞಭೋಕ್ತೃವೆಂದು, ಹಾಗೂ ಸರ್ವದೋಷಹರನೆಂದು ವಿಖ್ಯಾತನಾಗಿರುವ ನಿನ್ನ ಪಾದ ದರ್ಶನಕ್ಕಾಗಿ ಬಂದಿರುವೆನು. (ಹೀಗೆ ನುಡಿಯುತ್ತಿರುವಾಗ ಆತನ ದುಃಖಾಶ್ರುಗಳು ಸುರಿದವು.) ನೀನು ಸರ್ವಜ್ಞನಾಗಿರುವದರಿಂದ ಅಲ್ಲಿ ನಡೆಯುವ ಗರ್ಹಣೀಯವಾದ, ಹೇಳುವದಕ್ಕೂ ಕೂಡ ಅವಾಚ್ಯವಾಗಿರುವ ಸಂಗತಿಗಳನ್ನು ನಾನು ಉಚ್ಚರಿಸಲಾರೆ. ದಿವ್ಯದೃಷ್ಟಿಯಿಂದ ಸರ್ವಸಂಗತಿಯನ್ನು ಅವಲೋಕಿಸಬೇಕಾಗಿ ನನ್ನ ಬಿನ್ನಪವು ಎಂದು ಸುಮ್ಮನಾದನು. ಆಗ ಸರ್ವ ಸೂತ್ರದಾಯಕನಾದ ಪರಮೇಶ್ವರನು ಕೋಪವು ಬಂದಾಗ್ಯೂ ಕಿಂಚಿತ್ ಹಸನ್ಮುಖನಾಗಿಯೇ ದುರುಳರಾದ ಜೈನರ ಪ್ರಾಬಲ್ಯವನ್ನು ಮುರಿದು ಅವರನ್ನು ಶಿಕ್ಷಿಸಿ ಶಿವ ಮತೋದ್ಧಾರ ಮಾಡುವದಕ್ಕಾಗಿ ಯಾರನ್ನು ನಿಯಮಿಸಲೆಂದು ಆಲೋಚನೆಮಾಡಿ ಪ್ರಚಂಡ ಪರಾಕ್ರಮಿಯಾದ ತಾರಕಾರಿಯಾದ ಸ್ಕಂದನನ್ನು ಭೂಲೋಕಕ್ಕೆ ಕಳಿಸಬೇಕೆಂದು ಬಗೆದು ಆ ಪ್ರಕಾರ ಗುಹನಿಗೆ ಅಜ್ಞೆ ಮಾಡಿದನು. ಆಗ ಷಡಾನನು:—ಕರುಣಾಕರನೇ ಮೃತ್ಯುಲೋಕದಲ್ಲಿ ನನಗೆ ಅಜ್ಞಾನವು ತಟ್ಟದಂತೆ, ದೋಷವು ಆವರಿಸದಂತೆ ಅಭಯವನ್ನು ಕೊಟ್ಟರೆ ಸರಿ. ಶೂಲಪಾಣಿಯು:—ಕುವರನೇ, ಜಯಶೀಲನಾಗು. ಏಳುವರ್ಷಗಳು ನಿನಗೆ ಮುಗಿಯುತ್ತಲೆ ನಿನ್ನನ್ನು ಇಲ್ಲಿಗೆ ಬರಮಾಡಿಕೊಳ್ಳುವೆನು.

ಪವಿತ್ರವಾದ ಕಾವೇರೀ ಹೊಳೆಯ ಧಡದಲ್ಲಿ ಚೀಯಾಳಿ ಎಂಬ ಪುರವು ಸೊಗಯಿಸುತ್ತಿತ್ತು. ಆ ಊರಲ್ಲಿ ಮಹಾದೇವಿ ಮತ್ತು ಮಹೇಶ್ವರಭಟ್ಟ ಎಂಬ ದಂಪತಿಗಳು ಸನ್ಮಾರ್ಗ ಪ್ರವರ್ತಕರಾಗಿ ಹರಭಕ್ತಿ ಧುರಂಧರರಾಗಿದ್ದರು. ಶುಕ್ಲ ಶೋಣಿತ ಸಂಬಂಧವಿಲ್ಲದೆ ಆಶ್ಚರ್ಯಕರವಾದ ತೆರದಲ್ಲಿ ಈ ಪುಣ್ಯ ಜಾಯಾಪತಿಗಳಿಗೆ ಷಣ್ಮುಖನು ಶಿಶುವಾಗಿ ಪುಟ್ಟಿದನು. ಈ ಅರ್ಭಕನಿಗೆ ಪಿಳ್ಳೆನಾಯನಾರು ಎಂಬ ಮಂಗಲವಾದ ಅಭಿಧಾನದಿಂದ ಕರೆದರು. ಹಸುಳನಾಗಿದ್ದರೂ ಮಾಯಾತೀತನಾಗಿ ಶಿವಧ್ಯಾನಪರನಾದ ಮಗುವನ್ನು ನೋಡಿ ತಾಯಿತಂದೆಗಳ ಹರ್ಷಕ್ಕೆ ಎಣೆ ಇಲ್ಲದಾಯಿತು. ತನ್ನ ತನಯನು ಒಂದು ವರ್ಷದವನಿರುವಾಗ ಒಮ್ಮೆ ಆ ವಿಮಲನಾದ ವಿಪ್ರನು ನದೀಸ್ನಾನಕ್ಕೆಂದು ಸುತಸಮೇತನಾಗಿ ಆ ಅಘನಾಶಿನಿಯಾದ ತೊರೆ (ಕಾವೇರಿ) ಗೆ ಒಂದು ದಿವಸ ಹೋಗಿ ದಂಡೆಯಲ್ಲಿರುವ ಮಹಾ

ವೃಕ್ಷದ ಬುಡದಲ್ಲಿ ಚಿಗುರೆಲೆಗಳನ್ನು ಹಾಸಿ ಮಗುವನ್ನು ಸುಖವಾಗಿ ಮಲಗಿಸಿ ಶುದ್ಧೋದಕದಿಂದ ಮಿಾಯಲಿಕ್ಕೆ ಹೋಗಿ ಶುಚಿರ್ಭೂತನಾಗಿ ಬಂದು ನಂದನನ ಅದ್ಭುತ ಸ್ಥಿತಿಯನ್ನು ಕಂಡು ವಿಸ್ಮಿತನಾದನು. ಕಂದನ ಕಟವಾಯಿಗಳಿಂದ ಹಾಲು ಸುರಿಯುತ್ತಿತ್ತು; ಕೈಯ್ಯಲ್ಲಿ ಕ್ಷೀರಸಮೇತವಾದ ಚಿನ್ನದ ಬಟ್ಟಲು, ಕರ್ಣ ದಲ್ಲಿ ಕುಂಡಲಗಳು ಈ ರೀತಿಯಾಗಿ ಶೋಭಿಸುತ್ತಿದ್ದುದರಿಂದ ಆ ಬ್ರಾಹ್ಮಣನು ಕೌತುಕ ಪಡುತ್ತ ಮಗುವಿನ ಮಗ್ಗಲಲ್ಲಿ ಬಂದು ನಿಂತು ಇದೇನು ಎಂದು ಕುಮಾ ರನನ್ನು ಕೇಳಿದನು. ಬಾಲಕನು:—ದ್ವಿಜೋತ್ತಮನೇ ಅಕೋ ಅಲ್ಲಿ ಜಗಜ್ಜನ ನಿಯಾದ ಪಾರ್ವತಿಯು ಅಂತರಿಕ್ಷದಲ್ಲಿ ಹೋಗುತ್ತಿರುವಳು ನೋಡು; ಆ ಮಹಾ ತಾಯಿಯು ಆಕಾಶ ಮಾರ್ಗದಲ್ಲಿ ಹೋಗುವ ಸಮಯದಲ್ಲಿ ನನ್ನನ್ನು ನೋಡಿ ತನ್ನ ಕುಮಾರನ ಅವತಾರವೆಂದು ಪರಿಭಾವಿಸಿ ಇಲ್ಲಿಗೆ ಇಳಿದುಬಂದು ಅಮೃತ ಮಯವಾದ ಮೊಲೆಯನ್ನೂಡಿ ಈ ಪಾತ್ರೆಯನ್ನೂ ಆಭರಣಗಳನ್ನೂ ಕೊಟ್ಟು ಶಿವಜ್ಞಾನ ಸುಧೆಯನ್ನು ನೀಡಿ ಖುಲ್ಲರಾದ ಜೈನರನ್ನು ನಿವಾರಿಸಿ ಶಿವಮತವನ್ನು ಊರ್ಜಿತಗೊಳಿಸು ಎಂದು ಆಶೀರ್ವದಿಸಿ ಹೋದಳು. ಇದನ್ನು ಕೇಳಿ ವ್ಯೋಮ ದಲ್ಲಿ ಹೋಗುತ್ತಿರುವ ಪ್ರಕಾಶಮಯವಾದ ಯಾನವನ್ನು ಕಂಡು ಚಕಿತನಾಗಿ ಮಗುವೇ ಈ ಚಿಕ್ಕ ಬಾಲ್ಯಾವಸ್ಥೆಯಲ್ಲಿಯೇ ನೀನು ಇಷ್ಟು ಮಾತನಾಡಬೇಕಾ ದರೆ ದೇವಾಂಶನೂ, ದಿವ್ಯಜ್ಞಾನಿಯೂ ಅಹುದು. ಆದರೆ ನನ್ನದೊಂದು ಬಿನ್ನ ಪವನ್ನು ಲಾಲಿಸು. ಈ ಪುರವನ್ನು ಗಹನವನ್ನಾಗಿ ಮಾಡಿ ತೋರಿಸೆಂದು ಆತನ ಸಾಮರ್ಥ್ಯವನ್ನು ಪರೀಕ್ಷಿಸಲೋಸುಗ ಹೇಳಲು ಆ ಮಾತುಗಳನ್ನು ಕೇಳುತ್ತಲೆ ಕುಮಾರನು ಇಚ್ಛಾಶಕ್ತಿಯುಳ್ಳವನಾದುದರಿಂದ ಆ ಕ್ಷಣವೇ ಘೋರವನವ ನ್ನಾಗಿ ಮಾಡಿ ತೋರಿಸಲು ಅದಕ್ಕೆ ಅಂಜಿ ಪರಿಹರಿಸೆಂದು ಭೂಸುರನು ಹೇಳಲು, ಪುನಃ ಪಟ್ಟಣವನ್ನು ಮೊದಲಿನಂತೆಯೇ ಮಾಡಿ ತೋರಿಸಿದನು. ಮಗನ ಅಸಾ ಧಾರಣವಾದ ಸಾಹಸವನ್ನು ಕಂಡು ಈತನು ಕಾರಣ ದೇಹಿಯೆಂದು ಅರಿತು ತಿರುಜ್ಞಾನ ಸಂಬಂಧ ಎಂದು ಪೆಸರಿಟ್ಟು ತರಳನನ್ನು ಬಗಲಿನಲ್ಲಿ ಎತ್ತಿಕೊಂಡು ಚಿಯಾಳಿ ಪುರಾಧಿ ಪತಿಯಾದ ಶಿವನಿಲಯಕ್ಕೆ ಬಂದು ವಿಶ್ವಪಾಲಕನಿಗೆ ಭಯ ಭಕ್ತಿ ಪುರಸ್ಸರವಾಗಿ ನಮಸ್ಕರಿಸಿ ನಾಥನೇ ನಾನು ಈ ಕುವರನನ್ನು ಮಗನೆಂದು ಎಣಿಸಿದ್ದೆನು. ಈಗೀಗ ಈ ಕುಮಾರನು ನಿಮ್ಮವನೆಂದು ತಿಳಿಯಿತು. ಈತನನ್ನು ಅಕ್ಕರದಿಂದ ರಕ್ಷಿಸುವದೆಂದು ವಿಜ್ಞಾಪಿಸಿ ಹೊರಡಲನುವಾಗಲು ಜ್ಞಾನಸಂಬಂ ಧಿಯು ನನ್ನನ್ನು ಹಡೆದು ಜೋಪಾನಮಾಡಿದ ವಿಪ್ರವರ್ಯನಿಗೆ ಅಕ್ಷಯವಾದ ಧನವನ್ನು ಕೊಡಬೇಕೆಂದು ಈಶ್ವರನನ್ನು ಪ್ರಾರ್ಥಿಸಲು ಆದರಂತೆಯೇ ನಾಗೇಂ ದ್ರಹಾರನು ಅನುಗ್ರಹಿಸಿದನು. ಶಿವಾಲಯದಲ್ಲಿಯೇ ಗೌರೀಶನ ಕಟಾಕ್ಷದಿಂದ ಶೈಶವಾವಸ್ಥೆಯನ್ನು ಕಳೆಯುತ್ತಿರುವದನ್ನು ಚಿಯಾಳಿ ಪುರದ ಜನರು ನೋಡಿ

ಅಚ್ಚರಿಗೊಂಡವರಾಗಿ ಪ್ರೇಮದಿಂದ ಪಿಳ್ಳೈನಾಯನಾರರ ಸೇವೆಯನ್ನು ಮಾಡುತ್ತಿದ್ದರು. ಶಿಶುವಿಗೆ ಏಳನೆಯವರ್ಷವು ಪ್ರಾಪ್ತವಾಗಲು ಅಂಗಜಾರಿಯಾದ ಶಿವನು ಆತನಿಗೆ ಭದ್ರೋಪ ಕರಣವನ್ನು ಮಾಡಿ ಪ್ರೀತಿಯಿಂದ ಶೈವೋಪದೇಶವನ್ನು ಮಾಡಿ ತನ್ನ ಮಹಿಮೆಗಳನ್ನು ಪಾಡುವದಕ್ಕಾಗಿ ಎರಡು ತಾಳಗಳನ್ನು ಸಂತೋಷದಿಂದ ಕರುಣಿಸಿದನು. ಲೋಕನಾಥನಿಂದ ಹೀಗೆ ಅನುಗ್ರಹಿಸಲ್ಪಟ್ಟ ದಿವ್ಯ ಕುಮಾರನು ಶಿವಭಕ್ತಿ ರಸಪೂರಿತವಾದ ತಿರುಪಾಡುಗಳನ್ನು ತಾಳಕ್ಕೆ ಸರಿಯಾಗಿ ಹಾಕಿ ದಿನಾಲು ಶಿವಲಿಂಗಾರ್ಚನೆಯನ್ನು ಮಾಡುತ್ತ ಶಿವಾನಂದ ಪರನಾಗಿದ್ದನು. ಒಂದು ದಿವಸ ಜ್ಞಾನಸಂಬಂಧಿಯು ಪರಮಾತ್ಮನನ್ನು ಪರಮಾನುರಾಗದಿಂದ ಪೂಜಿಸಿ ತಾಳಗಳನ್ನು ಬಾರಿಸಿ ಶಿವಜ್ಞಾನಮಯವಾದ ಪದ್ಯಗಳನ್ನು ಹಾಡಿ ಅತ್ಯಾನಂದ ಪಡುತ್ತ ಪಾಪವೆಂಬ ಕಗ್ಗತ್ತಲೆಗೆ ಅಪರಿಮಿತ ತೇಜೋಮಯನಾದ ಭಾಸ್ಕರನೇ ಜಿನಮತ ಸಂಹಾರಸಿಂಹನೇ ನನ್ನನ್ನು ಇಳೆಗೆ ಕಳಿಸಿದ ಕಾರ್ಯ ವಿಶೇಷವಾದರೂ ಏನೆಂದು ಎಚ್ಚರಿಸಲು ಸದಾಶಿವನು ಮೆಚ್ಚಿ ವ್ಯೋಮರಥದಂತಿರುವ ಮುತ್ತಿನ ಮಂಟಪವನ್ನು ಕೊಟ್ಟು ಶ್ರುತಿ-ಶಾಸ್ತ್ರ-ವ್ಯಾಕರಣ-ಮಂತ್ರ-ತರ್ಕ ಮೊದಲಾದ ವಿದ್ಯೆಗಳನ್ನು ಕೃಪೆಮಾಡಿ ಅಣಿಮಾದಿ ಅಷ್ಟಸಿದ್ಧಿಗಳನ್ನು ಏಳು ವರುಷದನಿರುವಾಗಲೇ ಅನುಗ್ರಹಿಸಿದನು.

ಪರಮಾವಧಿಯಾಗಿರುವ ಜೈನರ ಹಾವಳಿಯನ್ನು ದೂರಮಾಡಿ ಶೈವರನ್ನು ಉದ್ಧರಿಸಬೇಕೆಂಬ ಭಾವದ ಬಿನ್ನಪತ್ರವು ಕುಲಚ್ಚೆಯರ್ ಮತ್ತು ಮಂಗಕ್ಕರಸಿಯರಿಂದ ಕೈಗೆ ಬಂದು ತಲುಪಲು ಚರಿತ್ರನಾಯಕನು ಅದನ್ನು ಅವಲೋಕಿಸಿ ಅದರಂತೆ ಮಾಡಬೇಕೆಂದು ಒಪ್ಪಿ ಲಿಂಗದೇವನಿಗೆ ಪೊಡಮಟ್ಟು ಆ ಪರಿಯಾಗಿ ನಿವೇದಿಸಿ, ತಾಳವನ್ನು ಬಾರಿಸುತ್ತ ಸೇವೆಮಾಡುವ ಭಕ್ತರೊಂದಿಗೆ ಮುತ್ತಿನ ಮಂಟಪದಲ್ಲಿ ಕುಳಿತು ಅತಿ ಸಂಭ್ರಮದಿಂದ ಪಂಚ ಮಹಾ ವಾದ್ಯಗಳು ಮೊಳಗುತ್ತಿರಲು ನೋಡುವವರಿಗೆ ಆಶ್ಚರ್ಯಕರವಾಗಿ ಕಾಣುವಂತೆ ಪರಿಜನರು ಆ ಮುತ್ತಿನ ಮಂಟಪವನ್ನು ಹೊತ್ತುಕೊಂಡಕ್ಷಣವೇ ಆಕಾಶ ಮಾರ್ಗದಿಂದ ಚೋಳಮಂಡಲದಲ್ಲಿರುವ ಶಿವಪುರಗಳನ್ನು ನೋಡಿ ಸಂತೋಷಪಡುತ್ತ ತತ್ಕಾಲೂರ್ಗೆ ಬಂದನು. ಶಿವಕುಮಾರನು ಬಂದದ್ದನ್ನು ಕೇಳಿ ಆ ಪುರದಲ್ಲಿರುವ ಕೀರ್ತಿವಂತನಾದ, ಶ್ರೀಮಂತನಾದ, ಶಿವಭಕ್ತಿಶೋಭಿತನಾದ ಎಲೆಯಸಿಂಗನೆಂಬವನು ಇದುರ್ಗೊಂಡು ಬಂದು ವರಕುಮಾರನಿಗೆ ಸಾಷ್ಟಾಂಗವೆರಗಿ ತನ್ನ ಮಂದಿರಕ್ಕೆ ಕರಕೊಂಡು ಬಂದು ಉಚಿತಾಸನದಲ್ಲಿ ಮುಹೂರ್ತಗೊಳಿಸಿ ಪವಿತ್ರವಾದ ಪಾದತೀರ್ಥವನ್ನು ಸವಿದು ಪ್ರಭುವೇ ನನ್ನ ಪ್ರಾರ್ಥನೆಯನ್ನು ಚಿತ್ತೈಸು; ನನ್ನ ಮಗಳಿಗೆ ನಿಮ್ಮ ವರನಾಮವನ್ನೇ ಇಟ್ಟಿತ್ತು. ಆದರೆ ಆ ಕನ್ಯೆಯು ವರ್ಷದ ಮೊದಲು ಅಂತ್ಯವನ್ನೈದಿದಳು. ಆಕೆಯ ಅಸ್ಥಿಪಂಜರವನ್ನು ಕಾಯ್ದಿಟ್ಟ ಪೆಟ್ಟಿಗೆಯನ್ನು

ತೋರಿಸಿ ಅವಳಿಗೆ ಜೀವದಾನವನ್ನು ದಯಪಾಲಿಸಿ ನಿಮ್ಮ ಸಾಮರ್ಥ್ಯವನ್ನು ಭೂಜನರಿಗೆ ತೋರಿಸಬೇಕೆಂದು ಆನತನಾದನು. ಆಗ ಕಥಾನಾಯಕನು ಪ್ರಮಥರನ್ನು ನೆನೆದು ಶಂಕರನ ತಿರುಪಾಡುಗಳನ್ನು ಭಕ್ತ್ಯಾತಿಶಯದಿಂದ ತಾಳವನ್ನು ಬಾರಿಸುತ್ತ ಪಾಡಿ ಎಲೆಯಸಿಂಗನ ಪುತ್ರಿಗೆ ಅಸುವನ್ನು ದಯಪಾಲಿಸಬೇಕೆಂದು ಭಗವಂತನನ್ನು ಪ್ರಾರ್ಥಿಸಲು ಹರ ಪ್ರಸಾದದಿಂದ ಸದ್ಭಕ್ತ ಮಂಡಳಿಯು ಉಘೇ ಉಘೇ ಎಂದೆನ್ನುವಾಗ ಮಲಗಿದವಳು ಏಳುವಂತೆ ಆ ಕನ್ಯೆಯು ಎದ್ದು ಕಥಾಪುರುಷನಿಗೆ ನಮಸ್ಕರಿಸಲು ನೆರೆದವರೆಲ್ಲರು ಜಯ ಜಯ ಎಂದರು. ಮರುದಿವಸ ಅಲ್ಲಿಂದ ಶಿವಭಕ್ತರೊಂದಿಗೆ ಚರಿತ್ರಪುಂಗವನು ಮುತ್ತಿನ ಮಂಟಪವನ್ನೇರಿ ತುಂಬಿ ಹರಿಯುವ ಕಾವೇರಿಯನ್ನು ದಾಂಟಿ ಪಾಂಡ್ಯ ಅವನಿಯನ್ನು ಹೊಕ್ಕು ಶಿವಾಲಯವಿರುವ ನಗರವನ್ನು ಕಂಡು ಆ ಶಿವನಿಲಯದ ಸುತ್ತಲು ಸೇರಿ ತಟ್ಟನೆ ಆ ಗುಡಿಯ ಬಾಗಿಲವನ್ನು ತೆಗೆಸಿ ಎಲ್ಲರೂ ಒಳಗೆ ಹೋದರು ಅಲ್ಲಿ ನಮ್ಮ ವರಕುಮಾರನು ತನ್ನ ಮನದಣಿವಂತೆ ಸಾಂಗವಾಗಿ ಪೂಜೆಗೆಯ್ದು ತಿರುಪಾಡುಗಳನ್ನು ಪಾಡಿ ಸಂತಸವನ್ನು ತಾಳ್ದನು. ಈ ರೀತಿ ನಲಿದಾಡಿ ಅಲ್ಲಿರುವ ಜಿನಮಂದಿರಗಳಿಗೆ ಮುದ್ರೆಯನ್ನೊತ್ತಿ ಅದಕ್ಕೆ ಆತಂಕಮಾಡುವ ಜೈನರನ್ನು ಸದೆಬಡಿದು ವೀರಾಲಾಪದಿಂದಿದ್ದನು. ಇದೆಲ್ಲವನ್ನು ಅಲ್ಲಿಯ ಜೈನರು ನೋಡಿ ಮನಸಿಗೆ ಸಮಾಧಾನವಾಗದೆ ಮಧುರೆಗೆ ಹೋಗಿ ತಮ್ಮ ಜನರಿಗೆ ದೂರು ಹೇಳಿದರು. ಹರಭಕ್ತರು ಏಳು ವರ್ಷದ ಪಿಳ್ಳೆಯನ್ನು (ಅಂದರೆ ಹುಡುಗನನ್ನು) ಕರಕೊಂಡುಬಂದು ಕೊಬ್ಬಿದವರಾಗಿ ಜಿನಪೂಜೆಯನ್ನು ಕೆಡಿಸಿ ಜೈನಮಸ್ತಕ ಶೂಲನೆಂದು ಆ ಕುಮಾರನನ್ನು ಹೊಗಳುತ್ತ ಚೈತ್ಯಾಲಯಗಳಿಗೆ ಮುದ್ರೆಯನ್ನೊತ್ತಿರುವರೆಂದು ಜೈನ ಆಚಾರ್ಯನಾದ ಪುತ್ತನಂದಿ ಮೊದಲಾದ ಸವಣ ಪ್ರಮುಖರು ಮಧುರೆಯಲ್ಲಿದ್ದ ಕೂನಪಾಂಡ್ಯ ದೊರೆಗೆ ತಿಳಿಸಿ ಈ ಕ್ಷಣವೇ ತಕ್ಕ ಪ್ರತಿ ಕ್ರಿಯೆಯನ್ನು ಮಾಡಬೇಕೆಂದು ಅರುಹಿದರು. ಆಗಲಾ ಪಾಂಡ್ಯ ಧರಣೀಶನು ಶಿವಕುಮಾರನನ್ನು ಮುರಿಯಲಿಕ್ಕೆ ನನ್ನ ಸೈನಿಕರನ್ನು ಕಳುಹಿಸಿದರೆ ಸಣ್ಣ ಹುಡುಗನೊಡನೆ ಕಾದಲಿಕ್ಕೆ ಭಟಸಮೂಹವನ್ನು ಪಾಂಡ್ಯರಾಜನು ಕಳಿಸಿದನೆಂದು ನನ್ನ ಸರಿಕರು ನಗದೇ ಇರುವರೇ ಎಂದು ಹೇಳಿದನು. ಅದಕ್ಕೆ ಪುತ್ತನಂದಿಯು ಅರಸೇ ಆ ಕುಮಾರನಿಗೆ ದೈವಾನುಕೂಲದಿಂದ ಬಲವಾಗಿರುವದರಿಂದ ಆತನನ್ನು ಬಹು ಎಚ್ಚರದಿಂದ ಪ್ರತಿಭಟಿಸಬೇಕಾಗಿದೆ. ಅದನ್ನು ಕೇಳಿ ಪಾಂಡ್ಯರಾಜನು ಶೂರರಾದ ಸಹಸ್ರರಾಹುತರನ್ನು ಮತ್ತು ಎಂಟುಸಾವಿರ ಕಾಲಬಲವನ್ನು ಕೊಡಲು ಸಾವಿರಾರು ಜೈನರನ್ನು ಹಿಂಡುಗಟ್ಟಿಕೊಂಡು ರಾಜಸೇನಾಸಮೇತನಾಗಿ ಪುತ್ತನಂದಿಯು (ದಯವೇ ಧರ್ಮದ ಮೂಲವೆಂದು ಸಾರುವ ಅವರ ಮಹಾವಾಕ್ಯವನ್ನು ಸುಟ್ಟು) ಆರ್ಭಟಿಸುತ್ತ ಕೊಂಬು ಕಹಳೆಗಳನ್ನು

ಊದಿಸುತ್ತ ಅಟ್ಟಹಾಸದೊಂದಿಗೆ ತಿರುಜ್ಞಾನ ಸಂಬಂಧರಿರುವ ಊರಿಗೆ ಹೋಗಿ ದಾಳಿ ಇಟ್ಟು ಆ ವೀರಕುಮಾರನಿರುವ ಶಿವನಿಲಯವನ್ನು ಮುತ್ತಿ ಬೊಬ್ಬಿರಿದನು. ದೇವಾಲಯದಲ್ಲಿರುವ ಚರಿತ್ರನಾಯಕನು ಆನಂದದಿಂದ ಶಿವಪೂಜೆಯನ್ನು ಮಾಡಿ ಸೇನೆಯ ಗರ್ಜನೆಯನ್ನು ಕೇಳಿ ಬಲಿಷ್ಠವಾದ ಸಿಂಹವು ಆನೆಯ ಧ್ವನಿಯನ್ನು ಕೇಳಿದಂತೆ ಕೆರಳಿ ತನ್ನ ಪರಿಜನರಿಗೂ ಇತರ ಭಕ್ತ ಸಮೂಹಕ್ಕೂ ಅಭಯವನ್ನು ಕೊಟ್ಟು ಮಹಾದೇವನಿಗೆ ಪುಷ್ಪಾಂಜಲಿಯನ್ನು ಮಾಡಿ ವೈರಿಗಳಾದ ಜೈನರನ್ನು ಸಂಹರಿಸಬೇಕಾಗಿದೆ ಎಂದು ಅಗಜೇಶನಿಗೆ ಬಿನ್ನವಿಸಲು ಆತನು ತನ್ನ ಅರ್ಭಕನ ನುಡಿಗಳನ್ನು ಕೇಳಿ ತನ್ನ ಚಕ್ರಕ್ಕೆ ದುರುಳರಾದ ಕ್ಷಪಣರನ್ನು ತರಿಯಬೇಕೆಂದು ಆಜ್ಞಾಪಿಸಿದನು. ಕೂಡಲೆ ಭೀಕರವಾದ ಆ ಚಕ್ರವು ಭಯಂಕರವಾಗಿ ಕಿಡಿಗಳನ್ನು ಕಾರುತ್ತ ಆರ್ಭಟಿಸಿ ರಿಪು ಬಲವನ್ನು ಸೇನಾಸಮೇತವಾಗಿ ತರಿದಿಕ್ಕಿ ಶಿವಸನ್ನಿಧಿಯನ್ನು ಹೊಂದಿತು. ಸೇನೆಯೆಲ್ಲ ಹತವಾಗಲು ನಿರಾಶ್ರಯವಾದ ಕುದುರೆಗಳು ಗುಂಪುಕಟ್ಟಿಕೊಂಡು ಮಧುರೆಗೆ ಬರಲು ಕೂನ ಪಾಂಡ್ಯನಿಗೆ ಇದು ಅದ್ಭುತವಾಗಿ ತೋರಲು, ಸಂಗ್ರಾಮದ ಪರ್ಯವಸಾನವು ಹೇಗಾಯಿತು ಅದನ್ನು ತಿಳಿಯುವದಕ್ಕೆ ಚಾರರನ್ನು ಕಳಿಸಲು ಅವರು ಬಂದು ನೋಡಿ ಇದಿರಾಂತು ನಮ್ಮ ಸೇನೆಯೊಡನೆ ಕಾದಿದವರಿಲ್ಲದಿದ್ದರೂ ಶಿರಗಳು ನೆಲಕ್ಕೆ ಉರುಳಿವೆ. ಇದು ದೈವಿಕವಾಗಿರಬೇಕೆಂದು ಮತ್ತು ಆ ಸಮರಭೂಮಿಯ ಸಮೀಪದಲ್ಲಿಯೇ ಒಂದು ಶಿವಾಲಯವಿರುವದು; ಅಲ್ಲಿ ನಿರಾಯುಧರಾದ ನೂರಾರು ಭಕ್ತರೊಡನೆ ಮುತ್ತಿನ ಮಂಟಪ ಸಹಿತವಾಗಿರುವ ವಿಭೂತಿ ರುದ್ರಾಕ್ಷಗಳನ್ನು ಧರಿಸಿಕೊಂಡಿರುವ ಬ್ರಹ್ಮತೇಜಸ್ಸಿನಿಂದ ಮೆರೆಯುವ ವ್ಯಕ್ತಿಯನ್ನು ನೋಡಿದೆವೆಂದು ತಮ್ಮ ದೊರೆಗೆ ಶ್ರುತಪಡಿಸಿದರು. ಅರಸನು ಇದು ದೈವಿಕವಾಗಿರದಿದ್ದರೆ ಈ ರೀತಿ ನಾಶವಾಗುತ್ತಿದ್ದಿಲ್ಲವೆಂದು ಬಗೆದು ಸ್ವಲ್ಪ ಭೀತಿಗೊಂಡವನಾಗಿ ವಿಚಾರದಲ್ಲಿ ಮುಳುಗಿದನು.

ಇತ್ತ ಶಿವಾಜ್ಞೆಯ ಮೇರೆಗೆ ಹರಕುಮಾರನು ಮಂಗಲ ವಾದ್ಯದೊಡನೆ ತನ್ನ ದಿವ್ಯ ಮಂಟಪಾರೂಢನಾಗಿ ಶಿವಭಕ್ತ ಪಾಠಕ ವೃಂದದೊಡನೆ ಮಧುರೆಗೆ ಬಂದು ಅಲ್ಲಿಯ ಮುಖ್ಯ ಪ್ರಸಿದ್ಧ ದೇವಾಲಯವಾದ ಚೊಕ್ಕನಾಯನಾರ ಶಿವಗೃಹಕ್ಕೆ ಬಂದು ತನಗೆ ತೃಪ್ತಿಯಾಗುವಂತೆ ಶಿವಲಿಂಗ ಸೇವೆಯನ್ನು ಕೈಗೊಂಡು ಶಿವದೂಷಕರಾದ ಜೈನರನ್ನು ಮುರಿಬಡಿಯುವೆನೆಂದು ಇಂದುಧರನೆದುರಿಗೆ ಹೇಳುತ್ತ ಶಿವಾನಂದದಲ್ಲಿದ್ದನು.

ಕೂನಪಾಂಡ್ಯರಾಜನ ಹೆಂಡತಿಯಾದ ವಿಮಲೆಯಾದ ಮಂಗರಸಿಗೆ ವಿಶ್ವಾಸಪಾತ್ರನಾದ ಸೇವಕನಾಗಿಯೂ, ಆ ರಾಜನ ಸಚಿವನಾಗಿಯೂ (ಚಿಕ್ಕ ಕಾ

ಗಳ ಗುಂಪಿನಲ್ಲಿ ವರಕೋಗಿಲೆಯು ಮರಿಯು ಶೋಭಿಸುವಂತೆ) ಹರಳುಗಳ ಮಧ್ಯದಲ್ಲಿಯೇ ಶ್ರೇಷ್ಠವಾದ ರತ್ನವು ಪ್ರಕಾಶಿಸುವಂತೆ ಇರುತ್ತಿರುವ ಕುಲಚ್ಚಿರ್ಯನೆಂಬುವನು ತನ್ನರಸನು ಜೈನನಾದುದರಿಂದ ಉಪಾಯಾಂತರವನ್ನು ಕಾಣದೆ ಗುಪ್ತವಾಗಿ ಮೃಡನ ಪೂಜೆಯನ್ನು ಮಾಡುತ್ತಿದ್ದನು. ಚಿತ್ತೈಕಾಗ್ರತೆಯಿಂದ ಪರಿಶುದ್ಧಾತ್ಮನಾದ ಕುಲಚ್ಚಿರ್ಯನು ಹರನನ್ನು ಪೂಜಿಸುತ್ತಿದ್ದುದರಿಂದ ಶಿವಪ್ರಸಾದ ಮಹಿಮೆಯಿಂದ ಮಧುರೆಗೆ ಚರಿತ್ರನಾಯಕನು ಬರುವ ಶುಭ ಸಂಗತಿಯನ್ನು ಮುಂಚಿತವಾಗಿ ತಿಳಿದು ತನಗೆ ಬೇಕಾದ ಸನ್ನಾಹವನ್ನು ಯಾರೂ ಅರಿಯದಂತೆ ಮಾಡಿಟ್ಟು ಶಿವಕುಮಾರನು ಬರುವದನ್ನೇ ನೋಡುತ್ತಿರುವಷ್ಟರಲ್ಲಿ ಆ ಸತ್ವಶಾಲಿಯು ಮಧುರಾಪುರದ ಚೊಕ್ಕನಾಯನಾರ ಲಿಂಗಾಲಯಕ್ಕೆ ದಯಮಾಡಿಸಿರುವದನ್ನು ಕೇಳಿ ಅತಿ ಸಂತಸವನ್ನು ಹೊಂದಿ ರೋಮಾಂಚನಗೊಂಡು ಶೀಘ್ರವಾಗಿ ಅಲ್ಲಿಗೆ ಬಂದು ಉಪಾಸನಾ ಮೂರ್ತಿಗೆ ಮಣಿದು ದೇವಾ ನನ್ನ ಒಡೆಯಳಾದ, ವಿಕ್ರಮ ಚೋಳ ಭೂಪನಿಗೆ ಮಗಳಾದ, ಮಂಗರಸಿ ಎಂಬ ಮಹಾಶಿವಾನುರಾಗಿಯು ತನ್ನ ಗಂಡನಾದ, ಜಿನಭಕ್ತನಾದ ಪಾಂಡ್ಯ ಭೂಪನಿಗೆ ಅಂಜಿ ಶಿವಚಿನ್ಹವಾದ ವಿಭೂತಿಯನ್ನು ಜಲದಲ್ಲಿ ಮಿಶ್ರಮಾಡಿ ಅತಿಸೂಕ್ಷ್ಮ ಕಾಣುವ ಪರಿಯಿಂದ ಧರಿಸುವಳು. ಮತ್ತು ಗುರುವಾದ ನಿಮ್ಮಿಂದಲೆ ಜಿನಮತವನ್ನು ಗೆಲ್ಲುವೆನೆಂದು ಹಾತೊರೆಯುತ್ತಿರುವಳು; ಹಾಗೆ ನೀವು ಕರುಣಿಸುವದೆಂದು ತಲೆಬಾಗಿ ವಿನಯದಿಂದ ಬೇಡಿಕೊಂಡು ಹಿಂದಕ್ಕೆ ತಿರುಗಿ ಬಂದು ತನ್ನ ಯಜಮಾನಳಾದ ಮಂಗರಸಿಗೆ ತಿಳುಹಿಸಲು ಆಕೆಯ ಸಂತೋಷಕ್ಕೆ ಕೊನೆಯಿಲ್ಲದಾಯಿತು.

ಜೈನರು ತಮಗೆ ಕಡುವೈರಿಯಾದ ಶಿವನನ್ನು ಆರಾಧಿಸುವ ಹುಡುಗನು ಬಂದಿರುವದನ್ನು ತಿಳಿದು ರಾತ್ರಿಕಾಲವಾಗಿರುವದೆಂದು ವಿಳಂಬಮಾಡದೆ ಪಾಂಡ್ಯಭೂಪನಲ್ಲಿಗೆ ಬಂದು ತಮ್ಮ ಮುನಿಯಾದ ಪುತ್ತನಂದಿ ಮೊದಲ್ಗೊಂಡು ಜೈನ ಮಹಾಸೇನೆಯನ್ನು ಸಂಹರಿಸಿದ ಹಗೆಯು ಗರ್ವದಿಂದ ನಮ್ಮ ಪುರಕ್ಕೆ ಬಂದಿರುವದೊಂದು ಉತ್ಪಾತವಾಗಿದೆ ಎಂದು ರೋಷದಿಂದ ತಿಳಿಸಿದರು. ಆಗ ಅವನಿಪನು ಯೋಚನೆಮಾಡಿ ಬಂದಿರುವ ವ್ಯಕ್ತಿಯು ಏಳು ವರ್ಷದ ವತ್ಸನು ಮಾತ್ರ, ತರ್ಕ ಮೀಮಾಂಸಾದಿಗಳಲ್ಲಿ ವಿಚಾರದನು ಮತ್ತು ಈಶ್ವರನ ಆಜ್ಞಾಬಲದಿಂದ ಇಲ್ಲಿಗೆ ಬಂದಿರುವನು. ಈಗ ಬಂದಿರುವ ನಿಮ್ಮ (ಜೈನ) ಋಷಿಗಳಲ್ಲಿ ಮತ್ತು ಇತರ ಪಂಡಿತರಲ್ಲಿ ಸಮರ್ಥರಿದ್ದರೆ ಯಂತ್ರ-ತಂತ್ರ-ಮಂತ್ರಗಳಿಂದ ಪರೀಕ್ಷಿಸಬಹುದೆಂದು ಸಮಂಜಸವಾಗಿ ಹೇಳಿದನು. ರಾಜನು ಆಡಿದ ಮಾತುಗಳನ್ನು ಸಂಪೂರ್ಣವಾಗಿ ಕೇಳಿದಾಗ್ಯೂ ದುರ್ಜನರಾದ ಮತ್ತು ವಿಚಾರಹೀನರಾದ ಕ್ಷಪಣಕರು ಒಂದು ಬಸದಿಯಲ್ಲಿ ಕಲೆತು ಹೊಸದಾಗಿ ಬಂದಿರುವ ಶೈವ

ಘನ್ನು ಸುಟ್ಟುಬಿಡಬೇಕೆಂದು ನಿರ್ಣೈಸಿ ಆ ಪ್ರಕಾರ ಶಿವನಿಲಯಕ್ಕೆ ಬೆಂಕಿಯನ್ನು ಹಚ್ಚಬೇಕೆಂದು ಸಂಕಲ್ಪಿಸಿ ಆ ರೀತಿ ಮಾಡಿದರು. ಆಗ ಶಿವಕುಮಾರನು ದೇವ ಪೂಜೆಯನ್ನು ಮಾಡುತ್ತಿದ್ದನು. ಗುಡಿಯ ಹೊರಭಾಗವು ಕಿಚ್ಚಿಗೆ ಈಡಾದ ದ್ದನ್ನು ಭಕ್ತರು ಕಂಡು ಅಂಜಿ ತಮ್ಮ ಪ್ರಭುವಾದ ಆ ಕುಮಾರನಿಗೆ ತಿಳಿಸಲು ಆಗ ಅವನು ಅವರಿಗೆ ಅಭಯವೆಂದು ಧೈರ್ಯವನ್ನು ಕೊಟ್ಟನು. ಮತ್ತು ಸರ್ವ ರಕ್ಷಕನಾದ ಶಿವನನ್ನು ಅರ್ಚಿಸಿ ತಾಳಗಳಿಂದ ಮನೋಹರವಾಗಿ ತಿರುಪಾಡುಗ ಳನ್ನು ಪಾಡಿ ಈಶ್ವರನನ್ನು ತುಷ್ಟಿಪಡಿಸಿ ತ್ರಿಪುರಹರನಿಗೆ ತನ್ನಿಷ್ಟವನ್ನು ನಿವೇ ದಿಸಿ, ಶಾಂತಿ ಆನಂದ ವೀರರಸಗಳು ಏಕತ್ರವಾಗಿ ಆತನಲ್ಲಿ ಉಂಟಾಗಿ ಭದ್ರಾಸ ನದಲ್ಲಿ ಕುಳಿತು ಅನಲನನ್ನು ಕರೆದು ದಕ್ಷಯಾಗದಲ್ಲಿ ಆದ ಶಿಕ್ಷೆಯನ್ನು ಮರೆ ತಿಯಾ ಎಂದು ಆಕ್ಷೇಪಿಸಿ ಈ ರೀತಿಯಾಗಿ ಶಿವನಿಲಯಕ್ಕೆ ನೀನು ಬರುವದುಚಿ ತವೇ ಎಂದು ಎಚ್ಚರಗೊಟ್ಟು ನಮ್ಮ ವಿರೋಧಿಗಳಾದ ಜೈನರ ಬಸದಿಗಳನ್ನು ತ್ವರೆಯಿಂದ ಸುಡುವುದೆಂದು ಆಜ್ಞೆಮಾಡಿದನು.

ತಾರಕಾರಿಯಿಂದ ಪ್ರೇರಿಸಲ್ಪಟ್ಟ ಅಗ್ನಿಯು ಜಿನಾಲಯಗಳನ್ನು ತನ್ನ ಪ್ರತಾಪವನ್ನೆಲ್ಲ ತೋರಿಸಿ ಸುಟ್ಟುಬಿಟ್ಟನು. ಬಸದಿಗಳೆಲ್ಲವೂ ಬೆಂದವೆಂದು ಕ್ಷಪಣಕರು ಗೋಳಿಟ್ಟರು. ಪ್ರಭೆಯ ಸಿಧಿಯೆಂಬಂತೆ ಮೂಡಣ ದಿಕ್ಕಿನಲ್ಲಿ ಭಾನುವು ಕಾಣಿಸಿದನು. ಆಗ ಆ ಉಷಃಕಾಲದಲ್ಲಿ ತಿರುಜ್ಞಾನ ಸಂಬಂ ಧಿಯು ಬೆಳಗಿನ ಶಿವಪೂಜೆಯನ್ನು ಪೂರೈಸಿ ಭಕ್ತರೊಡನೆ ನಿಜಾನಂದದಲ್ಲಿ ಕುಳಿ ತುಕೊಂಡು ಅಗ್ನಿಯನ್ನು ಕರೆದು ನೀನು ಇನ್ನು ಈ ಭಕ್ತಸಮೂಹವನ್ನು ಬಳ ಲುವದಕ್ಕೆ ಅವಕಾಶಕೊಟ್ಟ ಪಾಂಡ್ಯನನ್ನು ತಪಿಸಬೇಕೆಂದು ಅಪ್ಪಣೆಯನ್ನಿತ್ತನು.

ಚರಿತ್ರನಾಯಕನ ಇಚ್ಛೆಯಂತೆ ಕೂನಪಾಂಡ್ಯನ ಮೈಯಲ್ಲಿ ಮಹಾ ಭಯಂಕರ ಜ್ವರ ಉತ್ಪತ್ತಿಯಾಗಿ ಕ್ಲೇಶಪಡಹತ್ತಿದನು. ಅವನ ತಾಪವನ್ನು ಬಣ್ಣಿಸುವದು ಅಸಾಧ್ಯವು. ಅರಸನು ವೈದ್ಯರನ್ನು ಕರೆಕಳುಹಿಸಿದನು. ಇದನ್ನು ತಿಳಿದು ಸವಣರು ಮಂತ್ರ ತಂತ್ರ ಔಷಧಿಗಳನ್ನು ಬಲ್ಲ ಭಿಷಗ್ವರರನ್ನು ಕರಕೊಂಡು ಬಂದು ತಮಗೆ ತೋಚಿದ ಉಪಾಯಗಳೆಲ್ಲವನ್ನು ಮಾಡುತ್ತ ರುಜೆ ಯನ್ನು ವಾಸಿಮಾಡುವೆವೆಂದು ಪ್ರತಿಜ್ಞಾ ವಾಕ್ಯಗಳನ್ನು ನುಡಿಯುತ್ತ ಜೈನ ಪಂಡಿತರು ಹ್ಯಾಗೆ ಹ್ಯಾಗೆ ಹೆಚ್ಚಿಗೆ ಮಂತ್ರಿಸುವರೊ ಹಾಗೆ ಹೆಚ್ಚೆಚ್ಚಾಗಿ ಉರಿ ಯು ವ್ಯಾಪಿಸಿ ರಾಜನಿಗೆ ಜ್ವರ ತಾಪವನ್ನು ಸಹಿಸುವದು ದುಃಸಾಧ್ಯವಾದ ದ್ದನ್ನು ಮಹಿಷಿಯಾದ ಮಂಗರಸಿಯು ಕಂಡು ತನ್ನ ವಲ್ಲಭನಿಗೆ ಏಕಾಂತದಲ್ಲಿ ಈ ನಿನ್ನ ಬಾಧೆಯು ದೈವಿಕವಾದುದು. ಈ ಬರಿಯ ವ್ಯರ್ಥ ಕಜ್ಜಗಳೇತಕ್ಕೆ ಸುಮ್ಮನೆ ತನುವನ್ನು ನೋಯಿಸುವದೇಕೆ? ನೀನು ವಿಶ್ವಾಸದಿಂದ ಕೇಳುವೆಯಾದರೆ ಹೇಳು ವೆನುಕೇಳು. ಮಹಿಮಾಶಾಲಿಯಾದ ಪಿಳ್ಳೆನಾಯನಾರು ಎಂಬ ನಾಮಧೇಯ

ದಿಂದ ಒಬ್ಬ ಶಿವಭಕ್ತ ಲಲಾಮನು ಬಂದಿರುವನು; ಅವನಿಗೆ ಶರಣಾಗತನಾಗಿ ಬಾಳು; ಈ ರೀತಿಯಾಗಿ ಮಂಗರಸಿಯು ಪತಿಪ್ರೇಮದಿಂದ ಕಾಂತನಿಗೆ ನಿವೇದಿಸಿ ಆತನಿಗೆ ಧೈರ್ಯವನ್ನು ಕೊಟ್ಟು ತನ್ನ ಆಪ್ತ ಬಂಧು ಸಚಿವನಾದ ಕುಲಶ್ಚಿರ್ಯನನ್ನು ಕರೆದು ತಿರುಜ್ಞಾನ ಸಂಬಂಧಾಚಾರ್ಯರನ್ನು ವಿನಯವಾಗಿ ಕರಕೊಂಡು ಬರುವದಾಗಿಯೂ ಇಲ್ಲಿ ನಡೆದ ಸಂಗತಿಯನ್ನೆಲ್ಲ ಅವರಿಗೆ ತಿಳಿಸಬೇಕಾಗಿಯೂ ಹೇಳಿದಳು

ಕುಲಶ್ಚಿರ್ಯನಿಂದ ಆಹ್ವಾನಿಸಲ್ಪಟ್ಟ ಚರಿತ್ರ ಪುಂಗವನು ಮುತ್ತಿನ ಮಂಟಪವನ್ನೇರಿ ತನ್ನ ಭಕ್ತರಿಂದಲೂ ಪರಿಚಾರಕರಿಂದಲೂ ಕೂಡಿಕೊಂಡು ರಾಜಮಂದಿರವನ್ನು ಹೊಕ್ಕು ("ಜಿನಮತವೆಂಬ ಪರ್ವತಕ್ಕೆ ವಜ್ರಪ್ರಾಯನಾಗಿಯೂ, ಜಿನಮತವೆಂಬ ಗಜಕ್ಕೆ ಸಿಂಹಪ್ರಾಯನಾಗಿಯೂ, ಜಿನಮತವೆಂಬ ಕಗ್ಗತ್ತಲೆಗೆ ತೇಜೋಮಯನಾದ ಮಾರ್ತಾಂಡನಂತೆಯೂ") ಆ ಧರಣೀಶನ ಮಗ್ಗಲಲ್ಲಿ ಮಂಗರಸಿಯಿಂದ ಸಿದ್ಧಮಾಡಲ್ಪಟ್ಟ ಉಚಿತಾಸನದಲ್ಲಿ ಮಂಡಿಸಿದನು. ಮಂಗರಸಿ-ಕುಲಶ್ಚಿರ್ಯರು ಪುರುಷ ಶ್ರೇಷ್ಠನಿಗೆ ಸಾಷ್ಟಾಂಗವೆರಗಿದರು. ಇತ್ತ ಅವಿವೇಕಿಗಳಾದ ಜೈನರು ಹೊಸದಾಗಿ ಬಂದ ದಿವ್ಯ ಪ್ರಕಾಶದಿಂದ ಥಳಥಳಿಸುವ ಕುಮಾರನನ್ನು ನೋಡಿ ಮತ್ಸರದ ಶಿಖರವನ್ನೇರಿದರು. ರಾಜಪತ್ನಿಯಾದ ಮಂಗರಸಿಯು ಪುನಃ ಗುರುಗಳಡಿಗೆರಗಿ ಪತಿಯಾದ ಪಾಂಡುಭೂವರನ ತಾಪವನ್ನು ಹೋಗಲಾಡಿಸುವದೆಂದು ಪ್ರಾರ್ಥಿಸಿದಳು. ಆಗ ವಿನಯವನ್ನೂ ಧೈರ್ಯವನ್ನೂ ತೋರ್ಪಡಿಸುವ ನೃಪನಿಗೆ ಚರಿತ್ರನಾಯಕನು ಅರ್ಧ ಶರೀರದಲ್ಲಿಯ ಜ್ವರವನ್ನು ನಾನು ಹೋಗಲಾಡಿಸುವೆನು; ಉಳಿದ ಅರ್ಧ ಶರೀರದಲ್ಲಿರುವ ಜ್ವರವನ್ನು ಇಲ್ಲಿ ಬೇರೆ ಯಾರು ಸಮರ್ಥರಿರುವರೋ ಅವರು ನಿವಾರಿಸಲಿ. ಹೀಗೆ ಹೇಳಿ ಶಿವಗಣಸಮೂಹವನ್ನು ನೆನೆಯುತ್ತ ಭಸ್ಮವನ್ನು ಅಭಿಮಂತ್ರಿಸಿ ದೊರೆಯ ಅರ್ಧಭಾಗಕ್ಕೆ ವಿಭೂತಿಯನ್ನು ತಳಿಯಲು ಅಕ್ಷಣವೇ ಆ ಭಾಗವು ವಾಸಿಯಾಗಿ ಉಳಿದರ್ಧ ಭಾಗದಲ್ಲಿ ಉರಿಯು ಇಮ್ಮಡಿಯಾಯಿತು. ಅರಸನು ದ್ವಿಗುಣಿತವಾದ ಜ್ವರಬಾಧೆಯನ್ನು ತಾಳಲಾರದೆ ಉರುಳಾಡುತ್ತಿರುವಾಗ ಜೈನರು ತಮ್ಮ ಪಾಲಿಗೆ ಬಂದಿರುವ ಭಾಗವನ್ನು ನೆಟ್ಟಗೆ ಮಾಡುವೆವೆಂದು ಹೆಮ್ಮೆಯಿಂದ ಮುಂದೆ ಬಂದು ತಮ್ಮಲ್ಲಿ ಶಕ್ತಿವಂತರೆನಿಸಿಕೊಂಡ ಸಮರ್ಥರನ್ನು ತಂದು ಹಲವು ಉಪಾಯಗಳನ್ನು ಮಾಡಿದರು, ಅದೆಲ್ಲ ನಿಷ್ಫಲವಾಗಲು ನೃಪತಿಯು ಇನ್ನು ಸವಣರಿಂದ ಪ್ರಯೋಜನವಿಲ್ಲ. ಹರಕುಮಾರನೇ ಗತಿಯೆಂದು ಅವರ ದಿವ್ಯಪಾದಕ್ಕೆ ಮಣಿದು ದಯಮಾಡುವದೆಂದು ಪ್ರಾರ್ಥಿಸಿದನು. ತಿರುಜ್ಞಾನ ಸಂಬಂಧಿಯು ದೊರೆಯನ್ನು ಕಾರುಣ್ಯರಸದಿಂದ ನೋಡಿ ಪುನಃ ಭಸ್ಮವನ್ನು ಅಭಿಷಿಂಚಿಸಲು ಅರಸನಿಗೆ ತಟನ್ನೆ

ಸಂಪೂರ್ಣ ಆರೋಗ್ಯವು ಬಂದು ಹರ್ಷಿತನಾಗಲು ಖಳರಾದ ಜೈನರು ಅರಸನ ಬೆನ್ನಮೇಲೆ ಇರುವ ಕೂನನ್ನು ನಿವಾರಿಸಿದರೆ ಶಿವಭಕ್ತರೇ ಮೇಲೆಂದು ಜಂಭವನ್ನು ಮಾಡಲು ಚರಿತ್ರ ಪುರುಷನು ಕೃಪೆಯಿಂದ ಪಾಂಡ್ಯರಾಜನ ಬೆನ್ನಮೇಲೆ ಕೈಯಾಡಿಸಲು ಆ ಕೂನು ಇಲ್ಲವಾಗಲು ಕೂನಪಾಂಡ್ಯನು ಹೋಗಿ ಸುಂದರ ಪಾಂಡ್ಯನಾಗಿ ಮೆರೆದನು. ಶಿವಸಂಬಂಧಿಗಳು ಶಿವಭಕ್ತಿ ಪ್ರಭಾವದಿಂದ ಅಘಟಿತ ಘಟನಾ ಸಮರ್ಥರಲ್ಲವೇ?

ಚರಿತ್ರನಾಯಕನಿಂದ ಹರಸಲ್ಪಟ್ಟ ಪಾಂಡ್ಯರಾಜನು ಪತ್ನೀಸಮೇತನಾಗಿ ಆಪದ್ಬಾಂಧವನಾಗಿರುವ ನೂತನ ಗುರುವಿಗೆ ಆನತನಾಗಿ ಜೈನ ಮತವನ್ನು ನಂಬಿ ಕೆಟ್ಟುಹೋಗಿರುವ ನನ್ನನ್ನು ಉದ್ಧರಿಸಿ ಶೈವೋಪದೇಶವನ್ನು ಮಾಡಬೇಕೆಂದು ಪ್ರಾರ್ಥಿಸಿದನು. ಇದನ್ನು ಕಂಡು ಅಲ್ಲಿ ನೆರೆಯಲ್ಲಿದ್ದ ಸವಣರು ರೋಗವನ್ನು ನಿವಾರಿಸಿದ ಮಾತ್ರಕ್ಕೆ ವೈದ್ಯನಾಗುವನಲ್ಲದೆ ಅದರಲ್ಲಿ ಮತ್ತೇನು ವಿಶೇಷವೆಂದು ಕೊಚ್ಚಿ ಜಿನಮತವು ಶ್ರೇಷ್ಠವೋ ಅಥವಾ ಶಿವಮತವು ಮಿಗಿಲೋ ಎಂಬದನ್ನು ತಿಳಿಯಬೇಕಾದರೆ ಇಬ್ಬರೂ ತಮ್ಮ ಅಧಿ ದೇವತೆಗಳ ಮಂತ್ರಾಕ್ಷರಗಳನ್ನು ಬರೆದ ಓಲೆಯನ್ನು ಬೆಂಕಿಯಲ್ಲಿ ಹಾಕಿ ನೋಡಿ ಯಾರ ಓಲೆಯು ಅಗ್ನಿಗೆ ಆಹುತಿಯಾಗುವದಿಲ್ಲವೋ ಅವರ ಮತವೇ ಮೇಲೆಂದು ಅಗ್ನಿಸ್ತಂಭವನ್ನು ಮಾಡಿ ಓಲೆಯನ್ನು ಬರೆದುಕೊಟ್ಟರು. [ಶಿವ ವಿರೋಧ ಕಾರ್ಯದಲ್ಲಿ ಅಗ್ನಿಯು ಪುನಃ ಅವರ (ಜೈನರ) (ಸ್ತಂಭ) ಮಂತ್ರವನ್ನು ಲೆಕ್ಕಿಸುವನೇ?] ಪಾಂಡ್ಯ ಭೂಪನು ಸದ್ಧರ್ಮಕ್ಕೆ ಜಯವಿರಲಿ ಎಂದು ಅನ್ನುತ್ತ ಎರಡೂ ಮಂತ್ರ ಪತ್ರಗಳನ್ನು ಕಿಚ್ಚಿನಲ್ಲಿ ಹಾಕಲು ಜಿನ ಪತ್ರವು ಸುಟ್ಟುಹೋಯಿತು. ವರ ಶಿವಾಕ್ಷರಯುಕ್ತವಾದ ಪತ್ರವು ಪ್ರಕಾಶ ಮಯವಾಗಿ ಹಾಗೆ ಸುರಕ್ಷಿತವಾಗಿ ಉಳಿಯಿತು, ಈ ಅದ್ಭುತ ಸ್ಥಿತಿಯನ್ನು ನೋಡಿ ಜನರು ಬೆರಗಾದರು. ಕುಲಶ್ಚರ್ಯನಿಗೆ ಹಿಡಿಸಲಾರವಷ್ಟು ಆನಂದವಾಯಿತು. ರಾಜಪತ್ನಿಯು ಸಂತೋಷಾಬ್ಧಿಯಲ್ಲಿ ಕಲೆತಳು. ಖುಲ್ಲರಾದ ಜೈನರು ಒಂದು ಕೊಡದಲ್ಲಿ ಸರ್ಪವನ್ನು ಹೊಗಿಸಿ ಅದರ ಬಾಯಿಕಟ್ಟಿ ಇದರಲ್ಲೇನಿರುವದು ಕೈ ಇಡು ನೋಡು ಎಂದು ಹರಕುಮಾರನಿಗೆ ಹೇಳಲು ಆತನು ಅವರ ಕಪಟವನ್ನು ನೆನೆದು ತನ್ನ ಭಾವ-ಮಾತ್ರದಿಂದಲೆ ಅದನ್ನು ಪುಷ್ಪವನ್ನಾಗಿ ಮಾಡಿ ಘಟದಲ್ಲಿ ಕೆಂಪುಕಣಿಗಿಲೆಯ ಹೂವು ಅದೆ ನೋಡಿರಿ ಎಂದು ತೋರಿಸಲು ಲಜ್ಜೆಗೆಟ್ಟ ಕ್ಷಪಣಕರು ಅದಕ್ಕೂ ನಾಚದೆ ಜಲಸ್ತಂಭ ಶಕ್ತಿಯು ತಮ್ಮ ಕೈವಶವಾಗಿರುವದೆಂಬ ಗರ್ವದಿಂದ ಇನ್ನೊಂದು ಪ್ರತಿಜ್ಞೆಯುಂಟು ಅದನ್ನು ಪರೀಕ್ಷಿಸಬೇಕೆಂದು ರಾಜನಿಗೆ ಆಗ್ರಹಪೂರ್ವಕವಾಗಿ ಹೇಳಿದರು. ಶಿವಮಂತ್ರಾಕ್ಷರದ ಓಲೆ ಮತ್ತು ಜಿನಮಂತ್ರದ ಓಲೆ ಎರಡನ್ನೂ ವೈಗೆ ಎಂಬ ಹೊಳೆಯಲ್ಲಿ ಚೆಲ್ಲಿಬಿಡಬೇಕು. ಯಾವ ಪತ್ರವು ಪ್ರವಾಹಕ್ಕೆ ಎದು

ರಾಗಿ ತೇಲುವದೋ ಅವರ ಮತವೇ ಹೆಚ್ಚಿನದು ಎಂದು ಸಾರಲು ಆಗ ವಿಚಾರ ಪರನಾದ ಭೂಮಿಪನು-ಇದರಲ್ಲಿ ಸೋತವರು ಶೂಲಾರಾಹೋಣ ಮಾಡಬೇಕು ; ಆದ್ದರಿಂದ ನನಗೆ ದೋಷವು ಬಾರದಂತೆ ನೀವು ಪ್ರತಿಜ್ಞಾ ಲೇಖವನ್ನು ಬರ ಕೊಡಿರಿ. ಹೀಗೆ ರಾಜನು ಅನ್ನಲು ಗರ್ವಾಂಧರಾದ ಜೈನರು ಆ ರೀತಿಯಾಗಿ ಭಾಷಾ ಪತ್ರವನ್ನು ಬರೆದುಕೊಟ್ಟರು. ಶಿವಭಕ್ತರು ನಲಿದಾಡಿದರು. ಶಿವಕು ಮಾರನು ಭಕ್ತರೊಡಗೊಂಡು ಸೌಂದರ ಪಾಂಡ್ಯ ಸಮೇತನಾಗಿ ಮುತ್ತಿನ ಮಂಟಪವನ್ನೇರಿ ಬೈಗೆ ಎಂಬ ನದಿಗೆ ಬಂದು ಅಲ್ಲಿ ನೆರೆದಿರುವ ಹನ್ನೆರಡುಸಾವಿರ ಕ್ಷಪಣಕರ ನಡುವೆ ತಿರುಜ್ಞಾನ ಸಂಬಂಧಾಚಾರ್ಯನು ಸಿಂಹ ಪೀಠದಲ್ಲಿ ವಿರಾ ಜಮಾನನಾದನು. ಪೂರ್ವ ಸಿದ್ಧತೆಯನ್ನು ಮಾಡಿದ ಕುಲಚ್ಚಯ್ಯನು ಅತಿ ಸಂಭ್ರಮದಿಂದ ಜನಪತಿಯ ಸಮಿಾಪದಲ್ಲಿ ಬಂದು ಸಂತೋಷದಿಂದ ನಿಂತು ಮುಂದೆ ನಡೆಯುವ ಕಾರ್ಯ ವಿಶೇಷವನ್ನು ಹಾರೈಸುತ್ತಿದ್ದನು. ಆಗ ಉಭಯ ಪಕ್ಷದವರು ತಮ್ಮ ಉಪಾಸನಾ ದೇವತೆಗಳ ಮಂತ್ರಾಕ್ಷರಗಳನ್ನು ಬರೆದ ಓಲೆಗ ಳನ್ನು ಬರೆದು ಕೊಡಲು ಸಮಸ್ತ ಲೋಕವೆಲ್ಲವೂ ನೋಡುತ್ತಿರುವಾಗ ಧರಣೀ ಶನು ಭರದಿಂದ ಹರಿಯುವ ಹೊಳೆಯಲ್ಲಿ ಎರಡೂ ಪತ್ರಗಳನ್ನು ಬಿಟ್ಟನು. ಆಗ ಕ್ಷುದ್ರವಾದ ಜಿನ ಪತ್ರವು ಪ್ರವಾಹಗುಂಟ ಕೆಳಗೆ ಹರಿದು ಹೋಯಿತು. ಆದರೆ ಘನವಾದ ಶಿವಮಂತ್ರ ಪತ್ರವು ಪ್ರವಾಹಕ್ಕೆ ಎದುರು ತೇಲುತ್ತ ಮೂರು ಯೋ ಜನ ಹೋಯಿತು. ಶಿವಭಕ್ತರು ಸಾನಂದರಾಗಿ ಬೆರಗಾದರು. ಜೈನರು ಕಂದಿ ಕುಂದಿದರು. ಅವನಿಪನು ಚರಿತ್ರ ಪುರುಷನಿಗೆ ನಮಸ್ಕರಿಸಿ ತನ್ನ ಪುರದಲ್ಲಿ ಉತ್ಸವವನ್ನು ಮಾಡಲಿಕ್ಕೆ ಹೇಳಿ ಗುಡಿಯನ್ನು ಯಥಾಪ್ರಕಾರವಾಗಿ ಕಟ್ಟಿಸಲಿಕ್ಕೆ ಹಚ್ಚಿ, ಕುಲಚ್ಚಯ್ಯನಿಗೂ ಕಥಾನಾಯಕನಿಗೂ ಶಿವಮಂತ್ರವಿರುವ ಓಲೆಯು ಹೋಗಿರುವ ಸ್ಥಳಕ್ಕೆ ನೀವು ಮುತ್ತಿನ ಮಂಟಪಾರೂಢರಾಗಿ ನಡೆಯಿರಿ ಎಂದು ಹೇಳಿ ತನ್ನ ಸೈನಿಕರಿಗೆ ಸೋತಿರುವ ಸವಣರ ಹಿಂಡನ್ನೆಲ್ಲ ಕಾಯಲಿಕ್ಕೆ ಹಚ್ಚಿ ತಾನು ಅಶ್ವಾರೋಹಣ ಮಾಡಿ ಮೂರುಯೋಜನ ಬಂದನು. ಆಗ ಶ್ರೇಷ್ಠವಾದ ಹರ-ಮಂತ್ರದೋಲೆಯು ತಿರುವೈದಿಕ ಪುರದ ಶಿವಾಲಯದಲ್ಲಿರುವದನ್ನು ದೂತ ರು ನೋಡಿ ಬಂದು ಹೇಳಿದರು. ಆಗ ಅಲ್ಲಿ ರಾಜನು ಕುದುರೆಯಿಂದ ಇಳಿದನು. ಈ ವಿಜಯವನ್ನು ನೋಡಲಿಕ್ಕೆ ಕಾಂಕ್ಷಿಸುತ್ತಿರುವ ಮಂಗರಸಿಯು ಒಡನೆಯೇ ಅಲ್ಲಿಗೆ ಬಂದು ಹೊಳೆಯ ದಂಡೆಯಲ್ಲಿರುವ ತಿರುವೈದಿಕ ಪುರಾಧಿನಾಥನಾದ ಶಿವಲಿಂಗ ನಿಲಯಕ್ಕೆ ಬಂದು ಚರಿತ್ರಪುಂಗವನಿಗೆ ಪತಿಸಮೇತಳಾಗಿ ಸಾಷ್ಟಾಂಗ ವಾಗೆರಗಿ ಅಲ್ಲಿಯ ಶಿವಲಿಂಗ ಪೀಠದ ಮೇಲಿರುವ ಶಿವಮಂತ್ರದ ಓಲೆಯನ್ನು ತೆಗೆದುಕೊಂಡು ಅಲ್ಲಿಂದ ಹೊರಗೆ ಬಂದು ಮಣಿಮಯವಾದ ರಂಗಮಂಟಪದಲ್ಲಿ ಉಚಿತಾಸನದಲ್ಲಿ ಮಂಗರಸಿಯು ಶಿವಕುಮಾರನನ್ನು ಮುಹೂರ್ತಗೊಳಿಸಿ ಕುಲ

ಶ್ಚರ್ಯರ್ ಮತ್ತು ನಿಜಪತಿಯೊಡನೆ ಸಂತೋಷದಿಂದ ಇರುವ ಸಮಯದಲ್ಲಿ ಜಿನ ಮತ ದಹನ ಸಮರ್ಥ ತಿರುಜ್ಞಾನಸಂಬಂಧಾಚಾರ್ಯರ್ ನಿರೂಪದ ಮೇರೆಗೆ ಸುಂದರ ಪಾಂಡ್ಯನು ತನ್ನ ಮಂತ್ರಿ ಮಂಡಲ ಸಾಮಂತ ಮೊದಲಾದ ಪರಿಜನ ರೆಲ್ಲರಿಗೂ ಜೈನಮತವನ್ನು ಬಿಡಿಸಿ ವಿಭೂತಿಯನ್ನು ಧರಿಸಿಕೊಂಡು ಶಿವಭಕ್ತರಾ ಗಬೇಕೆಂದು ಅಪ್ಪಣೆ ಮಾಡಿದನು. ಮಧುರೆಯಲ್ಲಿರುವ ಯಾವ ಜೈನರು ಶಿವ ಭಕ್ತರಾಗುವದಕ್ಕೆ ಒಪ್ಪುವದಿಲ್ಲವೋ ಅವರೆಲ್ಲರ ತಲೆಯನ್ನು ಹೊಡೆಯಬೇ ಕೆಂದು ಸೈನಿಕರಿಗೆ ಆಜ್ಞಾಪಿಸಿದನು. ರಾಜಭಟರು ಮಧುರೆಗೆ ಬಂದು ಶಿವಮತ ವನ್ನು ಹೊಂದಲಿಕ್ಕೆ ಒಪ್ಪಿದವರನ್ನು ಅನುಮೋದಿಸಿ ಉಳಿದವರ ತಲೆಗಳನ್ನು ತರಿದರು. ಮಧುರೆಯಿಂದ ಬಂದ ರಾಜ ಪರಿಜನರು ಈ ಸಂಗತಿಯನ್ನು ತಮ್ಮ ಅವನೀಶನಿಗೆ ಬಿನ್ನವಿಸಲು ಎಲ್ಲರೂ ಸಂತೋಷಬಡುತ್ತಿರುವಾಗ ಕಥಾಪುರುಷನು ಶಿವಮತ ವಿರೋಧಿಗಳಾದ ಪಣದಲ್ಲಿ ಸೋತಿರುವ ಸವಣರನ್ನು ದಂಡಿಸಬೇಕೆಂದು ಹೇಳಿದನು. ಇದನ್ನು ಕೇಳಿ ರಾಜನು ಹನ್ನೆರಡು ಸಾವಿರ ಖಳರನ್ನು ಈ ಕ್ಷಣ ದಲ್ಲಿಯೇ ದಂಡಿಸಲಿಕ್ಕೆ ಅಷ್ಟು ಶೂಲಗಳನ್ನು ತಯಾರಮಾಡುವದೆಂತು ಎಂದು ಯೋಚಿಸುತ್ತಿರುವಾಗ ಮಂಗರಸಿಯು ಕುಲಶ್ಚರ್ಯರ್‌ನ ಮುಖವನ್ನು ನೋಡಿ ದಳು. ಆಗ ಕುಲಶ್ಚರ್ಯರ್‌ನು ಚರಿತ್ರಪುಂಗವರ ಪಾದಸರಸಿಜಗಳಿಗೆರಗಿ ಅರಸ ನಿಗೆ ಹೀಗೆ ಹೇಳಿದನು—ದೊರೆಯೇ ಶಿವಭಕ್ತರ ಪ್ರಸಾದದಿಂದ ಭವಿಷ್ಯದಲ್ಲಿ ನಡೆಯುವ ವಿಷಯವು ನನಗೆ ಮೊದಲೇ ಗೊತ್ತಾಗಿ ತಿರುಜ್ಞಾನ ಸಂಬಂಧಾಚಾ ರ್ಯರ್‌ರು ಇಲ್ಲಿಗೆ ಬರೋಣ ನೀವು ಶಿವಭಕ್ತರಾಗಿ ಶಿವನಿಂದಕರಾದ ಹನ್ನೆರಡು ಸಾವಿರ ಜೈನರನ್ನು ಶೂಲಕ್ಕೇರಿಸುವಿರೆಂದು ತಿಳಿದು ಹನ್ನೆರಡು ಸಾವಿರ ಶೂಲಗ ಳನ್ನು ಗೌಪ್ಯವಾಗಿ ಕ್ರಮೇಣ ತಯಾರಮಾಡಿಸಿ ಮಂಗರಸಿ ಮಹಿಷಿಗೆ ಮೊದಲೇ ತಿಳಿಸಿ ಬೈಗೆ ಎಂಬ ತರಂಗಿಣಿಯ ಮಳಲಲ್ಲಿ ಮುಚ್ಚಿಟ್ಟಿರುವೆನು- ಇದನ್ನು ಕೇಳಿ ಕುಲಶ್ಚರ್ಯರ್‌ರ ದಿವ್ಯಜ್ಞಾನಕ್ಕೆ ಸೌಂದರ ಪಾಂಡ್ಯನು ಮೆಚ್ಚಿ ಜಯ ಜಯ ಎಂದು ಅನ್ನುತ್ತ ಮಹಾಕಾರ್ಯರ್‌ವು ನಿಮ್ಮಿಂದಲ್ಲದೆ ಅನ್ಯರಿಂದ ಆಗದು. ಆದ ರಿಂದ ನೀವೇ ಆ ಶೂಲಗಳನ್ನು ತೆಗೆದು ಈಗಲೆ ಆ ಕ್ಷಪಣಕರನ್ನು ಶೂಲಕ್ಕೆ ಇಕ್ಕುವದೆಂದು ಹೇಳಿದನು. ಕುಲಶ್ಚರ್ಯರ್‌ನಿಗೆ ರಾಜನು ಹೇಳಿದ ಮಾತನ್ನು ಕೇಳಿ ಹರಕುಮಾರನು ಆತನನ್ನು (ಕುಲಶ್ಚರ್ಯರ್‌ನನ್ನು) ಕೃಪೆಯಿಂದ ಅಪ್ಪಿ ಕೊಂಡು ಬೇಗನೆ ಕಾರ್ಯರ್‌ವನ್ನು ಪೂರೈಸೆಂದು ಅನುಜ್ಞೆಯನ್ನು ಕೊಟ್ಟನು. ಕುಲಶ್ಚರ್ಯರ್‌ನು ಶೀಘ್ರವಾಗಿ ಬೈಗೆ ಎಂಬ ತೊರೆಯ ಮಳಲಲ್ಲಿ ಇಟ್ಟಿರುವ ಶೂಲಗಳನ್ನು ತೆಗೆಯಿಸಿ ಶಿವಮತಕ್ಕೆ ಒಡಂಬಡದ ಶಿವದೂಷಕರಾದ ಜೈನರನ್ನು ಶೂಲಾರೋಹಣ ಮಾಡಿಸಿ ವೀರೋದ್ರೇಕದಿಂದಿರುವಾಗ ಶಿವ ನಿಂದಕರಿಗೆ ತಕ್ಕ ದ್ದಾಯಿತೆನ್ನುತ್ತ ನಾರದ ಖುಷಿಯು ಕೈಲಾಸದಲ್ಲಿ ಸಂತೋಷದಿಂದ ಕುಣಿದಾಡಿ

ದನು. ಇದೆಲ್ಲವನ್ನು ತಿಳಿದು ಉಮೇಶನು ಸಂತೋಷಪಟ್ಟು ಕುಲಚ್ಚಿರ್ಯನಿಗೆ ಮೆಚ್ಚಿ ಆತನಿಗೆ ನಿಜರೂಪವನ್ನು ತೋರಿ ಪಿಳ್ಳೆನಾಯನಾರು, ಮಂಗರಸಿ, ಪಾಂಡ್ಯರಾಜ ಇವರು ಬರಗಾಗುತ್ತಿರುವಾಗ ಪುಷ್ಪಕ ವಿಮಾನದಲ್ಲಿ ಆ ಭಕ್ತ ನನ್ನು (ಕುಲಚ್ಚಿರ್ಯನನ್ನು) ಕುಳ್ಳಿರಿಸಿ ಆತನಿಗೆ ಗಣಪದವಿಯನ್ನು ಅನುಗ್ರಹಿ ಸಿದನು. ಆಗ ಪಾಂಡ್ಯರಾಜನು ಮತ್ತು ಮಂಗರಸಿಯರು ಜ್ಞಾನಸಂಬಂಧರಿಗೆ ಭಯಭಕ್ತಿಯಿಂದ ಪ್ರಣಾಮವನ್ನು ಮಾಡಿ ಕುಲಚ್ಚಿರ್ಯನು ಪುಣ್ಯವಂತನು ಆತನಂತೆ ನಮಗೆ ಶಿವಸನ್ನಿಧಿಯು ದೊರಕುವದೆಂತು ಎಂದು ಚರಿತ್ರನಾಯ ಕನಿಗೆ ಪ್ರಾರ್ಥಿಸಿದರು. ಕಥಾನಾಯಕನು ದಂಪತಿಗಳ ಬಿನ್ನಪವನ್ನು ಕೇಳಿ ಮನಕರಗಿದವನಾಗಿ ಸದಾಶಿವನು ನಿಮ್ಮಿಬ್ಬರಿಗೂ ಸಾಯುಜ್ಯವನ್ನು ಕೃಪೆಮಾ ಡುವನೆಂದು ಅಭಯವನ್ನಿತ್ತನು. ಶುಭವಾಕ್ಯವನ್ನು ಕೇಳಿ ಜಾಯಾಪತಿಗಳು ದೇವಾ ನಿಮ್ಮ ಪಾದಕೃಪೆಯಿಂದ ಸವಣರು ಅಡಗಿದರು. ಶೈವಮತಕ್ಕೆ ಜಯವು ಪ್ರಾಪ್ತವಾಯಿತು. ಪುಣ್ಯವು ಕಣ್ದೆರೆದಂತಾಯಿತೆಂದು ಬಿನ್ನವಿಸಿದರು. ಪಾಂ ಡ್ಯನು—ಪ್ರಭುವೇ ನನಗೆ ಶಿವಮಂತ್ರೋಪದೇಶವನ್ನು ಕೃಪೆಮಾಡಬೇಕು ಹೀಗೆ ಪ್ರಾರ್ಥಿಸಿದನು. ಆಗ ಎಲ್ಲರೂ ಮುತ್ತಿನ ಮಂಟಪವನ್ನೇರಿ ಮಧುರೆಗೆಬಂದರು. ಧರಣೀಶನು ಎಲ್ಲ ಸಿದ್ಧತೆಯನ್ನು ಮಾಡಿ ತಿರುಜ್ಞಾನಸಂಬಂಧಾಚಾರ್ಯರನ್ನು ರತ್ನಪೀಠದಲ್ಲಿ ಕುಳ್ಳಿರಿಸಿ ಪಾದಾಭಿಷೇಕವನ್ನು ಮಾಡಿ ಕತ್ತಲೆಯನ್ನು ನಿವಾರಿ ಸುವ ಸೂರ್ಯ ಕಿರಣಕ್ಕೆ ಕಿರಿದೆನ್ನಬಹುದೇ, ಏಳೇ ವರ್ಷದ ಕುಮಾರನೆಂದ ಮಾತ್ರಕ್ಕೆ ಜಗದ್ಗುರುವಾಗಲರಿಯನೇ ಸುರಮಣಿಗೆ ಹರಳೆನ್ನಬಹುದೇ, ಕಲ್ಪ ವೃಕ್ಷಕ್ಕೆ ತರುವೆನ್ನಬಹುದೇ, ಶ್ರೀ ಶೈಲಕ್ಕೆ ಸಾಧಾರಣವಾದ ಗಿರಿಯನ್ನಬ ಹುದೇ, ಗುರುವೇ ನಿಮಗೆ ನರರೆನ್ನಬಹುದೇ ಎಂದು ಹೇಳಿದನು. ಶರಣಾಗತ ನಾದ ಶಿಷ್ಯನಿಗೆ (ಪಾಂಡ್ಯನಿಗೆ) ಪಿಳ್ಳೆನಾಯನಾರು ನೀತಿಬೋಧೆಯನ್ನು ಮತ್ತು ಸನ್ಮಾರ್ಗವನ್ನು ತಿಳಿಸಿ ಶಿವಮಂತ್ರವನ್ನು ವಿಧ್ಯುಕ್ತವಾಗಿ ಆಶೀರ್ವದಿಸಿ ಮಂಗರ ಸಿಯೇ ನಿನ್ನ ಮನಬಯಕೆಯು ಕೊನೆಗಾಣಿಸಿತಲ್ಲವೇ ನಿನ್ನ ಪತಿಯು ಶಿವಭಕ್ತ ನಾದನಲ್ಲವೇ ಎನ್ನಲು ಮಂಗರಸಿಯು-ನಿಮ್ಮ ಪುಣ್ಯವೇ ಎನಗೆ ಮಂಗಲವ ನ್ನುಂಟುಮಾಡಿತು. ಕುಲಚ್ಚಿರ್ಯನಿಗೆ ಸದ್ಗತಿಯನ್ನು ಕೊಟ್ಟಿತು. ಹೀಗೆ ಹೇಳಿ ಗುರುಗಳ ಪಾದಕ್ಕೆರಗಿದಳು. ನಮುಸ್ಕರಿಸಿ ನಿಂತಿರುವ ಮಂಗಾಯಕ್ಕರ ಸಿಯರ ತಲೆಯ ಮೇಲೆ ಚರಿತ್ರನಾಯಕನು ತನ್ನ ಅಮೃತ ಹಸ್ತವನ್ನು ಇಟ್ಟು ತಾಯೇ ನಿನ್ನ ನಿರ್ಮಲವಾದ ಬಸುರಿನಲ್ಲಿ ಜಗದೊಡೆಯನಾದ ಶಿವನ ಅರ್ಧಾಂ ಗಿನಿಯಾದ ಪಾರ್ವತಿಯು ಅವತರಿಸುವಳೆಂದು ಹೇಳಲು ಮಂಗರಸಿಯು ನಾಚಿ ಪುನಃ ಅಂಘ್ರಿಗಳಿಗೆ ಪೊಡಮಟ್ಟಳು.

ಸುಂದರ ಪಾಂಡ್ಯನು ಶಿವಭಕ್ತಿ ಪರಾಯಣನಾಗಿ ತನ್ನರಸಿಯೊಡನೆ ಶಿವಾ

ರ್ಚನೆಯನ್ನು ಗೈಯುತ್ತ ಹರಭಕ್ತರಿಗೆ ಧನ-ಕನಕ ವಸ್ತ್ರಗಳನ್ನು ಕೊಡುತ್ತ ಶಿವಕೈಂಕರ್ಯವನ್ನು ಮಾಡುತ್ತ ಶಿವಾನಂದದಲ್ಲಿದ್ದನು. ಗುರುಗಳಾದ ತಿರುಜ್ಞಾನ ಸಂಬಂಧರು ತಮ್ಮ ಪಟ್ಟಣಕ್ಕೆ ಹೊರಡುವೆವು ಎಂದು ಹೇಳಲು ಅವರಿಗೆ ದಂಪತಿಗಳು ಪ್ರೀತಿಯಿಂದ ಪೊಡಮಟ್ಟು ತಮ್ಮ ಸೈನ್ಯ ಸಮೂಹದೊಡನೆ ಅವರನ್ನು ಕಳುಹಿಸಿಕೊಟ್ಟು ಅತುಲವಾದ ಈಶ್ವರ ಭಕ್ತಿಯುಕ್ತರಾಗಿ ರಂಜಿಸುತ್ತಿದ್ದರು.

ಕಥಾಪುರುಷನು ಶಿವಭಕ್ತಿಯನ್ನು ಹರಡುತ್ತ ಚೋಳಭೂಮಿಯನ್ನು ಹೊಕ್ಕು ತಿರುಕಳಕುಂಡವೆಂಬ ಪುರಕ್ಕೆ ಬಂದನು. ಆ ಊರಲ್ಲಿ ಅಮರಗೋಪನೆಂಬ ಶಿವೈಕ್ಯನು ಬುದ್ಧಿವಂತನಾಗಿಯೂ, ಕುಶಲನಾಗಿಯೂ, ಧನಾಢ್ಯನಾಗಿಯೂ ಮೆರೆಯುತ್ತಿದ್ದನು. ಅಲ್ಲಿಯ ಭಕ್ತರು ಜ್ಞಾನನಿಧಿಯೂ, ಕಾರಣದೇಹಿಯೂ, ಶಿವಕುಮಾರನೂ ಆದ ತಿರುಜ್ಞಾನ ಸಂಬಂಧನು ಬಂದಿರುವದನ್ನು ಅಮರಗೋಪನಿಗೆ ತಿಳಿಸಲು ಆತನು ಬಹಳ ಸಂತೋಷಪಟ್ಟು ತ್ರಿಭುವನ ಸುಂದರಿಯಾದ ತನ್ನ ಪುತ್ರಿಯನ್ನು ಪಿಳ್ಳೆನಾಯನಾರರಿಗೆ ಕೊಡುವೆನೆಂದು ಉತ್ಸಾಹವನ್ನು ತಳೆದು ಊರಲ್ಲಿ ತೋರಣಗಳನ್ನು ಕಟ್ಟಿಸಿದನು; ವಿನಯದಿಂದ ಕುಮಾರಸ್ವಾಮಿಯನ್ನು ಎದುರ್ಗೊಂಡು ಮನೆಗೆ ಕರೆದುಕೊಂಡು ಹೋಗಿ ಪಾದಾಭಿಷೇಕವನ್ನು ಮಾಡಿ ರತ್ನಪೀಠದಲ್ಲಿ ಕುಳ್ಳಿರಿಸಿ ತನ್ನ ಮನೋಗತವನ್ನು ಬಿನ್ನವಿಸಿದನು. ಆಗ ಕಥಾಪುರುಷನು ಚಿಯಾಳಿಪುರದಲ್ಲಿ ನನ್ನ ತಂದೆತಾಯಿಗಳಿರುವರು ಅವರಿಗೆ ನೀವು ಕೇಳಿಕೊಳ್ಳಬಹುದೆಂದು ಒಂದು ದಿವಸ ಆ ಶಿವಭಕ್ತನ ಆತಿಥ್ಯದಲ್ಲಿದ್ದು ಮರುದಿವಸ ಮುತ್ತಿನ ಮಂಟಪವನ್ನೇರಿ ಚಿಯಾಳಿ ಪುರಕ್ಕೆ ಬಂದನು. ಅಮರಗೋಪನು ಅನೇಕ ರಥ ಕುದುರೆಗಳೊಡನೆ ತನ್ನ ಸ್ನೇಹಿತ ಆಪ್ತ ಪರಿವಾರ ಸಹಿತನಾಗಿ ಮಗಳನ್ನು ಶೃಂಗರಿಸಿಕೊಂಡು ಚೀಯಾಳಿಪುರದಧಿಪತಿಯ ಶಿವನಿಲಯಕ್ಕೆ ಬಂದು, ಚರಿತ್ರನಾಯಕನು ಶಿವಾಲಯವನ್ನು ಪ್ರವೇಶಿಸುವದನ್ನು ಕಂಡನು; ಸುಮುಹೂರ್ತವನ್ನು ನೋಡಿ, ಹಂದರವನ್ನು ಹಾಕಿಸಿ ಅಲ್ಲಲ್ಲಿ ತೋರಣಗಳನ್ನು ಕಟ್ಟಿಸಿ ನಿಬ್ಬಣಿಗರೊಡನೆ ಕೈಮುಗಿದು ಈ ಶಿವಸನ್ನಿಧಿಯಲ್ಲಿ ಈ ನನ್ನ ದಿವ್ಯ ಕನ್ನಿಕೆಯನ್ನು ನಿನಗೆ ಧಾರೆ ಎರೆಯುವೆನು. ದಯವಿಟ್ಟು ಸ್ವೀಕರಿಸಬೇಕೆಂದು ಪ್ರಾರ್ಥಿಸಿದನು. ಆಗ ಕಥಾನಾಯಕನು ಈಶ್ವರನಿಗೆ ಬಿನ್ನವಿಸಿ, ಆತನ ಅಪ್ಪಣೆಯನ್ನು ಪಡೆದು ಅದರಂತೆ ಮಾಡುವೆನೆಂದು ಹೇಳಿ ಶಿವಲಿಂಗಾರ್ಚನೆಯನ್ನು ಮಾಡಿ ಆನತನಾಗಿ ಕೈಮುಗಿದು ತಾಳಗಳನ್ನು ಕೈಯ್ಯಲ್ಲಿ ಹಿಡಕೊಂಡು ತನ್ನ ನಿಯಮದ ತಿರುಪಾಡುಗಳನ್ನು ಹಾಡಿದನು. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ್ಯ ಎಂಬ ಪಂಚಮುಖಗಳಿಂದೊಪ್ಪುವ ಶಂಕರನೇ ಎಂದು ಪರಶಿವನನ್ನು ವರ್ಣಿಸಿ ಆ ಮಹಾದೇವ

ನನ್ನು ಅತಿ ಭಕ್ತಿಯಿಂದ ಸ್ತುತಿಸಲು ಉಮಾವರನು ಸಂತುಷ್ಟನಾಗಿ ನಿನ್ನಿಷ್ಟ ವೇನೆಂದು ಕೇಳಿದನು. ಆಗ ಚರಿತ್ರಪುಂಗವನು ಭವಾನೀಪತಿಗೆ ಕೈಮುಗಿದು ದೇವಾ ನೀವು ನನ್ನನ್ನು ಇಳೆಗೆ ಕಳಿಸಿದ ಮೇರೆಗೆ ಮಧುರೆಗೆ ಹೋಗಿ ಅಲ್ಲಿರುವ ದುಷ್ಟ ಸವಣರನ್ನು ನಿವಾರಿಸಿ ಸೌಂದರ ಪಾಂಡ್ಯನನ್ನು ಮತ್ತು ಅವನ ಪರಿವಾರ ವನ್ನು ಶಿವಭಕ್ತರನ್ನಾಗಿ ಮಾಡಿ ಚೋಳ ಮಂಡಲದಲ್ಲಿ ಬರುವಾಗ ನನ್ನನ್ನು ಅಮರಗೋಪನೆಂಬ ಸದ್ಭಕ್ತನು ಕಂಡು ತನ್ನ ಕನ್ನಿಕೆಯನ್ನು ಲಗ್ನವಾಗಬೇ ಕೆಂದು ಬಹುಪರಿಯಿಂದ ಬೇಡಿಕೊಂಡದ್ದರಿಂದ ಆತನ ಮನಸ್ಸು ನೋಯಬಾರ ದೆಂದು ಆತನನ್ನು ಇಲ್ಲಿಗೆ ನಿಮ್ಮ ಸನ್ನಿಧಿಗೆ ಕರತಂದಿರುವೆನು; ಇನ್ನು ಉಚಿತ ಕಂಡಂತೆ ಮಾಡತಕ್ಕ ಕಾರ್ಯ ನಿಮ್ಮದಾಗಿದೆ. ನನಗೆ ಇನ್ನೀ ಮರ್ತ್ಯಲೋಕ ದಿರವು ಸಾಕಾಗಿದೆ ಆದುದರಿಂದ ನನ್ನನ್ನು ಹಾಗೂ ನನ್ನನ್ನೇ ಹಿಂಬಾಲಿಸಿರುವ ಭಕ್ತವ್ರಜವನ್ನು ನಿನ್ನ ಮುಖದಲ್ಲಿ ಇರಿಸಿಕೋ ಎಂದು ಬೇಡುತ್ತಿರಲು ಆ ದಿವ ಸವೇ ಶಿವಕುಮಾರನಿಗೆ ಏಳು ವರ್ಷಗಳು ತುಂಬಲು ಆ ಶಿವಲಿಂಗಮುಖದಿಂದ ಕುಮಾರ, ಬಾ ಎಂದು ಧ್ವನಿಯಾಗಿ ಆ ಘನಲಿಂಗ ಮುಖವು ಬಾಯ್ದೆರೆಯಿತು ಮದುಮಗಳನ್ನು ಕರಕೊಂಡು ಅಮರಗೋಪನು ನಿಬ್ಬಣಿಗರೊಡನೆ ಆ ಈಶ್ವರ ಸನ್ನಿಧಿಗೆ ಬಂದು ಲಿಂಗ ಮುಖದಲ್ಲಿ ಅಡಗಿದನು. ಮಹಾಲಿಂಗವು ಕಾರುಣ್ಯ ದಿಂದ ಬಾಯ್ದೆರೆದಾಗ ಚರಿತ್ರಪುಂಗವನು ಶರಣಾರ್ಥಿ ಎಂದೆನ್ನುತ್ತ ಆ ಲಿಂಗದಲ್ಲಿ ಬೆರೆಯಲು ಸುರರು ಉಘೇ ಉಘೇ ಎಂದು ಘೋಷಿಸಿದರು. ಜಗನ್ನಿಯಾಮಕ ನಾದ ಭರ್ಗನು ಕೈಲಾಸದಲ್ಲಿ ಅಮರಗೋಪನ ಮತ್ತು ಆತನ ಮಗಳಹಾಗೂ ಎಲ್ಲ ನಿಬ್ಬಣಿಗರ ಪರಿಚಯವನ್ನು ಪ್ರಮಥರಿಗೆ ಮಾಡಿಸಿ ಅವರಿಗೆ ಗಣಪದವಿ ಯನ್ನು ಅನುಗ್ರಹಿಸಿ ಜಿನಮತವನ್ನು ಭಂಗಿಸಿ ಬಂದಿರುವ ಷಣ್ಮುಖನನ್ನು ಮುದ್ದಾಡಿದನು.



ಓಂ.

# ೨೯. ಕುಲಶ್ಚಯರ್ನು.



ಶಿವನಿಂದೆಗೈವ ಬಹು ಸವಣರಸು ದೆಗೆವ ಶೂ । ಲವ ನಿರಿದು ಮೋದ ಸವಿ
ದಿಹ ಕುಲಶ್ಚಯರ್ । ನವಿರತಂ ಬುದ್ಧಿಕೊಡಲೆನಗೆ ॥

[ಶ್ರೀ ನಿಜಗುಣರು]



ನಮತವ್ಯಾಪ್ತಿಯೆಂಬ ಕಲಂಕದ ಹೊರ್ತಾಗಿ ಪಾಂಡ್ಯರಾಜ್ಯವು ಸಿರಿ-ಸಂಪತ್ತುಗಳ ಆಗರವಾಗಿ ಒಪ್ಪುತ್ತಿತ್ತು ; ಆದರೆ ಆ ಧರೆಯಲ್ಲಿ ಶಿವಾಲಯಗಳು ಅಪರೂಪವಾಗಿದ್ದವು. ಈ ನಾಡಿನ ಮುಖ್ಯ ನಗರವಾಗಿದ್ದ ಮಧುರೆಯಲ್ಲಿ ಜೈನರೇ ತುಂಬಿ ತುಳುಕುತ್ತಿದ್ದರು. ಇಲ್ಲಿ ಶೈವರು ಅಲ್ಪಲ್ಪ ಪ್ರಮಾಣದಿಂದಿದ್ದರು. ಅವರು ಪ್ರಕಾಶವಾಗಿ ತಮ್ಮ ಅಧಿದೇವತೆಯನ್ನು ಆರಾಧಿಸಲಿಕ್ಕೆ ಅಂಜಬೇಕಾಗಿತ್ತು. ಯಾಕಂದರೆ ಕ್ಷಪಣಕರ ಕೀಟಲೆಯು ಮತ್ತು ಉಪಟಳವು ಹೆಚ್ಚಾಗಿದ್ದವು.

ರಾಜಧಾನಿಯಾದ ಮಧುರೆಯಲ್ಲಿ ಕುಲಶ್ಚಯರ್ನೆಂಬ ಆಸ್ತಿಕ ಮಹಾಶಯನು ಇದ್ದನು. ಈತನು ವ್ಯವಹಾರ ಚತುರನು, ಸದಸದ್ವಿವೇಕಶಾಲಿಯು, ಧೂರ್ತನು, ಸಾಹಸಿಯು, ಕಾರ್ಯಾಕಾರ್ಯ ದಕ್ಷತೆಯುಳ್ಳ ಕುಶಲನು ಹಾಗು ಕುಶಾಗ್ರ ಬುದ್ಧಿಯುಳ್ಳವನು, ದೂರದರ್ಶಿಯು, ಕರುಣಾಕರನಾದ ಕೈವಲ್ಯವನ್ನೀಯುವ ಕೈಲಾಸಪತಿಯಾದ ಶಂಕರನಲ್ಲಿ ಅಪ್ರತಿಮವಾದ ಭಕ್ತಿಯುಳ್ಳವನು ಮತ್ತು ಆ ಭಕ್ತರಕ್ಷಾಮಣಿಯಲ್ಲಿ ಸಂಪೂರ್ಣ ನಂಬಿಗೆಯುಳ್ಳ ಭಕ್ತ ಕುಲದೀಪಕನಾಗಿ ರಂಜಿಸುತ್ತಿದ್ದನು. ಪತ್ನೀಪುತ್ರರಾದಿಯಾಗಿ ತಾನು ಶಿವ ಸೇವೆಗಾಗಿ ಅನುಕೂಲಿಸಬೇಕೆಂದು ತನ್ನ ದಕ್ಷತೆಯಿಂದ ಅಲ್ಲಿಯ ಅವನೀಶನಾದ ಕೂನಪಾಂಡ್ಯನ ಸಚಿವನಾದನು. ಆದರೆ ಜೈನರ ನಡತೆಯನ್ನು ನೋಡಿ ಅವ-

ನಿಗೆ ಹೇಸಿಕೆಯಾಗಿತ್ತು. ಯಾಕಂದರೆ ನಿಷ್ಕಾರಣವಾಗಿ ಅವರು ಶೈವರನ್ನು ಪೀಡಿಸುತ್ತಿದ್ದರು: ಶಿವಧರ್ಮನಿಂದೆಯನ್ನು ಮಾಡುವದರಲ್ಲಿ ಮುಂದೊರೆಯುತ್ತಿದ್ದರು. ಇದನ್ನೆಲ್ಲ ನೋಡಿ ಕಥಾನಾಯಕನಿಗೆ ಕಲ್ಪನಾತರಂಗಗಳು ಉಂಟಾಗುತ್ತಿದ್ದವು. ಅದೆಂತೆನೆ:—ಶಿವ, ಶಿವ! ಈ ಕ್ಷಪಣಕರಿಗೆ ಅಹಿಂಸೆ ಎಂಬುವದು ಬರಿಯ ಮಾತಿನಲ್ಲಿ ಮಾತ್ರ ಉಂಟು; ಆದರೆ ಇವರ ಹೃದಯದಲ್ಲಿಯೂ ಮತ್ತು ಕೃತಿಯಲ್ಲಿಯೂ ಅಹಿಂಸೆಯು ಕಂಡುಬರುವದಿಲ್ಲವಲ್ಲ? ಇವರ ಜಿನ ಮುನಿಯು "ಅಹಿಂಸಾ ಪರಮೊ ಧರ್ಮಃ" ಎಂಬ ಮಹಾ ವಾಕ್ಯವನ್ನು ಸವಣರಿಗೆ ಪೀಠಿಕೆಯನ್ನು ಹಾಕಿ ಕೊಡುವಾಗ ಆ ವಾಕ್ಯದ ಜೊತೆಗೆ "ಮಡಿಯೇ ನಿರ್ಮಲ ಚಿತ್ತವೈ" ಮತ್ತು "ಸಜ್ಜನ ಸದಾಚಾರವನ್ನರಿತು ಅದರಂತೆ ಆಚರಿಸುವದೇ ಶೀಲ" ಎಂಬ ಎರಡು ವಾಕ್ಯಗಳನ್ನು ಕೂಡಿಸಿದ್ದರೆ ಚನ್ನಾಗಿ ಆಗುತ್ತಿತ್ತು.

ದೀನದಯಾಳುವಾದ ಪ್ರಭುವೇ ಶಿವಧರ್ಮ ರಕ್ಷಣೆಗೆ ನಿನ್ನ ಕೃಪೆಯು ಆಗುವದೆಂದು ಎಂದು ಚರಿತ್ರ ನಾಯಕನು ಮೊರೆ ಇಡುವದು ಪರಮಾತ್ಮನಿಗೆ ವೇದ್ಯವಾಯಿತೆಂಬ ಸಾಕ್ಷಿಗಾಗಿ ದೈವಲೀಲೆಯಿಂದ ಶಿವ-ಭಕ್ತಿಧುರಂಧರನಾದ ವಿಕ್ರಮಚೋಳನ ತನುಜೆಯಾದ† ಮಂಗರಸಿ ಎಂಬ ಕನ್ಯಾಮಣಿಯು ಆ ಧರೆಯ ರಾಯನಿಗೆ ಪತ್ನಿಯಾಗಿ ಪರಿಣಮಿಸಿದಳು. ಆಗ ನಮ್ಮ ಚರಿತ್ರ ಪುರುಷನಿಗೆ ಭುಜಸ್ಫಾಲನವಾಗಿ ಒಳ್ಳೇ ಆನಂದವಾಯಿತು. ಈಶೇಚ್ಛೆಯಿಂದ ಮಹಿಷಿಗೂ ನಮ್ಮ ವರಭಕ್ತನಿಗೂ ಸಖ್ಯವು ಬೆಳೆದು ಮಂಗರಸಿಯರ ನಂಬಿಕೆಯ ಸೇವಕನಾಗಿ ಇಬ್ಬರೂ ಶೈವ ಮತದ ಉತ್ಕರ್ಷವನ್ನು ಕಾಂಕ್ಷಿಸುತ್ತಿದ್ದರು.

ಅನುದಿನವು ಚರಿತ್ರಪುಂಗವನು ಪರರಿಗೆ ತಿಳಿಯಗೊಡದಂತೆ ನಿಷ್ಕಾಪಟ್ಯದಿಂದ ಅನುರಾಗಯುಕ್ತವಾದ ಭಕ್ತಿಯಿಂದ ತ್ರಿಕಾಲದಲ್ಲಿಯೂ ಭಕ್ತದೇಹಿಕನಾದ ಶಿವನನ್ನು ಆರಾಧಿಸುತ್ತಿದ್ದುದರಿಂದ ಮತ್ತು ಆತನಲ್ಲಿ ಉಗ್ರವಾದ ಗಣಾಚಾರವು ಸಂಪೂರ್ಣವಾಗಿ ನೆಲಸಿದ್ದುದರಿಂದ ಅದರ ಪ್ರತಿಫಲರೂಪವೋ ಏನೋ ಎಂಬಂತೆ ಅವನಿಗೆ ಮುಂದೆ ವರ್ತಿಸುವ ಸಂಗತಿಗಳು ಹೊಳೆಯಹತ್ತಿದವು. ಅದೆಂತೆನೆ:—ಕಲ್ಮಷಯುಕ್ತವಾದ ಈ ಜೈನ ಭೂಮಿಯು ಶೈವರಿಂದ ಶೋಭಿಸುವದು; ರಾಜನಾದ ಕೂನಪಾಂಡ್ಯನು ಜಿನಮತವನ್ನು ತೊರೆದು, ಶಿವಮತವನ್ನು ಹೊಂದುವನು; ಸವಣರ ಸದ್ದು ಅಡಗುವದು; ಶಿವಮತವನ್ನು ಅವಲಂಬಿಸುವದಿಲ್ಲವೆಂದು ದುರಾಗ್ರಹವನ್ನು ತೊಡುವ ಹನ್ನೆರಡು ಸಾವಿರ ಜೈನರನ್ನು ಶಿವಜ್ಞಾನಿಯಾದ ಶೈವಪುಂಗವನು ರಾಜನ ಅನುಮತಿಯ ಮೇರೆಗೆ ಶೂಲಾರೋಹಣವನ್ನು ಮಾಡಿಸುವನು.

---

† ಈ ವಿಷಯವು ಸೌಂದರ ಪಾಂಡ್ಯನ ಅಧ್ಯಾಯದಲ್ಲಿ ಬಂದಿರುವದು.

ಶಿವಪ್ರೇರಣೆಯಿಂದ ಅರಿತ ವಿಶೇಷ ಸಂಗತಿಯನ್ನು ತನ್ನ ವಿಶ್ವಾಸಕ್ಕೆ ಕಾರಣಳಾದ ಪಾಂಡ್ಯರಾಣಿಗೆ ತಿಳಿಸಿ, ಕಾಲಕ್ರಮದಿಂದ ೧೨೦೦೦ ಶೂಲಗಳನ್ನು ಗೌಪ್ಯವಾಗಿ ತಯಾರಿಸಿ ವೈಗೆ ಎಂಬ ಹೊಳೆಯ ಮಳಲಲ್ಲಿ ಮುಚ್ಚಿಟ್ಟು, ಮಂಗರಸಿಗೆ ನಿವೇದಿಸಲು ಅವಳಿಗೆ ಹಿಡಿಸಲಾರದಷ್ಟು ಆನಂದವಾಗುತ್ತಿದ್ದರೂ, ಜೈನ ಮಂಡಳಿಗೆ ಗುಪ್ತವಾದ ಕಾರ್ಯವು ಗುರ್ತಾಗಬಾರದೆಂದು ತನ್ನ ಸಂತೋಷಾತಿಶಯವನ್ನು ಪ್ರಕಾಶಪಡಿಸುತ್ತಿದ್ದಿಲ್ಲ; ಹಾಗು ನಮ್ಮ ಸಚಿವಲಲಾಮನಾದರೂ ತನ್ನ ಸಂತಸವನ್ನು ಹೊರಗೆಡವುತ್ತಿರಲಿಲ್ಲ. ಪರಿಸ್ಥಿತಿಗನುಸರಿಸಿ ಎಂಥ ಸ್ತುತ ಕಾರ್ಯವಾದರೂ ಪ್ರಚ್ಛನ್ನವಾಗಿ ಇಡಿಸಬೇಕಾಗುವದು. ಶಿ

ಶಿವಾಜ್ಞಾನುಸಾರವಾಗಿ ಅವತರಿಸಿದ ಗುಹನು ಚೋಳಮಂಡಲದಲ್ಲಿ ಚಿಯಾಳಿಪುರದಲ್ಲಿ ತಿರುಜ್ಞಾನಸಂಬಂಧರೆಂಬ ಮಂಗಲನಾಮದಿಂದ ವಿರಾಜಿಸುತ್ತಿರುವದನ್ನು ತಿಳಿದು ಮಂಗರಸಿಯರಿಂದ ಆ ಶೈವಾಚಾರ್ಯನಿಗೆ ಬಿನ್ನಪತ್ರವನ್ನು ಬರೆಸಿ ತಾನು ಶಿವಮತವನ್ನು ಉದ್ಧರಿಸಿ ಜೈನರ ತಿರಸ್ಕರಣೀಯವಾದ ಹಾವಳಿಯನ್ನು ನಿವಾರಿಸಬೇಕೆಂದು ಅತಿ ದೈನ್ಯದಿಂದ ಪ್ರಾರ್ಥಿಸಿದನು.

ಮಂಗಲವನ್ನು ಕಾಂಕ್ಷಿಸುವ, ಅಂತೆಯೇ ಕಲ್ಯಾಣಪ್ರದವಾದ, ಶುಭವನ್ನೇ ಬೀರುವ ಓಲೆಯು ಜ್ಞಾನಸಂಬಂಧರಿಗೆ ಮುಟ್ಟಿದೊಡನೆ ಆ ಮಹಾಪುರುಷನು ಮುದವನ್ನು ತಾಳಿ ತಾನು ಅವತರಿಸಿದ ಕಾರ್ಯವು ಬರಲನುವಾಯಿತೆಂದು ಸಂತೋಷದ ಭರದಲ್ಲಿ ಚಿಯಾಳಿಪುರದಧಿಪತಿಯಾದ ಶಿವಮೂರ್ತಿಗೆ ತನ್ನ ತಾಳಯುಕ್ತವಾದ ತಿರುಪಾಡುಗಳಿಂದ ಮಂಗಳವನ್ನು ಪಾಡಿ ಮುತ್ತಿನ ಮಂಟಪವನ್ನೇರಿ ಕಾಲಕ್ರಮದಿಂದ ಮಧುರಾ ಪಟ್ಟಣದಲ್ಲಿ ಸೊಗಯಿಸುತ್ತಿರುವ ಚೊಕ್ಕನಯನಾರು ಲಿಂಗಾಲಯಕ್ಕೆ ಮುಚ್ಚಂದೆಯಲ್ಲಿ ಬಂದಿಳಿದರು. ರಾತ್ರಿ ಕಾವಳದಲ್ಲಿಯೇ ಕುಲಶ್ಚಿರ್ಯನು ಶೈವಾಚಾರ್ಯನ ಸನ್ನಿಧಿಗೆ ಹೋಗಿ ಅತಿ ವಿನಯ ಪ್ರೇಮಯುಕ್ತವಾದ ಭಯಭಕ್ತಿಯಿಂದ ಮಣಿದು ತನ್ನ ಅಭೀಷ್ಟವನ್ನು ಪುನಃ ನಿವೇದಿಸಿ ಸ್ವಸ್ಥಾನಕ್ಕೆ ಸಂತೋಷದಿಂದ ಬಂದನು. ಚರಿತ್ರನಾಯಕನು ಸಂಭ್ರಮದಿಂದ ಮಂಗರಸಿಯರಿದ್ದಲ್ಲಿಗೆ ಬಂದು ಆನತನಾಗಿ ನಿಂತಿರಲಾಗಿ, ರಾಣಿಯು :—ಸಚಿವನೇ ಈ ದಿವಸ ನನಗೆ ಶುಭ ಚಿನ್ಹಗಳು ತಲೆದೋರುತ್ತಿರುವವು. ವಾಮನಯನವು ಹಾರುತ್ತಿರುವದು. ಆದುದರಿಂದ ನೀನು ಸಂತೋಷಪ್ರದವಾದ ವಿಶೇಷ ಸಂಗತಿಯನ್ನು ಅರುಹಲಿಕ್ಕೆ ಬಂದಂತೆ ನನಗೆ ತೋರುವದು. ಆಗ ಮಂಗಕ್ಕರಸಿನಾಚಿಯರಿಗೆ ಕಥಾಪುರುಷನು :—ಅಕ್ಕಾ ನನ್ನ ಒಡತಿಯೇ, ನಮ್ಮಿಬ್ಬರ ಸುಕೃತದಿಂದ ಉದಯಿಸಿದ ಪುಣ್ಯಪ್ರಭಾವವೋ ಎಂಬಂತೆ ಪವಿತ್ರಕಾಯರಾದ ದಿವ್ಯ ಶಕ್ತಿಯಿಂದ ವಿಜೃಂಭಿಸುವ, ಶಿವ-ತೇಜದ ಸೊಬಗಿನಿಂದ

ಮಿಂಚುತ್ತಿರುವ ಪಿಳ್ಳೈನಾಯನಾರು ಎಂಬ ಶೈವ ಪುಂಗವರು ಶಿವ ದೂಷಣೆಗೆ ಕಾರಣವಾದ ಜಿನ ಜನ ನಿರ್ಮೂಲಗೊಳಿಸಲಿಕ್ಕೆ ದಯಮಾಡಿಸಿರುವರು ; ತಾಯೇ ನಿನಗೆ ಆಶೀರ್ವಾದವನ್ನು ತಿಳಿಸಿರುವರು. ಆಗ ಮಂಗಕ್ಕರಸಿಗೆ ಆದ ಆನಂದ ವನ್ನು ಬಣ್ಣಿಸುವದು ಅಸದಳವೇ ಸರಿ.

ಮತ್ಸರಾಗ್ರಣಿಗಳು ಮತ್ತು ಪರಮತೋತ್ಕರ್ಷ ಸಹನೆ ಇಲ್ಲದವರು ಆದ ಸವಣರು ಆ ಶಿವ ನಿಲಯಕ್ಕೆ ನಿಶಾಸಮಯದಲ್ಲಿಯೇ ಬೆಂಕಿಯನ್ನಿಕ್ಕಿದರು. ಆಗ ಪಿಳ್ಳೈನಾಯನಾರು (ತಿರುಜ್ಞಾನ ಸಂಬಂಧರಿಗೆ ಆತನ ಜನಕನು ಇಟ್ಟ ಅಭಿದಾನವು) ಅಗ್ನಿಯನ್ನು ಕರೆದು ಶಿಟ್ಟುಮಾಡಿ ಜೈನರ ಬಸದಿಗಳನ್ನು ಸುಡಲಿಕ್ಕೆ ಆಜ್ಞೆ ಮಾಡಿದ ಮೇರೆಗೆ ಜಿನಾಲಯಗಳು ಬೆಂದು ಹೋದವು. ಕ್ಷಪಣಕರು ಹಾ ಹಾ ಕಾರವನ್ನು ಮಾಡಿದರು. ಪ್ರಾತಃಕಾಲದ ಶಿವಾರ್ಚನೆಯನ್ನು ಪೂರೈಸಿಕೊಂಡು ಸಾನಂದವಾಗಿರುವ ಜ್ಞಾನಸಂಬಂಧನು ಮುಂಜಾವಿನಲ್ಲಿ ಪುನಃ ಅಗ್ನಿಯನ್ನು ಕರೆದು ನೀನು ಇನ್ನು ಜೈನ ರಾಜನಾದ ಕೂನಪಾಂಡ್ಯನನ್ನು ತಪಿಸೆಂದು ಅಪ್ಪಣೆ ಮಾಡಿದ ಮೇರೆಗೆ ಅರಸನ ಮೈಯಲ್ಲಿ ಭಯಂಕರವಾದ ಉರಿಯು ವ್ಯಾಪಿಸಿ ದೊರೆಯು ತಳಮಳಿಸಿದನು. ಜೈನ ವೈದ್ಯರಿಗೆ ಜ್ವರವನ್ನು ನಿವಾರಿಸಲು ಅಸಾಧ್ಯವಾಗಲು ಜಾಣೆಯಾದ ಮಂಗರಸಿಯು ತನ್ನ ಪತಿಗೆ ಜ್ಞಾನಸಂಬಂಧರಿಂದಲೇ ಗತಿಯು ಎಂದು ತಿಳಿಸಲು ಆತನು ಅದಕ್ಕೆ ಒಪ್ಪಲು ರಾಣಿಯು ಶೈವಾಚಾರ್ಯರನ್ನು ಬರಮಾಡಿದಳು. ಜ್ಞಾನಸಂಬಂಧನು :—ರಾಜನ ದೇಹದಲ್ಲಿಯ ತಾಪವನ್ನು ಅರ್ಧ ಶರೀರದ ಮಟ್ಟಿಗೆ ನಾನು ನಿವಾರಿಸುವೆನು. ಉಳಿದ ಅರ್ಧ ಶರೀರದಲ್ಲಿಯ ಜ್ವರವನ್ನು ಬೇರೆಯವರು ಯಾರು ಬಲವಂತರು ಇರುವರೋ ಅವರು ವಾಸಿ ಮಾಡಲಿ; ಎಂದು ಹೇಳಿ ಅರ್ಧ ಭಾಗವನ್ನು ವಾಸಿ ಮಾಡಲು ಉರಿಯು ಎರಡನೇ ಭಾಗದಲ್ಲಿ ದ್ವಿಗುಣಿತವಾಗಲು ದೊರೆಯು ಬಳಲಿ ಕಂಗೆಟ್ಟು ಬಾಯ್ಬಿಟ್ಟನು. ಸವಣರ ಪಂಡಿತರು ತಮ್ಮ ಮಂತ್ರ-ತಂತ್ರ-ವೈದ್ಯ ಮೊದಲಾದ ಸರ್ವಸಾಧನವನ್ನು ಕೈಕೊಂಡಾಗ್ಯೂ ಆ ದೈವಿಕವಾದ ಉರಿಯು ಶಮನವಾಗದಿಲ್ಲದಿರಲು ನೃಪನು ಜೈನರಲ್ಲಿ ಸತ್ವವಿಲ್ಲೆಂದು ಮನಗಂಡು ಶೈವ ಕುಮಾರನಾದ ಜ್ಞಾನಸಂಬಂಧನಿಗೆ ಗುಣಪಡಿಸಬೇಕೆಂದು ದೈನ್ಯದಿಂದ ಪ್ರಾರ್ಥಿಸಿದನು. ಜ್ಞಾನಸಂಬಂಧಾಚಾರ್ಯನು ಕಾರುಣ್ಯದಿಂದ ದೊರೆಯ ಸಂಪೂರ್ಣ ಶರೀರವನ್ನು ವಾಸಿ ಮಾಡಲು ಆಗ ಆ ತರ್ಕರಾದ ಜೈನರು ಅರಸನ ಬೆನ್ನಮೇಲಿರುವ ಕೂನನ್ನು ವಾಸಿ ಮಾಡಿದರೆ ಸೈ ಎನ್ನಲು, ಅದನ್ನು ಸಹಾ ಆಚಾರ್ಯನು ನೆಟ್ಟಗೆ ಮಾಡಲು ಅರಸನು ಸುಂದರ ಪಾಂಡ್ಯನಾದನು.

ಇಷ್ಟಾದ ಬಳಿಕ ಸವಣರು ರೋಗವನ್ನು ವಾಸಿಮಾಡಿದ ಮಾತ್ರಕ್ಕೆ ವೈದ್ಯನಾದನಲ್ಲದೆ ಇದರಲ್ಲಿ ವಿಶೇಷವೇನು ? ಎಂದು ಹಟತೊಟ್ಟು ಅಗ್ನಿಸ್ತಂಭದ ಬಲ

ವಿದೆ ಎಂದೆಣಿಸಿ ಜಿನಮಂತ್ರ ಹಾಗು ಶಿವಮಂತ್ರ ಬರೆದ ಓಲೆಗಳನ್ನು ಬೆಂಕಿಯಲ್ಲಿ ಹಾಕಿ ನೋಡೋಣ; ಯಾರ ಓಲೆಯು ಸುಡದೇ ಇರುವದೋ ಅವರ ಮತವೇ ಹೆಚ್ಚಿನದು, ಎಂದು ಹೇಳಲು, ರಾಜನು ಉಭಯ ಪಕ್ಷದವರ ಮಂತ್ರಾಕ್ಷರಗಳ ಓಲೆಗಳನ್ನು ಕಿಚ್ಚಿನಲ್ಲಿ ಹಾಕಲು, ಜಿನಮಂತ್ರದ ಪತ್ರವು ಮಾತ್ರ ಪುರಪುರನೆ ಉರಿದುಹೋಯಿತು. ಆಗ ಕ್ಷಪಣಕರು ಬಾಯಿಕಟ್ಟಿದ ಘಟವನ್ನು ರಾಜಸಭೆಯಲ್ಲಿ ತಂದಿರಿಸಿ ಈ ಕೊಡದಲ್ಲೇನಿದೆ? ಹಸ್ತವನ್ನಿಡು ನೋಡುವಾ; ಎನ್ನಲು ಜ್ಞಾನಸಂಬಂಧನು ಅವರ ಕಪಟವನ್ನು ತಿಳಿದು ಅದರಲ್ಲಿ ಮಡುಗಿದ್ದ ಅಹಿಯನ್ನು ಶಿವದತ್ತ ಶಕ್ತಿಯಿಂದ ಹೂವನ್ನಾಗಿ ಮಾಡಿ ಆ ಪುಷ್ಪವನ್ನು ಹೊರಗೆ ತೆಗೆದನು. ಇಷ್ಟು ಸಾರೆ ಪರೀಕ್ಷಿಸಿದರೂ ಕಪಟತಂತ್ರದಲ್ಲಿ ಓಲಾಡುತ್ತಿರುವ ಜೈನರು:—ರಾಜನೇ ಇನ್ನೊಂದು ನಮ್ಮ ಕೊನೆಯ ಪ್ರಾರ್ಥನೆಯು. ಉಭಯ ಪಕ್ಷದ ಮಂತ್ರಾಕ್ಷರಗಳಿರುವ ಓಲೆಗಳನ್ನು ವೈಗೆ ಎಂಬ ನದಿಯಲ್ಲಿ ಎಸೆದುಬಿಡಬೇಕು; ಆಗ ಯಾರ ಓಲೆಯು ಪ್ರವಾಹದ ಎದುರು ಸಾಗುವದೋ ಅವರ ಮತವೇ ಮೇಲು; ಎಂದು ವಾದಿಸಿದರು. ಆಗ ಶೈವಾಚಾರ್ಯನು:— ಈ ಪಣದಲ್ಲಿ ಸೋತವರು ಶೂಲಾರೋಹಣ ಮಾಡತಕ್ಕದ್ದು; ಹಾಗಾದರೆ ನಿಮ್ಮ ಮಾತಿಗೆ ಒಪ್ಪುವೆನು, ಎನಲು, ಮದಾಂಧರಾದ ಮುಂದುಗಾಣದವರಾದ ಸವಣರು ಅದಕ್ಕೊಪ್ಪಿದರು. ಆಗ ರಾಜನು ಜೈನರಿಗೆ:—ನೀವು ಒಪ್ಪಿದ ಮಾತಿಗೆ ಪ್ರತಿಜ್ಞಾಲೇಖವನ್ನು ಬರೆದು ಕೊಡಿರಿ. ಅರಸನು ಹೀಗೆನ್ನಲು ಜೈನರು ಭಾಷಾಪತ್ರವನ್ನು ಬರಕೊಟ್ಟರು. ಆಗ ಮಂಗರಸಿಯು ಉಬ್ಬಿದಳು. ಕುಲಶ್ಚರ್ಯನಂತೂ (ಅನ್ನವಿಲ್ಲದೆ ಪ್ರಾಣಬಿಡುತ್ತಿರುವ ವ್ಯಕ್ತಿಗೆ ಸುಗ್ರಾಸವು ದೊರೆತರೆ ಎಷ್ಟು ಆನಂದವಾಗುವದೋ ಅದಕ್ಕೂ) ಹೆಚ್ಚಾಗಿ ಸಂತೋಷಪಟ್ಟನು. ಪ್ರತಿ ಕ್ಷಣದಲ್ಲಿ ಆನಂದವು ಹೆಚ್ಚು ಗುಣಿಸುತ್ತಿತ್ತು. ರಾಜನ ಕೈಯಿಂದ ಉಭಯ ಪಕ್ಷದವರು ತಮ್ಮ ತಮ್ಮ ಓಲೆಗಳನ್ನು ವೈಗೆ ತೊರೆಯಲ್ಲಿ ಬಿಡಿಸಲು ಜಿನಮಂತ್ರದ ಓಲೆಯು ಪ್ರವಾಹದಗುಂಟ ಹರಿದು ಹೋಯಿತು. ಶಿವಮಂತ್ರಾಕ್ಷರದ ಓಲೆಯು ಮೇಲು ಮುಖವಾಗಿ ತೆರಳಲು ‡ ಜೈನರು ಮುಖಭಂಗಿತರಾದರು. (ಅಗ್ನಿಯು ಯಾವಾಗಲೂ ಮೇಲು ಮುಖವಾಗಿ ಉರಿಯುವದಷ್ಟೇ? ಆ ಅಗ್ನಿಯನ್ನೇ ತನ್ನ ನೇತ್ರಗಳಲ್ಲೊಂದನ್ನಾಗಿ ಮಾಡಿಕೊಂಡಿರುವ ಪರಮಾತ್ಮನ ಬೀಜಮಂತ್ರವಾಗಿರುವ ಶಿವಾಕ್ಷರದ ಓಲೆಯು ಮೇಲು ಮುಖವಾಗಿ ಸಾಗುವದು ಸಹಜವಲ್ಲೇನು?) ಸುಂದರ ಪಾಂಡ್ಯನು ಆಚಾರ್ಯರ ಆಜ್ಞೆಯ ಪ್ರಕಾರ ೧೨೦೦೦ ಜೈನರಿಗೆ ಶೂಲಗಳನ್ನು ಏಕಕಾಲಕ್ಕೆ ಅಣಿಮಾಡುವದೆಂತು? ಎಂಬ

‡ ಈ ವಿಷಯವು ಪಿಳ್ಳೈನ್ನೈನಾರು ಎಂಬ ಲೇಖದಲ್ಲಿ ವಿಸ್ತೃತವಾಗಿ ವರ್ಣಿಸಿದೆ.

ವಿಚಾರದಲ್ಲಿ ತೊಡಗಿದಾಗ ಚರಿತ್ರನಾಯಕನು :—ಶೈವಪುಂಗವನೆ, ಈಶಪ್ರೇರಣೆಯಿಂದ ಈಗ ನಡೆಯುವ ಸಂಗತಿಯು ನನಗೆ ಮೊದಲೇ ತಿಳಿದು ಅಷ್ಟು ಸಂಖ್ಯೆ ಶೂಲಗಳನ್ನು ಆ ತೂರೆಯ ಮಳಲಲ್ಲಿ ಮುಚ್ಚಿಟ್ಟಿರುವೆನು, ಎಂದು ಹೇಳಿ ಆಗಲೇ ರಾಜನ ಅನುಮತಿಯ ಪ್ರಕಾರ ಶೂಲಗಳನ್ನೆಲ್ಲ ತೆಗೆಯಿಸಿ ಶಿವಮತಕ್ಕೊಡಂಬಡದ ಹನ್ನೆರಡು ಸಾವಿರ ಸವಣರನ್ನು ಶೂಲಕ್ಕೇರಿಸಿ ವೀರರಸವೇ ತಾನಾಗಿ ಮೆರೆದನು. ತನ್ನ ಇಚ್ಛೆಯು ಫಲಿಸಿತೆಂದು ಮತ್ತು ಗಣಾಚಾರವು ಕೃತಿಯಲ್ಲಿ ಪರಿಣಮಿಸಿತೆಂದು ಕುಲಚ್ಚಿಯರ್‌ನಿಗೆ ಮೇರೆದಪ್ಪಿ ಆನಂದವಾಗಿ ಸಂತೋಷದ ಉದ್ವೇಗದಲ್ಲಿ ಮೈಮರೆತನು. ಆಗ ಸರ್ವಸಾಕ್ಷಿಭೂತನಾದ ಅಯೋನಿಜನೆಂದೂ, ಬ್ರಹ್ಮಯೋನಿಜನೆಂದೂ ಹೆಸರ್ಪಡೆದ ಚಂದ್ರಶೇಖರನಿಗೆ ಎಲ್ಲ ಸಂಗತಿಯು ವೇದ್ಯವಾಗಿ ಚರಿತ್ರಪುಂಗವನಿಗೆ ಪ್ರಕಟನಾಗಿ ಆತನ ಮೈತಟ್ಟಿ (ದಂಪತಿಗಳಾದ ಸುಂದರಪಾಂಡ್ಯ-ಮಂಗರಸಿ- ಮತ್ತು ಜ್ಞಾನಸಂಬಂಧರು ನೋಡ-ನೋಡುವಷ್ಟರಲ್ಲಿ) ಪಾರ್ವತಿಯೊಡನೆ ಆತನ ಗಣಾಚಾರವನ್ನು ಮತ್ತು ಶಿವಭಕ್ತಿಯನ್ನು ಪ್ರಶಂಶಿಸಿ ಪಾದಕ್ಕೆರಗಿ ಸ್ತುತಿಸುತ್ತಿರುವ ಕುಲಚ್ಚಿಯರ್‌ನಿಗೆ ಪ್ರಕಾಶಮಯವಾದ ದೇವಯಾನದಲ್ಲಿ ಕುಳ್ಳಿರಿಸಿ ಗಣಪದವಿಯನ್ನು ದಯಪಾಲಿಸಿದನು.



ಓಂ.

# ೪೦-೪೧. ಸೌಂದರಪಾಂಡ್ಯ ಮತ್ತು ಮಂಗಾಯಕ್ಕರಸಿಯರು.

ಎಸೆವಿಳೆಯನ್ಸೈನಾರ ದೆಸೆಯಿಂದೆ ದೀಕ್ಷೆಗೊಂ । ಡಸಮಲಿಂಗದೊಳು ಬೆರವ
ಮಂಗಾಯಕ್ಕ । ರಸಿಯರ್ಗೆ ತನುಜನೆನಿಸುವೆನು ॥

ಜ್ಞಾನಸಂಬಂಧರಿಂದಾನಂದರಸರೂಪ । ನಾನು ತಂದೆನದಸುಗುಣಿಸೌಂದ
ರಪಾಂಡ್ಯ । ನೀನೆನ್ನ ಪುಣ್ಯದಧಿದೈವ ॥

[ಶ್ರೀ ನಿಜಗುಣರು]



ಸಕಲ ಐಹಿಕಭೋಗಗಳ ನೆಲೆವನೆಯಾಗಿ, ಹಿರಿದೊಪ್ಪುವ ವನಪುರಗಳಿಂದ ಯುಕ್ತವಾಗಿ, ಜಿನಮಂದಿರಗಳಿಂದ ನಿಬಿಡವಾಗಿದ್ದರೂ ಪಾಂಡ್ಯರಾಜ್ಯವು ನಿಜಪ್ರಕಾಶದಿಂದ ರಂಜಿಸಲಿಲ್ಲ; ಅದೇಕೆ? ಎಂದು ಪಾಠಕರು ಉತ್ಸುಕರಾಗಬಹುದು. ಆ ಧರೆಯು ಜಿನಮಯವಾಗಿ ಎತ್ತ ನೋಡಿದರೂ ಸವಣರೇ ಪ್ರಧಾನರಾಗಿ ತಮ್ಮ ಮನಬಂದಂತೆ (ನೀತಿಯ ಕಡೆಗೆ ನೋಡದೆ, ಒಳಿತು-ಹೀನವೆಂಬುದನ್ನು ನೋಡದೆ, ಇತರರ ಶ್ರೇಯಸ್ಸನ್ನು ಸ್ಮರಿಸದೆ ಅಲ್ಲೊಂದು-ಇಲ್ಲೊಂದು ಹೀಗೆ ಕ್ವಚಿತ್ ಕ್ವಚಿತ್ ಆಗಿರುವ ಶಿವಾಲಯಗಳನ್ನು ದ್ವೇಷಬುದ್ಧಿಯಿಂದ ಕಾಣುತ್ತ ಬಹು ಕಡಿಮೆ ಸಂಖ್ಯಾಕರಾಗಿರುವ ಶೈವರನ್ನು ಕಂಡೊಡನೆ ನಿಷ್ಕಾರಣವಾಗಿ ಹಳಿಯುತ್ತ ಶಿವಧರ್ಮವನ್ನು ತುಚ್ಛವಾಗಿ ಎಣಿಸುತ್ತ) ವರ್ತಿಸುತ್ತಿದ್ದರು. ಮಧುರಾಪುರವೇ ಈ ಧರೆಯ ಮುಖ್ಯ ನಗರವಾಗಿತ್ತು. ಜೈನಕಲಂಕವೆಂಬ ಗುರ್ತು ಎಂಬಂತೆ ಆ ಅವನಿಯ ರಾಜನ ಬೆನ್ನಮೇಲೆ ಕೂನು ಉಂಟಾಗಿತ್ತು. ಆ ಪಟ್ಟಣದಲ್ಲಿ ಮಂದ ಬುದ್ಧಿಗಳಾದ ಜೈನರಲ್ಲಿ ಅಸೂಯಾಪರರು ಮತ್ತು ಮದೋನ್ಮತ್ತರು ಆದ ಕ್ಷಪಣಕರ ಸಂಖ್ಯೆಯು ಹನ್ನೆರಡು ಸಾವಿರದ ವರೆಗೆ ಹರಡಿತ್ತು. ಈ ಕಾಪುರುಷರು ಮುಂದುಗಾಣದವರಾಗಿ ಸಜ್ಜನರ ಪಥವನ್ನು ಅನುಸರಿಸದೆ ಮನ

ಸ್ವಿಯಾಗಿ ನಡೆಯುತ್ತಿದ್ದುದರಿಂದ, ನೆರೆನಾಡಿನವರು ಬಂದು ಇವರನ್ನು ನೋಡಿದರೆ ಉನ್ಮತ್ತ ಗಜಗಳಂತೆ ಮಲೆಯುವದು ಕಂಡು ಬರುತ್ತಿತ್ತು. ಪಾಪಪರಿಮಿತಿಯು ಅಳತೆಗೆ ಸರಿಯಾಗಿ ಏರುವ ವರೆಗೆ ಆ ಖಳರು ಲಯಹೊಂದುವ ಬಗೆಯಾದರೂ ಹ್ಯಾಗೆ? ವೇಳೆಯು ಒದಗಿ ಬರಬೇಕಲ್ಲವೇ?

ಸುಪ್ರಸಿದ್ಧ ಪಾಂಡ್ಯಭೂಪನು ವೀರನಾದ ಪಗಲ್ಚೋಳ ಧರಣೀಶನಿಗೆ **ತಾನು** ಕೊಡತಕ್ಕ ಪೊಗದಿಯನ್ನು ಕೊಡುವದನ್ನು ಬಂದು ಮಾಡಲು, ಆ ಶೈವ-ಕಲಿ-ಚೋಳಕ್ಷಿತಿಪನು ಯುದ್ಧವನ್ನು ಸಾರಿ ಚರಿತ್ರನಾಯಕನ ಮೇಲೆ ಪರಾಕ್ರಮಿಯಾದ ಮೊನೆಯಾಂಡನೊಡನೆ ದಂಡೆತ್ತಿ ಬಂದು ಸೋಲಿಸಲು ಪಾಂಡ್ಯಭೂಪನು ರಣಾಂಗಣದಿಂದ ಓಡಿಬಂದ ವಿಷಯವು ಹಾಗು ಉಜ್ವಲವಾದ ಶಿವಭಕ್ತಿ ಪ್ರಭಾವದಿಂದಲೂ ತದಂಗವಾದ ಜಂಗಮನಿಷ್ಠೆಯಿಂದಲೂ ತುರಂಗಿಯಾದ **ಮೊನೆಯಾಂಡನು** ಹಾಗು ಪತ್ನೀಸಮೇತನಾಗಿ **ಪಗಲ್ಚೋಳ** ನೃಪನು ನಿಜಾನಂದದಲ್ಲಿ ವಿಹರಿಸುವ ನೆಲೆಯಾದ ಶಿವಲೋಕಕ್ಕೆ ತೆರಳಿದ್ದು ಪಾಠಕಮಹಾಶಯರ ಸ್ಮರಣೆಯಲ್ಲಿರಬಹುದು. ಪಾಂಡ್ಯರಾಜನನ್ನು ಅವನ ಪ್ರತಿಭಟರು ಸಂಗ್ರಾಮದಲ್ಲಿಯೇ ತರಿಯುತ್ತಿದ್ದರು; ಆದರೆ ಬೆನ್ನುತೋರಿಸಿದವರನ್ನು ಕೊಲ್ಲುವದು ಅನುಚಿತವೆಂದು ಬಿಟ್ಟರು; ಮತ್ತು ಮುಂದೆ ಕಾರ್ಯವಿಶೇಷವಾದರೂ ಕಾಲಕ್ರಮೇಣ ಜರಗಬೇಕಾಗಿತ್ತು. (?)

ನಿಜವಾಗಿಯೂ ಪರಹಿತಕಾಂಕ್ಷಿಯಾಗಿ ಅಲ್ಲಲ್ಲಿಯ ವಿಶೇಷ ಸಂಗತಿಗಳನ್ನು ಪರಿಕಿಸಿ ಚನ್ನಾಗಿ ಪರಿಶೀಲಿಸಿ ಆಯಾಯ ಉಚಿತಸ್ಥಾನಗಳಿಗೆ ಹೋಗಿ ನಡೆಯುತ್ತಿರುವ ವಿದ್ಯಮಾನಗಳನ್ನೆಲ್ಲ ಅರುಹಿ ಕಲ್ಯಾಣಕರವಾಗಿ ನಡೆಯುವಂತೆ ಯತ್ನಿಸುವ ತ್ರಿಲೋಕಸಂಚಾರಿಯಾದ ಮಹಾನುಭಾವನೆಂದರೆ **ನಾರದ** ಮುನೀಶ್ವರನೆಂಬುವದು ಸರ್ವರೂ ಅರಿತ ಸಂಗತಿಯು ಸರಿಯಷ್ಟೆ? ಈ ಯೋಗಿಯ ಮುಖದಿಂದ ಜೈನರು ಕೊಡುತ್ತಿರುವ ತೊಂದರೆಯನ್ನು ಕೇಳಿದ ವಿಶ್ವಪಾಲಕನಾದ ಶಂಕರನು ತನ್ನ ಕುವರನಾದ ಕಾರ್ತಿಕೇಯನನ್ನು (ಭೂಮಿಗೆ ಶಿವಮತ ಉದ್ಧಾರಕ್ಕಾಗಿಯೂ ಸವಣರ ಹಾವಳಿಯನ್ನು ತಗ್ಗಿಸುವದಕ್ಕಾಗಿಯೂ) ಕಳಿಸಿದ ವಿಷಯ ನೆನಪಾಗಿ ಚೋಳ ಧರಿತ್ರಿಯ ಕಾಂತಿಯುತಳಾದ ಮತ್ತು ಸಲ್ಲಕ್ಷಣಗಳಿಂದ ಪರಿಶೋಭಿಸುವ ರಾಜಕನ್ನಿಕೆಯನ್ನು ಅಪೇಕ್ಷಿಸುವಂತೆ ಚರಿತ್ರನಾಯಕನಿಗೆ ಪ್ರೇರಿಸಿದನು. ಜಗನ್ನಿಯಂತನ ಲೀಲೆಯು ಅಥವಾ ಮಾಯೆಯು ಹ್ಯಾಗೆ ಪರಿಣಮಿಸುವದು ಇದನ್ನು ಆತನೇ ಬಲ್ಲನು.

ಆ ಚೋಳಕುಲದೀಪಕನು ಜಾಯಾಸಮೇತನಾಗಿ ದಿವಂಗತನಾದ ಬಳಿಕ ವಿಕ್ರಮಚೋಳನ ಮಗಳಾದ (ಅಂದರೆ ಪಗಲ್ಚೋಳನ ತಂಗಿಯಾದ) ಶಿವಭಕ್ತಿ

ಲತೆಯಂತೊಪ್ಪುವ ಮನೋಹರಗಾತ್ರಳಾದ ಮಂಗರಸಿ-ನಾಚಿಯನ್ನು ಪಾಂಡ್ಯ ರಾಜನು ಹೊತ್ತುಸಾಧಿಸಿ ಬಲವಂತದಿಂದ ತಂದು ವರಿಸಿದನು. ಶಿವಕಾರ್ಯ ಕ್ಕಾಗಿ ಅನಿವಾರ್ಯವಾದ ಕಜ್ಜವೆಂದು ತಿಳಿದಳೋ ಎಂಬಂತೆ ತನ್ನ ಇಚ್ಛೆ ಇಲ್ಲದಿ ದ್ದರೂ ಕಥಾನಾಯಕಳು ಮೌನವಾಗಿರಬೇಕಾಯಿತಲ್ಲವೇ? ಧೀರೆಯಾದ ಮತ್ತು ಕಾವ್ಯಶಾಸ್ತ್ರ ನಿಷ್ಣಾತಳಾದ ಹಾಗೂ ರಾಜನೀತಿ ವಿಶಾರದಳಾದ ಮಂಗರಸಿಯು ಅರಸನೊಡನೆ ಬೆರೆಯದೆ, ಅವರಮನೆಯಲ್ಲಿರದೆ, ಪ್ರತ್ಯೇಕವಾದ ಉದ್ಯಾನದ ಲ್ಲಿಯ ಮಂದಿರದಲ್ಲಿರುತ್ತ ಗುಪ್ತವಾಗಿ ಚಿದಾನಂದಸ್ವರೂಪನಾದ ಶಿವನನ್ನು ಆರಾಧಿಸುತ್ತ:—ಭಗವಂತನೇ, ಶೈವಪುಂಗವರ ವಂಶದಲ್ಲಿ ಜನಿಸಿದ ನನ್ನನ್ನು ಜೈನನಿಗೆ ಅಂಟಿಸಬಹುದೆ? ಎಂದು ಮೊರೆ ಇಡುತ್ತಿದ್ದಳು. ನಮ್ಮ ಚರಿತ್ರನಾ ಯಕಳಾದ ಮಂಗರಸಿಯು ಮಧುರೆಗೆ ಬಂದ ಸ್ವಲ್ಪಾವಧಿಯಲ್ಲಿಯೇ ವಿಶ್ವಬಂಧು ವಿನ ಕೃಪೆಯಿಂದ ಕುಲಚ್ಚಿರ್ಯನೆಂಬ ಮಂತ್ರಿಯ ಪರಿಚಯವಾಗಿ ಆತನು ದುರಿ ತಹರನಾದ ಹರನನ್ನು ನಿರ್ಮಲವಾದ ಹೃದಯದಲ್ಲಿರಿಸಿ ತ್ರಿಸಂಧ್ಯೆಗಳಲ್ಲಿಯೂ ಆ ಪರಮಾತ್ಮನನ್ನು ಆರಾಧಿಸುವದನ್ನು ಅರಿತುಕೊಂಡು ಅವಳು ಭವಾನೀಪತಿ ಯನ್ನು ನಿರತಿಶಯಪ್ರೇಮದಿಂದ ಸ್ತುತಿಸುತ್ತಿದ್ದಳು.

ಹರನಣುಗನು ಪಿಳ್ಳೆನಾಯನಾರು (ಅಥವಾ ಪಿಳ್ಳನೈನಾರು) ಎಂಬ ವರ ನಾಮದಿಂದ ಚಿಯಾಳಿಪುರದಲ್ಲಿ ಅವತರಿಸಿ, ತಿರುಜ್ಞಾನಸಂಬಂಧನೆಂಬ ಅಭಿದಾ ನದಿಂದ ಆ ಚಿಯಾಳಿಪುರದಲ್ಲಿಯೇ ಭರದಿಂದ ಶಿವಜ್ಞಾನವಿಕಸಿತನಾಗಿ ಬೆಳೆಯು ತ್ತಿರುವ ಸಂಗತಿಯನ್ನು ಮಂಗರಸಿ ಮತ್ತು ಆ (ಶೈವ) ಸಚಿವನು ಅರಿತು ಯಾರಿ ಗೂ ತಿಳಿಯದಂತೆ ಆ ಮಹಾತ್ಮನಾದ ಹಸುಳನಿಗೆ ಬಿನ್ನ ಪತ್ರವನ್ನು ಬರೆದು ತಮ್ಮ ವಿಶ್ವಾಸಪಾತ್ರನಾದ ಕಂಚುಕಿಯೊಡನೆ ಕಳಿಸಿದರು. ಯಾವ ಕೊರತೆ ಯೂ ಇಲ್ಲದ ರಾಣಿಯು ಮತ್ತು ಸಚಿವನು ಏನು ಬಯಸಿ ಪತ್ರಿಕೆಯನ್ನು ವಿಜ್ಞಾ ಪಿಸಿಕೊಂಡಿರಬಹುದು ಎಂದು ಉತ್ಸುಕತೆಯೋ? ತಿಳಿಸಿ ಬಿಡುವಾ. ಕುಮಾ ರ್ಗಾವಲಂಬಿಗಳಾದ ಸವಣರು ಸತ್ಪುರುಷರನ್ನು ಹೀಯಾಳಿಸಿ ಶಿವಧರ್ಮನಿಂದೆಗೆ ಕಾರಣರಾಗಿರುವದರಿಂದ ಜೈನಕುಲಪಂಕವನ್ನು ನಿವಾರಿಸಿ, ಶೈವಮತವನ್ನು ಊರ್ಜಿತಗೊಳಿಸಬೇಕೆಂಬದಾಗಿ ಪವಿತ್ರಳಾದ ಮಂಗರಸಿಯು ಹಾಗು ಗಣಾಚಾ ರವ್ರತಧನನಾದ ಕುಲಚ್ಚಿರ್ಯನು ತಾವು ಬರೆದ ಪತ್ರಿಕೆಯಲ್ಲಿ ಪ್ರಾರ್ಥಿಸಿದ್ದರು.

ಈಶ್ವರನಿಂದ ಅನುಗ್ರಹಿಸಲ್ಪಟ್ಟ ಮುತ್ತಿನ ಮಂಟಪವನ್ನೇರಿ ಭಕ್ತವೃಂದ ದೊಡನೆ ತಾನು ಏಳು ವರ್ಷದ ತರುಳನಾದರೂ ಜ್ಞಾನಸಂಬಂಧನು (ಮಧುರಾ ಪುರಿಯಿಂದ ಬಂದ ಆ ಓಲೆಯನ್ನು ಓದಿದೊಡನೆಯೇ) ಉದ್ದಿಷ್ಟ ಕಾರ್ಯಕ್ಕಾಗಿ ಹೊರಟು ಪಾಂಡ್ಯ ಅವನಿಯನ್ನು ಹೊಕ್ಕು ಶಿವಾಲಯವಿರುವ ಒಂದು ಗ್ರಾಮ ವನ್ನು ಕಂಡು ಅಲ್ಲಿಳಿದನು. ಕುಹಕರಾದ ಜೈನರು ಆ ಶಿವನಿಲಯದ ಬಾಗಿಲಗ

ಳನ್ನು ಭದ್ರವಾಗಿ ಮುಚ್ಚಿಸಿ ಬಿಟ್ಟಿದ್ದರು. ಈ ಶೈವಕುಮಾರನು ಆ ಗುಡಿಯಲ್ಲಿ ಕಾಲಿಡುತ್ತಲೆ ಫಕ್ಕನೆ ಬಾಗಿಲಗಳು ತಮ್ಮಷ್ಟಕ್ಕೆ ತಾವೇ ತೆರೆಯಲು ಮನದಣಿವಂತೆ ಈಶ್ವರನನ್ನು ತನ್ನ ದಿವ್ಯವಾದ ತಾಳಗಳಿಂದ ಪಾಡಿ ಹೊರಗೆ ಬಂದು ಶಿವ ನಿಂದಕರಾದ ಸವಣರನ್ನೆಲ್ಲ ಬಡೆದು ಜಿನಾಲಯಗಳಿಗೆ ಅವರು ಬೇಡವೆಂದರೂ ಮುದ್ರೆಯನ್ನೊತ್ತಿ ವೀರಾವೇಶದಿಂದ ಮೆರೆದನು. ಇಷ್ಟಾಗಲು ಅಲ್ಲಿಯ ಕ್ಷಪಣಕರು ಆಗಲೇ ಮಧುರೆಗೆ ಓಡಿ ಹೋಗಿ ತಮ್ಮ ಜನರೆದುರಿಗೆ ದೂರಿದರು. ಪುತ್ತನಂದಿ ಮೊದಲಾದ ಜೈನ ಪ್ರಮುಖರ ಆಗ್ರಹದ ಮೇರೆಗೆ † ಸಹಸ್ರ ಅಶ್ವ ಬಲವನ್ನು ಮತ್ತು ಎಂಟು ಸಾವಿರ ಕಾಲದಳವನ್ನು ಪಾಂಡ್ಯರಾಜನು ಶೈವ ಕುಮಾರನ ಮೇಲೆ ಕಳುಹಿಸಿದನು. ಆ ಸೇನೆಯನ್ನೆಲ್ಲ ಲಯಗೊಳಿಸಿ ಕಾಲಕ್ರಮದಿಂದ ತಿರುಜ್ಞಾನಸಂಬಂಧನು ಮಧುರೆಯಲ್ಲಿರುವ ಚೊಕ್ಕನಾಯನಾರು ಲಿಂಗಾಲಯಕ್ಕೆ ಬರಲು * ಜೈನರು ಶೈವ ಕುಮಾರನಿಗೆ ದ್ರೋಹವನ್ನು ಬಯಸಿ ರಾತ್ರಿ ಕಾಲದಲ್ಲಿ ಆ ಶಿವನಿಲಯವನ್ನು ಬಂಕಿಗೀಡು ಮಾಡಿದರು. ಆಗಲಾ ಜ್ಞಾನಸಂಬಂಧನು ಅಗ್ನಿಯನ್ನು ಕರೆದು ಆತನನ್ನು ಜರೆದು ನೀನು ಈಗಲೇ ಹೋಗಿ ಜಿನಾಲಯಗಳನ್ನೆಲ್ಲ ಧ್ವಂಸಮಾಡಿ ಬೆಳಗಾಗುತ್ತಲೆ ಸವಣರ ಪುರಾಗ್ರಹಕ್ಕೆ ಇಂಬುಗೊಟ್ಟಿರುವ ಕೂನ ಪಾಂಡ್ಯನನ್ನು ತಪಿಸೆಂದು ಆಜ್ಞೆಮಾಡಿದನು. ಬಸದಿಗಳೆಲ್ಲವು ಸುಟ್ಟವು. ದಾರುಣವಾದ ಜ್ವರ ತಾಪದಿಂದ ರಾಜನು ಬೆಂದು ಬೆಂಡಾಗಿ ಕಳವಳಿಸಿ ಮೃತ್ಯುದೇವತೆಯ ದರ್ಶನವನ್ನೇ ಹಾರೈಸುತ್ತಿದ್ದನು. ಜೈನ ಪಂಡಿತರಾದ ಜಿತಸೇನ, ನಯಸೇನ, ಶ್ರುತಕೀರ್ತಿ, ವಿಶಾಲಕೀರ್ತಿ, ಬುಧಚಂದ್ರ, ವ್ರತಕೀರ್ತಿ ಮುಂತಾದವರಿಂದ ರುಜೆಯನ್ನು ವಾಸಿಮಾಡುವದಾಗಲಿಲ್ಲ. ಇದರ ಕೀಲವನ್ನು ತಿಳಿದ ಮಂಗರಸಿಯು ದೈವಿಕವಾದ ಜ್ವರ ಬಾಧೆಯನ್ನು ನಿವಾರಿಸಲು ನಮ್ಮ ಗುರುಗಳಾದ ಜ್ಞಾನಸಂಬಂಧಾಚಾರ್ಯರೇ ಗತಿಯು ಎಂದು ಪತಿಗೆ ಸೂಚಿಸಿದಳು. ಆಗಲಾ ದುಃಸಹವಾದ ತಾಪದಿಂದ ಹೊರಳಾಡುತ್ತಿರುವ ದೊರೆಯು ಶೈವಾಚಾರ್ಯರನ್ನು ಕರಿಸಬೇಕೆಂದು ಹೇಳಲು ಆಗ ಅವರನ್ನು ಕರಿಸಿದಳು. ಪಿಳ್ಳೈನಾರು ದೈನ್ಯದಿಂದ ಪ್ರಾರ್ಥಿಸುತ್ತಿರುವ ರಾಜನನ್ನು ಕೃಪೆಯಿಂದ ನೋಡಿ ಪವಿತ್ರವಾದ ಭಸ್ಮವನ್ನು ಪೂಸಿ ಅರಸನಿಗೆ ಶಾಂತಿಯನ್ನು ಉಂಟುಮಾಡಿದರು. ಆಗ ಜೈನರ ಮಾರ್ಗವು ನಿರರ್ಥಕವಾದುದೆಂದು ಅರಸನಿಗೆ ಮನದಟ್ಟಾಯಿತು. ಆದರೆ ಸವಣರ ಹೊಟ್ಟೆಕಿಚ್ಚು ಬಲಿಯಿತು. ಅವರು ಕುಂಭದಲ್ಲಿ ಕ್ರೂರವಾದ ಘಟಸರ್ಪವನ್ನು ಹೊಗಿಸಿ ಅದರಲ್ಲಿ ಕೈಯಿಡುವದಕ್ಕೆ ಜ್ಞಾನಸಂಬಂಧನಿಗೆ ಹೇಳಿದರು. ಆಗ ಶೈವಾಚಾರ್ಯರು ಅದನ್ನು

---

†, * ತಿರುಜ್ಞಾನಸಂಬಂಧರ ಹಾಗು ಕುಲಚ್ಚಿಯರ್‌ರ ಲೇಖಗಳಲ್ಲಿ ವಿಸ್ತೃತವಾದ ವರ್ಣನೆಯನ್ನು ನೋಡಬಹುದು.

ತಮ್ಮ ಶಕ್ತಿಯಿಂದ ಅರಿತು ಆ ಅಹಿಯನ್ನು ಪುಷ್ಪವನ್ನಾಗಿ ಮಾಡಿ ತೋರಿಸಿದರು. ಜೈನರ ಉತ್ಸುಕತೆಯ ಮೇರೆಗೆ ಶೈವರ ಮತ್ತು ಜೈನರ ಮಂತ್ರಾಕ್ಷರಗಳನ್ನು ಬರೆದ ಓಲೆಗಳನ್ನು ನೃಪತಿಯು ಅಗ್ನಿಯಲ್ಲಿ ಹಾಕಲು ಜಿನಮಂತ್ರದ ಪತ್ರಿಕೆಯು ತಟ್ಟನೆ ಉರಿದು ಹೋಯಿತು; ಆದರೆ ಶಿವಮಂತ್ರಾಕ್ಷರದ ಪತ್ರವು ತಿಳಿಗೊಳದಲ್ಲಿಯ ಕಮಲ ಪತ್ರದಂತೆ ವಿಕಸಿತವಾಗಿತ್ತು. ಇಷ್ಟಾದರೂ ಕ್ಷಪಣಕರು ಸುಮ್ಮನಾದರೇ? ಇಲ್ಲ. ಇನ್ನೊಂದು ಸಾರೆ ಪರೀಕ್ಷಿಸೋಣ, ಎಂದು ಛಲ ತೊಟ್ಟರು. ಆಗಲಾ ನೃಪತಿಯು ಮತ್ತು ಶೈವಾಚಾರ್ಯನು ಕೂಡಿ ಏಕಕಾಲದಲ್ಲಿ ಹೀಗೆ ಹೇಳಿದರು:—"ಕೊನೆಯ ಪಣದಲ್ಲಿ ಅಪಜಯವನ್ನು ಹೊಂದಿದವರು ಶೂಲಾರೋಹಣ ಮಾಡಬೇಕು" ಅದಕ್ಕೆ ಒಪ್ಪಿ ಸಮ್ಮತಿ ಪತ್ರಿಕೆಯನ್ನು ಬರೆದು ಕೊಟ್ಟರೆ ಮುಂದಿನ ಕಾರ್ಯಕ್ಕೆ ಕೈ ಹಾಕಬಹುದು. ಆಗಲಾ ಪಾಪದಿಂದ ಸುತ್ತಲ್ಪಟ್ಟ ಭ್ರಮೆಯು ತಲೆಗೇರಿದ ಸವಣರ ಸಮೂಹವು, ಕೊಬ್ಬಿನಿಂದ ಆ ಮೇರೆಗೆ ಪ್ರತಿಜ್ಞಾ ಪತ್ರವನ್ನು ಬರೆದು ಕೊಟ್ಟರು. ಉಭಯ ಪಕ್ಷದವರು ವೈಗೆ ಎಂಬ ಹೊಳೆಯಲ್ಲಿ ತಮ್ಮ ಅಧಿದೇವತೆಗಳ ಮಂತ್ರಾಕ್ಷರಗಳ ಓಲೆಯನ್ನು ಚೆಲ್ಲಿಬಿಡಬೇಕು; ಯಾರ ಪತ್ರಿಕೆಯು ಪ್ರವಾಹದ ಮೇಲ್ಬದಿಗೆ ಸಾಗುವದೋ, ಅವರ ಮತವೇ ನಿರ್ವಿವಾದವಾಗಿ ಮೇಲು, ಎಂದು ಕ್ಷಪಣಕರು ಸಾರಿದರು. ಆಗ ರಾಜನು ಹರ್ಷಿತನಾದನು. ಕುಲಚ್ಚಿರ್ಯನು ಹಿಗ್ಗಿದನು. ಮಂಗರಸಿನಾಚಿಯರಿಗೆ ಎಣೆ ಇಲ್ಲದಷ್ಟು ಆನಂದವು ಹೊರಸೂಸಿತು!

ಸವಣರಿಗೆ ದುಃಶಕುನಗಳು ತೋರಿದವು. ಕೈಲಾಸದಲ್ಲಿ ಶಿವಗಣಸಮೂಹವು ನಲಿದಾಡಿತು. ಶುಭಾಶುಭನಿರೀಕ್ಷಣೆಯ ಈ ತೆರದ ಸಂಭ್ರಮದ ಕಾಲದಲ್ಲಿ ಲೋಕವೆಲ್ಲವೂ ನೋಡುತ್ತಿರುವಾಗ ಸುಂದರಪಾಂಡ್ಯನು ಜಿನಮಂತ್ರದ ಹಾಗು (ಅತುಲವಾದ) ಶಿವಮಂತ್ರಾಕ್ಷರದ ಓಲೆಗಳನ್ನು ವೇಗದಿಂದ ಪ್ರವಹಿಸುವ ಆ ನದಿಯಲ್ಲಿ ಬಿಟ್ಟನು. ಒಡನೆಯೇ ಕ್ಷುದ್ರವಾದ ಜಿನಾಕ್ಷರದ ಪತ್ರಿಕೆಯು ಕೆಳಗಡೆ ತೇಲಿಹೋಯಿತು. ಅಮೋಘವಾದ ಶಿವಮಂತ್ರಾಕ್ಷರದ ಓಲೆಯು ಪ್ರವಾಹಕ್ಕೆ ಎದುರಾಗಿ ಸಾಗಿತು. * ಮಂಗರಸಿದೇವಿ-ಸೌಂದರಪಾಂಡ್ಯರ ಆನಂದಕ್ಕೆ ಮೇರೆ ಇಲ್ಲದಾಯಿತು. ಕುಲಚ್ಚಿರ್ಯಸಚಿವನು ಸಂತೋಷವೆಂಬ ಕಡಲಿನಲ್ಲಿ ಮುಳುಗಿದನು. ಪಿಳ್ಳೈನೈನಾರು ಮುದವನ್ನು ತಾಳಿದರು. ಮತಿಗೆಟ್ಟ ಜೈನರು

* ಊರ್ಧ್ವರೇತಸ್ಕನೆಂದು ಪ್ರಸಿದ್ಧನಾದ ವಿರೂಪಾಕ್ಷನ ಶುಕ್ಲವು ಅಧೋಮುಖವಾಗಿರದೆ ಮೇಲ್ಮುಖವಾಗಿರುವಂತೆ ಆತನ ವೀರ್ಯರೂಪದಂತಿರುವ ಬೀಜಾಕ್ಷರವನ್ನೊಳಕೊಂಡ ಶಿವಮಂತ್ರದೋಲೆಯು ಮೇಲ್ಮುಖವಾಗಿ ತೆರಳುವದು ಶಿವಭಕ್ತರಿಗೆ ಸಹಜವೆಂದು ಕಾಣುವ ಸಂಗತಿಯಲ್ಲವೇ?

ಧೈರ್ಯಗೆಟ್ಟರು. ಅವರ ಮುಖಗಳು ಬಾಡಿದವು. ದುಷ್ಟರನ್ನು ಶಿಕ್ಷಿಸುವದರಲ್ಲಿ ದಕ್ಷನಾದ ಅರಸನಿಗೆ ಇಷ್ಟು ದೊಡ್ಡ ಸಂಖ್ಯೆಯ ಜೈನರನ್ನು ಶೂಲಕ್ಕೇರಿಸಲು, ಏಕಕಾಲದಲ್ಲಿ ಅಷ್ಟು ಶೂಲಗಳನ್ನು ಅಣಿಮಾಡುವದೆಂತು? ಎಂಬ ವಿಚಾರವು ಬೀಳಲು, ಚರಿತ್ರನಾಯಕನ ಇಂಗಿತವನ್ನು ಚರಿತ್ರನಾಯಕಳು ತಿಳಿದು (ಗಣಾಚಾರ ಛಲದವನಾದ ಸಚಿವ ಕುಲಶ್ಚಿರ್ಯನು ಮೊದಲೇ ಎಲ್ಲ ಸಂಗ್ರಹಮಾಡಿಟ್ಟ ಗುಟ್ಟನ್ನು ಅರಿತವಳಾದ್ದರಿಂದ) ಕುಲಶ್ಚಿರ್ಯನ ಮೋರೆನೋಡಿದಳು. ಆಗ ಸಚಿವನು:—ಭೂಪತಿಯೇ, ಶಿವಜ್ಞಾನದಿಂದ ಶಿವಕುಮಾರಶ್ರೇಷ್ಠನು ಇಲ್ಲಿಗೆ ಬಿಜಯಂಗೆಯ್ಯುವದನ್ನು ಮತ್ತು ನಿಮ್ಮಡಿಗಳು ಜಿನಮತವನ್ನು ಧಿಃಕರಿಸಿ ಶಿವಮತವನ್ನು ಅವಲಂಬಿಸುವದು ಹಾಗು ವೇದಬಾಹ್ಯರಾದ ದುಷ್ಟ ಸವಣರು ಶೂಲಾರೋಹಣ ಮಾಡುವ ಸಂದರ್ಭವನ್ನು ಮೊದಲೇ ತಿಳಿದು, ಹನ್ನೆರಡುಸಾವಿರ ಶೂಲಗಳನ್ನು ಕ್ರಮವಾಗಿ ಯಾರಿಗೂ ತಿಳಿಯದಂತೆ ಮಾಡಿ ವೈಗೆ ನದಿಯ ಮಳಲಲ್ಲಿ ಮುಚ್ಚಿಟ್ಟಿರುವೆನು. ಇದನ್ನು ಕೇಳಿದೊಡನೆಯೇ ಚರಿತ್ರನಾಯಕನಿಗೆ ಸಂತೋಷವು ಉಕ್ಕೇರಿತು. ಶೈವಾಚಾರ್ಯರ ಅಪ್ಪಣೆಯಂತೆ ಶಿವಮತವನ್ನು ಅಂಗೀಕರಿಸದ ಹನ್ನೆರಡು ಸಾವಿರ ಜೈನರನ್ನು ಕುಲಶ್ಚಿರ್ಯನು ಶೂಲಕ್ಕೇರಿಸಲು, ಆತನಿಗೆ ಕೊನೆ ಇಲ್ಲದಷ್ಟು ಆನಂದವಾಯಿತು ಅರಸನೂ ಅರಸಿಯೂ ಸಂತಸವನ್ನು ಹೊಂದಿದರು. ಅರಸನ ಅಪ್ಪಣೆಯ ಮೇರೆಗೆ ಮಂತ್ರಿ ಸಾಮಂತ ಮೊದಲಾದ ಸರ್ವರೂ ಶಿವಮತವನ್ನು ಹೊಂದಿದರು. ಮನೋಹರವಾಗಿ ಅರಳಿದ ಕಮಲದಂತಿರುವ ಶೈವಾಚಾರ್ಯರ ವಿಕಸಿತವಾದ ಮುಖಮಂಡಲವನ್ನು ನೋಡಿ:—“ಗುರುವರ್ಯರೇ, ನನಗೆ ಶಿವದೀಕ್ಷೆಯನ್ನು ಅನುಗ್ರಹಿಸಿ ಪುನೀತನನ್ನಾಗಿ ಮಾಡಿರಿ. ನಿಮ್ಮ ಕೃಪೆಯಿಂದ ಜೈನರು ಲೋಪವಾದರು; ಶಿವಧರ್ಮವು ಉತ್ಕರ್ಷತೆಯನ್ನು ಪಡೆಯಿತು.” ಸೌಂದರಪಾಂಡ್ಯ, ಮಂಗಾಯಕ್ಕರಸಿ ಹಾಗು ಜ್ಞಾನಸಂಬಂಧನು ಸಂಭ್ರಮಾನಂದೋತ್ಸವದಲ್ಲಿ ಕುಳಿತು ಸಚಿವಶಿರೋಮಣಿಯ ಗಣಾಚಾರವನ್ನು ನೆನೆದು ಕುಲಶ್ಚಿರ್ಯನನ್ನು ಸಂತೋಷದಿಂದ ನೋಡುತ್ತಿರುವಾಗ ಆ ಸಚಿವನಿಗೆ ಉಮೇಶನು ನಿಜರೂಪವನ್ನು ತೋರಿಸಿ ಆತನ ಸಾಹಸಕ್ಕೆ ಮೆಚ್ಚಿ ಎಲ್ಲರೂ ನೋಡನೋಡುವಷ್ಟರಲ್ಲಿಯೇ ದೇದೀಪ್ಯಮಾನವಾದ ದೇವಯಾನದಲ್ಲಿ ಕುಳ್ಳಿರಿಸಿಕೊಂಡು ಸಾಗಲು, ದಂಪತಿಗಳು ತಮ್ಮ ಗುರುವಿಗೆ:—ಪುರಷಪುಂಗವನೇ, ಕಾರಣದೇಹಿಯೇ, ಕುಲಶ್ಚಿರ್ಯನು ಸದ್ಗತಿಗೆ ಸಂದಿದನು; ನಮಗೆ ಈಶ ಸಾನ್ನಿಧ್ಯವು ದೊರಕುವದೆಂದು? ಆಗ ಶಿವಕುಮಾರನು.—ಮಂಗರಸಿಯೇ, ನೀನು ಭಾಗ್ಯವಂತಳು ನಿನ್ನ ಮನೋರಥವು ಪೂರ್ಣವಾಯಿತು; ನಿನ್ನ ಪತಿಯು ಜೈನಮತವನ್ನು ತೊರೆದು ಶೈವನಾದನಲ್ಲವೇ? ಸವಣರ ಕಾಟವು ಇಲ್ಲದಾಯಿತಲ್ಲವೇ? (ರಾಜಪತ್ನಿಯ ಮಸ್ತಕದಮೇಲೆ ತನ್ನ

ವರದ ಹಸ್ತವನ್ನಿಟ್ಟು) ತಾಯೇ, ನಿನ್ನ ಪುಣ್ಯಗರ್ಭದಲ್ಲಿ ಜಗನ್ಮಾತೆಯಾದ ಮೃಡಾಣಿಯು ಅವತರಿಸುವಳು. ನೀವು ಸತಿ-ಪತಿಗಳೀರ್ವರೂ ಅನಘನಾದ ಅಭವನನ್ನು ಹೊಂದುವಿರಿ'' ಎಂದು ಅಭಯವನ್ನು ದಯಪಾಲಿಸಿದನು.

ಪಿಳ್ಳೆನೈನಾರು ಶುಭಮುಹೂರ್ತದಲ್ಲಿ ಚರಿತ್ರನಾಯಕನಿಗೆ ಶೈವೋಪದೇಶ ವನ್ನು ಸಾಂಗವಾಗಿ ಬೋಧಿಸಿ, ಸುಜನಪಥವನ್ನು ಚೆನ್ನಾಗಿ ಬಿಂಬಿಸಿ, ದಂಪತಿ ಗಳೀರ್ವರಿಂದ ಬೀಳ್ಕೊಂಡು ಅಲ್ಲಿಂದಾ ತೆರಳಿದರು.

ಮಂಗಾಯಕ್ಕರಸಿಯೂ, ಸುಂದರ ಪಾಂಡ್ಯನೂ ಶಿವಸೇವಾಧುರಂಧರರಾಗಿ ರಾಜಧರ್ಮವನ್ನು ಬಿಡದೆ ದುಷ್ಟನಿಗ್ರಹ ಶಿಷ್ಟಪರಿಪಾಲನಾತುರರಾಗಿ ಪ್ರಜ ರನ್ನು ತಮ್ಮ ಮಕ್ಕಳಂತೆ ಸಲಹುತ್ತಾ ಶಿವಪ್ರೀಯರಾಗಿ ಇರುವಾಗ ಅರಸಿಯು ಶಿವಪ್ರಸಾದದಿಂದ ಕ್ರಮೇಣ ಗರ್ಭವತಿಯಾಗಿ ಮಂಗಲಮಯಳಾಗಿ ಪ್ರಕಾಶಿ ಸುವ ಮಗಳನ್ನು ಪಡೆದಳು. ಆ ಶೋಭನಾಂಗಿಯಾದ ಸುತೆಗೆ ಪೂಜ್ಯರಿಂದ ಶರ್ವಾಣಿ ಎಂದು ನಾಮಕರಣವನ್ನು ಮಾಡಿಸಿದರು. ವರಗುರುವಿನಿಂದ ಶಿವಾ ರ್ಪಣಾನುಕ್ರಮವನ್ನರಿತ ದಂಪತಿಗಳು ತಮ್ಮ ಕುಮಾರಿಯ ಬಾಲಲೀಲೆಯನ್ನು ನೋಡಿ ತಮಗಾದ ಸಂತೋಷವನ್ನು ಸೋಮೇಶನಿಗೆ ನಿವೇದಿಸುತ್ತಿದ್ದರು. ಕುವ ರಿಯು ಜಗನ್ಮಾತೆಯ ಅವತಾರವೇ ತಾನಾದುದರಿಂದ ಸರ್ವೋತ್ಕೃಷ್ಟಶುಭಚಿ ನ್ಹಾಂಕಿತಳಾಗಿ ನೋಡುವವರಿಗೆ ಕಲ್ಯಾಣವೇ ಸ್ತ್ರೀಯಾಕೃತಿಯನ್ನು ತಾಳಿದೆ ಯೋ ಎಂಬ ಹಾಗೆ ಭಾಸವಾಗುವಂತೆ ಮನೋಹರಗಾತ್ರಳಾಗಿ ಬೆಳೆಯುತ್ತ ಯೌವನದೆಸೆಯಲ್ಲಿ ಅಡಿ ಇಟ್ಟದ್ದನ್ನು ಕಂಡು ಮಂತ್ರಿಯು ಅರಸು ಮಗಳ ವಿವಾ ಹದ ಮಾತನ್ನು ತೆಗೆದನು. ಚರಿತ್ರನಾಯಕನು ತನ್ನ ರಾಣಿಯ ಇಂಗಿತವನ್ನು ತಿಳಿಯಲೋಸುಗ ನಿಜಸುತೆಯನ್ನು ಯಾರಿಗೆ ಕೊಡಬೇಕೆಂದು ಕೇಳಿದನು. ಚರಿ ತ್ರನಾಯಕಳು ಪತಿಯ ಬಾಯಿಂದ ಹೊರಟ ಶಬ್ದಗಳನ್ನು ಕೇಳಿದೊಡನೆ ಕಿವಿ ಯನ್ನು ಮುಚ್ಚಿಕೊಂಡು ಗುಣಮಣಿಭೂಷಿತಳಾದ ಶರ್ವಾಣಿಗೆ ಒಪ್ಪುವ ವರ ನೆಂದರೆ ಚಿದಾತ್ಮನು, ಚಿನ್ಮಯನು ಆದ ಮಹಾದೇವನೇ ಹೊರ್ತು ಮತ್ತೆ ಇನ್ನಾರು ಸರಿಯಾಗುವರು? ತನ್ನ ಪತ್ನಿಯ ಮಾತನ್ನು ಕೇಳಿ ಸೌಂದರಪಾಂಡ್ಯ ರಾಜನು ಪರಮ ಸಂತೋಷವನ್ನಾಂತು ನನ್ನ ಮನದಿಚ್ಛೆಯಂತೆ ನೀನು ಹೇಳಿ ದುದು ಯುಕ್ತವಾಯಿತು, ಎಂದು ಆಕೆಗೆ ಹೇಳಿದನು.

ನಿರ್ಮಲ ಹೃದಯರೂ, ಸರಳ ಸ್ವಭಾವದವರೂ, ಶಿವನಿಷ್ಠಾಪರರೂ ಆದ ರಾಜದಂಪತಿಗಳೀರ್ವರೂ ಮಧುರಾಪುರಾಧಿಪತಿಯಾದ ಚೊಕ್ಕನಾಯನಾದ ಲಿಂಗದೇವನನ್ನು ವಿಧಿವತ್ತಾಗಿ ಪೂಜಿಸಿ ತಮ್ಮ ಅಭೀಷ್ಟವನ್ನು ನಿವೇದಿಸಿ ತನ ಯಳ ಪರಿಣಯವನ್ನು ಮಾಡಬೇಕೆಂದು ನಿಶ್ಚಯಿಸಿದರು. ಭಕ್ತರ ಹೃದಯ

ವನ್ನು ಪರೀಕ್ಷಿಸುವಲ್ಲಿ ಅತ್ಯಂತ ಜಾಣನು ಮತ್ತು ಅನನ್ಯರಾಗಿ ಆರಾಧಿಸುವ ಅಸಾಧಾರಣ ಭಕ್ತರ ಬಯಕೆಗಳನ್ನು ನೆರವೇರಿಸುವದರಲ್ಲಿ ಅತಿಕುಶಲನೆಂದು ಸಕಲಶಾಸ್ತ್ರ ಪುರಾಣೇತಿಹಾಸಗಳಲ್ಲಿ ಅನಾದಿಕಾಲದಿಂದಲೂ ಪ್ರಸಿದ್ಧನಾದ ಅಖಿಲವಿಶ್ವಹಿತಕಾರಿಯಾದ ಸೋಮನಾಥನು ಆ ಪುಣ್ಯಜಾಯಾಪತಿಗಳ ಸ್ಪೃಹಣೀಯವಾದ ಮತ್ತು ಸ್ತುತ್ಯವಾದ ಮನೋರಥವನ್ನು ಪೂರ್ಣಮಾಡಬೇಕೆಂದು ಬಗೆದು ನಯನ ಮನೋಹರವಾದ ಯೌವನಸ್ಥನಾದ ಜಂಗಮ ವೇಷವನ್ನು ತೊಡೆದು ಧರ್ಮಿಷ್ಠರಾದ ರಾಜದಂಪತಿಗಳೆಡೆಗೆ ಬರಲು, ಸತಿಪತಿಗಳು ಮದುವಣಿಗನಂತೆ ಒಪ್ಪುತ್ತಿರುವ ನೂತನ ಚರಮೂರ್ತಿಯ ಅಂಘ್ರಿಗಳಿಗೆ ಅಗ್ಗಣಿಯನ್ನಿತ್ತು ಪಾದಗಳನ್ನು ಚನ್ನಾಗಿ ಒರಿಸಿ ಉಚಿತಾಸನದಮೇಲೆ ಕುಳ್ಳಿರಿಸಿ ಮಂಗಲಸ್ನಾನವನ್ನು ಮಾಡಿಸಿ ಹೆಚ್ಚು ಬೆಲೆಯುಳ್ಳ ಮಡಿಬಟ್ಟೆಗಳನ್ನುಡಿಸಿ ಜೋಡಿಲ್ಲದ ತೀರ್ಥವೆಂದು ಜಗದ್ವಿಖ್ಯಾತವಾದ ಸುಖಮಯವಾದುದರಿಂದಲೇ ಸರ್ವಸಂತ್ಕರವೆನಿಸಿದ ಪಾದತೀರ್ಥವನ್ನು ಸವಿದು ಪರಮಹರ್ಷಿತರಾಗಿ:—ಮಹಾಪಾದವು ಬಿಜಯಂಗೈಸಿದ ಕಾರ್ಯವಾವುದು? ಎಂದು ಕೈಮುಗಿದು ಕೇಳಿದರು. ಆಗಲಾ ವೇಷಧಾರಿಯಾದ ಸದ್ಯೋಜಾತನಾದ ಸರ್ವಾತ್ಮನು:—“ನೀವು ನನಗೆ ಕನ್ಯಾದಾನ ಮಾಡುವದು.'' ಶಿವಭಕ್ತಿ ಪ್ರಭಾವದಿಂದ ಸುಜ್ಞರಾದ ದಂಪತಿಗಳು ಕಾರ್ಯಗೌರವವನ್ನು ತಮ್ಮೊಳಗೆ ಅರಿತು ಆ ಕ್ಷಣವೇ ಲಗ್ನಕ್ಕೊಡಂಬಟ್ಟು ಮಂತ್ರಿಗಳನ್ನು ಕೂಡಲೇ ಕರಿಸಿ ವಿವಾಹ ಮಂಟಪವನ್ನು ಅಣಿಮಾಡುವದಕ್ಕೆ ಅಪ್ಪಣೆಮಾಡಿ ಪುರವನ್ನೆಲ್ಲ ಶೃಂಗರಿಸುವದಕ್ಕೆ ಪರಿಜನರಿಗೆ ಆಜ್ಞಾಪಿಸಿದರು.

ಪ್ರತಿ ಕೈಲಾಸದ ಸಭಾಮಂದಿರವೆನ್ನುವಂತೆ ಪ್ರಕಾಶಮಯವಾದ ಕಲ್ಯಾಣ ಮಂಟಪವು ಮಂಗಲ ಚಿನ್ಹಗಳಿಂದ ರಮಣೀಯವಾಗಿ ಕಂಗೊಳಿಸುತ್ತ ಸೊಬಗಿನ ಸುಗ್ಗಿಯಂತೆ ವಿರಾಜಿಸುವ ಸಮಯದಲ್ಲಿ ಸುಮುಹೂರ್ತವು ಸಾಧಿಸಿ ಬಂದದ್ದನ್ನು ತಿಳಿದು ಶಿವಭಕ್ತರನ್ನು ಆಗಲೆ ಕರೆದು ತಂದು ಮಂಗಲವಾದ್ಯಗಳು ಮೊಳಗುತ್ತಿರುವಾಗ ಮಂಚದ ಮೇಲೆ ವಧುವರರನ್ನು ಮುಹೂರ್ತಗೊಳಿಸಿದರು. ವೇದಘೋಷವು ನಡೆಯಿತು. ಸೌಂದರಪಾಂಡ್ಯ ನೃಪತಿಲಕನು ಮತ್ತು ಮಂಗಾಯಕ್ಕರಸಿನಾಚಿಯರು ಪರಮ ಹರ್ಷಿತರಾಗಿ ಅವರ ಆನಂದಕ್ಕೆ ಸೀಮೆ ಇಲ್ಲದಾಯಿತು. ಮದುಮಗನ ದಿವ್ಯ ಪಾದಗಳನ್ನು ಶರ್ವಾಣಿಯು ಮಜ್ಜನಮಾಡಿ ಸಾಂಗವಾಗಿ ಪೂಜೆಗೈದಳು. ಈ ವಧುವಿನ ತಾಯಿ-ತಂದೆಗಳು ಸುಖಸಾಮ್ರಾಜ್ಯದಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತ ಶಿವಾರ್ಪಿತ, ಶಿವಾರ್ಪಿತವೆಂದು ಕೈ ಎತ್ತಿ ಧಾರೆಯನ್ನೆರೆಯುತ್ತಲೆ ಅಕ್ಷತಾರೋಪಣವಾಯಿತು. ದೇವದುಂದುಭಿಗಳು ಮೊಳಗಿದವು. ಸುರರು ಜಯ ಜಯವೆಂದು ಪಾಡಿದರು. ಸರಸ್ವತೀ ಪತಿಯೂ, ಲಕ್ಷ್ಮೀಕಾಂತನೂ ಬೆರಗಾದರು. ಒಡನೆಯೇ ದೇದೀಪ್ಯಮಾನವಾದ ವರವಿಮಾ

ನವು ಬಂದಿತು. ಆ ದೇವಯಾನದ ಪ್ರಕಾಶದ ತೇಜವು ಲಗ್ನದ ಹಂದರದಲ್ಲಿ ವ್ಯಾಪಿಸಿದ್ದರಿಂದ ಆ ಬೆಳಕನ್ನು ತಡೆಯಲಾರದೆ ನೂತನ ವಧುವರರ ಅತ್ತೆ-ಮಾವಂದಿರ ಹೊರ್ತಾಗಿ ಎಲ್ಲರೂ ಕಣ್ಮುಚ್ಚಬೇಕಾಯಿತು. ಶರ್ವಾಣಿಯು ಶರ್ವನನ್ನು ಹೊಂದಿದಳು. ಧನ್ಯರಾದ ದಂಪತಿಗಳು ಪ್ರಭುವಾದ ಅಳಿಯನಿಂದ ಗಣಪದವಿಯನ್ನು ಪಡೆದರು. ಲಗ್ನಮಂಟಪದಲ್ಲಿ ಪ್ರಭೆಯು ಮೊದಲಿನಷ್ಟೇ ಉಳಿಯಲು ನಿಬ್ಬಣಿಗರೆಲ್ಲರೂ ನೋಡುತ್ತಾರೆ! ತಮ್ಮ ದೊರೆಯು ಇದ್ದಿಲ್ಲ; ರಾಣಿಯು ಕಾಣಿಸದಾಗಿದ್ದಳು; ಮದುಮಕ್ಕಳು ಮಾಯವಾಗಿದ್ದರು; ಆನಂದಕರವಾದ ಪುಷ್ಪವೃಷ್ಟಿಯಾಗಿತ್ತು! ಆಗ ಲಗ್ನಕ್ಕಾಗಿ ಬಂದವರೆಲ್ಲರೂ ಅಹಹಾ ಇದೆಂಥ ಅದ್ಭುತವೂ ಪರಮಾಶ್ಚರ್ಯಕರವೂ ಆದ ಅಪೂರ್ವನೋಟವು! ಶಿವಭಕ್ತರ ಮಹಿಮೆಯೇ ಈ ಪರಿಯು! ಎಂದು ಹರ್ಷಿತರಾಗಿ ಸಾಗಿದರು.



ಓಂ.

# ೪೨. ವೇಳ್ಕುತ್ತರು.



ಮನಸಿಜಾರಿಯಪಾದ ವನಜಮಂಪೊತ್ತು ಪಾ । ವನತೆಯಿಂದರಸುತನ
ವಾಂತ ವೇಳ್ಕುತ್ತ । ರೆನಗೆ ಸಂಪದದೊಳಿರಿಸುವದು ॥

[ಶ್ರೀ ನಿಜಗುಣರು]



ಆಸ್ತಿಕ್ಯದ ಬೀಡಾಗಿಯೂ, ಭೂದೇವಿಗೆ ತಿಲಕಪ್ರಾಯವಾಗಿಯೂ ಒಪ್ಪುವ ಚೋಳಧರೆಯಲ್ಲಿ ಧನಧಾನ್ಯ ಸಂಪತ್ತಿನಿಂದಲೂ, ಶಿವಭಕ್ತಸಮೂಹದಿಂದಲೂ ವಿಖ್ಯಾತವಾದ ಮಣಿಮಂದಪತ್ತೂರ ಎಂಬ ಪುರವು ಪಾವನಶೀಲೆಯಾದ ಕಾವೇರಿಯ ಧಡದಲ್ಲಿ ಶೋಭಿಸುತ್ತಿತ್ತು. ಶೈವರಿಂದ ಭೂಷಿತವಾದ ಆ ಪಟ್ಟಣದಲ್ಲಿ ಹರಗುರುಪರಾಯಣನಾದ ವೇಳ್ಕುತ್ತನೆಂಬ ಶೈವನು ರಂಜಿಸುತ್ತಿದ್ದನು.

ಗುರುವೇ ಹರನೆಂದು, ಗುರುವಿಗೂ ಭವನಿಗೂ ಅಭಿನ್ನಭಾವವನ್ನು ತಳೆದು ಗುರುವೇ ಸಕಲಸೌಭಾಗ್ಯ ಸರ್ವಸ್ವವೆಂದು ಎಣಿಸಿ, ಗುರುವೇ ಸದ್ಗತಿಗೆ ಕಾರಣನೆಂದು ಗುರುವಿನಲ್ಲಿಯೇ ಕಲ್ಯಾಣೋತ್ಪತ್ತಿಯೆಂದು, ಗುರುವೇ ಸಕಲ ಚೈತನ್ಯ ಸ್ವರೂಪನೆಂದು, ಗುರುವೇ ಮುಕ್ತಿಬೀಜನು ಅಂದರೆ ಮಾತೆಯ ಸ್ತನ್ಯಪಾನಕ್ಕೆ ಮರಳಿ ಬಾರದಂತೆ ಮಾಡುವ ಸಮರ್ಥ ಪುರುಷ ಶ್ರೇಷ್ಠನು ಎಂದು, ಗುರುವಿನ ಡಿಯೇ ಕೈಲಾಸಸ್ಥಾನವೆಂದು, ಗುರುವಿನಿಂದಧಿಕ ವಸ್ತುವೆ ವಿಶ್ವದಲ್ಲೆಲ್ಲೂ ದೊರೆಯದೆಂದು ಧೃಡವಾಗಿನಂಬಿ ಇದೇವಾಸನೆಯು ಚನ್ನಾಗಿ ಬೇರೂರಿ (ಅಂಗಾಂಗಗಳಲ್ಲಿ ರೋಮರೋಮಗಳಲ್ಲಿಯೂ ಕೂಡ ಬಿಡದಂತೆ) ವ್ಯಾಪಿಸಿರುವ ವ್ಯಕ್ತಿಗಳಿಗೆ ಆರ್ಯರು ಗುರುಭಕ್ತರೆಂದು ಅನಾದಿಕಾಲದಿಂದಲೂ ಕರೆಯುತ್ತಿರುವರು.

ಆ ಊರಲ್ಲಿ ಬ್ರಹ್ಮಸಿಷ್ಠರಾದ, ಸತ್ಯಸನ್ಮಾರ್ಗವನ್ನು ಭಕ್ತಸಮೂಹಕ್ಕೆ ಆಚರಿಸಿ ತೋರಿಸುತ್ತಿರುವ ಶೈವಾಚಾರ್ಯರಿಂದ ಗುರುಭಕ್ತನಾದ ಚರಿತ್ರನಾಯಕನು ಸದುಪದೇಶವನ್ನು ಪಡೆದು ಆ ಪೂಜ್ಯರ ಕಾರುಣ್ಯವನ್ನು ಪಡೆದು ಆ ಪುರುಷಮಣಿಯೇ ಪರಾಪತಿಯ ಪ್ರತಿರೂಪನೆಂದು ಎಣಿಸಿ ಮನೋವಾಕ್ಕಾಯಗಳಿಂದ ಕೈಂಕರ್ಯವನ್ನು ವಹಿಸಿ, ಶಿಷ್ಯಭಾವದಿಂದ ಗುರ್ವಾಜ್ಞೆಯನ್ನು ಮೀರದೆ ಗುರುಸೇವೆ, ಗುರು ಶೂಶ್ರೂಷಗಳೇ ಪಾದೋದಕ ಪ್ರಸಾದವೆಂದು ನಿರ್ಧರಿಸಿ ಆ ರೀತಿ ನಡೆಯುತ್ತ ಗುರುಗಳೆಡೆಯಲ್ಲಿ ನಮಾನನ, ಸುಮುಪಜ್ಞತಿಯಾಗಿ ಕುಳ್ಳಿರದೆ ಅಹಂಕಾರ ಮಮಕಾರಕ್ಕೊಳಗಾಗದೆ ಆ ವರಗುರುವಿನ ಬಳಿಸಾರ್ದು ಆ ಮಹಿಮನ ಸಾನ್ನಿಧ್ಯದಲ್ಲಿದ್ದು ತ್ರಿಕರಣಗಳಿಂದಲೂ ಪರಿಶುದ್ಧವಾದ ಭಾವದಿಂದ ಭಾರ್ಯಾಸುತರ ಪರವೆಯನ್ನು ಮರೆದು ಹಗಲಿರುಳಲ್ಲಿಯೂ ಗುರುಪಾದ ಭಕ್ತಿಯಲ್ಲಿ ಆಸಕ್ತಿಯುಳ್ಳವನಾಗಿ ಗುರು ಮರುಳನಾಗಿ ಗುರು ಮಂದಿರದ ಬಾಗಿಲವನ್ನೇ ಕಾಯುತ್ತಿದ್ದನು. ಈ ನಿಜಭಕ್ತನ ನಿಷ್ಕಪಟವಾದ ಮನೋಗತವನ್ನೆಲ್ಲ ಗುರುಗಳು ತಿಳಿದು ಮನಕರಗಿದವರಾಗಿ ಕನಿಕರಗೊಂಡು ತಮ್ಮ ಶಿಷ್ಯನನ್ನು ಪಾದಸನ್ನಿಧಿಯಲ್ಲಿ ಕರೆದು, ಆತನಿಗೆ ಗುರುವಚನವನ್ನು ಪಾಲಿಸಬೇಕೆಂದು ಮತ್ತು ಅದನ್ನು ಖಂಡಿತವಾಗಿಯೂ ಅತಿಕ್ರಮಿಸಬಾರದೆಂದು ಚನ್ನಾಗಿ ಕಟ್ಟುಮಾಡಿ ಎಲೆ ಮಗನೇ ನೀನು ನಮ್ಮನ್ನು ಬಿಟ್ಟಿರದಾಗದಿದ್ದರೆ ನಮ್ಮ ಆವುಗೆಗಳನ್ನು ತೆಗೆದುಕೊಂಡು ನಿನ್ನ ಮನೆಗೆ ಹೋಗಿ ಶಿವಭಕ್ತನಾಗಿ ಬಾಳುವದೆಂದು ಪಾದುಕೆಗಳನ್ನು ಕರುಣಿಸಿದರು. ಆಗ ಕಥಾನಾಯಕನು ಹಸಾದವೆಂದು ಗುರುಗಳಿಗೆ ಪೊಡಮಟ್ಟು ಅವರ ಅಪ್ಪಣೆಯನ್ನು ಪಡೆದು ತನ್ನ ಶಿರಕಮಲದಲ್ಲಿ ಪಾದುಕೆಗಳನ್ನು ಧರಿಸಿಕೊಂಡು ಬಲವಾದ ಮತ್ತು ಸೂಕ್ಷ್ಮವಾದ ಎಳೆಗಳಿಂದ ಬಿಗಿದು ಕಟ್ಟಿ ಮನೆಗೆ ಬಂದು ನಿತ್ಯದಲ್ಲಿಯೂ ಕ್ರಮವಾಗಿ ಆ ಆವುಗೆಗಳೇ ಗುರುವೆಂದು

ಅರ್ಚಿಸುತ್ತ ತನ್ನ ಕಾಯಕವನ್ನು ಮಾಡುತ್ತ ಶಿವಾನಂದ ಪರನಾಗಿರುತ್ತ ಎಷ್ಟೋ ಸಂವತ್ಸರಗಳನ್ನು ಕಳೆದನು.

ಬಹಳ ನಸುಕಿನಲ್ಲಿ ಎದ್ದು ಒಂದು ದಿವಸ ಗೌರೀಶನನ್ನು ನೆನೆಸುತ್ತ ಗುರುಗಳನ್ನು ಸ್ಮರಿಸುತ್ತ ಹೊಳೆಗೆಬಂದು ಆ ಕಾವೇರಿಯಲ್ಲಿ ಮಿಂದು ಭಸ್ಮ ರುದ್ರಾಕ್ಷಗಳನ್ನು ವಿಧ್ಯುಕ್ತವಾಗಿ ತಳೆದು ಗುರು ಶಿವಾಂಘ್ರಿ ಧ್ಯಾನವನ್ನು ಮಾಡಿ ತನ್ನ ಮಸ್ತಕದಲ್ಲಿ ಧರಿಸಿದ ಶ್ರೇಷ್ಠವಾದ ಆವುಗೆಗಳನ್ನು ಉಕ್ಕೇರಿದ ಭಕ್ತಿಯಿಂದ ಸಕ್ರಮವಾಗಿ ಪೂಜಿಸಿ ನಲಿಯುತ್ತಿರುವಾಗ ಸರ್ವ ವೇದ್ಯನಾದ ಕೃಪಾರಸ ಮೂರ್ತಿಯಾದ ಶಿವಾವಲ್ಲಭನು ಭಕ್ತಲಲಾಮನ ನಡೆಗೆ ಮೆಚ್ಚಿದವನಾಗಿ ಪ್ರತ್ಯಕ್ಷನಾಗಲು ಮಸ್ತಕದಲ್ಲಿ ಗುರುಪಾದುಕೆಗಳುಂಟೆಂದು ಆ ದೇವೋತ್ತಮನಾದ ದೇವಸಿಂಹನಿಗೆ ತಲೆಬಾಗಿ ನಮಸ್ಕರಿಸದೆ ವಿನಯವಾಗಿ ಸಂತೋಷಚಿತ್ತನಾಗಿ ನಿಂತನು. ಈ ಪರಿಯಾಗಿರುವ ಕಥಾಪುರುಷನನ್ನು ಕಂಡು ಗಂಗಾಧರನು.—ಎಲೈ ಭಕ್ತನೇ ಹರಿಬ್ರಹ್ಮರಿಗೆ ದುರ್ಲಭವಾದ ನಾನು ಬಂದಿರುವಾಗ ಆನತನಾಗದೆ ಸುಮ್ಮನಿರುವದೇ? ಆಗ ನಮ್ಮ ವರಭಕ್ತನು:—ಶಂಕರನೇ, ವರಗುರುವೇ ಘನಲಿಂಗವೆಂದು ಸಾರುವ ಆಗಮೋಕ್ತಿಯನ್ನು ಅನುಸರಿಸಿ ನಿನ್ನ ಸ್ವರೂಪವನ್ನೇ ಅನುದಿನವೂ ಸಾನಂದನಾಗಿ ಪೂಜಿಸುತ್ತಿರುವೆನು; ಅದುವೇ ನಿನ್ನ ಪೂಜೆಯಲ್ಲವೇ? ಆ ಪಾದ ಪ್ರದಕ್ಷಿಣೆ ನಮಸ್ಕಾರಗಳು ಅನವರತವೂ ನಿನಗೆ ಅರ್ಪಣವಾಗುವದಿಲ್ಲವೇ? ನನ್ನ ತಲೆಯಮೇಲಿರುವ ಪಾದುಕೆಗಳೇ ನಿಮ್ಮ ಅಡಿದಾವರೆಗಳಲ್ಲವೇ? ಆಗ ಪುಣ್ಯಾತ್ಮನಾದ ಅನ್ನಪೂರ್ಣಾಪತಿಯು ಚರಿತ್ರಪುಂಗವನ ಗುರುನಿಷ್ಠಾ ಛಲಕ್ಕೆ ಹರ್ಷಿತನಾಗಿ ಆತನಿಗೆ ಗಣಪದವಿಯನ್ನು ಅನುಗ್ರಹಿಸಿದನು.

ಪಾಠಕಮಹಾಶಯರಲ್ಲಿ ಗುರುಭಕ್ತಿಯು ವೃದ್ಧಿಗೊಂಡು ಶಾಶ್ವತವಾದ ಸುಖವನ್ನು ಹೊಂದಲೆಂದು ವಿಶ್ವ ಗುರುಮೂರ್ತಿಯನ್ನು ಲೇಖಕನು ಪ್ರಾರ್ಥಿಸುವನು.



ಓಂ.

# ೪೩. ಕುಲಚಂಗರು.



ಮಲಹರನ ಶಿರಿ ಮುಡಿಗೆ ಸಲುವಲರ ದೆಗೆದ ನಿಜ । ಲಲನೆಯ ಸುಪಾಣಿ
ಯನು ತುಂಡಿಸಿದ ಮಹಾ । ಕುಳಚಂಗರೆನ್ನ ಕರುಣಿಪುದು ॥

[ಶ್ರೀ ನಿಜಗುಣರು]



ವಭಕ್ತತತಿಯಿಂದೊಪ್ಪುವ ಚೋಳಧರಿತ್ರಿಯಲ್ಲಿ ತಿರುವೆಯ್ಯೂರೆಂಬ ಸತ್ಪುರವು ಶಿವಾಲಯಗಳಿಂದಲೂ, ಶೈವವ್ರಜದಿಂದಲೂ, ಪೂದೋಟಗಳಿಂದಲೂ ನೆರೆ ಶೋಭಿಸುತ್ತಿತ್ತು. ಆ ಪಟ್ಟಣವೇ ಕುಲಚಂಗನೆಂಬ ದೊರೆಯ ಸ್ಥಾನವು. ಆ ಶೈವ ಪುಂಗವನು ಸಕಲ ಕ್ಷೇತ್ರಜ್ಞನೆನಿಸಿದ ಶಂಕರನ ಪರಮಭಕ್ತನು, ನಿರ್ದುಷ್ಟವಾದ ನಡೆಯುಳ್ಳವನು, ಸತ್ಪುರುಷರಿಂದ ಅಂಗೀಕರಿಸಲ್ಪಟ್ಟ ಮಾರ್ಗಾವಲಂಬಿಯು, ರಾಜನೀತಿವಿಶಾರದನು, ಸತ್ಪಾತ್ರದಲ್ಲಿ ಮುಂದೊರೆದವನು, ಜಂಗಮಾವಳಿಗೆ ಅಪೇಕ್ಷಿತ ವಸ್ತುಗಳನ್ನು ಪೂರೈಸುವ ದಾನಶಾಲಿಯು; ಈ ರೀತಿಯಾಗಿ ಸದ್ವರ್ತನಶೀಲನಾದುದರಿಂದ ಪ್ರಜಾರಂಜಕನಾಗಿ ಸರ್ವಶಕ್ತಿಧರನ ವೀರಬಂಟನಾಗಿ ಮೆರೆಯುತ್ತಿದ್ದನು.

ಕಥಾನಾಯಕನು ದಿನಾಲು ತನ್ನ ತೋಟಕ್ಕೆ ಹೋಗಿ ಚಲ್ವಾದ ಬಿಲ್ವದಳಗಳನ್ನು ಹಾಗೂ ಇನ್ನಿತರ ಪೂಜಾಯೋಗ್ಯವಾದ ಪಲ್ಲವಗಳನ್ನು ಮತ್ತು ಹುಳುಗಳಾಗಲಿ ಇಲ್ಲವೆ ಬೇರೆ ಪ್ರಾಣಿಗಳಾಗಲಿ ಮುಟ್ಟದೆ ಇರುವ ಆಗ ತಾನೆ ಅರಳಲನುವಾದ ಮಕರಂದ ಯುಕ್ತವಾದ ಕಣ್ಗೆಸೆವ ಉತ್ತಮವಾದ ಹೂವುಗಳನ್ನು ತಂದು ಸರಗಳನ್ನು ಹೆಣೆದು ಶಿವಾಗಾರಕ್ಕೆ ಬಂದು ನಿರ್ಮಲವಾದ ಪರಿಮಳೋದಕದಿಂದ ಪರಿಶುದ್ಧವಾದ ಭಕ್ತಿಯಿಂದ, ಶುದ್ಧ ವಿಗ್ರಹನೆಂದು ಪ್ರಖ್ಯಾತನೆನಿಸಿದ ಮಹಾದೇವನಿಗೆ ಅಭಿಷೇಕವನ್ನು ಮಾಡಿ, ಭಸ್ಮರುದ್ರಾಕ್ಷಾದಿಗಳನ್ನು ಧರಿಸಿ ಪತ್ರಾದಿ ಕುಸುಮಮಾಲೆಗಳನ್ನು ಸಮರ್ಪಿಸಿ ಸುಲಲಿತವಾದ ಗಂಧದ್ರವ್ಯಗಳನ್ನು ನಿವೇದಿಸಿ ಸಕ್ರಮವಾಗಿ ಪೂಜೆಯನ್ನು ಸಾಂಗಗೊಳಿಸಿ ಹರ್ಷಪಡುತ್ತ ಭೂರುದ್ರ

ರೆನಿಸುವ ಚರತಿಂತಿಣಿಗೆ ಸನ್ಮಾನಿಸುತ್ತ ಅವರ ಬಯಕೆಗಳನ್ನು ಕೊನೆಗಾಣಿಸುತ್ತ ಕೆಲವು ಸಂವತ್ಸರಗಳನ್ನು ಕಳೆದನು.

ಶಿವಾನಂದಪರನಾದ ಚರಿತ್ರ ಪುರುಷನು ಒಂದುದಿನ ರಾತ್ರಿ ಮಲಗುವಾಗ ಶಿವಧ್ಯಾನ ಮಧುವನ್ನು ಸವಿಯುತ್ತಿರುವಾಗಲೆ ನಿದ್ರೆ ಹತ್ತಿ ಇನ್ನೂ ತಾರೆಗಳು ಇರುವಾಗಲೆ ಅರುಣೋದಯಕ್ಕೆ ಮುಂಚಿತವಾಗಿ ಎದ್ದು ಪ್ರಮಥರನ್ನು ಸ್ಮರಿಸುತ್ತ ತನ್ನ ಪುಷ್ಪೋದ್ಯಾನಕ್ಕೆ ಹೋಗಿ ಪರಿಶುದ್ಧವೆನಿಸುವ, ಮುಟ್ಟಿದರೆ ಮಾಸುವಂಥ, ಕೋಮಲವಾದ ತಳಿರುಗಳನ್ನು ಮತ್ತು ಘಂಟಾರವ ಪ್ರಿಯನಾದ ಈಶನಿಗೆ ಪ್ರೀತಿಕರವಾದ ಸುಗಂಧ ಯುಕ್ತವಾದುದರಿಂದ ಪರಿಮಳಿಸುವ ಹೂವುಗಳನ್ನೆಲ್ಲ ತಂದು ನಿಜಕಾಂತೆಯೊಡನೆ ತಿರುವಯ್ಯೂರಾಧಿಪತಿಯ ಶಿವನಿಲಯಕ್ಕೆ ಶುಚಿರ್ಭೂತನಾಗಿ ಬಂದು ಪುಷ್ಪ ಮಾಲಿಕೆಗಳನ್ನು ಅಂದವಾಗಿ ಮಾಡಿ ಸುಖಾಸನವನ್ನು ಹಾಕಿ ಶಿವನಾಮೋಚ್ಚಾರಣೆಯನ್ನು ಮಾಡುತ್ತ ಆಯಾಸ್ಥಾನಗಳಲ್ಲಿ ವಿಭೂತಿಯನ್ನು ತಳೆಯುತ್ತ ವಿಧ್ಯುಕ್ತವಾಗಿ ರುದ್ರಾಕ್ಷಗಳನ್ನು ಧರಿಸಿಕೊಳ್ಳುವ ಸಮಯದಲ್ಲಿ, ಆತನ ರಾಣಿಯು ಆ ಹೂವುಗಳ ಚಿತ್ತಾಕರ್ಷಕವಾದ ಕಂಪಿನಿಂದ ಬಲವಾಗಿ ಎಳೆಯಲ್ಪಟ್ಟವಳಾಗಿ ಯುಕ್ತಾಯುಕ್ತವೆಂಬ ವಿಚಾರವನ್ನು ಮಾಡದೆ ಆ ಸರಗಳಲ್ಲಿ ಒಂದನ್ನು ತನ್ನ ಮುಡಿಗಾಗಿ ತೆಗೆದು ಇಟ್ಟುಕೊಂಡಳು. ಶಿವಾರ್ಚನೆಗಾಗಿ ಲಿಂಗಸಾನ್ನಿಧ್ಯದಲ್ಲಿ ಮಡಗಿದ ಪೂಮಾಲೆಗಳ ಸಮುಪಯೋಗವಾಗಲಿಲ್ಲವೆಂದು ತಿಳಿದು ಕಡುಮುಳಿದು.—ಶಿವ, ಶಿವ, ದೇವ-ದೇವನಿಗೆಂದು ಮುಡುಪಾಗಿ ತೆಗೆದಿಟ್ಟ ಶಿವದ್ರವ್ಯವಾದ ವರಮಾಲಿಕೆಯು ನಿರರ್ಥಕವಾಯಿತಲ್ಲವೇ ನನ್ನ ವ್ರತವು ಕೆಟ್ಟಿತೆಂದು ಕಂಗೆಟ್ಟು ಕೋಪಾತಿರೇಕವನ್ನು ತಾಳಿ ತಟ್ಟನೆ ಅವಳ ಪತಿಯು ಎದ್ದು ಅಲ್ಲಿಯೇ ತೂಗುಬಿಟ್ಟಿರುವ ಖಡ್ಗದಿಂದ ಆಕೆಯ ಹಸ್ತವನ್ನು ಸವರಿಬಿಟ್ಟನು. ಆತನ ಈ ಉಗ್ರವಾದ ಛಲಕ್ಕೆ ಜಾಹ್ನವೀ ಭೂಷಿತನು ಮೆಚ್ಚಿ ಆಗಲೇ ನಿಜರೂಪದಿಂದ ವರಭಕ್ತನಿಗೆ ಪ್ರಕಟನಾದನು. ಚರಿತ್ರ ಪುಂಗವನು ಪರಮಾನಂದಪಟ್ಟು ಮಹಾಚರಣ ಕಮಲಗಳಿಗೆರಗಿ ಪರಿಪರಿಯಿಂದ ಸ್ತುತಿಸಿ ವ್ಯೈಮರೆಯುತ್ತಿರಲು, ಅಗಣ್ಯನಾದ ಗಿರಿಜಾರಮಣನು ಆತನನ್ನು ವ್ಯೈದಡವಿ ಸಂತೈಸಿ ನಿತ್ಯಾನಂದಮಯವಾದ ಗಣಪದವಿಯನ್ನು ಕರುಣಿಸಿದನು.

  

ಓಂ.

# ೫೫. ಸಾಂಖ್ಯನಾಯರು.



ಕಡುನೇಹದಿಂ ಕಲ್ಲೊಳಿಡೆ ಪೂಜೆಗೆಂದೀಶ । ನೊಡನೊಲಿವನೆಂದು ಜಗಕೆ
ಸಾರಿದಸಾಂಖ್ಯ । ರಡಿಗಳಿರಲೆನ್ನ ಶಿರದಲ್ಲಿ ॥

[ಶ್ರೀ ನಿಜಗುಣರು]




ಲೋಚನನಾದ ವಿಶ್ವೇಶ್ವರನ ಭೂಲೋಕದಲ್ಲಿಯ ತಾಣವೆಂದರೆ ಚೋಳ ಧರಣಿಯೇ ಸರಿ ಎಂದು ಕೈಯೆತ್ತಿ ಹೇಳುವ ಹಾಗೆ ಆ ಅವನಿಯು ಶಿವಭಕ್ತಿಯು ಅಳವಟ್ಟ ಮಾನವರಿಂದ ಅಲಂಕರಿಸಲ್ಪಟ್ಟಿದ್ದುದರಿಂದ ಉನ್ನತವಾದ ಗೋಪುರಗಳಿಂದ ಶೋಭಿಸುವ ಶಿವನಿಲಯಗಳಿಂದಲೂ, ಭವ್ಯವಾದ ಹರಮಂದಿರಗಳಿಂದಲೂ ಆ ಭಕ್ತತಿಂತಿಣಿಯ ಶಿವಾರ್ಪಣೆಗಾಗಿಯೇ ಏನೋ ಎಂಬಂತೆ ಆ ಧರೆಯು ತರತರದ ಬೆಳಸುಗಳಿಂದಲೂ, ಸಕಲ ಫಲವೃಕ್ಷಗಳಿಂದಲೂ, ತಟಾಕಾದಿ ಜಲನಿಧಿಗಳಿಂದಲೂ ರಂಜಿಸುತ್ತಿದ್ದುದರಿಂದ ಆ ಸೊಬಗನ್ನು ಇಷ್ಟೇ ಎಂದು ವರ್ಣಿಸುವದು ದುಸ್ತರವು. ಈ ರಮಣೀಯವಾದ ನಾಡಿನಲ್ಲಿ ಆರೂರೆಂಬ ನಗರವು ವಿವೇಕ ಸಂಪನ್ನರಾದ ಮಹಾಶಯರಿಂದಲೂ, ಶಿವಾರಾಧನಪರರಾದ ವರಭಕ್ತರಿಂದಲೂ, ಘನವಾದ ಶಿವಾಲಯಗಳಿಂದಲೂ ಚಿತ್ತಾನಂದಕರವಾಗಿ ಒಪ್ಪುತ್ತಿತ್ತು. ಆ ಊರಸುತ್ತಲು ವಾರಿಯ ವಿಪುಲತೆಯು ಹೆಚ್ಚಾಗಿದ್ದುದರಿಂದ ತೋಟಪಟ್ಟಿಗಳು, ಪಶುಗಳಿಗಾಗಿಯೆ ಕಾಯ್ದಿಟ್ಟ ಹುಲ್ಲಿನ ಹಕ್ಕಲುಗಳು ಎಸೆಯುತ್ತಿದ್ದುದರಿಂದ ಆ ಪುರದ ಸೌಂದರ್ಯವು ಇಮ್ಮಡಿಯಾಗಿ ಕಂಗೊಳಿಸುತ್ತಿತ್ತು.

ಮನುಜನು ಯಾವ ಕಾಯಕವನ್ನಾದರೂ ಕೈಕೊಳ್ಳಲಿ ಆವೃತ್ತಿಯು ಪ್ರಾಣಿಮಾತ್ರಕ್ಕೆ ಹಾನಿಯನ್ನು ತರದೆ, ಪಾಪಕ್ಕೆ ಅನುವುಗೊಡದೆ ಜೀವಿಗಳಿಗೆ ಒಳಿತನ್ನುಂಟುಮಾಡಿ ಶಿವ ಸೇವೆಗಾಗಿ ಸ್ವಲ್ಪಾಗಲಿ, ಬಹಳವಾಗಲಿ, ಫಲವನ್ನು ಕೊಡುವದಾದರೆ ಆ ಕಜ್ಜವು ಪ್ರಶಸ್ತವಾದುದು ಎಂದು ಹೇಳಲಿಕ್ಕೆ ಯಾವ ಅಭ್ಯಂ

ತರವೂ ಇಲ್ಲ, ಆದರಲ್ಲಿ ಉಚ್ಚ ನೀಚ ಕಲ್ಪನೆಗೆ ಎಡೆಗೊಡಬಾರದು. ಇದೇ ನಮ್ಮ ಪೂರ್ವಿಕರ ಮತವು.

ನಮ್ಮ ಕಥಾನಾಯಕನಾದ **ಸಾಂಖ್ಯನು** ದನಗಾಹಿಯಾಗಿದ್ದನು. ಗೋವುಗಳನ್ನು ಚನ್ನಾಗಿ ಮೇಯಿಸಿ, ತಿಳಿನೀರನ್ನು ಕುಡಿಸಿ, ಅವುಗಳ ಆರೈಕೆಯನ್ನು ಕಾಲವನ್ನರಿತು ಮಾಡಿ ಮುಚ್ಚಂಜೆಯಲ್ಲಿ ಮನೆಗೆ ತಂದು ಬಿಡುತ್ತಿದ್ದನು. ತನಗೆ ಬರುವ ಅಲ್ಪ ಧನದಿಂದಲೆ ಶಿವಭಕ್ತರನ್ನು ಬಹುಮಾನಿಸುತ್ತ ಈಶಭಕ್ತಿಯಲ್ಲಿ ಓಲಾಡುತ್ತಿದ್ದನು. ಈತನ ಪೂಜಾಕ್ರಮವು ಅಪೂರ್ವವಾದುದಾಗಿತ್ತು. ಪತ್ರಿ ಪುಷ್ಪಗಳಿಂದ ಗಣನಾಥನಾದ ಉಮಾಕಾಂತನನ್ನು ನರರು, ಸುರರು, ದಾನವರು ಮೊದಲಾಗಿ ಸಮಸ್ತ ವ್ಯಕ್ತಿಗಳು ಪೂಜೆಯನ್ನು ಮಾಡುತ್ತಿರುವರಷ್ಟೆ. ಆದರೆ ನಮ್ಮ ಚರಿತ್ರನಾಯಕನಿಗೆ ಪೂರ್ವವಾಸನಾಬಲದಿಂದ ಪ್ರಪಂಚಕ್ಕೆಲ್ಲ ಈಶ್ವರನೆನಿಸಿದ ಶಂಕರನಲ್ಲಿ ಅನುರಾಗವು ಉಂಟಾಗಿ ದನಗಳನ್ನು ಮೇಯಿಸುವ ಅಡವಿಗೆ ಹೋಗಿರುವಾಗ ಅಲ್ಲಿಯ ಬಯಲಲ್ಲಿರುವ ಶಿವಲಿಂಗವನ್ನು ನೋಡಿ ಪ್ರೀತಿಸುತ್ತ, ಉಲ್ಹಾಸವನ್ನು ಹೊಂದುತ್ತ, ಒಡೆಯನೇ ಎಳೆ ಎಳೆ ಕಲ್ಲುಗಳಿಂದ ನಿನ್ನ ಪೂಜೆಯನ್ನು ಮಾಡಬೇಕೆಂದು ನನ್ನಲ್ಲಿ ಪ್ರೇಮವು ಅಂಕುರಿಸುತ್ತದೆ. ನನ್ನ ಅಂತರಾತ್ಮನು ಹೀಗೆ ಸೂಚಿಸುವದರಿಂದ ಹಾಗೆಯೆ ನಿನ್ನ ಸೇವೆಯನ್ನು ಕೈಗೊಳ್ಳುವೆನೆಂದು ಬಗೆದು ಆ ರೀತಿಯಲ್ಲಿ ಶಿವಾರಾಧನೆಯನ್ನು ತಪ್ಪದೆ ಮಳೆ, ಚಳಿ, ಬಿಸಿಲುಗಳ ಪರವೆಯಿಲ್ಲದೆ ದಿನಾಲು ನಿಯಮದಿಂದ ಮಾಡುತ್ತಿದ್ದನು. ದೇವರಿಗೆ ಧರಿಸಿದ ಕಲ್ಲುಗಳನ್ನು ನಿರ್ಮಾಲ್ಯವಾಗಿ ತಿಳಿದು ಬೇರೆ ಸ್ಥಳದಲ್ಲಿ ಇಡುತ್ತ ಪ್ರತಿದಿವಸ ಹೊಸ ಹೊಸ ಕಿರಿ ಕಲ್ಲುಗಳನ್ನು ಹುಡುಕಿ ತಂದು ಬಹು ಭಕ್ತಿಯಿಂದ ಅರ್ಚಿಸುತ್ತಿದ್ದನು. ಕಥಾಪುರುಷನು ದ್ವಿಜರಲ್ಲಿ ಜನಿಸಿದವನಲ್ಲವು; ಹೇಳಿಕೇಳಿ ಪಶುಪರಲ್ಲಿ ಹುಟ್ಟಿದವನು. ದನಕಾಯುವದೇ ಆತನ ಕಾರ್ಯವು ಈತನಿಗೆ ಪೂಜಾಕ್ರಮವನ್ನು ತಿಳಿಸುವವರಾದರೂ ಯಾರು? **ಪರಮನು** ಈತನಿಗೆ ಪ್ರೇರಿಸಿದುದೇ ವಿಧಾನಕ್ರಮವು. ಆ ವಿಧಿಯೆಂದರೆ ಲಿಂಗಮಸ್ತಕದ ಮೇಲೆ ಅಕ್ಕರದಿಂದ ಕಲ್ಲುಗಳನ್ನಿಡುವದು. ಈ ರೀತಿಯಾಗಿ ಶಿವಾರ್ಚನೆಯನ್ನು ಮಾಡುತ್ತ ಅದರಿಂದಾಗುವ ಆನಂದವನ್ನೆಲ್ಲ ಮಹಾದೇವನಿಗೆ ನಿವೇದಿಸುತ್ತ ಕೆಲವು ವರ್ಷಗಳನ್ನು ಕಳೆದನು.

ಸುಖಪ್ರದನೆನಿಸಿದ, ವಾಗೀಶನೆನಿಸಿದ ಕಾಲಾರಿಯೆಂದು ಖ್ಯಾತನಾಗಿರುವ ತ್ರಿಪುರಹರನು ನಮ್ಮ ಚರಿತ್ರಪುಂಗವನ ವಿಚಿತ್ರತರವಾದ ಕಕ್ಕುಲತೆಯ ಸೇವೆಗೆ ಸಂತುಷ್ಟಿಯನ್ನು ಹೊಂದಿ ಅವನ ಛಲವನ್ನು ಪರೀಕ್ಷಿಸಬೇಕೆಂದು ಬಗೆದು ಆ ಭಕ್ತನಿಗೆ ಕೋಮಲವಾದ ಕಲ್ಲುಗಳು ಆ ಸೀಮೆಯಲ್ಲಿ ದೊರೆಯದಂತೆ ಮಾಡಿ

ದನು. ಎಷ್ಟು ಯೋಜನ ನೋಡಿ ಆರಿಸಿದರೂ ಅವು (ಕಿರಿಕಲ್ಲುಗಳು) ಕಾಣ ಲಿಲ್ಲ. ಪೂಜೆಯನ್ನು ಮಾಡದೆ ಆತನಿಗೆ ಊಟಮಾಡಲಿಕ್ಕೆ ಸರಿಕಾಣಲಿಲ್ಲ. ಹೀ ಗಾಗಿ ಆತನು ಇಪ್ಪತ್ತು ಉಪವಾಸಗಳನ್ನು ಮಾಡಿದನು. ಆಗ ಸರ್ವಸೂತ್ರ ನಾಯಕನ ಸಂಕೇತಕ್ಕನುಗುಣವಾಗಿಯೋ ಏನೋ ಸಾಂಖ್ಯನಿಗೆ ಒಂದು ಮನೋ ಹರವಾದ ದೊಡ್ಡಕಲ್ಲು ಗೋಚರವಾಯಿತು. ಆಗ ಅದನ್ನು ಈ ಭಕ್ತನು ಕಂಡು ಅತಿ ಸಂತೋಷಪಟ್ಟು ಇಪ್ಪತ್ತುದಿವಸದ ಪೂಜೆ ನಿಂತದ್ದು ಈ ಶ್ರೇಷ್ಠವಾದ ಕಲ್ಲಿ ನಿಂದ ಸಾಂಗವಾಗಿ ಕೊನೆಗಾಣುವದೆಂದು ಉಬ್ಬಿದವನಾಗಿ ತನ್ನ ಬಲವಾದ ಎರ ಡೂ ತೋಳುಗಳನ್ನು ನೀಡಿ ಸಾಮರ್ಥ್ಯದಿಂದ ಮೇಲಕ್ಕೆತ್ತಿ ಭಕ್ತ್ಯಾತಿರೇಕದಿಂದ ಲಿಂಗದ ತಲೆಯಮೇಲೆ ಇರಿಸುತ್ತಿರುವಷ್ಟರಲ್ಲಿ ಈ ನೂತನ ಅರ್ಚನೆಯ ಕ್ರಮಕ್ಕೆ ಪ್ರಾಣಿಗಳ ಅಂತರಂಗವನ್ನು ಪರಿಶೀಲಿಸುವ ಜಾಣನಾದ ಮಹೇಶ್ವರನು ಒಡನೆ ಯೇ ಆತನ ಸಾಹಸವನ್ನು ಸಿಲ್ಲಿಸಿ ನಿಜರೂಪದಿಂದ ಪ್ರಕಟನಾದನು. ಸೂ ರ್ಯೋದಯವಾದೊಡನೆ ಕಮಲಗಳು ವಿಕಸಿತವಾಗುವಂತೆ, ದಿನಕರನು ಉದ ಯವಾಗಲು ಪ್ರಾಣಿಗಳು ಉತ್ಸಾಹವನ್ನು ತಳೆಯುವಂತೆ ಪ್ರಸನ್ನನಾದ ಮಂಗ ಲನಿಧಿಯ ದರ್ಶನವಾದೊಡನೆ ಚರಿತ್ರಪುಂಗವನ ಭಕ್ತಿಯು ಅನಂತವಾಗಿ ಹೆಚ್ಚಿ ಬಾರಿಬಾರಿಗೂ ಆ ಮಹಿಮನನ್ನು ಸ್ತುತಿಸುತ್ತ ಎಡಬಿಡದೆ ಎರಗುತ್ತ ಶಿವಾನಂದ ಪರವಾದ ಹರ್ಷಾತಿರೇಕದಿಂದ ಸುಖಾಶ್ರುಗಳನ್ನು ಸುರಿಸುತ್ತ ಆ ಜಲದಿಂದಲೇ ಮಹಾಪಾದಗಳನ್ನು ಅಭಿಷೇಕಗೊಳಿಸಿದನು. ಸಂತೋಷವು ಉಕ್ಕುಕ್ಕಿ ಪರಮಾ ವಧಿಯಾಗಲು ತನ್ನನ್ನು ತಾನು ಮರೆತುಬಿಟ್ಟನು. ಅಹಹಾ! ಇದೆಂತ ಸುಖ ವು? ಆ ಶಿವಶರಣರೇ ಬಲ್ಲರು. ಆಗ ಕೃಪಾನಿಧಿಯಾದ ಚಂದ್ರಶೇಖರನು ಭಕ್ತ ನನ್ನು ಆಘ್ರಾಣಿಸಿ, ಸಂತೈಸಿ ಉತ್ತಮವೆನಿಸಿದ ಗಣಪದವಿಯನ್ನು ಅನುಗ್ರಹಿ ಸಿದನು.

ಪಾಠಾಂತರವು ವ್ಯಾಸಕೃತ ಬಸವ ಪುರಾಣದಲ್ಲಿಯ ವಿವರವು—ಶಾಂತ ಮಂಡ ಎಂಬಲ್ಲಿ ಚರಿತ್ರನಾಯಕನು (ಸಾಂಖ್ಯತೊಂಡನು) ಬೌದ್ಧನಿಗೆ ಮಗ ನಾಗಿ ಹುಟ್ಟಿದನು. ಪೂರ್ವ ಸಂಸ್ಕಾರಬಲದಿಂದ ಶಿವಲಿಂಗಕಾಂಕ್ಷೆಯಾಯಿತು. ಇತ್ತ ಜೈನ-ಬೌದ್ಧರ ಸಂದಣಿಯಲ್ಲಿ ಈತನಿಗೆ ಶಿವೋಪಾಸನೆಯನ್ನು ಮಾಡುವ ದಾದರೂ ಎಂತು? ಆದ್ದರಿಂದ ತನ್ನ ವ್ರತವು ಪೂರೈಸಬೇಕು ಹಾಗೂ ತನ್ನ ನೆರೆಯಲ್ಲಿರುವವರು ಸಂತೋಷಪಡಬೇಕು ಹೀಗೆ ಯೋಚಿಸುತ್ತಿರುವಾಗ ಅವನಿಗೆ ವಿಶಿಷ್ಟತರವಾದ ಕ್ರಮವಿಶೇಷವು ಹೊಳೆಯಿತು. ಅದೆಂತೆನೆ—ನಿತ್ಯದಲ್ಲಿಯೂ ಜಗತ್ಪ್ರಭುವನ್ನು ಕಲ್ಲುಗಳಿಂದ ನಿಯಮಿತವಾಗಿ ಬಿಗಿಯುವದು. ಸಾಂಖ್ಯನು ಕೋಮಲವಾದ ಪುಷ್ಪಗಳೆಂದೇ ಬಗೆದು ತ್ರ್ಯಕ್ಷನಿಗೆ ಲೀಲೆಯಿಂದ ಎಸೆಯುತ್ತಿ ದ್ದನು. ಅದು ಜೈನರಿಗೆ ಲಿಂಗಮೂರ್ತಿಯನ್ನು ಕಲ್ಲುಗಳಿಂದ ಘಾತಿಸುವನೆಂದು

ಕಾಣಿಸುತ್ತಿತ್ತು. ನಿಷ್ಕಾಪಟ್ಯದ ನಿರ್ಮಲಾಂತಃಕರಣದ ನವೀನ ಪೂಜಾಕ್ರಮದಿಂದ ಶಶಿಧರನಿಗೆ ತೃಪ್ತಿಯಾಗಿ ಭಕ್ತನ ನಿಷ್ಠೆಯನ್ನು ನೋಡುವದಕ್ಕಾಗಿ ದಿನಾಲು ಆತನು (ಭಕ್ತನು) ದಾಟಬರುವ ಹೊಳೆಯು ಮೂರುದಿನ ತುಂಬಿ ಹರಿಯುವಂತೆ ಮಾಡಿದನು. ಅಲ್ಲಿಯವರೆಗೆ ಸಾಂಖ್ಯನು ಶಿವಲಿಂಗಪೂಜೆಯಿಲ್ಲದೆ ಉಪವಾಸವಾಗಿ ಕುಳಿತನು. ನದಿಯು ಇಳಿದ ಬಳಿಕ ಮೂರು ದಿವಸಗಳ ಕಲ್ಲಿನ ತೂಕದಷ್ಟು ಭಾರದ ಒಂದು ಬಂಡೆಯನ್ನು ಲಿಂಗದ ಶಿರದಮೇಲೆ ಹಾಕುವಷ್ಟರಲ್ಲಿ ದಶಭುಜನು ಆತನನ್ನು ತಡೆದು ಅವನ ಭಕ್ತಿಗೆ ಮೆಚ್ಚಿ ಸದ್ಗತಿಯನ್ನು ಕೃಪೆಮಾಡಿದನು.



ಓಂ.

# ೪೫. ವಾಹಿಲ್ಯರು (ಓಹಿಲರು).



ಪರಮನಂ ಮಾನಸಾಂತರದೊಳರ್ಚಿಸಿ ಮುಕ್ತಿ । ತರುಣಿಯೊಳಗಲ
ದಿಹ ವಾಹಿಲ್ಯರೆನ್ನ । ದುರಿತ ಸಂಕುಳವ ನೂರಸುವದು ॥

[ಶ್ರೀ ನಿಜಗುಣರು]



ವನೀತಲದಲ್ಲಿ **ಚೋಳ** ಭೂಮಿಯು ಶೈವರಿಂದ ಅಲಂಕರಿಸಲ್ಪಟ್ಟಿದೆಂಬುದು ಸರ್ವಶ್ರುತವು. ಆ ನಾಡು ಶಿವಾಲಯಗಳಿಂದ ಒಪ್ಪುತ್ತ ಭಕ್ತಸಮೂಹದಿಂದ ಕಿಕ್ಕಿರಿದಿತ್ತು. ಈ ಪರಿಯಾಗಿ ಶೋಭಿಸುವ ಆ ಧರೆಯಲ್ಲಿ ಪುಣ್ಯವಾಹಿನಿಯಾದ ಕಾವೇರಿಯ ಮಗ್ಗಲಲ್ಲಿ **ಪೊನ್ನೆ** ಎಂಬ ಹೆಸರಿನ ಪಟ್ಟಣವು ಶಿವನಿಕೇತನಗಳಿಂದಲೂ, ಮುಮುಕ್ಷುಗಳಾದ ಮಾನವ ಪುಂಗವರಿಂದಲೂ ಅವರಿಗೆ ಅವಶ್ಯವೆನಿಸುವ ಉಪಕರಣಗಳೊಂದಿಗೆ ತಿಲಮಾತ್ರವಾದರೂ ಕೊರತೆ ಇಲ್ಲದೆ ವಿರಾಜಿಸುತ್ತಿತ್ತು ಆ ಮಂಗಲಮಯವಾದ ಪುರದಲ್ಲಿ ಹರಭಕ್ತ ವ್ರಜಕ್ಕೆ ಭೂಷಣಪ್ರಾಯನಾದ, ಪ್ರಾಣಲಿಂಗಿ

ನಾದ, ಶಿವಾನಂದ ಸುಖ ಸಮುದ್ರದಲ್ಲಿ ಮನವಾರೆ ನಲಿದಾಡುವ, ಶೈವಚಂ
,ನಾಗಿ ಪ್ರಕಾಶಿಸುವ **ವಾಹಿಲ್ಯ**ನೆಂಬ ಪುರುಷಸಿಂಹನು ಭಾವನಾಸರಣಿಯಲ್ಲಿ
ಮರ್ಥನಾಗಿ ಶರಣಜನರ ಕಂಕಣನಾಗಿ ಅವರ ಪ್ರೇಮಪಾತ್ರನಾಗಿದ್ದನು.

ಸನ್ಮಾರ್ಗಪ್ರವರ್ತಕನಾದ ಹಾಗೂ ಪರಹಿತಕಾಂಕ್ಷಿಯಾದ ನಮ್ಮ ಕಥಾ
ಾಯಕನು ಈಶ್ವರಕೃಪಾಪಾತ್ರನಾದುದರಿಂದ ಪರಿಣಾಮದಿಂದಿರುತ್ತ ಶಿವಗಣ
ಕರಕ್ಕೆ ಸರ್ವವಿಧದಿಂದ ತೃಪ್ತಿಪಡಿಸುತ್ತ ಅವರ ಒಡನಾಟ ಶಿವಾನುಭವ ಪ್ರಸಂ
ಭಾಗಿಯಾಗಿ ಸದ್ಗುರು ಕಾರುಣ್ಯವನ್ನು ಪಡೆದು ಶಿವಮಂತ್ರಾಧಿಕಾರಿಯಾಗಿ ಆ
,ಮವೂ ವಿಧಿಯೂ ಚನ್ನಾಗಿ ತಿಳಿದು ಶಿವರತಿ ಕ್ರೀಡೆಯಿಂದಾದ ಸತ್ಕೃತಿ ಪರಿ
ಾಕರೂಪವಾಗಿ ಶಿವಭಾವನೆಯು ಗುಣಿಸುತ್ತ ಮಾನಸಪೂಜೆಯಲ್ಲಿ ವಿಶಾರದನಾ
ದನು. ತನ್ನ ಕಾಯಗೇಹದಲ್ಲಿಯೆ ಭಾವನಾಚತುರನಾದುದರಿಂದ ಶ್ವೇತರೂ
ನಾದ ಅಸಮಾಕ್ಷನನ್ನು ಸುಖವಾಗಿರಿಸಿ ಪರಿಪರಿಯ ಪುಷ್ಪಗಳಿಂದರ್ಚಿಸಿ ಈ
ಕ್ತಿಲೀಲೆಯಿಂದಾಗುವ ಹರ್ಷದಲ್ಲಿ ಸಂತೋಷವನ್ನು ಹೊಂದುತ್ತ ದಿನದಿನದಲ್ಲಿ
ಉ ಶಾಂತಿನಿಲಯನಾದ ಶಿವನಿಗೆ ಹೊಸಹೊಸತರದ ನವೀನ ಕುಸುಮಗಳನ್ನು
ರಿಸುತ್ತ ಪ್ರಾಣಲಿಂಗಪೂಜಾಧುರಂಧರನಾಗಿ ಪರಮಶಿವಾನುಭವವಿಲಾಸವಿಚ
ಣನಾಗಿ ಕಥಾಪುರುಷನು ಮೆರೆಯುತ್ತಿರಲು ಕೆಲವು ವರ್ಷಗಳು ಸಂದಿದವು.

ತಪಃಪ್ರಭಾವದಿಂದ ಅನುಸಂಧಾನಿಗಳ ಪಾತ್ರತೆಯು ಹೆಚ್ಚುತ್ತ ಹೋದ
ಾಗೆಲ್ಲ ಒಂದೊಂದು ಪರಿಯಾಗಿ ಶಿವಸಾಲೋಕ್ಯ, ಸಾಮೀಪ್ಯ, ಸಾರೂಪ್ಯ,
ಾಯುಜ್ಯ ಎಂಬ ನಿರತಿಶಯ ಸೌಭಾಗ್ಯಮಂಡಲವನ್ನು ಅವರು ಅಡರಿದುದು
ಾತಕಮಹಾಶಯರಿಗೆ ಹೊಸ ಸಂಗತಿ ಏನೂ ಅಲ್ಲ.

ಒಂದು ದಿನ ಚರಿತ್ರನಾಯಕನು ಮಲಗಿದವನು ಎಚ್ಚತ್ತು ಪ್ರಭಾತ ಸಮ
ುದಲ್ಲಿ ಏಳುವಾಗ ಶೈವೋಪದೇಶವನ್ನು ಬೋಧಿಸಿದ ಪರಗುರುವನ್ನು ಪ್ರೀತಿ
ುಂದ ಸ್ಮರಿಸುತ್ತ, ಹರಗಣ ಸಮುದಾಯವನ್ನು ನೆನೆಯುತ್ತ ಮುಖಮಾರ್ಜನೆ
ುನ್ನು ಮಾಡಿಕೊಂಡು ದುರಿತಗಳನ್ನೊರಿಸುವ ತ್ರಿಪುಂಡ್ರ ಶೋಭಿತನಾಗಿ
ರೋಪಕಾರಾರ್ಥವಾಗಿ ಹರಿಯುವ ಪವಿತ್ರವಾದ ಕಾವೇರಿಗೆ ಬಂದು ಸ್ನಾನಾದಿ
ಯೆಗಳನ್ನು ಸರಿಯಾಗಿ ಪೂರೈಸಿ ಹೊಳೆಯ ದಡದಲ್ಲಿ ಶ್ರೀ ಬಿಲ್ವದಡಿಯಲ್ಲಿ
ರ್ಭೆಗಳನ್ನು ಹಾಸಿ ಪದ್ಮಾಸನವನ್ನಿಕ್ಕಿ ಶ್ರೇಷ್ಠವೆನಿಸಿದ ಭಸ್ಮವನ್ನು ಶಾಸ್ತ್ರೋ
,ವಾಗಿ ತಳೆದು ಆಗಮದಲ್ಲಿ ಹೇಳಿದಂತೆ ಆಯಾಯ ಸ್ಥಳಗಳಲ್ಲಿ ಕ್ರಮವಿಡಿದು,
ಿವಾಕ್ಷಿಸಂಭೂತವಾದುದರಿಂದ ಪುಣ್ಯಪ್ರದವೆನಿಸುವ) ರುದ್ರಾಕ್ಷಗಳನ್ನು ಧರಿಸಿ
ನ್ನ ನಿಜಶರೀರವನ್ನೇ ದೇಗುಲವನ್ನಾಗಿ ಕಲ್ಪಿಸಿ ಅಮೋಘವಾದ ಹೃತ್ಕಮಲ
ನ್ನೆ ಲಿಂಗಮಯವಾಗಿ ಭಾವಿಸಿ ಬೇರೊಂದರ ಪರಿವೆಯಿಲ್ಲದೆ ಸುರತರುವಿನ

ಸುಗಂಧಮಯವಾದ ಹೂವುಗಳನ್ನು ಪರಿಮಿತಿ ಇಲ್ಲದ ಸಂಖ್ಯೆಯಿಂದ ಧರಿಸುತ್ತ ಪೂಜಿಸಿ ಶಿವಾನಂದ ಕಡಲಿನಲ್ಲಿ ಯಥೇಚ್ಛವಾಗಿ ವಿಹರಿಸಿ ಸುಖವೆಂಬ ಭಾವವು ಪುರುಷಾಕಾರವನ್ನು ತಾಳಿದಿಯೋ ಎಂಬಂತೆ ಹೆಜ್ಜೆಹೆಜ್ಜೆಗೆ ಆನಂದವು ಇಮ್ಮಡಿ ಮುಮ್ಮಡಿಯಾಗುತ್ತ ನಿಜಮಂದಿರಕ್ಕೆ ಬರುತ್ತಿದ್ದನು. ಶ್ರುತಿ ಉಪನಿಷತ್ತುಗಳಿಗೆ ಸಹಾ ಗೋಚರವಾಗದಿರುವದರಿಂದ ಗುಹ್ಯನೆಂದೆನಿಸಲ್ಪಟ್ಟ ಭವಾನೀಪತಿಗೆ ನಮ್ಮ ಭಕ್ತಲಲಾಮನ ಶ್ಲಾಘ್ಯತಮವಾದ ನಡೆಯು ವೇದ್ಯವಾಗಿ ಆತನನ್ನು ಅನುಗ್ರಹಿಸಲೋಸುಗ ಸ್ವಗೃಹಕ್ಕೆ ತೆರಳುತ್ತಿದ್ದ ಚರಿತ್ರಪುಂಗವನನ್ನು ತಡವಲಿಕ್ಕೆ ಒಬ್ಬ ಉದ್ದಂಡ ಶಿವಭಕ್ತನಿಗೆ ಪ್ರೇರಿಸಿದನು. ಭವಾಂತಕನಾದ ಶಂಭುವಿನಿಂದ ನಿಯೋಜಿಸಲ್ಪಟ್ಟ ಆ ಮಾಹೇಶ್ವರನು ಆಗ ಓಹಿಲಾರ್ಯರನ್ನು ಎದುರಾಗಿ ಸಂಭ್ರಮ ವಿಶೇಷದಲ್ಲಿ ಮಗ್ನರಾದಂತೆ ಕಾಣುತ್ತದೆ ಇದೇನು ಕೌತುಕವು ಎಂದು ಕೇಳಿದನು ಪೂಜ್ಯರೇ ಪ್ರತಿನಿತ್ಯದಲ್ಲಿ ನಾನು ಹೃತ್ಪುಂಡರೀಕದಲ್ಲಿ ಲಿಂಗಮೂರ್ತಿಯನ್ನು ಸಜ್ಜುಗೊಳಿಸಿ ಭಾವನಾಶಕ್ತಿಯಿಂದ ತೃಪ್ತಿಯಾಗುವಂತೆ ಅರ್ಚಿಸುತ್ತಿರುವೆನು. ಆದರೆ ಈ ದಿವಸ ಸುರಲೋಕದಲ್ಲಿ ನಂದನ ವನದಲ್ಲಿರುವ ದಿವ್ಯವಾದ ಪರಿಮಳಿಸುವ ಹೂವುಗಳನ್ನು ಸದಾಶಿವನಿಗೆ ಧರಿಸಿದುದರಿಂದ ಸಂತೋಷವು ಹಿಡಿಸಲಾರದಷ್ಟು ಆಗಿ ಉಕ್ಕುಬರುವದರಿಂದ ಕಾಯವೂ, ಮನವೂ, ಭಾವವೂ ಏಕಕಾಲಕ್ಕೆ ಹೆಚ್ಚೆಚ್ಚಾಗಿ ವಿಕಸಿತವಾಗುತ್ತಲಿರುವವು. ಕಥಾಪುರುಷನನ್ನು ಕುರಿತು ಜಂಗಮನು:—ಭೂಜನರು ದೇವಕುಸುಮಗಳಿಂದ ಪೂಜಿಸುವದು ವಿಚಿತ್ರವು. ಇದನ್ನು ಕೇಳಿದೊಡನೆ ಓಹಿಲರಿಗೆ ಮೈಯ್ಯಲ್ಲಿ ಕಂಪವಾಗಿ ಜಂಗಮಯ್ಯನಿಗೆ ಶರಣಾರ್ಥಿ ಶರಣಾರ್ಥಿ ಎಂದೆನ್ನುತ್ತ ಜೀವವು ನಿಲ್ಲದೆ ತನ್ನ ಅರ್ಚನೆಯ ನಿಜಸ್ವರೂಪವನ್ನು ಯಥಾರ್ಥವಾಗಿ ಪ್ರಕಟಿಸಬೇಕೆಂದು ಉಪಾಸ್ಯ ಮೂರ್ತಿಯನ್ನು ಭಕ್ತಿಯ ಉದ್ರೇಕದಿಂದ ಸ್ಮರಿಸುತ್ತ ತನ್ನ ಹೊಟ್ಟೆಯನ್ನೇ ಬಿಚ್ಚಿ ತೋರಿಸಿದನು. ಆಗ ಹೃದಯದಲ್ಲಿ ಸ್ಥಾಪಿಸಲ್ಪಟ್ಟ ಲಿಂಗದಿಂದಲ ಸದ್ಯೋಜಾತನೆಂದೆನಿಸಿದ ಸುರಪತಿ ಸಾರ್ವಭೌಮನು ಪ್ರಕಟವಾಗಿ ಭಕ್ತೋತ್ತಮನನ್ನು ಮುದ್ದಾಡಿದನು. ಎಷ್ಟೋವರ್ಷಗಳವರೆಗೆ ದ್ವೀಪಾಂತರಕ್ಕೆ ಹೋದ ಪತಿಯು ಪತ್ನಿಯೆಡೆಗೆ ತಿರಿಗಿ ಬಂದಾಗ ಆ ಭಾಮೆಯು ತನ್ನ ಕಾಂತನನ್ನು ಕಾಣುವಂತೆ ಕಣ್ಣಿನ ರೆಪ್ಪೆಯನ್ನು ಮುಚ್ಚದಂತೆ ಚಂದ್ರಕಲಾಪನನ್ನು ನೋಡುತ್ತ ಮಹಾಸ್ವಾಮಿಯನ್ನು ಅನೇಕ ಸ್ತವಗಳಿಂದ ಕೊಂಡಾಡಿ ಮಹಾಪಾದಕ್ಕೆ ತನ್ನ ಮಸ್ತಕವನ್ನೊಪ್ಪಿಸಿ ಹಿಗ್ಗುತ್ತಿದ್ದನು. ಭಕ್ತವರನ ಪ್ರೇಮಕ್ಕೊಲಿದು ಆತನಿಗೆ ನಾಗೇಂದ್ರಹಾರನು ನಿತ್ಯಸುಖದಾಯಕವಾದ ಗಣಪದವಿಯನ್ನು ಆಶೀರ್ವದಿಸಿದನು.

ಪಾಠಾಂತರವು:—ಕಥಾನಾಯಕನು ಸಾಗರದ ಉದಕದಿಂದ ಪರಮಾತ್ಮನಿಗೆ ಮಜ್ಜನಮಾಡಿ ಆತನಿಗೆ ದಿನಾಲು ತನ್ನ ತೂಕದ ಧೂಪವನ್ನು ಸಮರ್ಪಣೆ

ಂಡುವ ವ್ರತದಿಂದ ಧನವೆಲ್ಲ ತೀರಿಹೋಗಿ ಅಡವಿಯಿಂದ ಗುಗ್ಗುಳವನ್ನು
ದು ಶಿವಸೇವೆಯನ್ನು ಪೂರೈಸುತ್ತಿದ್ದನು. ಇವನಿಗೆ ಶಿವಾಲಯದಲ್ಲಿದ್ದ ಅರ್ಚ
ು ವಿವಿಧವಾದ ಹಿಂಸೆಯನ್ನು ಕೊಟ್ಟರೂ ಆತನು ಅದನ್ನು ಗಣನೆಗೆ ತರಲಿಲ್ಲ.
ಾರವು ದೊರೆಯದಿರಲು ನಿರ್ಮಾಲ್ಯವನ್ನು ಭಕ್ಷಿಸಿದನು. ಮಾತ್ಸರ್ಯಯು
ಾದ ಶಿವನಿಲಯದಲ್ಲಿಯ ಪೂಜಕರು ನಿರ್ಮಾಲ್ಯವನ್ನು ಸುಟ್ಟುಬಿಡಲು ಆ
್ಮವನ್ನೇ ಪ್ರಸಾದವಾಗಿ ಸ್ವೀಕರಿಸಿದನು. ಈತನ ಮನೋಭಾವವನ್ನು ನೋ
ೇಕೆಂಬ ಸೋಮೇಶನ ಸಂಕೇತದಿಂದ ಅರಣ್ಯದಿಂದ ಬರುವ ದಾರಿಯಲ್ಲಿ ಓಹಿ
ರ್ಯನಿಗೆ ಕಾಲಲ್ಲಿ ಮುಳ್ಳು ಬಲವಾಗಿ ನಟ್ಟಿತು. ಆದರೂ ತಾನು ಹೊತ್ತಿ
ತ ಸಮುದ್ರೋದಕದ ಹಾಗೂ ಗುಗ್ಗುಲದ ಕಂಬಿಯನ್ನು ಕೆಳಗೆ ಇಡಲಿಲ್ಲ;
ಡ್ರಲಿಲ್ಲ; ವಿಶ್ರಮಿಸಲಿಲ್ಲ ಹಾಗೆಯೆ ಅತಿ ಕ್ಲೇಶಕರವಾದ ನೋವನ್ನು
ಳುತ್ತ ಒಮ್ಮೆ ಹಿಮ್ಮಡವನ್ನು ಊರುತ್ತ ಮತ್ತೊಮ್ಮೆ ತುದಿಗಾಲನ್ನು ಊ
ತ್ತ ಕಷ್ಟವನ್ನು ಶಿವ, ಶಿವ ಎಂದು ಸಹಿಸುತ್ತ ಬರಲಾಗಿ ಆತನ ಬಾಧೆಯು
ನ ಪಾದಗಳಿಗೆ ಆದಂತಾಗಿ ಕೂಡಲೆ ಪಂಚವಿಂಶತಿ ಲೀಲಾಶ್ರಯನಾದ ಶಂಕ
ು ಶಿವಚಿನ್ಹಾಂಕಿತನಾದ ಶಬರವೇಷವನ್ನು ತಾಳಿ ಆ ಭಕ್ತನ ಪಾದದಲ್ಲಿ ನಟ್ಟ
ಯನ್ನು ಇಕ್ಕುಳದಿಂದ ತೆಗೆದು ಮಾಯವಾಗಿ ಹೋದನು. ಇದನ್ನೆಲ್ಲ ಕಥಾ
ುಷನು ಕಂಡು ಇದೆಲ್ಲ ವಿಶ್ವಪಾಲಕನ ಕೃತಿಯೆಂದು ತಿಳಿದು ನಿತ್ಯನಿಯಮದ
ರೆಗೆ ಸೋಮನಾಥನ ಗುಡಿಗೆ ಬರಲು ಅಲ್ಲಿರುವ ವಿಘ್ನಸಂತೋಷಿಗಳು ಆ
್ಗಲವನ್ನು ಹೊರಗೆ ಚಲ್ಲಿ ಕೊಟ್ಟರು. ಆಗ ಚರಿತ್ರನಾಯಕನು ಘಂಟೆಯ
ಬಾರಿಸುತ್ತ ಧೂಪಾಗ್ನಿ ಕುಂಡದಲ್ಲಿ ತನ್ನನ್ನೇ ಸಮರ್ಪಣೆ ಮಾಡಲು ಸರ್ವ
ರ್ನ ಲೀಲೆಯಿಂದ ಧೂಪಕುಂಡದಲ್ಲಿ ಧುಮುಕಿದ ಓಹಿಲಾರ್ಯನು ಗಂಟೆ
ನ್ನು ಬಾರಿಸುತ್ತಲೆ ಆಕಾಶಮಾರ್ಗದಿಂದ ಕೈಲಾಸವನ್ನಡರಿ ಶಿವಸನ್ನಿಧಿ
ನ್ನು ಸಂದಿದನು.



ಓಂ.

# ೪೬. ಚಿರುತೊಣೆಯಾಂಡರು.



ಫಣಿಧರನ ಬಲಿಯಲರ ನೆಣಿಸದರಿಸಿನ ರಾಣಿ । ಮಣಿದೆತ್ತಿ ವಾಸಿಸಲು
ಮೂಗನರಿದ ಚಿರು । ತೊಣೆಯಾಂಡರಡಿವಿಡಿದು ಬಾಳ್ವೆ ॥

[ಶ್ರೀ ನಿಜಗುಣರು]



ತಲದಲ್ಲಿ **ಚೋಳ** ಸೀಮೆಯು ಸಮಸ್ತ ವಿಭವಾದಿಗಳಿಂದ ರಂಜಿತವಾಗಿ ಪುರಹರ ಭಕ್ತರಿಂದ ಶೋಭಿಸುತ್ತಿತ್ತು. ಶಿವಭಕ್ತರಿಂದ ಅಲಂಕೃತವಾದುದರಿಂದಲೆ ಧನ್ಯವೆನಿಸಿದ ಈ ಉರ್ವಿಯಲ್ಲಿ **ತಿರಿಪಾದರಿ** ಎಂಬ ಪಟ್ಟಣವು ಶಿವಸೇವಾ ತತ್ಪರರಾದ ಹಾಗೂ ಕರ್ತವ್ಯನಿಷ್ಠರಾದ ಜನಸಮೂಹದಿಂದ ಕಂಗೊಳಿಸುತ್ತಿತ್ತು. ಈ ನಗರದಲ್ಲಿ ಹರಪಾದಾಂಬುಜಕ್ಕೆ ಆರಡಿಯಾಗಿ ಒಪ್ಪುವ ಸಕಲ ಅಷ್ಟೈಶ್ವರ್ಯಗಳಿಂದ ಅನುಗ್ರಹಿಸಲ್ಪಟ್ಟ **ಚಿರುತೊಣೆಯಾಂಡ** ನೆಂಬ ಶೈವವರನು ಖ್ಯಾತಿಯನ್ನು ಪಡೆದಿದ್ದನು. ಈ ಭಕ್ತಾಗ್ರಣಿಯು ಅಷ್ಟವಿಧಾರ್ಚನೆಯ ಪರಿಯನ್ನು ಚನ್ನಾಗಿ ತಿಳಿದು ಆ ಎಂಟುಪ್ರಕಾರದ ಉಪಚಾರಗಳಿಂದ ಆಗುವ ಫಲವನ್ನು ವಿಶದವಾಗಿ ಅರಿತಿದ್ದರೂ ವಿಶೇಷತಃ ಪತ್ರಪುಷ್ಪಗಳಿಂದ ಕಂತುಹರನ ಸೇವೆಯು ಆತನಿಗೆ ಪ್ರಧಾನವಾಗಿತ್ತು. ಅಖಿಲ ಸಂಪದ್ಯುಕ್ತನಾದುದರಿಂದ ಅದರ ವಿನಿಯೋಗವನ್ನು ಸರ್ವಶುಭ ಕಾರ್ಯಗಳಲ್ಲಿ ಮಾಡುತ್ತ, ದುಃಖಿತರಿಗೆ ಶಾಂತಿಯನ್ನು, ದಾರಿದ್ರ್ಯಪೀಡಿತರಿಗೆ ಧನವನ್ನು, ಮೋಕ್ಷಾಪೇಕ್ಷಿಗಳಿಗೆ ಅವರ ಇಚ್ಛಾನುಸಾರವಾಗಿ ಶಿವಾನುಭವದ ಸೌಕರ್ಯವನ್ನು ಇನ್ನಿತರರಿಗೆ ಅವರು ಬಯಸಿದಂತೆ ತೃಪ್ತಿಯನ್ನು ಉಂಟುಮಾಡುತ್ತ ಭಕ್ತಿಯಿಂದ ಅಮರಾಧಿಪನಾದ ಈಶ್ವರನನ್ನು ಭಜಿಸುವದರಲ್ಲಿ ಧುರೀಣನಾಗಿದ್ದನು. ಸುರಮುಖ್ಯನಾದ ಶಂಕರನಿಗೆ ಎರೆಯುವ ಧಾರಾಪಾತ್ರೆಯಲ್ಲಿ ಹಾಕಲಿಕ್ಕೆ ಮತ್ತು ಆ ಮಹಿಮನಿಗೆ ಧರಿಸಲಿಕ್ಕೆ ಪತ್ರಪುಷ್ಪಾದಿಗಳು ಅವಿಚ್ಛಿನ್ನವಾಗಿ ಸದಾವಕಾಲದಲ್ಲಿಯೂ ಬೇಕೆಂದು ಒಂದು ಪೂದೋಟವನ್ನು ಬೆಳಿಸಿದ್ದನು. ಅವರಲ್ಲಿ ಅನೇಕ ತರತರದ ಗಿಡಬಳ್ಳಿಗಳು ಅಂದವಾಗಿ

ಬೆಳೆದು ಹೂಗೊಂಚಲುಗಳಿಂದಲೂ ಹಣ್ಣುಗಳಿಂದಲೂ ಪ್ರೇಕ್ಷಕರ ಹೃದಯ ವನ್ನು ಸೆಳೆಯುತ್ತಿದ್ದವು. ಶಿವಾರ್ಪಣೆಗಾಗಿಯೆ ಕಾಯ್ದಿಟ್ಟ ಉದ್ಯಾನವಾದುದ ರಿಂದ ಈ ತೋಟಕ್ಕೆ ಯಾರೂ ಕೈಹಚ್ಚುತ್ತಿದ್ದಿಲ್ಲ.

ಚರಿತ್ರನಾಯಕನು ತನ್ನ ಸತಿಯೊಡನೆ ಉಷಃಕಾಲದಲ್ಲೆದ್ದು ಶುಚಿರ್ಭೂ ತನಾಗಿ ಸ್ನಾನವನ್ನು ಮಾಡಿ ಶಾಸ್ತ್ರೋಕ್ತವಾಗಿ ವಿಭೂತಿ ರುದ್ರಾಕ್ಷಗಳನ್ನು ತಳೆದು ಆಕೆಯೊಡನೆ ತಿರಿಪಾದರಿ ಪುರಾಧಿಪತಿಯಾಲಯಕ್ಕೆ ಹೋಗಿ ಅಲ್ಲಿಯ ಮಹಾಲಿಂಗವನ್ನು ತಾನು ತಂದಿರುವ ಯಾವತ್ತು ತಳಿರುಗಳಿಂದಲೂ, ಹಾಗೂ ಅನೇಕ ವಿಧವಿಧವಾದ ಕಮಲಗಳಿಂದಲೂ, ಸುವಾಸನೆಯುಳ್ಳ ಕುಸುಮಗಳಿಂ ದಲೂ ಪೂಜೆಯನ್ನುಮಾಡಿ ಸಂತಸವನ್ನು ಹೊಂದಿ ಆ ಸಂತೋಷವನ್ನು ಕೂಡಾ ಗಣಾಧಿಪನಿಗೆ ಅರ್ಪಿಸುತ್ತ ನಿಜಗೃಹಕ್ಕೆ ಬರುತ್ತಿದ್ದನು. ಈ ರೀತಿಯಾಗಿ ಉತ್ಸ ವದಿಂದ ಕೆಲವು ಸಂವತ್ಸರಗಳು ಕಳೆದವು. ಬಳಿಕ ಒಂದು ದಿನ ಪ್ರಭಾತ ಕಾಲ ದಲ್ಲಿ ಶಿವಸ್ಮರಣೆಯನ್ನು ಗೈಯ್ಯುತ್ತ ತನ್ನ ಆರಾಮಕ್ಕೆ ಹೋಗಿ ಕರಡಿಗೆಯಲ್ಲಿ ಶ್ರೀ ಬಿಲ್ವ, ಶಮಿ, ದೂರ್ವಾಂಕುರಗಳನ್ನು ಸಂಗ್ರಹಿಸಿ ಕೇತಕಿಯನ್ನು ತೆಗೆದು ಕೊಂಡು ಕಮಲ, ಪಾರಿಜಾತ, ಸಂಪಿಗೆ, ಮಲ್ಲಿಗೆ ಮುಂತಾದ ಪರಿಮಳಿಸುವ ಸ್ವಚ್ಛವಾದ, ನಿರ್ದೋಷವಾದ ಭ್ರಮರಗಳು ಇನ್ನೂ ಮುಟ್ಟದೆ ಇರುವ ಪುಷ್ಪ ಗಳನ್ನು ಎತ್ತಿ ಜಾಗರೂಕತೆಯಿಂದ ಕರಡಿಗೆಯಲ್ಲಿ ತುಂಬಿಕೊಂಡು ತನ್ನ ಮನೆಗೆ ಬಂದು ವಿಧ್ಯುಕ್ತವಾಗಿ ಮೈದೊಳೆದು ತನ್ನ ಅರ್ಧಾಂಗಿಯೊಡನೆ ಭಸ್ಮೋದ್ಧೂ ಳನ, ತ್ರಿಪುಂಡ್ರ ರುದ್ರಾಕ್ಷಮಾಲಾ ಭೂಷಿತನಾಗಿ ಪರಮಾತ್ಮನ ನಾಮಗಳನ್ನು ತನ್ನ ರಸನೆಯಲ್ಲಿ ತಾಂಡವವಾಡಿಸುತ್ತ ಹರ್ಷದೊಡನೆ ಆ ಶಿವನಿಲಯಕ್ಕೆ ಬಂದು ಮಹಾಲಿಂಗದೆಡೆಯಲ್ಲಿ ಕುಳಿತು ಆಸನ ಮಂತ್ರವನ್ನು ಪಠಿಸಿ, ದಿಗ್ಬಂಧ ನವನ್ನು ಮಾಡಿ ಗುರುಮೂರ್ತಿಯನ್ನು ನೆನೆದು ಮಹಾದೇವನನ್ನು ನಿರೀಕ್ಷಿಸಿ, ಆತನನ್ನು ಹೃತ್ಪಟಲದಲ್ಲಿರಿಸಿ ಅರ್ಚನೆಗಾಗಿ ಹೂವಿನ ಕರಡಿಗೆಯ ಕಡೆಗೆ ಲಕ್ಷ ಕೊಟ್ಟನು. ಆಗ ದೈವಗತಿಯಿಂದ ವಿಚಿತ್ರ ಸಂಗತಿಯು ವರ್ತಿಸಿತು. ಹೂಪ ತ್ರಿಗಳನ್ನು ಸೋಸುವಾಗ ಅವುಗಳ ಮಕರಂದವು ಅಧಿಕವಾಗಿದ್ದುದರಿಂದ ಆ ಪರಿ ಮಳಕ್ಕೆ ಮನಸೋತು ಕಥಾನಾಯಕನ ಮಡದಿಯು ಸ್ವಲ್ಪ ಮೂಸಿನೋಡಿದಳು. ಚರಿತ್ರಪುಂಗವನು ಅದನ್ನು ನೋಡುತ್ತಲೆ ಶಿವಾರ್ಪಿತಕ್ಕಾಗಿ ಮೀಸಲಾಗಿಟ್ಟ ಹೂವುಗಳು ಅನರ್ಪಿತವಾದವು. ಶಿವದ್ರೋಹವು ಸಂಘಟಿಸಿತೆಂದು ರೋಷ ಗೊಂಡು ಬಹಳ ಮರುಗಿ ಕಾಂತೆಯೆಂದು ಶಿಕ್ಷಿಸದೆ ಬಿಟ್ಟರೆ ಪಾಪವು ತಟ್ಟುವ ದೆಂದು ನಿರ್ಧರಿಸಿ ತಟ್ಟನೆ ವೀರೋದ್ರೇಕತೆಯಿಂದ ತನ್ನ ರಾಣಿಯ ನಾಶಿಕ ವನ್ನು ತರಿದನು. ಈತನ ಅಕುಟಿಲ-ಘನವಾದ ನಿಷ್ಠೆಗೆ ಭಕ್ತಿಪ್ರಿಯನೆನಿಸಿದ ಸರ್ವೇಶ್ವರನು ಪ್ರಸನ್ನನಾಗಿ ನಿಜರೂಪವನ್ನು ತೋರಿದನು. ಆಗ ನಮ್ಮ ಅಸ

ವೃಶಭಕ್ತನಿಗೆ ಎಣೆ ಇಲ್ಲದಷ್ಟು ಸಂತೋಷವಾಗಿ ರೋಮಾಂಚನಗೊಂಡು ಭಗವಂತನನ್ನು ಪರಿಪರಿಯಾಗಿ ಸ್ತುತಿಸಿ ಪಾಡಿದನು. ಗಾಯತ್ರೀ ವಲ್ಲಭನಾದ ಗಂಗಾಧರನು ಚಿರುತೊಣೆಯಾಂಡನ ಶಿವ ಭಾವಕ್ಕೆ ಮೆಚ್ಚಿ ಆ ಭಕ್ತಲಲಾಮನಿಗೆ ಗಣಪದವಿಯನ್ನು ಕರುಣಿಸಿದನು.



ಓಂ.

# ೪೭. ಕಳಚತ್ತಿಯಾಂಡರು.



ಅಸಮಾಕ್ಷನಿಂದಕರ ರಸನೆಗಳನುಗಿದು ನಂ । ತಸವನೊಳಕೊಂಡ ಕಳಚ
ತ್ತಿಯಾಂಡ ನೀ । ನನುಗಾಯ್ವುದೆನ್ನ ಜನವರ್ಯ ॥

[ಶ್ರೀ ನಿಜಗುಣರು]



ಚಾರಸರಣಿಯಿಂದ ಅನುಗ್ರಹಿಸಲ್ಪಟ್ಟ ಪ್ರಾಣಿಗಳಲ್ಲಿ ಮಾನವರೇ ಇಹಲೋಕದಲ್ಲಿ ಶ್ರೇಷ್ಠರೆಂಬುದು ವಾಚಕರೆಲ್ಲರು ಅರಿತಸಂಗತಿಯು. ಆ ಮಹಾತ್ಮರಲ್ಲಿ ನಿಜವಾದ ಶಿವಭಕ್ತಿಯಿಂದೊಪ್ಪುವ ಸುಜನರಿಗೆ ಮೇಲೆನಿಸುವ ಆಭರಣ ವಿಶೇಷವೆಂದರೆ ಪಂಚಾಚಾರ ಪರಾಯಣತೆಯೆಂಬುದು ಪಾತಕಮಹಾಶಯರಿಗೆ ವಿದಿತವಾದ ವಿಷಯವು. ಆ ಐದುತೆರವಾದ ನಡತೆಯನ್ನು ಹರಭಕ್ತರು ತಮ್ಮ ಶಕ್ತಿಗನುಗುಣವಾಗಿ ಪಾಲಿಸುವರಷ್ಟೆ. ಅದರಲ್ಲಿ ಗಣಾಚಾರ ವ್ರತವನ್ನು ಮನದಣಿಯಾಗಿ ಪೂರೈಸುವದು ಬಲು ಬಿಗಿಯಾದ ಮತ್ತು ಪ್ರಚಂಡತಮವಾದ ಕೆಲಸವೆಂದು ಸಾಮಾನ್ಯವಾಗಿ ಹೇಳಬಹುದು.

ಸ್ಥಾವರ ಲಿಂಗಗಳ ಭದ್ರತೆಗೆ ಭಂಗತರುವದು, ಶಿವಗ್ರಂಥಗಳನ್ನು ತುಚ್ಛವಾಗಿ ಕಾಣುವದು, ಪರಮಾತ್ಮನನ್ನು ಹಳಿಯುವದು, ಶೈವರನ್ನು ನಿಂದಿಸುವದು, ಪರಮ ಗುರುಭಕ್ತರನ್ನು ಹಿಂಸಿಸುವದು, ಶಿವಗಣ ಸಮೂಹವನ್ನು ಹೀನವಾಗಿ ಎಣಿಸುವದು, ಒಟ್ಟಿಗೆ ಸ್ವಲ್ಪದರಲ್ಲಿ ಹೇಳಿ ಮುಗಿಸಬೇಕಾದರೆ, ಶಿವಧ

ರ್ಮವನ್ನು ಮಾನ್ಯತೆಯಿಂದ ಗಣಿಸದಿರುವ ಶಿವದ್ರೋಹವನ್ನು ಕಂಡೊಡನೆ ಸಾಧ್ಯವಾದರೆ ನಿವಾರಿಸುವದು, ನಿಗ್ರಹಿಸುವದು, ಶಪಿಸುವದು, ಖಂಡಿಸುವದು ಅದು ತನ್ನಿಂದಾಗದಿದ್ದರೆ ಆ ತಾಣದಿಂದ ದೂರನಾಗುವದು ಗಣಾಚಾರವೆಂದು ತಿಳಿಯಲ್ಪಡುವದು.

ಮುಕ್ತಿಪ್ರದವಾದ ಶಿವಾಗಾರಗಳ ನೆಲೆಯಾಗಿ ಸದಾಚಾರ ನಿರತರಾದ ಭಕ್ತ ವ್ರಜದಿಂದ ಶೋಭಿಸುವ ಸುಖ ಸಮೃದ್ಧಿಯಿಂದ ಹೆಸರ್ವಡೆದ, ಪುಣ್ಯಭೂಮಿಯಾದ ವಿಖ್ಯಾತವಾದ ಚೋಳಧರೆಯು ಕಂಗೊಳಿಸುತ್ತಿತ್ತು. ಅಂತು ವಿರಾಜಿಸುವ ಆ ಧರಿತ್ರಿಯಲ್ಲಿ ಕಣಂಜಿ ಎಂಬ ಪಟ್ಟಣವು ಮಂಗಲಮಯವಾಗಿ ಪ್ರಕಾಶಿಸುತ್ತಿತ್ತು. ಆ ವಿಮಲವಾದ ಪುರದಲ್ಲಿ ಮನ್ನೆ ಎಂಬ ಕುಲದಲ್ಲಿ ಜನ್ಮವನ್ನು ತೊಟ್ಟ, ನಿಸ್ಸೀಮವಾದ ಶಿವಭಕ್ತಿಯಿಂದ ಕೂಡಿದ, ಕಳಚತ್ತಿಯಾಂಡನೆಂಬ ಅಭಿಧಾನದಿಂದ ಯುಕ್ತನಾದ ಪುರುಷ ಪುಂಗವನು ಹರಭಕ್ತರಿಗೆ ಪ್ರಾಣಸ್ವರೂಪದಂತಿರುವ, ಪಂಚಾಚಾರಗಳನ್ನು ಚನ್ನಾಗಿ ತಿಳಿದು, ಅದರಂತೆ ವರ್ತಿಸುತ್ತ ಆ ಆಚಾರಗಳಲ್ಲಿ ಗಣಾಚಾರವನ್ನೆ ಪ್ರಧಾನವಾಗಿಟ್ಟುಕೊಂಡು ಅದನ್ನೇ ಉಗ್ರವಾಗಿ ನಡೆಸುತ್ತಿದ್ದನು. ಶಿವನಿಂದೆ, ಗುರುನಿಂದೆ, ಜಂಗಮನಿಂದೆ ಮೊದಲಾದ ದ್ರೋಹಗಳನ್ನು ತಿಲಮಾತ್ರವಾದರೂ ಸಹಿಸದೆ ದೂಷಕರೆಂಬ ಮೃಗಗಳಿಗೆ ಘನ ಪರಾಕ್ರಮಿಯಾದ ಪುರುಷ ಸಿಂಹನಾಗಿ ಮೆರೆಯುತ್ತಿದ್ದನು. ಗುರುದೇವನನ್ನು ಬರಿಯ ಮಾನವನೆಂದು, ಶಿವಲಿಂಗವನ್ನು ಪಾಷಾಣವೆಂದು, ನಿರ್ಮಲರೆಂದೆನಿಸುವ ಜಂಗಮಾವಳಿಯನ್ನು ಅಧಮರೆಂದು ಗ್ರಹಿಸುವವರನ್ನು ಭೂಭಾರವಾದ ದೇಹಧಾರಿಗಳೆಂದು ಎಣಿಸಿ ಅವರನ್ನು ಚನ್ನಾಗಿ ದಂಡಿಸಿ ಅವರ ನಾಲಿಗೆಯನ್ನು ಹಿರಿದು ತರಿಯುತ್ತಿದ್ದನು. ಈ ರೀತಿಯಾಗಿ ಕಠಿಣವಾಗಿ ಗಣಾಚಾರವನ್ನು ಎಡಬಿಡದೆ ನಡೆಸುತ್ತಿರ್ಪ ನಮ್ಮ ಕಥಾನಾಯಕನ ಕಡೆಗೆ ಬಂದು ಅವನ ನಡೆಯನ್ನು ಪರೀಕ್ಷಿಸಿ ಕ್ಷಿತಿಯ ಜನರಿಗೆ ಆತನ ಪರಿಯನ್ನು ಪ್ರಕಟಿಸಬೇಕೆಂದು ಬಗೆದು ಭಕ್ತದೇಹಿಕನೆಂದು, ಭಕ್ತಾನುಗ್ರಹತತ್ಪರನೆಂದು, ನಿತ್ಯನೆಂದು ಸಕಲ ವಿಬುಧರಿಂದಲೂ ಸ್ತುತಿಸಲ್ಪಟ್ಟ ನಾಗೇಂದ್ರವಲಯನು ಮಾನವಾಕಾರವನ್ನು ತಾಳಿ ಉದ್ದಂಡ ವೇಷವನ್ನು ಧರಿಸಿ, ಆ ಗುರುಲಿಂಗ ಜಂಗಮ ಪ್ರೇಮಿಯಾದ ವರಭಕ್ತನಲ್ಲಿಗೆ ಬಂದು ಆತನ ಸಮೀಪದಲ್ಲಿಯೆ ಉದ್ರೇಕದಿಂದ ನಿಂತು ಬೂದಿಬಡಕರಾದ ಜಂಗಮರಿಗೆ ಪರಮಾತ್ಮ ಸ್ವರೂಪರೆಂದು ಭಾವಿಸುವ, ಸ್ಮಶಾನದಲ್ಲಿರುತ್ತ ಪಿಶಾಚಿಗಳ ನೆರೆಯಲ್ಲಿ ಅಲೆಯುತ್ತಿರುವವನಿಗೆ ಭಗವಂತನೆಂದು ಗ್ರಹಿಸಿದ ಮರುಳನು ನೀನಲ್ಲವೇ ಎಂದು ವಿಕಟಹಾಸ್ಯಪರಿಯಿಂದ ಮಾತನಾಡಿದನು. ಆಗ ಈ ಪರಿಯಾದ ಕರ್ಣ-ಕಠೋರವಾದ ಅಭದ್ರವಾದ ನುಡಿಗಳಿಂದ ಪ್ರಶಸ್ತವಲ್ಲದ ವಿಶಿಷ್ಟತೆರದಿಂದ ನಿಂತು, ಅಪಶಬ್ದಗಳನ್ನುಚ್ಚರಿಸುವ ವ್ಯಕ್ತಿಯನ್ನು ನಿವಾರಿಸ

ಬೇಕೆಂದು ಹವಣಿಸುತ್ತ ಕೋಪಾತಿರೇಕವನ್ನು ಹೊಂದುತ್ತ ರೌದ್ರಾವತಾರವನ್ನು ತಾಳುವ ಚರಿತ್ರಪುರುಷನನ್ನು ಕುಟಿಲ ವೇಷದ ಸರ್ವ ಮಂಗಲನು, ಕಣ್ತುಂಬಾ ನೋಡಿದನು. ಆ ಕ್ಷಣವೇ ನಮ್ಮ ಶರಣನು ಈತನನ್ನು ನಾನು ಬಿಡುವೆನೇ? ಎಂದು ನಿರ್ಧರಿಸಿ ಉದ್ದಂಡಪುರುಷನನ್ನು ಸಮಾಪ್ತಗೊಳಿಸುವೆನೆಂದು ಆಗಲೇ ನಿಷ್ಕರ್ಷಿಸಿ ತನ್ನ ಸೊಂಟದಲ್ಲಿರಿಸಿಕೊಂಡ, ಹದನಾದ ಖಡ್ಗವನ್ನು ವರೆಯಿಂದೆಳೆದು ತಟ್ಟನೆ ಆತನ ಕರವನ್ನು ಘಟ್ಟಿಯಾಗಿ ಹಿಡಿನು ನಿಶಿತವಾದ ಅಲಗನ್ನು ಮೇಲಕ್ಕೆತ್ತಲು, ಹಸನ್ಮುಖನಾದ ಅನಂತನು ತನ್ನ ನಿಜರೂಪವನ್ನು ತೋರಿದನು. ಆಗ ನಮ್ಮ ಭಕ್ತಲಲಾಮನು ಶಾಂತಿಯನ್ನು ತಳೆದು ನಿಜವಿವೇಕವನ್ನು ಸರ್ವತೋಪರಿಯಾಗಿ ಹೊಂದಿ ಭಕ್ತಿಭಾವವು ಉಕ್ಕೇರಿ ಅಪವರ್ಗಪ್ರದನಾದ ಶಂಕರನ ಚರಣ ಕಮಲಗಳಲ್ಲಿ ಹೊರಳಾಡುತ್ತ ಅನೇಕ ಪರಿಯಾಗಿ ಮಹಿಮನನ್ನು ಕೊಂಡಾಡಿ ಅಘಹರನಮೇಲೆ ಕೈಯೆತ್ತಿದ ದೋಷಪರಿಹಾರಾರ್ಥವಾಗಿ ತಾನು ಇನ್ನು ಬದುಕಬಾರದೆಂದು ತಿಳಿದು, ಕುತ್ತಿಗೆಯನ್ನು ಕೊಯು ಕೊಳ್ಳಬೇಕೆಂದು ಕಠಾರಿಯನ್ನು ಕಂಠಕ್ಕೆ ಮುಟ್ಟಿಸುವಷ್ಟರಲ್ಲಿಯೇ ಗಣನಾಯಕನೆನಿಸಿದ ಧವಲಾಂಗನು ಆತನ ಕೈಹಿಡಿದು ಬಿಗಿದಪ್ಪಿ ಮುದ್ದಾಡಿ ಆತನನ್ನು ಪ್ರೀತಿಯಿಂದ ಆಘ್ರಾಣಿಸಿ ಮಗನೇ ಮರ್ತ್ಯದಲ್ಲಿ ನೀನಿರುವದು ಸಾಕೆಂದು ಹೇಳಿ ಇಚ್ಛಾಮಾತ್ರದಿಂದಲೇ ಕೋಟಿ ಸೂರ್ಯಪ್ರಭೆಯನ್ನು ಮಿಂಚಿಸುವ ಪ್ರಕಾಶಮಯವಾದ ವಿಮಾನವನ್ನು ಬರಿಸಿ, ಭಕ್ತೋತ್ತಮನನ್ನು ಅದರಲ್ಲಿ ಕುಳ್ಳಿರಿಸಿ ಸುರರು ಜಯ ಜಯವೆನ್ನುವ ಮಂಗಲರವದಲ್ಲಿಯೆ ಆತನಿಗೆ ಉಚಿತವಾದ ಗಣಪದವಿಯನ್ನು ದಯಪಾಲಿಸಿದನು.



೬೦.

# ೪೮. ಕೊಲ್ಪುಲಿಯಾಂಡರು.



ಬಲು ಬರಂ ಮೋರಲದರೊಳು ಭಕ್ತರರ್ಥಮಂ । ನಲಿದುಂಡ ಬಂಧುಗಳ-ನಿಕ್ಕಿ ಮಿಕ್ಕಕೋಲ್ । ಪುಲಿಯಾಂಡರೆನ್ನ ಪೊರೆಯುವದು ॥

[ಶ್ರೀ ನಿಜಗುಣರು]



ವಿಧ ಸಂಪತ್ತುಗಳಿಂದ ಪೂರಿತವಾದ ಮತ್ತು ವಿವೇಕಶಾಲಿಗಳಾದ ಜನಸಮೂಹದಿಂದ ಶೋಭಿಸುವ, ಶಿವನಿಲಯಗಳಿಂದ ಅಲಂಕೃತವಾದ ಚೋಳಮಂಡಲವು ಆರ್ಯಾವರ್ತದ ತೆಂಕಣಭಾಗದಲ್ಲಿ ವಿರಾಜಿಸುತ್ತಿತ್ತು. ಆ ಭೂಪ್ರದೇಶದಲ್ಲಿ ತಿರುವಣ್ಣಮಾಲೆ ಎಂಬ ಪುರವು ಐಶ್ವರ್ಯದಾಗರವಾಗಿ ವಾಣಿಜ್ಯದ ತವರೂರಾಗಿತ್ತು. ಆ ಪಟ್ಟಣದಲ್ಲಿ ನಿತ್ಯಾನಿತ್ಯವಿವೇಕಸಂಪನ್ನನು, ಉದಾರನು, ಸಾಹಸಿಯು ಉದ್ಯಮಪ್ರಿಯನು ಆದ **ಕೊಲ್ಪುಲಿಯಾಂಡ**ನೆಂಬ ಪರಮಾತ್ಮನಿಷ್ಠನು ಒಪ್ಪುತ್ತಿದ್ದನು. ಸಂಚಿತಪುಣ್ಯವಶದಿಂದಲೋ ಅಥವಾ ಸತ್ಯ-ಪರಾಯಣತೆ-ಗುರುಭಕ್ತರ ಒಡನಾಟ-ಶಿವಾನುರಾಗಿಗಳ ಸ್ನೇಹದಿಂದಲೋ ಆತನಿಗೆ ಪರಮಪೂಜ್ಯರ ಸಂದರ್ಶನವಾಗಲು ನಿರ್ಮಲಹೃದಯನು, ಪರಿಶುದ್ಧಾತ್ಮನು ಆದ ನಮ್ಮ ಕಥಾನಾಯಕನಿಗೆ ಆ ಮಹಿಮರಿಂದ ಶಿವಮಂತ್ರಾಧಿಕಾರವನ್ನು ಹೊಂದಿ ಸಪತ್ನೀಕನಾಗಿ ತನ್ನ ತಾಯಿ ತಂದೆ ಸಮೇತನಾಗಿ ಸಂಸ್ಕೃತನಾದನು. ಉದ್ಯೋಗತತ್ಪರತೆ, ಗುರುಚರಣಧ್ಯಾನ, ನಿಜಾಚರಣೆ, ಶಿವಾನುಭವ ಲವಲವಿಕೆ, ಸತ್ಪಾತ್ರದಾನ ಇವೆಲ್ಲವೂ ಆತನಿಗೆ ಸ್ವಾಭಾವಿಕಗುಣಗಳಾಗಿ ಪರಿಣಮಿಸಿದವು. ಭೂರುದ್ರರೆನಿಸುವ ಸದಾಚಾರಶೀಲರಾದ ಜಂಗಮಮೂರ್ತಿಗಳನ್ನು ಪ್ರಮಥರನ್ನಾಗಿ ತಿಳಿದು ಅವರನ್ನು ಬಹು ಗೌರವದಿಂದ ಕಾಣುತ್ತ ಅವರಿಷ್ಟಾನುಸಾರವಾಗಿ ಅನ್ನವಸ್ತ್ರಾದಿಗಳಿಂದ ತೃಪ್ತಿಗೊಳಿಸಿ ಭೂರಿದಕ್ಷಿಣೆಯನ್ನು ಅರ್ಪಿಸುತ್ತಿದ್ದನು. ಶಿವಜ್ಞಾನ ಪ್ರವಾಹ ಭೂಷಿತನಾದ ನಮ್ಮ ಚರಿತ್ರಪುರುಷನು ಮುಂದೆ ಬರುವ ಭಯಂಕರವಾದ ಬರಗಾಲವನ್ನು ಮುಂಚಿತವಾಗಿ ತಿಳಿದು ವ್ಯಾಪಾರದಿಂದ ಗಳಿಸಿದ ಹೇರಳ ದ್ರವ್ಯವನ್ನು ಹಾಗೂ ಬಹು ಧಾನ್ಯವನ್ನು

ತನ್ನ ಮಾತಾಪಿತರ ವಶಕ್ಕೆ ಕೊಟ್ಟು ಕ್ಷಾಮಕಾಲವು ಇಷ್ಟರಲ್ಲಿಯೇ ಪ್ರಾಪ್ತವಾಗುವದು; ನೀವು ಮಾಹೇಶ್ವರರ ತೃಪ್ತಿಯನ್ನು ನಾನು ಈ ವರೆಗೆ ನಡೆಸಿದಂತೆ ಬಹು ಭಕ್ತಿಯಿಂದ ಸ್ವಲ್ಪವೂ ಲೋಪಬಾರದಂತೆ ಅನವರತವೂ ಸಾಗಿಸಬೇಕೆಂದು ವಿಜ್ಞಾಪಿಸಿದನು ಮತ್ತು ಶಿವಚಿನ್ಹಾಂಕಿತರಾದ ಪುರುಷಶ್ರೇಷ್ಠರು ಬಂದೊಡನೆ ಸತ್ಕಾರವನ್ನು ಮಾಡದಿದ್ದರೆ ತನ್ನ ಶೀಲಕ್ಕೆ ಬಾಧೆ ಬರುವದೆಂದು ಹಾಗೂ ಸತ್ವವು ಕಡಿಮೆಯಾಗುವದೆಂದು ವಿನಯದಿಂದ ಬಿನ್ನವಿಸಿ ದ್ವೀಪಾಂತರಕ್ಕೆ ವ್ಯಾಪಾರಕ್ಕಾಗಿ ಹೊರಡಲನುವಾದನು. ತನ್ನ ಸತಿಯಳನ್ನು ಕರೆದು ಶಿವಭಕ್ತರಿಗೆ ಅನ್ನದಾನವನ್ನು ಬೇಸರಿಯದೆ ಮಾಡಬೇಕೆಂದು ಹಾಗೂ ಗಣತಿಂತಿಣಿಯು ಸಂತೋಷಪಡುವಂತೆ ಅವರನ್ನು ಆದರಿಸಬೇಕೆಂದು, ಮಂಗಲಮಯನಪ್ಪ ಶಂಭುವೇ ಜಂಗಮನಾಗಿ ಅತಿಥಿರೂಪದಿಂದ ಸದ್ಭಕ್ತರ ಭಕ್ತಿಯನ್ನು ಸ್ವೀಕರಿಸುವನೆಂದು ಬಿಂಬಿಸಿ ಹೇಳಿ, ಮುಪ್ಪಿನ ಅತ್ತಿಮಾವಂದಿರನ್ನು ಚನ್ನಾಗಿ ಪೋಷಿಸಿ ಅವರ ಪರಿಚರ್ಯವನ್ನು ನೆಟ್ಟಗೆ ಮಾಡಬೇಕೆಂದು ಕಟ್ಟುಮಾಡಿ ವ್ಯಾಪಾರಕ್ಕಾಗಿ ಪರದೇಶಕ್ಕೆ ಹೋದನು.

ಆ ಬಳಿಕ ಕಾಲಕ್ರಮದಿಂದ ವೃಷ್ಟಿಯು ಆಗದಿರಲು ಆ ನಾಡಿನಲ್ಲಿ ಬರವು ಬಿದ್ದಿತು. ಕಥಾನಾಯಕನ ಮನೆಯಲ್ಲಿ ಕೆಲವು ದಿವಸ ಜಂಗಮ ತೃಪ್ತಿಯು ಸರಿಯಾಗಿ ನಡೆಯಿತು. ಬಳಿಕ ಈ ಧನಿಕನ ಮನೆಗ ಪೂರ್ವ ಸಂಬಂಧಿಗಳಾದ ಅನೇಕ ಜನ ನಂಟರು ಬಹು ಸಂಖ್ಯಾಕರಾಗಿ ಅನ್ನಾರ್ಥಿಗಳಾಗಿ ಬಂದುಬಿಟ್ಟರು. ನೂತನವಾಗಿ ಅಭ್ಯಾಗತರಂತೆ ಬಂದ ಬಂಧುಗಳು ಎಷ್ಟೊ ತಿಂಗಳು ನಿಂತುಬಿಟ್ಟರು. ಇವರ ಉಪಚಾರದ ಭರದಲ್ಲಿ ಗಣಸಮೂಹದ ಸತ್ಕಾರಕ್ಕೆ ತಡೆಯಾದುದರಿಂದ ಅವರೆಲ್ಲರೂ ಮರಮರನೆ ಮರುಗಿ ಕಲ್ಪವೃಕ್ಷಪ್ರಾಯವಾಗಿರುವ ಭಕ್ತೋತ್ತಮನ ಮಂಗಲಗೃಹವು ನಮಗೆ ಎರವಾಯಿತೆಂದು ನೊಂದು ಬೇರೆ ಬೇರೆ ಸ್ಥಳಗಳಿಗೆ ತೆರಳಿದರು. ನಂತರ ಈಶ್ವರಕೃಪೆಯಿಂದ ಮೋಡಗಳು ಮಳೆಗರೆದವು. ಭೂಮಿಯು ಪೈರುಗಳಿಂದ ಚಲ್ವಾಗಿ ಕಂಗೊಳಿಸಿತು. ಸುಖಕಾಲವು ಬರಲು ಬಳಗದವರೆಲ್ಲರೂ ತಮ್ಮತಮ್ಮ ಊರಿಗೆ ಹೋದರು.

ದ್ವೀಪಾಂತರಕ್ಕೆ ಹೋದ ನಮ್ಮ ಶರಣನು ತನ್ನ ವ್ಯಾಪಾರವನ್ನು ಪೂರೈಸಿಕೊಂಡು ನಿಜಗೃಹಕ್ಕೆ ಬಂದು ಜನನೀ ಜನಕರ ಕುಶಲವನ್ನು ಕೇಳಿ, ತಾನು ಅರಿಕೆ ಮಾಡಿಕೊಂಡು ಹೋದ ಮೇರೆಗೆ ಜಂಗಮಾರಾಧನೆ-ತೃಪ್ತಿ ಸಾಂಗವಾಗಿ ನಡೆಯಿತೋ? ಎಂದು ಕೇಳಿದನು. ಆಗ ಆತನ ಜನನೀಜನಕರು ವರ್ತಿಸಿದ ಸಂಗತಿಯನ್ನೆಲ್ಲ ವಿವರಿಸಿದರು. ಚರಿತ್ರಪುಂಗವನು ಇದನ್ನೆಲ್ಲ ಕೇಳಿ ಬಟ್ಟಿ-ಅನ್ನ ಹಾಗೂ ಧನ ಇವು ಭವಿಗಳ (ಅಂದರೆ ಶಿವಸಂಸ್ಕಾರವಿಲ್ಲದವರ ಅಂದರೆ

ಸಕಲ ಭುವನಾಧಿಪತಿಯಾದ ಶಿವನನ್ನು ಅನುನಯದಿಂದ ಅನವರತವೂ ಸ್ಮರಿಸ ದವರ, ಅಣುವಿಗಿಂತ ಅಣುವಾಗಿಯೂ, ಅತ್ಯತಿಷ್ಟದ್ದಶಾಂಗುಲನಾಗಿಯೂ ಇರುವ ಚಿನ್ಮೂರ್ತಿಗೆ ಆತ್ಮನಿವೇದನೆಯನ್ನು ಮಾಡದ ಜಡರ) ಪಾಲಾಗಿ ಜಂಗಮ ತೃಪ್ತಿಗೆ ಭಂಗಬಂದದ್ದನ್ನು ತಿಳಿದು ಬಹು ಸಂತಾಪಗೊಂಡು ಹಾ-ಹಾ ಗಣಸಮೂಹವೇ ಎಂದು ಕೊರಗಿ ಕಳವಳಿಸಿ ತನ್ನ ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು ನೋಡುವವರಿಗೆ ಶಾಂತನಂತೆ ನಟಿಸಿ ಬಳಗ ಸಮೂಹಕ್ಕೆ ಉಡುಗರೆಯನ್ನು ಕೊಡಬೇಕಾಗಿರುವದೆಂದು ಎಲ್ಲರಿಗೂ ಹೇಳಿಕಳಿಸಿದನು. ಆಗ ಅವರೆಲ್ಲರೂ ಬರಲು ಅರಮನೆಯಂತಿರುವ ತನ್ನ ಸೌಧಕ್ಕೆ ಕರಿಸಿಕೊಂಡು ಮುಂದಿನ ತಲೆಬಾಗಿಲನ್ನು ಭದ್ರವಾಗಿ ಕಾಯಲಿಕ್ಕೆ ಆಳುಗಳನ್ನು ಹಚ್ಚಿ ಅವರೆಲ್ಲರನ್ನೂ ಸಾಲಾಗಿ ನಿಲ್ಲಿಸಿ (ದಕ್ಷಾಧ್ವರದಲ್ಲಿ ವಿರೇಶನು ಆರ್ಭಟಿಸಿದಂತೆ ಗರ್ಜಿಸಿ) ಖಡ್ಗದಿಂದ ಅವರ ಶಿರಗಳನ್ನು ತರಿದನು. ಭಕ್ತಲಲಾಮನ ಉಗ್ರಗಣಾಚಾರಕ್ಕೂ ಹಾಗೂ ಆತನ ಅತಿಶಯವಾದ ಜಂಗಮನಿಷ್ಠೆಗೂ ಪರಾತ್ಪರನೂ, ಪರಂಜ್ಯೋತಿಸ್ವರೂಪನೂ ಆದ ಚಂದ್ರಮೌಳಿಯು ಪ್ರತ್ಯಕ್ಷನಾಗಿ ಬಂಧುಜನರಿಗೆ ಜೀವದಾನಮಾಡಿದನು. ಜಗದ್ಭರ್ತೃವನ್ನು ಕಂಡೊಡನೆ **ಕೊಲ್ಲುಲಿಯಾಂಡ**ನು ಕಡು ಹರ್ಷವನ್ನು ಹೊಂದಿ ಪ್ರಭುವಿನನ್ನು ಪರಿಪರಿಯಾಗಿ ಸ್ತುತಿಸಿ ಮೈಮರೆತನು. ನಿಜಭಕ್ತನನ್ನು ಪಾರ್ವತೀಸಖನು ಸಂತೈಸಿ ಮಣಿಪುಷ್ಪಕವೆಂಬ ದೇವಯಾನವನ್ನು ಬರಮಾಡಿ ಅದರಲ್ಲಿ ಕೂಡ್ರಿಸಿ ಆತನಿಗೆ ಉನ್ನತವಾದ ಗಣಪದವಿಯನ್ನು ಅನುಗ್ರಹಿಸಿದನು.



ಓಂ.

# ೪೯. ತಂಡೇಶನು.



ಪಿತನೊಮ್ಮೆ ಪಾರ್ವತಿಯ ಪತಿಯಂ ನಿರಾಕರಿಸೆ । ಶ್ರುತಿವಿಧಿಗಳು ಕದವ ನಿರಿದಿಹ ತಂಡೇಶ । ನತಿಭಕ್ತಿಸೌಖ್ಯವೆನಗಕ್ಕು ॥

[ಶ್ರೀ ನಿಜಗುಣರು].




ಶುದ್ಧಮಾರ್ಗಾವಲಂಬಿಯಾಗಿ ತನಗೂ ತನ್ನ ನೆರೆಯವರಿಗೂ ಹಿತವಾಗುವಂತೆ ನಡೆಯುವವನೇ ವಿಪ್ರನು. ಬ್ರಹ್ಮದಲ್ಲಿ ರಮಮಾಣನಾಗಿ ಬ್ರಹ್ಮವನ್ನು ತಿಳಿಯುವವನೇ ಬ್ರಾಹ್ಮಣನು. ಭೂಸುರ ಎಂಬದಾಗಿ ಕರೆಯಲ್ಪಡುವ ಬ್ರಹ್ಮನಿಷ್ಠ ಜನಸಮೂಹದಿಂದ ಅಲಂಕೃತವಾದ ಕೇರಿಗೆ ಅಗ್ರಹಾರವೆಂದು ಹೇಳುವರು.

ಸನ್ಮಾರ್ಗತತ್ಪರರಾದ ಶೈವರಿಂದ ಶೋಭಿತವಾಗಿ ಸಮಸ್ತ ಸಂಪತ್ತುಗಳಿಗೆ ಆಗರವಾಗಿ ಮೆರೆಯುವ ಚೋಳ ಧರಿತ್ರಿಯಲ್ಲಿ ಕಾವೇರಿ ಎಂಬ ಹೊಳೆಯು ತನ್ನ ಶಾಖೋಪಶಾಖೆಗಳಿಂದ ವಿವಿಧಬೆಳಸುಗಳಿಗೆ ಆಧಾರವಾಗಿ ಜೀವಿಗಳಿಗೆ ಸಂತೋಷವನ್ನುಂಟುಮಾಡುತ್ತ ಮನೋಹರವಾಗಿ ಹರಿಯುತ್ತಿತ್ತು. ಇಂತೆಸೆವ ಆ ನದಿಯ ದಂಡೆಯಲ್ಲಿರುವ ಸಲ್ಲೀಲೆ ಎಂಬ ಪುರದಲ್ಲಿ ಶೈವರಿಂದ ನಿಬಿಡವಾದ ಅಗ್ರಹಾರವು ವಿರಾಜಿಸುತ್ತಿತ್ತು. ಆ ಬ್ರಾಹ್ಮಣರ ಸಮುದಾಯದಲ್ಲಿ ಒಬ್ಬ ಮಂದಮತಿಯಾದ ವಿಪ್ರನು ವಿಚಾರಪರಳಾದ ಶಿವಭಕ್ತಿಯಿಂದ ಒಪ್ಪುವ ನಾರೀಮಣಿಯೊಡನೆ ಸಂಸಾರವನ್ನು ಸಾಗಿಸುತ್ತಿದ್ದನು. ಆ ಸಾಧ್ವಿಯ ನಿರ್ಮಲವಾದ ಶಿವಭಕ್ತಿಗೆ ಪಾರಿತೋಷಕವೋ ಏನೋ ಎಂಬಂತೆ ಆ ವಿಪ್ರನಿಗೆ ಮನೋಹರಗಾತ್ರನಾದ ಸುಕುಮಾರ ಶರೀರದಿಂದೊಪ್ಪುವ ಪುತ್ರನು ಉದಯಿಸಿದನು. ತಾಯಿಯ ಅಪ್ಪಣೆಯಂತೆ ಆ ಕುಮಾರನು ಶಿವಭಕ್ತರೊಡನೆ ವಿಹರಿಸುತ್ತ ಅವರ ಬಾಲಕರ ಸ್ನೇಹವನ್ನು ಬೆಳೆಸಿ ಆ ಚಿಕ್ಕಮಕ್ಕಳಕೂಡ ಕ್ರೀಡಿಸುತ್ತಿದ್ದನು. ಆ ಭಕ್ತರ ವಟುಗಳೊಡನೆ ಮೃತ್ತಿಕೆಯ ಲಿಂಗವನ್ನು ಮಾಡಿ ಪೂಜಿಸಿ ಸಂತೋಷಪಡುತ್ತ ಪತ್ರಿ ಪುಷ್ಪ ಪಲ್ಲವಾದಿಗಳನ್ನು ಧರಿಸುತ್ತಿದ್ದನು. ಈ ಪರಿಯಾದ ಶಿವಾರ್ಚನಾ

ಸಂಭ್ರಮದಲ್ಲಿ ತಂಡೇಶನೆಂಬ ಆ ವಿಪ್ರಕುಮಾರನು ಹಸಿವು ನೀರಡಿಕೆಯ ಪರಿವೆಯಿಲ್ಲದೆ ಲಿಂಗಗಳನ್ನು ಮಾಡುತ್ತ ಅವುಗಳನ್ನು ಪೂಜಿಸುತ್ತ ಶಿವಪೂಜಾ ವಿನೋದದಲ್ಲಿಯೇ ಕಾಲವನ್ನು ಕಳೆಯುತ್ತಿದ್ದನು. ಇದನ್ನು ಆತನ ಓರಗೆಯ ಹುಡುಗರು ನೋಡಿ ಅವನ ಜನಕನಿಗೆ ಸಾರಿಬಿಟ್ಟರು. ಇದನ್ನು ಕೇಳಿ ಬುದ್ಧಿಶೂನ್ಯನಾದ ಆ ವಿಪ್ರನು ಸಿಟ್ಟಿಗೆದ್ದನು.

ಗೋವು ಪವಿತ್ರವಾದ ಪ್ರಾಣಿಯು. ಈ ಆವು ಮಾನವರಿಗೆ ಬಹು ಉಪಕಾರವನ್ನು ಮಾಡುವದು ಸರ್ವರಿಗೂ ತಿಳಿದ ಸಂಗತಿಯು. ಶಿವಭಕ್ತರಿಗಂತು ಆಕಳು ಅವಶ್ಯವಾಗಿ ಬೇಕಾಗಿರುವದು. ಅದರ ಸಗಣಿಯು ಗೃಹಶುದ್ಧಿಗೂ, ಹಾಗೂ ಮೂತ್ರವು ಸಮ್ಮಾರ್ಜನೆಗೂ ಮತ್ತು ಕೆಲವುವೇಳೆ ಔಷಧಿಗೂ, ಬರುವದು. ಸರ್ವೋತ್ಕೃಷ್ಟವೆನಿಸುವ ಭಸಿತವಾದರೂ ಗೋಮಯದಿಂದಲೇ ಉಂಟಾಗುವದು. ಗೋಕ್ಷೀರವು ಬಹು ಆರೋಗ್ಯಕರವಾದುದು ಮತ್ತು ಲಿಂಗಾಭಿಷೇಕಕ್ಕೆ ಉಪಯೋಗವಾಗುವದು. ಗೋವಿನ ಶರೀರವೇ ಅನೇಕ ದೇವತೆಗಳ ನಿವಾಸವಾಗಿರುವದೆಂದು ಆಸ್ತಿಕರ ಮತವು ಆದುದರಿಂದಲೇ ಆರ್ಯರು ಪೂರ್ವಕಾಲದಿಂದ ಗೋಪಾಲನವನ್ನು ಮಾಡುತ್ತ ಬಂದಿರುವರು.

ನಮ್ಮ ಕಥಾನಾಯಕನ (ತಂದೆಯ) ಮನೆಯಲ್ಲಿ ಗೋವೃಂದವು ವಂಶಪರಂಪರೆಯಿಂದ ಚನ್ನಾಗಿ ಪೋಷಣೆಯನ್ನು ಹೊಂದುತ್ತಿತ್ತು. ಮಗನ ಲಿಂಗದಾಟವನ್ನು ನೋಡಿದ ಮತಿಗೆಟ್ಟ ವಿಪ್ರನು ಬಹು ಕೋಪಯುಕ್ತನಾಗಿ ಸುತನನ್ನು ಹೀಗೆಯೇ ಬಿಟ್ಟರೆ ಕೈಗೆ ಬರುವದಿಲ್ಲವೆಂದು ತಿಳಿದು ಆ ತನಯನನ್ನು ಮನೆಯ ಆಕಳುಗಳನ್ನು ಕಾಯಲಿಕ್ಕೆ ಹಚ್ಚಿದನು. ಆಗಲಾ ನಮ್ಮ ತಂಡೇಶನ ಆನಂದಕ್ಕೆ ಎಣೆ ಇಲ್ಲವಾಯಿತು. ಏಕಾಂತದಲ್ಲಿ ನಿರಾತಂಕವಾಗಿ ಮನದಣಿಯುವಂತೆ ಪೂಜೆಯು ನಡೆಯುವದೆಂದು ಹಿಗ್ಗಿದನು. ದಿನಾಲು ಗೋವುಗಳನ್ನು ನದೀತೀರಕ್ಕೆ ಒಯ್ದು ಅವುಗಳನ್ನು ಹುಲ್ಲು ಮೇಯಲಿಕ್ಕೆ ಹಚ್ಚಿ ತಾನು ಶುಚಿರ್ಭೂತನಾಗಿ ಮನೆಯಿಂದ ಯಾರಿಗೂ ಕಾಣದಂತೆ ತಂದ ಭಸ್ಮ ರುದ್ರಾಕ್ಷಿಗಳನ್ನು ಯಥಾವಿಧಿಯಾಗಿ ತಳೆದು ಲಿಂಗಗಳನ್ನು ರಚಿಸಿ ಆವಿನ ಹಾಲನ್ನು ಕರೆದು ಲಿಂಗಾಭಿಷೇಕವನ್ನು ಭಕ್ತಿಯಿಂದ ಮಾಡಿ, ಪ್ರೀತಿಯಿಂದ ಹೂವುಗಳನ್ನು ಧರಿಸಿ ಪರಮಾತ್ಮನನ್ನು ಎವೆ ಇಕ್ಕದೆ ನೋಡುತ್ತ ಸ್ಮರಿಸುತ್ತ ಪ್ರೇಮಪೂರ್ವಕವಾಗಿ ಅರ್ಚಿಸುತ್ತ ಆಗಾಗ್ಗೆ ಲಿಂಗಮೂರ್ತಿಗೆ ನಮಸ್ಕರಿಸುತ್ತ ಶಿವಭಾವನೆಯಲ್ಲಿ ಚಿತ್ತವು ನೆಲಿಸಿ ಶಿವಾನಂದಮಯನಾಗುತ್ತಿದ್ದನು. ಈ ರೀತಿಯಾಗಿ ಕೆಲವು ತಿಂಗಳು ಸಾಗಿದವು. ಒಂದು ದಿನ ಎಂದಿನಂತೆ ಚರಿತ್ರನಾಯಕನು ಗೋವುಗಳನ್ನು ಕಾವೇರಿಗೆ ತಂದು ಅವುಗಳನ್ನು ಉಚಿತ ಸ್ಥಾನದಲ್ಲಿ ಬಿಟ್ಟು ತನ್ನ ನಿತ್ಯಕೃತ್ಯ

ದಂತೆ ಶಿವಲಿಂಗಾಭಿಷೇಕವನ್ನು ಮಾಡಿ ತನಗೆ ಸರಿಕಂಡಂತೆ (ತನಗೆ ಉಲ್ಲಾಸ ವಾಗುವಂತೆ) ಮನೋಹರವಾಗಿ ಪೂಜಿಸಿ ತರತರದ ಕುಸುಮಗಳಿಂದ ಲಿಂಗವ ನ್ನಲಂಕರಿಸಿ ಆನಂದವನ್ನು ಹೊಂದುತ್ತ ಮುಕ್ತಿದಾಯಕವಾದ ಪಂಚಾಕ್ಷರಿ ಜಪದಲ್ಲಿ ಮಗ್ನನಾಗಿ ಆ ಅನುಪಮವಾದ ಲಿಂಗದ ಮುಂದೆ ಕುಣಿಕುಣಿದು ಆ ಗಾಗ್ಗೆ ಕಿಂಕರಭಾವದಿಂದ ಲಿಂಗಮೂರ್ತಿಗೆ ಮೈಯ್ಯಿಕ್ಕಿ ಪುನಃ ಶಿವಧ್ಯಾನಾಸಕ್ತ ನಾಗಿ ಮೈಮರೆದು ಭಕ್ತಿಭಾವದಿಂದ ಪರವಶನಾಗಲು ಇದೆಲ್ಲನನ್ನು ಸಮೀಪದ ಲ್ಲಿಯ ದನಗಾಹಿಗಳು ಕಂಡು ತಂಡೇಶನ ಪಿತನ ಬಳಿಗೆ ಹೋಗಿ ನಿನ್ನ ಕುವ ರನು ಹಾಲನ್ನು ಕರೆದು ಲಿಂಗದ ಮೇಲೆ ಸುರುವಿಬಿಡುವನು ಮತ್ತು ಹೂವುಗ ಳನ್ನು ಲಿಂಗದ ಮಸ್ತಕದ ಮೇಲೆ ಇಡುತ್ತ ಭಜನೆಯನ್ನು ಮಾಡುತ್ತ ಕುಣಿಯು ತ್ತಿರುವನು. ಆಕಳುಗಳ ಕಡೆ ನಿಮ್ಮ ಹುಡುಗನ ಲಕ್ಷವು ಎಳ್ಳಷ್ಟು ಇರುವದಿಲ್ಲ ಎಂದು ಹೇಳಿದರು.

ಕಡುಮೂರ್ಖನಾದ ಆ ವಿಪ್ರನು ಆ ಗೋಪರು ಹೇಳಿದ ಮಾತುಗಳನ್ನು ಕೇಳಿ ಕಿಡಕಿಡಿಯಾಗಿ ಮಗನಿದ್ದ ಸ್ಥಳಕ್ಕೆ ಬೇಗನೆ ಬಂದು ದೂರಿನಿಂದಲೆ ಕುಮಾ ರನ ಶಿವನಾಟವನ್ನು ಕಂಡು ಮತ್ತಿಷ್ಟು ರೋಷಗೊಂಡು ಆತನಿರುವ ಸ್ಥಳವೆಲ್ಲ ಸುತ್ತಲು ಹಾಲಿನ ಪ್ರವಾಹದಿಂದ ಕೆಸರಾದುದನ್ನು ನೋಡಿನೋಡಿ ಸಿಟ್ಟು ಮತ್ತಿ ಷ್ಟು ತಲೆಗೇರಿ ಕಣ್ಣುಗಳನ್ನು ಕೆಂಪಗೆ ಮಾಡಿ ಹಲ್ಲುಗಳನ್ನು ಕಚ್ಚುತ್ತಾ ವಿಚಾರ ಶೂನ್ಯನಾಗಿ ಮಗನನ್ನು ಗಣನೆಗೆ ತಾರದೆ ಶಿವಭಕ್ತರೇ ಈ ಪರಿಯ ಮರುಳರು, ಎಂದು ತುಚ್ಛವಾಗಿ ನುಡಿಯುತ್ತ ಆತನ ಲಿಂಗಮೂರ್ತಿಯನ್ನು ತನ್ನ ಕನಿಷ್ಠಾಂ ಗದಿಂದ ಮುಟ್ಟಿ ಲಿಂಗವನ್ನು ಇಲ್ಲದಂತೆ ಮಾಡಿದನು. (ಆ ರೂಪವನ್ನು ಅಡಗಿ ಸಿದನು.) ಆಗಲಾ ದ್ವಿಜಕುಮಾರನಾದ ತಂಡೇಶನು ಬಹುಪರಿಯಾಗಿ ನೊಂದು ಕಳವಳಿಸಿ ಅಕಟಕಟಾ, ಶಿವಶಿವಾ ಎಂದು ಪ್ರಳಪಿಸಿ ಅತಿ ದುಃಖಿತನಾಗಿ ಗಾಬ ರಿಯಾಗಿ ಹಾ ಲಿಂಗವೇ ಎಂದು ಕೊರಗಿ ಕೋಪೋದ್ದೀಪಿತನಾಗಿ ತೀಕ್ಷ್ಣವಾದ ಗಣಾಚಾರವನ್ನು ಕೈಕೊಂಡನು. ಅಂದರೆ ಪಿತೃದೇವೋಭವ ಎಂಬ ಶ್ರುತಿ ವಾಕ್ಯವನ್ನು ಅರಿತವನಾದಾಗ್ಯೂ ನಾಕಷ್ಟು ಪಿತೃಪ್ರೇಮವನ್ನು ವಹಿಸಿದವನಾ ದಾಗ್ಯೂ ಶಿವದ್ರೋಹವನ್ನು ಸೈರಿಸದೆ ತನ್ನನ್ನು ಹಡೆದವನೆಂದು ಪೂಜ್ಯನೆಂದು ತಿಲಮಾತ್ರವಾದರೂ ಅನುಮಾನಿಸದೆ ರೌದ್ರಾಕಾರವನ್ನು ತಾಳಿ ತನ್ನ ಹತ್ತರದ ಲ್ಲಿಯೇ ಇಟ್ಟುಕೊಂಡ ಹದನಾದ ಕೊಡ್ಲಿಯಿಂದ ತಂದೆಯ ಶಿರಸ್ಸನ್ನು ಕಳಚಿಬಿ ಟ್ಟನು. ಸರ್ವಾಂತರ್ಯಾಮಿಯಾದುದರಿಂದಲೇ ಸರ್ವಸಾಕ್ಷಿಭೂತನೂ, ಅಶ ರೀರಿಯಾದುದರಿಂದಲೇ ದಿಗಂಬರನೂ, ಚರಿತ್ರನಾಯಕನ ಉಪಾಸನಾ ಮೂರ್ತಿ ಯೂ ಆದ ದೇವೋತ್ತಮನು ಕೂಡಲೆ ವೃಷಭಾರೂಢನಾಗಿ ತಂಡೇಶನಿದ್ದಲ್ಲಿಗೆ ಬಿಜಯಮಾಡಿ ಆಕಳು ತನ್ನ ಕರುವನ್ನು ನೆಕ್ಕುವಂತೆ ಚರಿತ್ರಪುಂಗವನನ್ನು

ಆಘ್ರಾಣಿಸಿದನು. ಈ ದಿವ್ಯ ಕುಮಾರನು ತತ್ವರೂಪನಾದ ಸಾಂಬನನ್ನು ಪರಿಪರಿಯಾಗಿ ಸ್ತುತಿಸಿ ಪುನಃ ಪುನಃ ಮಹಾಪಾದಕ್ಕೆ ಮಸ್ತಕವನ್ನು ನೀಡುತ್ತಾ ನಲಿಯುತ್ತಿದ್ದನು. ಹೀಗಿರಲು ಕಾರುಣ್ಯ ಮೂರ್ತಿಯಾದ ಕಾಲನಾಥನು ಭೂಸುರನೆಂಬ ಹೆಸರಿಗೆ ಕಲಂಕಪ್ರಾಯನಾದ ಆ ಮಡ್ಡನಿಗೆ (ತಲೆಯನ್ನು ಕಳಕೊಂಡ ಆ ವಿಪ್ರನಿಗೆ) (ಆತನ ಧೇನುವಿನ ಕ್ಷೀರದಿಂದಲೇ ಈ ವರೆಗೆ ಆತನ ಹಸುಳನು ಮಜ್ಜನ ಮಾಡಿದುದರಿಂದ) ಜೀವಕಳೆಯನ್ನು ಅನುಗ್ರಹಿಸಿ ಅವನ ತನುಜನಾದ ನಮ್ಮ ತಂಡೇಶನಿಗೆ ಗಣಪದವಿಯನ್ನು ಕರುಣಿಸಿದನು.



ಓಂ.

# ೫೦. ಕಲಿಯನಾಯನಾರು.



ಇಂದುಧರನಿದರ ಸೊಡರಂದವಳಿವುತ್ತ ಮಿರ । ಲಂದು ನಿಜರುಧಿರ ವೆರದ
ಚ್ಚ ಕಲಿಯನಾ । ರೊಂದಿಪುದೆನಗಂದ ವರವನು ॥

[ಶ್ರೀ ನಿಜಗುಣರು]



ಲಿತಕಲೆ, ಕೈಗಾರಿಕೆ, ಕೃಷಿ, ವಾಣಿಜ್ಯ ಸದ್ವಿದ್ಯಾಧ್ಯಯನ ಮುಂತಾದ ಉಚಿತ ಕಾಲಹರಣ ವ್ಯವಸಾಯಗಳಿಂದೊಪ್ಪುತ್ತ ಜಲಸಿಧಿಗಳಿಂದ ಭರಿತವಾಗಿ ಅನೇಕ ಪೈರುಗಳಿಂದ ಸಮೃದ್ಧಿಯಾಗಿ ಚೋಳ ಭೂಮಿಯು ಪರಮ ಪಾವನ ಸೀಮೆಯಾಗಿ ಸೊಗಯಿಸುತ್ತಿತ್ತು. ಈಶ್ವರಾಲಯಗಳಿಂದ ವಿರಾಜಿಸುವ ಆ ಅವನಿಯಲ್ಲಿ **ತಿರುವತ್ತೂರ** ಎಂಬ ಪುರವು ಅನೇಕ ಭಗವದ್ಭಕ್ತರ ನಿವಾಸಸ್ಥಾನವಾಗಿ ಶಿವನಿಲಯಗಳ ಬೀಡಾಗಿ, ಮಂಗಲದ ಆಗರವಾಗಿ ಸಕಲೈಶ್ವರ್ಯಗಳಿಂದ ಶೋಭಿಸುತ್ತಿತ್ತು. ಆ ಊರ ಶೈವರಲ್ಲಿ ನಮ್ಮ ಚರಿತ್ರ ನಾಯಕನಾದ ಕಲಿಯನಾಯನಾರು ಈತನು ಬಹಳ ಸರಳ ಹೃದಯದವನು, ಹಿಡಿದ ಛಲವನ್ನು ಬಿಡದವನು, ಸತ್ಕಾರ್ಯಪ್ರೇಮಿಯು, ಸಾಧುಜನ ಸಂಗಮೋತ್ಸುಕನು, ಪರಹಿತಕಾಂಕ್ಷಿಯು ಉದಾರನು ಆಗಿದ್ದನು. ಪರಮಾತ್ಮನ

ಕೃಪಾಪಾತ್ರನಾದುದರಿಂದ ಧನಾಢ್ಯನಾಗಿದ್ದನಲ್ಲದೆ ಬಹಳ ನಿಗರ್ವಿಯು, ವಿನಯಶಾಲಿಯು ಆಗಿ ಶಿವಭಕ್ತಸಮೂಹದಲ್ಲಿ ಚಂದ್ರನಂತೆ ಬೆಳಗುತ್ತಿದ್ದನು.

ಯಾವದಾದರೊಂದು ನಿಯಮವನ್ನು ಗುರುಹಿರಿಯರ ಸೇವೆಯಲ್ಲಿ ಅಥವಾ ಪರಮಾತ್ಮನ ಕೈಂಕರ್ಯದಲ್ಲಿ ತಪ್ಪದೆ ಆಚರಿಸುವದಕ್ಕೆ ಆರ್ಯರು ವ್ರತವೆಂದು ಹೆಸರಿಟ್ಟಿರುವರು. ಈ ವ್ರತದ ಅಥವಾ ಛಲದ ವಿಶೇಷವೇನಂದರೆ ಸತ್ಪುರುಷನು ಎಂಥ ಕಠಿಣ ಪ್ರಸಂಗ ಬಂದರೂ, ಭೀಕರವಾದ ವಿಪತ್ತಿಗೊಳಗಾದರೂ, ಅತಿ ದುರ್ಘಟ ಸಮಯ ತೊಡಕಿದರೂ ತನ್ನ ಶೀಲವನ್ನು ಕಾಯ್ದುಕೊಳ್ಳುವದರಲ್ಲಿ ತನ್ನ ಪ್ರಾಣವನ್ನಾದರೂ ತೊರೆಯುವನಲ್ಲದೆ ತಾನು ಹಿಡಿದ ವ್ರತಕ್ಕೆ ಚ್ಯುತಿಯನ್ನು ತರಗೊಡುವದಿಲ್ಲ. ಕೀರ್ತಿಕಾಯರಾಗಿರುವ ಶರಣರೆಲ್ಲರು ಹಾಗೂ ಪುಣ್ಯಶ್ಲೋಕರಾದ ದೊರೆಗಳೆಲ್ಲರು ತಮ್ಮ ಕಟ್ಟಳೆಗಳನ್ನು ತರತರದ ಸಂಕಟಗಳಿಗೀಡಾದರೂ ಕಾಯ್ದುಕೊಂಡಿರುವದರಿಂದ ಚಿರಸ್ಮರಣೀಯರಾಗಿರುವರು.

ಅಂತರಂಗದಲ್ಲಿ ಪರಿಮಳಿಸುವ ಸದ್ವಾಸನೆಯಿಂದಲೂ, ಪ್ರದೀಪ್ತವಾದ ಶಿವಜ್ಞಾನ ತೆರಪಿಲ್ಲದ ಶಿವರತಿಪ್ರಕಾಶದಿಂದಲೂ ಪರಮಾತ್ಮನನ್ನು ಬೆಳಗುವದು ಹಾಗೂ ಬಾಹ್ಯದಲ್ಲಿ ಎಣ್ಣೆಯ ದೀಪದ ನೀರಾಜನದಿಂದ ಭಗವಂತನನ್ನು ಸಂತೋಷಪಡಿಸುವದು ಇವು (ನಿಜಪತಿಯು ಹಾಗೂ ಅಖಿಲ ಬ್ರಹ್ಮಾಂಡಾಧಿಪತಿಯು ಆದ) ನಾಗಚೂಡನಿಗೆ ಒಪ್ಪಿಸುವ ಷೋಡಶೋಪಚಾರಗಳಲ್ಲಿ ಸಮಾವೇಶವಾಗುವವು.

ದೀನರಿಗೂ, ಪೀಡಿತರಿಗೂ, ಶಿವಭಕ್ತವ್ರಜಕ್ಕೂ ಕೊಡಗೈ ದೊರೆಯಾಗಿ ಸತಿಸುತರನ್ನತಿಕ್ರಮಿಸದೆ ತಿರುವತ್ತೂರಲ್ಲಿರುವ ಅನೇಕ ದೇವಾಲಯಗಳಲ್ಲಿ ಮುಖ್ಯವಾದ ತಿರುವತ್ತೂರಾಧಿಪನ ಶಿವನಿಲಯಕ್ಕೆ ದಿನಾಲು ನಿಯಮದಿಂದ ಹೋಗಿ ಮಹಾದೇವನನ್ನು ಯಥಾವಿಧಿಯಾಗಿ ಪೂಜಿಸಿ ಆ ಮಹಾಸ್ವಾಮಿಗ ಖಂಡಗ ಪ್ರಮಾಣದ ಎಣ್ಣೆಯಿಂದ ಅನೇಕ ಸಹಸ್ರ ದೀವಿಗೆಗಳಿಂದ ನೀರಾಜನವನ್ನು ತಪ್ಪದೆ ಬೆಳಗಿ ಶಿವಪೂಜಾನಂದ ವಿಕಸಿತನಾಗಿ ಸತ್ಕಾಲಕ್ಷೇಪವನ್ನು ಮಾಡುತ್ತ ದಶದಿಕ್ಕುಗಳಲ್ಲಿಯೂ ಹೆಸರಾಗಿ ಯಶೋವಂತನಾಗಿ ಮೆರೆಯುತ್ತಿದ್ದನು. ಆಗಿನ ಕಾಲದಲ್ಲಿ ಉದ್ಭಿಜದಿಂದ ಪ್ರಾಪ್ತವಾದ ತೈಲವನ್ನೇ ನೀರಾಜನಕ್ಕೂ ಹಾಗೂ ದೀಪಗಳನ್ನು ಹೊತ್ತಿಸುವದಕ್ಕೂ ಬಳಿಸುತ್ತಿದ್ದುದರಿಂದ ಶಿವಾಲಯಕ್ಕೆ ಬಂದ ಭಕ್ತಸಮೂಹದ ನೇತ್ರಗಳಿಗೆ ಅಲ್ಲಿಯ ಪ್ರಕಾಶವು ಬಾಧಿಸುತ್ತಿದ್ದಿಲ್ಲ.

ಅಕುಟಿಲವಾದ ಸ್ವಾಭಾವಿಕ ಭಕ್ತಿ ಎಂಬ ಅನುರಾಗ ವಿಶೇಷದಿಂದ ಚರಿತ್ರನಾಯಕನು ನಿತ್ಯದಲ್ಲಿ ಲಕ್ಷಗಟ್ಲೆ ನೀರಾಜನವನ್ನು (ಅಣುರೇಣು ತೃಣಕಾಷ್ಟದಲ್ಲಿ ವ್ಯಾಪಿಸುತ್ತ ವಿಶ್ವಂಭರನೆನಿಸಿದರೂ ಯೋಗಿಜನಹೃದಯ ನಿವಾಸಿಯೆಂದು ಪ್ರಸಿದ್ಧನಾದ) ತಿರುವತ್ತೂರಾಧಿಪನಿಗೆ ಮಾಡುತ್ತಿರಲು ಅರವತ್ತು

ವರ್ಷಗಳು ಸಂದಲು ಆತನ ವ್ರತವನ್ನು ಪರೀಕ್ಷಿಸಲೋಸುಗ ಶಿವಾಜ್ಞೆಯಿಂದ ಆತನ ಧನವೆಲ್ಲ ತೀರಿ ಬಹಳ ಬಡವನಾದನು. ಆಗ ಕಥಾನಾಯಕನು ಬಹಳ ವ್ಯಾಕುಲನಾದನು; ಹ್ಯಾಗೆ ಮಾಡಬೇಕೆಂದು ಮುಂದುಗಾಣದವನಾಗಿ ಹೆಚ್ಚಾಗಿ ಚಿಂತಿಸಿದನು. ತನ್ನ ನಿಯಮಕ್ಕೆ ಭಂಗಬರುವದೆಂದು ಉಸುರ್ಗರೆದನು. ತನ್ನ ಛಲವು ಪೂರೈಸದೆ ಪ್ರಸಾದವನ್ನೆಂತು ಕೈಕೊಳ್ಳುವೆನೆಂದು ಐದು ದಿನ ನಿರಾಹಾರಿಯಾಗಿದ್ದು ಆ ಬಳಿಕ ಆತನಿಗೆ ಒಂದು ಯೋಚನೆಯು ತಟ್ಟನೆ ಹೊಳೆಯಿತು. ಅಹಹಾ ! ನಾನೆಂಥ ಅವಿವೇಕಿಯು ; ಎಂಥ ಮೂಢನು ; ಚಂದ್ರಧರನನ್ನು ನಿಶ್ಚಲವಾಗಿ ಪೂಜಿಸದ ಕಾರಣವೇ ನನಗೆ ಮೋಹವು ಆವರಿಸಿ ಭ್ರಮೆಯಾಯಿತಲ್ಲವೇ. ಈಗ ಆ (ಆನಂದಮಯನಾದುದರಿಂದ ವಿಶೋಕನೆಂದು ಹೆಸರಾಂತ) ಸದಾಶಿವನ ಕೃಪಾ ವಿಶೇಷದಿಂದ ತಕ್ಕ ಉಪಾಯವು ಗೊತ್ತಾಯಿತು. ನನ್ನ ಶರೀರದಲ್ಲಿಯೇ ಮಹಾರ್ಘವಾದ ತೈಲವಿರುತ್ತಿರಲು ಬೇರೆ ಎಣ್ಣೆಯನ್ನು ಅರಸಬೇಕೆ ? ಮಹಾಮೂರ್ತಿಗೆ ಈಗ ಐದುದಿವಸಗಳು ನೀರಾಜನವಿಲ್ಲದೆ ಹೋದವಲ್ಲವೇ ನಾನು ಶಿವದ್ರೋಹಕ್ಕೆ ಪಾತ್ರನಾದೆನು. ಈಗಲಾದರೂ ನನ್ನ ಶೀಲವನ್ನು ಕಾಯ್ದುಕೊಳ್ಳುವೆನೆಂದು ಕಡು ಸಂತಸವನ್ನು ಹೊಂದಿ ಅಲ್ಹಾದಕರವಾದ ಮನಸ್ಸುಳ್ಳವನಾಗಿ ಉಬ್ಬಿದವನಾಗಿ ಹೆಚ್ಚೆಚ್ಚಾಗಿ ಸಂತೋಷಪಡುತ್ತ ಶೀಘ್ರವಾಗಿ ಮಿಂದು ಶುಚಿರ್ಭೂತನಾಗಿ ಆ ಶಿವಾಲಯಕ್ಕೆ ಬಂದು ಪುನಃ ಅಲ್ಲಿಯ ಭಾವಿಯಲ್ಲಿ ಮಂಗಲ ಸ್ನಾನವನ್ನು ಮಾಡಿ ಭಸ್ಮಸ್ನಾನ-ಉದ್ಧೂಳನವನ್ನು ಮಾಡಿ ಸರ್ವಾಂಗದಲ್ಲಿ ವಿಧ್ಯುಕ್ತವಾಗಿ ರಕ್ಷೆಯೆನಿಸುವ ವಿಭೂತಿಯನ್ನು ಪ್ರೇಮದಿಂದ ತಳೆದು ಪರಮ ಪವಿತ್ರವಾದ ರುದ್ರಾಕ್ಷಗಳನ್ನು ಕ್ರಮವಾಗಿ ಧರಿಸಿ ನೈಸರ್ಗಿಕವಾದ ಭಕ್ತಿಯಿಂದ ಭವಹರನನ್ನು ಅರ್ಚಿಸಿ ನಿತ್ಯಕ್ರಮದ ನೀರಾಜನಕ್ಕಾಗಿ ವೀರಾಲಾಪದಿಂದ ತನ್ನ ಖಡ್ಗವನ್ನು ಜಳಪಿಸಿ ದಯಾಸಿಂಧುವಿನ ಚರಣಾಂಬುಜವನ್ನು ಕ್ಷಣಕ್ಷಣಕ್ಕೆ ಸ್ಮರಿಸುತ್ತ ಕೊಪ್ಪರಿಗೆಯನ್ನಿಟ್ಟುಕೊಂಡು ಹದನಾದ ಅಲಗಿನಿಂದ ತನ್ನ ಅಂಗದಲ್ಲಿಯೇ ರಂಧ್ರವನ್ನು ಕೆಡಹಿದನು: ಆ ದ್ವಾರದಿಂದ ತೈಲವು ಚಿಮ್ಮಿತು. ಆ ಭಕ್ತನ ಶಿವಭಕ್ತಿಪ್ರಭಾವದಿಂದಲೋ ಭಕ್ತರನ್ನುದ್ಧರಿಸುವದರಲ್ಲಿ ಅದ್ವಿತೀಯ ದಕ್ಷನೆನಿಸುವ ಶಂಭುವಿನ ಮಹಿಮೆಯಿಂದಲೋ ದಿನಕ್ರಮದ ನೀರಾಜನಕ್ಕೆ ಸಾಲುವಷ್ಟು (ಕೆಂಪು) ಎಣ್ಣೆಯು ಹೊರಟಿತು. ನೀರಾಜನದ ಬತ್ತಿಗಳನ್ನೆಲ್ಲ ತೈಲದ ಕೊಪ್ಪರಿಗೆಯಲ್ಲಿ ಎದ್ದಿ ನೀರಾಜನವನ್ನು ಮಾಡಿ ತನ್ನ ಶೀಲವನ್ನು ಸಾಂಗಮಾಡಿದ ರುದ್ರನೇ ಎಂದು ಭಗವಂತನನ್ನು ಕೊಂಡಾಡಿ ಪರಮ ಹರ್ಷಿತನಾದನು. ಆಗಲೇ ಮುನಿಜನ ಸೇವ್ಯನಾದ ಅಗಜಾವರನು ನಮ್ಮ ಚರಿತ್ರಪುಂಗವನ ಎದುರಿನಲ್ಲಿ ಪ್ರತ್ಯಕ್ಷನಾದನು. ನಮ್ಮ ಭಕ್ತ ಲಲಾಮನು ಮೇರೆ ಇಲ್ಲದ ಉತ್ಸಾಹ

ವನ್ನು ತಾಳಿ ಪ್ರೇಮಾತಿರೇಕದಿಂದ ಮಹಾಪಾದಗಳನ್ನು ಭಕ್ತಿಜಲದಿಂದ ಮಜ್ಜನವನ್ನೆಸಗಿ, ಸುಶೀಲನನ್ನು ಪರಿಪರಿಯಾಗಿ ಸ್ತುತಿಸಿ ರೋಮಾಂಚನಗೊಳ್ಳಲು ಸತ್ಯಪ್ರಿಯನೆನಿಸುವ ಸಾಂಬನು ನಮ್ಮ ವರಭಕ್ತನನ್ನು ಸಂತೈಸಿ ದುರ್ಲಭವಾದ ಮಹಾ ಗಣಪದವಿಯನ್ನು ಆತನಿಗೆ ಕೃಪೆಮಾಡಿದನು.

—◉◉◉—

ಓಂ.

# ೫೧. ಐಯಡಿಯರು.



ಪೊಡವಿ ತೀವಿರೆ ಶಿವನ ಗುಡಿಗಳಂ ರಚಿಸಿದೈ । ಯಡಿಯರಡಿದಾವರೆಗಳಂ
ನೆನೆದು ಸುಖಂ । ಬಡುವೆ ನೆನ್ನಾತ್ಮದಣಿವಂತೆ ॥

[ಶ್ರೀ ನಿಜಗುಣರು]




ತ್ಕೃತಿಗಳಿಗೆ ಮನವೆಳಿಸುವವರ ಅಂದರೆ ಸಜ್ಜನರ ಆವಾಸಸ್ಥಾನವಾಗಿಯೂ ಅಂತೆಯೇ ಅನೇಕ ಶಿವಮಂದಿರಗಳಿಗೆ ಬೀಡಾಗಿಯೂ ಆದುದರಿಂದಲೇ ನಾಡಿನ ಸಂಪತ್ತಿಗೆ ಕಾರಣವಾದ ನೀರಿನ ವಿಪುಲತೆ, ಫಲದ್ರೂಪವಾದ ಭೂಮಿ, ಜನತೆಗೆ ಅವಶ್ಯವೆನಿಸುವ ಖನಿಜದ್ರವ್ಯ, ಪ್ರಜಾಸಮೂಹಕ್ಕೆ ಸುಗಮವೆನಿಸುವ ಪರಿಪಾಲನಧರ್ಮ ಇವುಗಳಿಂದ ಶೋಭಿಸುವ ಚೋಳಮಂಡಲವು ಶೈವರ ನೆಲೆಮನೆಯಾಗಿ ರಂಜಿಸುತ್ತಿತ್ತು. ಈ ಮೇರೆಗೆ ಮಹಿಮಾತಿಶಯದಿಂದೊಪ್ಪುವ ಚೋಳೋರ್ವಿಯಲ್ಲಿ ಸಕಲ ವೈಭವದಿಂದ ತುಂಬಿ ತುಳುಕುವ **ತಿರುವಣ್ಣೂರೆಂಬ** ಪುರವು ಪಾರ್ಥಿವಕುಲೋತ್ಪನ್ನನಾದ **ಐಯಡಿಯರು** ಎಂಬ ಭೂತಿಲಕನ ರಾಜಧಾನಿಯಾಗಿ ಐಶ್ವರ್ಯದಿಂದೆಸೆಯುತ್ತಿತ್ತು. ಆ ಊರ ಸುತ್ತಲು ಕೆರೆಕಟ್ಟೆ ಕಾಲುವೆ ಹಳ್ಳಗಳು ಯಾವಾಗಲೂ ನೀರಿನಿಂದ ಸಮೃದ್ಧವಾಗಿದ್ದುದರಿಂದ ತರತರದ ಮನೋಹರವಾದ ತೋಟಗಳು, ಸೊಂಪಿನಿಂದ ಪಥಿಕರನ್ನಾನಂದಗೊಳಿಸುವ ಪುಷ್ಪೋದ್ಯಾನಗಳು, ಸಸಿ-ಬಳ್ಳಿ-ಗಿಡಗಳಿಂದ ಭರಿತವಾಗಿ ಆ ಪಟ್ಟಣದ ಸೊಬಗು ಚಿತ್ತಾಕರ್ಷಕವಾಗಿತ್ತು.

ಶಿವಜ್ಞಾನವಿಚಕ್ಷಣರಿಗೆ ನಮ್ಮ ಕಥಾನಾಯಕನು ಪ್ರಮಥಾಂಶಸಂಭೂತ ನೆಂದು ಭಾಸವಾಗುತ್ತಿತು. ಸೈರಣೆ, ಸಮಾಧಾನ, ಶಾಂತಿ, ಶಿವತೇಜ ಇವೆಲ್ಲವೂ ಸಾಕ್ಷಾತ್ಕಾರವಾಗಿ ಭೂಮಿಪನ ಮುಖಮಂಡಲದಲ್ಲಿ ಎದ್ದು ಕಾಣಿಸುತ್ತಿದ್ದವು. ಹಾಗೂ ಆತನ ನೋಟವು ಕೂಡ ಶಿವಭಾವವನ್ನು ಬೀರುತ್ತಿತ್ತು. ಪುತ್ರವಾತ್ಸಲ್ಯದಿಂದ ಸಮೀಚೀನವಾಗಿ ಪ್ರಜರನ್ನಾಳುತ್ತ ಶಿವಭಕ್ತಿಯುಕ್ತನಾಗಿ, ಶಿವಕಾರ್ಯನಿರತನಾಗಿ, ಶಿವಧ್ಯಾನಪರನಾಗಿ ಪ್ರಾಜ್ಞರೊಪ್ಪುವಂತೆ ಕಾಲಯಾಪನೆ ಮಾಡುತ್ತಿದ್ದನು.

ಶಿವನಿಂದೆ, ಶಿವಧರ್ಮತಿರಸ್ಕಾರ, ಶಿವಾಚಾರವನ್ನು ಜರಿಯುವದು, ಶಿವಗ್ರಂಥವನ್ನು ಹಳಿಯುವದು ಇವುಗಳನ್ನು ಸಹಿಸದೆ ಶಕ್ತನಾದರೆ ತಕ್ಕ ಪ್ರತಿಕ್ರಿಯೆಯನ್ನು ಕೈಕೊಳ್ಳುವದು ಇಲ್ಲವಾದರೆ ಆ ಸ್ಥಳದಿಂದ ಸಿಡಿದು ನಿಲ್ಲುವದು ಇವೆಲ್ಲ ಗಣಾಚಾರದ ಮುಖ್ಯಾಂಗಗಳಾಗಿ ಇರುವವು. ಸ್ಥಾವರಲಿಂಗದ ಪೂಜೆಯು ಸುಲಲಿತವಾಗಿ ನಡೆಯುವಂತೆ ಏರ್ಪಡಿಸುವದು, ಶಿವಾಲಯಗಳನ್ನು ಜೀರ್ಣೋದ್ಧಾರ ಮಾಡಿಸುವದು ಇವೆಲ್ಲ ಗಣಾಚಾರದ ಉಪಾಂಗಗಳಾಗಿರುವವು.

ಕಥಾನಾಯಕನು ಸದ್ಧರ್ಮವನ್ನು ಕಾಯ್ದುಕೊಂಡು ಪ್ರಜಾರಂಜಕನಾಗಿ ಶಿವಪ್ರೀತಿಯುತನಾಗಿರುತಿರಲು ಸಂವತ್ಸರಗಳು ದಿವಸಪ್ರಾಯವಾಗಿ ಗತಿಸಿದವು. ಹೀಗಿರುತ್ತಿರಲು ನಮ್ಮ ನರಪುಂಗವನಿಗೆ ಅವನ ಶುಭಕರ್ಮಕ್ರಿಯಾದಿಗಳಿಗನುಗುಣವಾಗಿ ಕಲ್ಯಾಣಕರವಾದ ಬಯಕೆಯು ತಲೆದೋರಿತು. ಜನಸಮೂಹಕ್ಕೆಲ್ಲ ಹಿತಕರವಾಗುವಂತೆ ರಾಜ್ಯಭಾರವನ್ನು ವಹಿಸುವದಕ್ಕೆ ಹತ್ತುವ ಖರ್ಚು ಹೋಗಲಾಗಿ ಬೊಕ್ಕಸದಲ್ಲಿ ಉಳಿಯುವ ಹಣವನ್ನೆಲ್ಲ ತನ್ನ ಸೀಮೆಯಲ್ಲಿರುವ ಶಿಥಿಲವಾದ ಈಶ್ವರಾಲಯಗಳನ್ನು ಕ್ರಮಪಡಿಸಿ ನೂತನವಾದ ಗುಡಿಗಳಂತೆ ಮಾಡಬೇಕೆಂದು ಆಲೋಚನೆಯನ್ನು ಮಾಡಿದನು. ಈ ಅಪೇಕ್ಷೆಯಿಂದ ತನ್ನ ನಾಡಿನಲ್ಲಿದ್ದ ಚತುರರಾದ ಶಿಲ್ಪಿಗಳನ್ನು ಹಾಗೂ ಜಾಣರಾದ ಉಪ್ಪಾರರನ್ನು ಬಹುಮಾನವನ್ನು ಕೊಟ್ಟು ಕರಿಸಿ ಅವರೆಲ್ಲರಿಗೂ ಈಶಗೃಹಗಳನ್ನು ಜೀರ್ಣೋದ್ಧಾರಗೊಳಿಸಲು ಅಪ್ಪಣೆಮಾಡಿ ಮೊದಲಿನಕಿಂತಲೂ ಹೆಚ್ಚು ಅಂದವಾಗಿ ಮಾಡಿಸಿ ಎಲ್ಲೆಲ್ಲಿ ಪೂಜಾದಿಗಳು ನಿಂತುಹೋಗಿದ್ದವೋ ಅಲ್ಲಲ್ಲಿ ತಪ್ಪದೆ ಕ್ರಮವಾಗಿ ಪೂಜೆಯು ನಡೆಯುವಂತೆ ವ್ಯವಸ್ಥೆಯನ್ನು ಮಾಡಿ ಸತ್ಕೀರ್ತಿಯನ್ನು ಸಂಪಾದಿಸಿ ಶಿವಧರ್ಮಧುರೀಣನಾಗಿ ಶಿವಾನಂದಪರನಾಗಿದ್ದನು. ಹೀಗಿರಲು ಆತನಿಗೆ ಬೇರೊಂದು ಕಾಂಕ್ಷೆಯು ಉತ್ಪನ್ನವಾಯಿತು. ಹೇಮಮಯವಾದ ಶ್ರೇಷ್ಠವಾದ, ಮಹೋನ್ನತವಾದ, ವಿಶಾಲವಾದ ಶಿವಾಲಯವನ್ನು ಕಟ್ಟಿಸಬೇಕೆಂದು ಸಂಕಲ್ಪಿಸಿ ಅದರಂತೆ ಮಾಡಿಬಿಟ್ಟನು. ಆ ದೇವಾಲಯದ ಚೆಲ್ವಿಕೆಯನ್ನು ನೋಡಿ

ಬೆರಗಾಗಿ ಅದರ ರಮಣೀಯತೆಯನ್ನು ಕಂಡು ಹಿಗ್ಗುತ್ತ ಆಹರಪ್ರಸಾದದ ಗೋಪುರದ ಮಗ್ಗುಲಲ್ಲಿ ನಿಂತು ಸಂತೋಷದ ಭರದಲ್ಲಿ ತನ್ನ ದೃಷ್ಟಿಗೆ ಹರಿಯು ವಷ್ಟು ಗ್ರಾಮಗಳನ್ನೆಲ್ಲ ಪಾತ್ರವರಿತು ಶಿವಭಕ್ತರಿಗೆ ದಾನಮಾಡಿದನು. ಈ ಪರಿಯಾದ ಸಂಭ್ರಮಾನಂದೋತ್ಸಾಹದಿಂದ ಸ್ನಾನಮಾಡಿ ಅಲ್ಲಿಯ ಮಹಾಲಿಂ ಗದೆಡೆಯಲ್ಲಿ ಪದ್ಮಾಸನವನ್ನು ಹಾಕಿ ಅಷ್ಟವಿಧಾರ್ಚನೆ ಷೋಡಶೋಪಚಾರ ಪೂರ್ವಕವಾಗಿ ಶಿವಮೂರ್ತಿಯನ್ನು ಯಥಾವಿಧಿಯಾಗಿ ಪೂಜಿಸಿ, ನಲಿಯುತ್ತ ನಮಸ್ಕರಿಸಿ, ಪಂಚಾಕ್ಷರ ಮಹಾಮಂತ್ರವನ್ನು ಜಪಿಸಿ ಪುನಃ ಲಿಂಗಕ್ಕೆ ಕೈಮು ಗಿದು, ಹಣೆಹಚ್ಚಿ ಪ್ರದಕ್ಷಿಣೆಯನ್ನು ಮಾಡಿ ಶಿವಭಜನೆಯನ್ನು ಮಾಡಿ, ಶಿವಮ ಹಿಮೆಯನ್ನು ಕೊಂಡಾಡಿ, ಶಿವನಾಮಗಳನ್ನು ಮಂಗಲಕರವಾಗಿ ಕೀರ್ತಿಸಿ ಶಿವ ಭಕ್ತಿರಸವು ಉಕ್ಕೇರಿ ಶಿವಾನಂದಮಗ್ನನಾಗಿ ನಿಜಸುಖದಲ್ಲಿ ಲೋಲಾಡಿದನು. ಆಗ ನಮ್ಮ ಚರಿತ್ರಪುರುಷನ ಅತುಲವಾದ ಶಿವಭಕ್ತಿಯು ಗಣಾಧಿಪನಾದ ದೇವೋತ್ತಮನಿಗೆ ಗೋಚರವಾಗಿ ಆ ಭೂರಮಣನು ತನ್ನ ಭಂಡಾರವನ್ನೆಲ್ಲ ದೇವಾಲಯಗಳ ಜೀರ್ಣೋದ್ಧಾರಕ್ಕಾಗಿ ವಿನಿಯೋಗಿಸಿ ಸಕಲ ಸತ್ಕ್ರಿಯೆಗಳನ್ನು ನಿರಪೇಕ್ಷವಾಗಿ ಆಚರಿಸಿದ್ದುದರಿಂದ ಬಹು ಸಂತೋಷಪಟ್ಟು ಅವನನ್ನು ಅನು ಗ್ರಹಿಸಬೇಕೆಂದು ದಯಾಮಯನಾದ ವಿಶ್ವನಾಥನು ಕೂಡಲೇ ನಿಜರೂಪದಿಂದ ಪ್ರಕಟನಾದನು. ಆಗ ಚರಿತ್ರಪುಂಗವನು ಮಂಗಲನಿಧಿಯೆನಿಸಿದ ದಿವ್ಯಪುರು ಷನನ್ನು ಕಂಡು ಮೈಯುಬ್ಬಿ ಗದ್ಗದಕಂಠನಾಗಿ ಕಾರುಣ್ಯಮೂರ್ತಿಯನ್ನು ಪರಿ ಪರಿಯಾಗಿ ಸ್ತುತಿಸಿ ಪವಿತ್ರಾತ್ಮನ ಚರಣಕಮಲದಲ್ಲಿ ಮಸ್ತಕವನ್ನಿಡಿ ಆನಂ ದಪರವಶನಾಗಿ ಮೈಮರೆತನು. ಫಾಲಲೋಚನನು ಭಕ್ತೋತ್ತಮನನ್ನು ಪ್ರೀತಿ ಯಿಂದ ಹಿಡಿದೆತ್ತಿ ಕುಳ್ಳಿರಿಸಿಕೊಂಡು ಆತನ ಮೈಮೇಲೆ ತನ್ನ ವರದ ಹಸ್ತವ ನ್ನಾಡಿಸಿ ನಿತ್ಯವಾದ ಗಣಪದವಿಯನ್ನಿತ್ತು ರಕ್ಷಿಸಿದನು.



೩೦.

# ೫೨. ಚಿರುತೊಂಡನು.

ವರಕುಮಾರನ ಶಿರವನರಿದಟ್ಟು ಸವಿಮಾಡಿ । ಹರನಿಗುಣಲಿಟ್ಟ ಚಿರುತೊಂ
ಡರಣುಗನಾ । ಗಿರುತಿರ್ಪೆ ನಚ್ಚ ಸುಖಿಯಾಗಿ ॥

[ಶ್ರೀ ನಿಜಗುಣರು]



ಕ್ತಿ ಎಂಬ ಪದವು ಪೂಜ್ಯರಲ್ಲಿಯೂ, ಪರಮಾತ್ಮನಲ್ಲಿಯೂ ಇರುವ ಅನುರಾಗ ವಿಶೇಷವೆಂದು ಉಪಯೋಗಿಸಲ್ಪಡುವದು. ಅಂಥ ಸದ್ಭಕ್ತಿಯನ್ನು ತಳೆದಿರುವ ವ್ಯಕ್ತಿಗಳಿಗೆ ಭಕ್ತರೆಂದು ಹಾಗೂ (ಸಕಲ ಚರಾಚರ ವಸ್ತುಗಳಿಗೊಡೆಯನು, ಸರ್ವಸ್ವತಂತ್ರನು, ಸರ್ವವ್ಯಾಪಕನು, ಸರ್ವಮಂಗಲನು ಆದ) ಶಂಭುವಿನನ್ನಾಶ್ರಯಿಸುವ ಮಾನವರಿಗೆ ಶೈವರೆಂದು, ಶಿವಭಕ್ತರೆಂದು ಕರೆಯುತ್ತಾರೆ.

ಅಘಹರನಾದ, ಕಾಲಾರಿಯಾದ, ಮಾರವೈರಿಯಾದ, ಪಂಚವಕ್ತ್ರನ ನಿವಾಸಸ್ಥಾನವಾಗಿಯೂ, ಈಶಭಕ್ತಾವಳಿಯ ಬೀಡಾಗಿಯೂ, ಶಿವಾಲಯ ಸಮೂಹಗಳ ನೆಲೆಮನೆಯಾಗಿಯೂ, ಸಕಲ ಸಂಪತ್ತಿನಿಂದ ನೆರೆಶೋಭಿಸುವ ಪುರಗಳಿಂದಲೂ, ಪ್ರಾಣಿಗಳಿಗೆ ಆನಂದದಾಯಕವಾದ ವನಗಳಿಂದಲೂ, ವಿವಿಧ ವೈಭವಗಳಿಂದಲೂ ಚೋಳ ಮಹಿಯು ರಂಜಿಸುತ್ತಿತ್ತು. ಇಂತಪ್ಪ ಆ ಪುಣ್ಯಭೂಮಿಯಲ್ಲಿ ಕಣ್ಗೆಸೆವ ಗದ್ದೆಗಳಿಂದಲೂ, ಉದ್ಯಾನಗಳಿಂದಲೂ, ಭೂದೇವಿಯ ಸೊಬಗನ್ನು ಬೀರುವ ಸಮಸ್ತ ಪೈರಿನಿಂದ ಪಿರಿದೊಪ್ಪುವ ಹೊಲಗಳಿಂದಲೂ, ಯುಕ್ತವಾಗಿ ಶತ್ರುಗಳಿಗೆ ದುರ್ಗಮವೆನಿಸುವ ಕೋಟೆಗಳಿಂದಲೂ, ಶಿವನಿಕೇತನಗಳಿಂದಲೂ, ಅರಮನೆಯಂತೆ ಚೆಲ್ವಾಗಿ ಕಂಗೊಳಿಸುವ ವಿಶಾಲವಾದ ಕಟ್ಟಡಗಳಿಂದಲೂ, ಶಿವಭಕ್ತವ್ರಜದಿಂದ ಮನೋಹರವಾಗಿ ವಿರಾಜಿಸುವ (ಕಾಂಚನಮಯವಾಗಿ ಸಿರಿಯ ಆವಾಸಸ್ಥಾನವಾಗಿ ಮೆರೆಯುತ್ತಿದ್ದದರಿಂದ) ಕಾಂಚೀಪುರವೆಂದು ಪ್ರಖ್ಯಾತವಾದ ಪಟ್ಟಣವು ಚೋಳಧರೆಗೆ ಅಲಂಕಾರಪ್ರಾಯವಾಗಿತ್ತು. ಆ ಕಾಂಚೀನಗರದಲ್ಲಿ ವಾಣಿಜ್ಯವನ್ನವಲಂಬಿಸಿದ ಪುಣ್ಯವಂತನಾದ ಸತ್ಯಾಳನೆಂಬ ಸದ್ಗುಣಿಯ ತನಯನಾದ **ಚಿರುತೊಂಡ**ನೆಂಬ ವೈಶ್ಯ ಶಿಖಾಮಣಿಯು ಶಿವಪ್ರೇ

ಮಿಯಾಗಿ, ಬಹು ಧನಾಢ್ಯನಾಗಿ ಚೋಳಮಂಡಲಾಧಿಪನಿಗೆ ಸರಿಯೆನಿಸಿ ಮೆರೆಯುತ್ತಿದ್ದನು. ವ್ಯಾಪಾರದಿಂದ ಹಣವನ್ನು ವಿಶೇಷ ಗಳಿಸುತ್ತಿದ್ದದರಿಂದ ಜನರು ಆತನಿಗೆ ಸಿರಿಯಾಳನೆಂದು ಅನ್ನುತ್ತಿದ್ದರು. ಆ ಮಹಿಮನಲ್ಲಿ ದಾನಗುಣವು ವಿಶೇಷವಾಗಿ ವೃದ್ಧಿಯಾಗಿ ವಿಕಲಾಂಗರಿಗೂ, ದಾರಿದ್ರ್ಯ ಪೀಡಿತರಿಗೂ, ಶಿವ ಭಕ್ತ ತಿಂತಿಣಿಗೂ, ಜನೋಪಯುಕ್ತ ಕಾರ್ಯಗಳಿಗೂ ಹಣವನ್ನು ಸೂರೆಗೊಳಿಸುತ್ತ, ಅನ್ನದಾನಕ್ಕೆ ಹೆಚ್ಚಾಗಿ ಗಮನಕೊಡುತ್ತಿದ್ದದರಿಂದ ಪಟ್ಟಣಿಗರು ಆ ಪುಂಗವನಿಗೆ ಸಿರಿಯಾಳ್ವನೆಂದು ಪ್ರಯೋಗಿಸಹತ್ತಿದರು. ಅಲ್ಲಿಯ ನಿವಾಸಿಗಳು ಈ ಸಿರಿವಂತನು ಅನ್ನದಾನಕ್ಕಾಗಿ ಅವತರಿಸಿರುವ ಸದ್ಗುಣಚಂದ್ರನೆಂದು ಶಿವಭಕ್ತಿಗೆ ಅನುಗುಣವಾದ ಪುರುಷಶ್ರೇಷ್ಠನೆಂದು ಹಾಡಿ ಹರಸುತ್ತಿದ್ದರು.

ಗುಣವಂತನಾದ ನಮ್ಮ ಕಥಾನಾಯಕನಿಗೆ ಚಂಗಳೆಯೆಂಬ ನಾರೀಮಣಿಯು ಸಹಧರ್ಮಚಾರಿಣಿಯಾಗಿ ಅರುಂಧತಿಯಂತೆ ಪಾತಿವ್ರತ್ಯದಿಂದ ಬೆಳಗುತ್ತಿದ್ದಳು. ಗುರುದೇವನನ್ನು ಸ್ಮರಿಸುತ್ತ ನಸುಕಿನಲ್ಲೆದ್ದು ಪ್ರಾತರ್ವಿಧಿಗಳನ್ನು ತೀರಿಸಿ ಪರಮಾತ್ಮನನ್ನು ನೆನೆದು ತನ್ನ ಗಂಡನಿಗೆ ನೆರಳಿನೋಪಾದಿಯಲ್ಲಿದ್ದು ಸಕಲಕಾರ್ಯಗಳಲ್ಲಿ ನೆರವಾಗುತ್ತ ಅನ್ನದಾನವನ್ನು ಮಾಡುವಲ್ಲಿ ಬಹಳ ಉತ್ಸಾಹವನ್ನು ಹೊಂದುತ್ತ ತನ್ನ ಪ್ರಾಣಪತಿಗೆ ಚೆಂಗಳೆಯು ಸರ್ವವಿಧದಿಂದ ಬಹು ಅನುಕೂಲಳಾಗಿ ಸತೀಶಿರೋಮಣಿಯಾಗಿ ಕೀರ್ತಿಯಿಂದ ಶೋಭಿಸುತ್ತಿದ್ದಳು.

ನಮ್ಮ ಕಥಾಪುರುಷನ ಮತ್ತು ಆತನ ಮಡದಿಯ ಪರಸ್ಪರ ಮನೋವೃತ್ತಿಯು ಒಂದೇ ವಿಧವಾಗಿದ್ದು ಸಂಸಾರವು ಸರಾಗವಾಗಿ ಸಾಗುತ್ತಿತ್ತು. ಅವರೀರ್ವರು ಈಶ್ವರಭಕ್ತರೇ ತಮ್ಮ ಮಾತಾಪಿತರೆಂದು ಭಾವಿಸಿ ನಿಜವಾಗಿಯೂ ಅದರಂತೆ ನಡೆಯುತ್ತ ಸಹಜವಾದ ಪ್ರೇಮದಿಂದ, ನಿಷ್ಕಪಟವಾದ ಸರಳವಾದ ಮನಸಿನಿಂದ ಧನ-ಧಾನ್ಯ-ವಸ್ತ್ರ ಮುಂತಾದ ವಸ್ತುಗಳನ್ನೆಲ್ಲ ಅವರಿಷ್ಟಾನುಸಾರವಾಗಿ ಕೊಡುತ್ತ ದಾನಶೌಂಡರಾಗಿ ಹೆಸರುವಾಸಿಯಾಗಿದ್ದುದರಿಂದ ಆ ಅವನಿಯ ಮಹೇಶಮಂಡಳಿಯು ಮತ್ತು ತೀರ ಬಡವರು ಹಾಗು ದುಃಖಕ್ಕೀಡಾದವರು ತಂಡೋಪತಂಡವಾಗಿ ಸಿರಿಯಾಳ್ವನ ಮನೆಗೆ ಬಂದು ತೃಪ್ತಿಬಡುತ್ತಿದ್ದರು- ಜಾಯಾಪತಿಗಳು ಈ ರೀತಿಯಾಗಿ ಸಕಲ ವೈಭವದಿಂದಿರುತ್ತಿರಲು ಒಂದು ದಿನ ಚೆಂಗಳೆಯು ತನಗೆ ಸಂತಾನವಿಲ್ಲದ್ದರಿಂದ ಸದ್ಗತಿ ಎಂತು? ಎಂದು ಚಿಂತಿಸಿ ದುಮ್ಮಾನದಿಂದ ಮುಖಬಾಡಿದವಳಾಗಿ ಕುಳಿತಳು. ಆಗ ಚರಿತ್ರನಾಯಕನು ತನ್ನರಸಿಯ ಚಿಂತೆಯ ಕಾರಣವನ್ನು ಕೇಳಿದನು. ಚೆಂಗಳೆಯು —ಒಡೆಯರೇ, ಮಗನಿಲ್ಲದ ಮನೆ ಅದೇತರ ಮನೆ? ಸುತನನ್ನು ಪ್ರೀತಿಯಿಂದ ತೊಡೆಯಮೇಲೆ ಕೂಡ್ರಿಸಿಕೊಂಡು ಆ ಮಗುವನ್ನು ಮುದ್ದಾಡಿ ಬಾಹುಗಳಿಂದಪ್ಪಿ, ಮೊಲೆಯನ್ನೂಡಿ ಮನದಣಿಯುವಂತೆ ಆನಂದಾಶ್ರುಗಳು ಹರಿಯುವಂತೆ ಕಣ್ತುಂಬಾ

ನೋಡಿ ಜೋಗುಳವನ್ನು ಪಾಡಿ ಆದರಿಂದಾಗುವ ಸುಖವನ್ನು ಶಿವಾರ್ಪಣ ಮಾಡುವ ಲಲನೆಯೇ ನಿಜವಾದ ಸ್ತ್ರೀಯಳು; ಅವಳ ಜನ್ಮವೇ ಧನ್ಯವು. ಇದು ನನ್ನ ಪಾಲಿಗೆ ಇಲ್ಲವಷ್ಟೇ? ಹೀಗೆಂದು ಕಂಬನಿಗಳನ್ನು ಕರೆದಳು, ಆಗ ಪತಿಯು ಪತ್ನಿಯ ಕಣ್ಣೀರನ್ನೊರಿಸಿ ಬೇಡಿದ್ದನ್ನು ಕೊಡಲು ಸಮರ್ಥನಾದ ಏಕಾಮ್ರನಾಥ ನನ್ನು ಪ್ರಾರ್ಥಿಸಿ ಮಗುವನ್ನು ಪಡೆಯುವೆನೆಂದು ಸಂತೈಸಿ ಆ ಮಹಾಲಿಂಗದೆಡೆ ಯಲ್ಲಿ ಶುಚಿರ್ಭೂತನಾಗಿ ಬಂದು ಸಕ್ರಮವಾಗಿ ಭಸ್ಮವನ್ನು ತೊಡೆದು ರುದ್ರಾಕ್ಷ ಗಳನ್ನು ಆಯಾಸ್ಥಾನದಲ್ಲಿ ಸಂಖ್ಯಾನುಗುಣವಾಗಿ ಧರಿಸಿ ವಿಧಿವತ್ತಾಗಿ ಜಗದೀಶ ನನ್ನು ಪೂಜಿಸಿ, ಏಕಚಿತ್ತದಿಂದ ರುದ್ರಜಪವನ್ನು ಪೂರೈಸಿ ಬಹು ದೈನ್ಯದಿಂದ "ಪ್ರಭುವೇ, ಸತ್ಪುತ್ರನನ್ನು ಕರುಣಿಸಬೇಕೆಂದು ಬೇಡಿಕೊಂಡನು. ಭಕ್ತನ ಅಕುಟಿಲವಾದ ಪ್ರಾರ್ಥನೆಗೆ ಮಹಾದೇವನು ಕನಿಕರಪಟ್ಟು ಆತನನ್ನು ಅನುಗ್ರ ಹಿಸಲೋಸುಗ ಲಿಂಗಮುಖದಿಂದ ಮನೋಹರವಾದ ರಸಾಳದ ಫಲವನ್ನು ಪ್ರಸಾ ದರೂಪವಾಗಿ ಆಶೀರ್ವದಿಸಿದನು. ಏಕಾಮ್ರನಾಥನನ್ನು ಪುನಃ ಸ್ತುತಿಸಿ ಸಂತೋ ಷಚಿತ್ತನಾಗಿ ಜಾಗ್ರತೆಯಿಂದ ಆ ಫಲವನ್ನು ತಂದು ತನ್ನ ರಾಣಿಗೆ ಕೊಟ್ಟು ಈಶ್ವ ರನನ್ನು ಕೊಂಡಾಡಿದನು. ಆ ವರಪ್ರಸಾದದಿಂದ ದಿನಕ್ರಮೇಣ ಚೆಂಗಳೆಯು ಗರ್ಭವತಿಯಾಗಿ ಸುಕುಮಾರನನ್ನು ಶುಭಮುಹೂರ್ತದಲ್ಲಿ ಪಡೆದಳು. ಸಿರಿಯಾ ಳ್ವನು ಈ ಪುತ್ರೋತ್ಸವ ಕಾಲದಲ್ಲಿ ಜಂಗಮಾವಳಿಗೆ ಕನಕಾಭಿಷೇಕವನ್ನು ಮಾಡಿ ಶಿವಭಕ್ತರಿಗೆ ಭೂರಿಧನವನ್ನು ಕೊಟ್ಟು ಅರ್ಭಕನಿಗೆ ಚೀಲಾಳನೆಂಬ ಹೆಸರನ್ನಿಟ್ಟು ಸಂತಸವನ್ನು ತಾಳ್ದನು.

ಬಾಲ್ಯದಲ್ಲಿಯೇ ಶಿವಭಕ್ತಿಯನ್ನು ಹೊಂದಿ ಆ ಕಾಂತಿವಿಶೇಷದಿಂದೊಪ್ಪುವ ಮಗನನ್ನು ಕಂಡು ಚರಿತ್ರನಾಯಕನು ಹರ್ಷಿತನಾಗಿ ಸಕಾಲದಲ್ಲಿ ಸದ್ಗುರುಗಳಲ್ಲಿ ಅವರ ಕಾರುಣ್ಯವನ್ನು ಪಡೆಯಲಿಕ್ಕೆ ತನ್ನ ಸುತನನ್ನೊಪ್ಪಿಸಿ ತನ್ನ ನಿತ್ಯಕ್ರಮ ವಾದ ಸತ್ಪಾತ್ರದಾನದಲ್ಲಿ ಅಸಾಧಾರಣವಾದ ವಿಶೇಷ ದಕ್ಷತೆಯನ್ನು ಎಂದಿನಂತೆ ಹೊಂದುತ್ತ ಶಿವಭಕ್ತಿಪರನಾಗಿರುತ್ತಿರಲು, ಆ ಸಿರಿಯಾಳ್ವನ ಕೀರ್ತಿಪ್ರಭೆಯು ದಿನಕ್ರಮೇಣ ಕೈಲಾಸಕ್ಕೆ ಆವರಿಸಿ ಸರ್ವಕರ್ತೃತ್ವಶಕ್ತಿಯುತನಾದ ಪರಶಿವ ಮೂರ್ತಿಯ ಪಾದದಡಿಯಲ್ಲಿ ಚಾಚಲು ಅದನ್ನು ಕಂಡು ತ್ರೈಲೋಕನಾಥನು ವಿಸ್ಮಿತನಾಗಿ ಅವನ ದಾನಗುಣವನ್ನು ಪರೀಕ್ಷಿಸಬೇಕೆಂದು ಇಂದ್ರಾದಿದೇವತೆಗ ಳನ್ನು ಕರೆದು ಅನೇಕ ಸಹಸ್ರಸಂಖ್ಯಾಕರಾಗಿ ನೀವು ಕಾಂಚೀಪುರದಲ್ಲಿರುವ ಚಿರುತೊಂಡನ ಮನೆಗೆ ಹೋಗಿ ಆತನಿಗೆ ಇರುವ ದಾನಮೂರ್ತಿ ಎಂಬ ಬಿರು ದನ್ನು ಭಂಗಪಡಿಸಬೇಕೆಂದು ಅಪ್ಪಣೆ ಮಾಡಿದನು.

ಇತ್ತ ಪುರಂದರಾದಿ ಅನೇಕ ದಿವಿಜರು ತಪಸ್ವಿಗಳ ವೇಷದಿಂದ ಬಹು ಸಂ ಖ್ಯಾತರಾಗಿ ಚರಿತ್ರ ಪುರುಷನಲ್ಲಿಗೆ ಬಂದು ನಮ್ಮೆಲ್ಲರಿಗೂ ಹಸಿವೆ ಆಗಿದೆಯೆಂದು

ಹೇಳಲು, ಅವರೆಲ್ಲರಿಗೂ ಚಿರುತೊಂಡನು ಬಹುವಿನಯದಿಂದ ಮನೋಹರವಾಗಿಯೂ, ವಿಶಾಲವಾಗಿಯೂ ಇರುವ ಏಕಾಮ್ರನಾಥ ದೇವಾಲಯದಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳಬೇಕಾಗಿ ಪ್ರಾರ್ಥಿಸಿ ಪಾಕವು ಸಿದ್ಧವಾದೊಡನೆ ಆ ಅತಿಥಿಗಳನ್ನು ಕರೆಸುವೆನೆಂದು ಬಿನ್ನವಿಸಿದನು. ಆಗ ದಂಪತಿಗಳು ಬಹು ಸಂತೋಷಹೊಂದಿ ಅಪೂರ್ವ ಅತಿಥಿಸಮೂಹಕ್ಕೆ ಅನೇಕ ಭೋಜ್ಯವಸ್ತುಗಳನ್ನು ಅಣಿಮಾಡುವದನ್ನು ತಿಳಿದು ಕುಹಕ ತಪಸ್ವಿಯಾದ ದೇವೇಂದ್ರನು ಉರುವಲಕ್ಕಾಗಿ ಕಟ್ಟಿಗೆಯು ದೊರೆಯದಂತೆ ಮನೆಯೊಳಗಿನವರು ಹೊರಗೆ ಬರದಂತೆ ಭಯಂಕರವಾಗಿ ಮಳೆಗರೆದನು. ಆಗ ಮನೆಯೊಳಗಿರುವ ಕಟ್ಟಿಗೆ ತೀರಲು ಸಿರಿಯಾಳ್ವನು ಅಂಜದೆ ಗೃಹದೊಳಗಿನ ಚಂದನದ ಕಟ್ಟಿಗೆಯನ್ನು ಸುಟ್ಟನು; ಬಳಿಕ ಬಹು ಬೆಲೆಯುಳ್ಳ ಜವಳಿಯನ್ನು ಸಹ ಎಣ್ಣೆಯಲ್ಲಿದ್ದಿ ಅಡುಗೆಯನ್ನು ಮಾಡಹತ್ತಿರುವದನ್ನು ಇಂದ್ರನು ಕಂಡು ಅಗ್ನಿಗೆ ತಾನೇ ಉರಿಯುವಂತೆ ಆಜ್ಞಾಪಿಸಿದನು.

ಪರಿಪರಿಯ ಪಕ್ವಾನ್ನವು ಸಿದ್ಧವಾಗಲು ಚಂಗಳೆಯು ತನ್ನ ಗಂಡನಿಗೆ ತಪಸ್ವಿಗಳನ್ನು ಊಟಕ್ಕೆ ಕರೆಯಬೇಕೆಂದು ನಿವೇದಿಸಿದ ಪ್ರಕಾರ ಆತನು ಅವರಿದ್ದಲ್ಲಿಗೆ ಹೋಗಿ ಅವರೆಲ್ಲರಿಗೂ ಭಕ್ತಿಯಿಂದ ನಮಸ್ಕರಿಸಿ ಅರ್ಪಣಕ್ಕೆ ಬಿಜಯ ಮಾಡಬೇಕೆಂದು ಬಿನ್ನವಿಸಿದನು. ಪ್ರಚ್ಛನ್ನರಾಗಿ ಬಂದ ದೇವತೆಗಳೆಲ್ಲರು ಮನೆಗೆ ಬರಲು ಅವರೆಲ್ಲರಿಗೂ ಸುಗ್ರಾಸದಿಂದ ತೃಪ್ತಿಪಡಿಸಿ ತಾಂಬೂಲವನ್ನು ಕೊಟ್ಟು ವಸ್ತ್ರಾಲಂಕಾರಗಳಿಂದಲಂಕರಿಸಿ ಸಂತೋಷಗೊಳಿಸಿದನು.

ಕಥಾನಾಯಕನ ಆತಿಥ್ಯದಿಂದ ಪರಿತೃಪ್ತರಾದ ದೇವತೆಗಳು ಉಮಾರಮಣನ ಸನ್ನಿಧಿಗೆ ಹೋಗಿ ನಡೆದ ಸಂಗತಿಯನ್ನು ವಿಸ್ತಾರವಾಗಿ ವಿಜ್ಞಾಪಿಸಿದರು. ಆಗ ಪುಣ್ಯರೂಪನಾದ ಪುರುಷಶ್ರೇಷ್ಠನು ನೀವು ಷಡ್ರಸೋಪೇತವಾದ ವಿವಿಧ ಪಕ್ವಾನ್ನಕ್ಕೆ ಮೆಚ್ಚಿದಿರಿ ಹೊರ್ತಾಗಿ ಚಿರುತೊಂಡನ ಅನ್ನದಾನದ ಯಶಃ ಕಾಂತಿಯನ್ನು ಕಳೆಗುಂದಿಸಲಿಲ್ಲ; ನಿಮ್ಮಿಂದ ನಾನು ಆಜ್ಞಾಪಿಸಿದ ಕಾರ್ಯವು ಸಾಧಿಸಲಿಲ್ಲ. ನಾನೇ ಆ ಕಜ್ಜನನ್ನು ನೋಡಿಕೊಳ್ಳುವೆನು. ಮುಂದೇನು ವಿಶೇಷವು ಜರಗುವದೋ ಅದನ್ನು ನೀವು ಆಕಾಶದಲ್ಲಿ ಕುಳಿತುಕೊಂಡು ನೋಡುತ್ತಿರ್ರಿ. ನಾನು ಆ ಸಿರಿಯಾಳ್ವನ ಸತ್ವವನ್ನು ನೋಡಿಬಿಡುವೆನು. ಹೀಗೆಂದು ಕಾಂಚೀಪುರಕ್ಕೆ ಹೊರಡಲನುವಾದನು.

ಕಾಂಚೀಪುರದ ತೋಟಕ್ಕೆ ಬಂದು ಕೃಪಾನಿಧಿಯಾದ ಶಂಕರನು ನಂದನವನದಂತಿರುವ ಅಲ್ಲಿಯ ವನದ ಸೊಬಗನ್ನು ನೋಡಿ ಸಂತೋಷಪಡುತ್ತ ಸ್ವಲ್ಪ ವಿಶ್ರಮಿಸಿಕೊಳ್ಳುವಾಗ ಅಲ್ಲಿಯ ಎರಡು ಗಿಳಿಗಳು ತಮ್ಮ ಮರಿಯೊಡನೆ ವಿನೋದಪಡುತ್ತಿರುವಾಗ ತಟ್ಟನೆ ಒಂದು ಗಿಡಗವು ಬಂದು ಭರ್ರನೆ ಆ ಮರಿಯನ್ನು ತೆಗೆದುಕೊಂಡು ಹೋಯಿತು. ಆಗ ಆ ಶುಕಗಳಿಗಾದ ದುಃಖವನ್ನು ಹೇಳಲ

ಸಾಧ್ಯವು. ಈ ಪರಿಯಾದ ಪುತ್ರಶೋಕವನ್ನು ಕಂಡು ಕರುಣಾಕರನಾದ ಮೃಡನು ಮೃತವಾದ ಗಿಳಿಯ ಮರಿಗೆ ಜೀವದಾನವನ್ನು ಮಾಡಿ ಶುಕ ಶಿಶುವನ್ನು ಆ ಗಿಳಿಗಳಿಗೆ ಕರುಣಿಸಿದನು. ಪ್ರಾಣಿಗಳಿಗೆ ಪುತ್ರಪ್ರೇಮವು ಘನವಾದುದೆಂದೆಣಿಸಿ ನನಗೆ ಪ್ರಸ್ತುತ ಸಂದರ್ಭಕ್ಕೆ ಉಪಾಯವು ಚನ್ನಾಗಿ ಹೊಳೆಯಿತೆಂದು ಬಗೆದು, ಕಾಪಾಲಿಕ ವೇಷವನ್ನು ತಳೆದು ಆ ದಿವಸ ಜಂಗಮ ಮೂರ್ತಿಗಳು ಚರಿತ್ರ ಪುಂಗವನಿಗೆ ದೊರೆಯದಂತೆ ಮಾಡಿದನು.

ನಮ್ಮ ಭೈರವ ವೇಷದ ಶಂಕರನು ಚಿರುತೊಂಡನ ಮನೆಬಾಗಿಲಲ್ಲಿ ಬಂದು "ಭಿಕ್ಷಾಂ ದೇಹಿ" ಎಂದನು. ಆಗಲೇ ಒಳಗಿಂದ ಚೆಂಗಳೆಯು ಅವಸರದಿಂದ ಬಂದು ಮಹಾಮೂರ್ತಿಯ ಪಾದಕ್ಕೆರಗಿ ಅರ್ಘ್ಯಪಾದ್ಯಾದಿಗಳನ್ನಿತ್ತು ಕೈಮುಗಿದು :—ದೇವಾ ವಿಶ್ರಮಿಸಿಕೊಳ್ಳಿರಿ ; ಶಿವಾರ್ಚನೆಯನ್ನು ಮಾಡಿ ಪ್ರಸಾದವನ್ನು ಮುಗಿಸಿಕೊಂಡು ದಯಮಾಡಿಸಬೇಕೆಂದು ಬೇಡಿಕೊಂಡಳು. ಭೈರವನು :—ಮಾನಿನಿಯೇ, ನಿನ್ನ ಪತಿಯು ಎಲ್ಲಿದ್ದಾನೆ? ಚೆಂಗಳೆಯು :—ಶಿವಭಕ್ತರನ್ನು ಅರ್ಪಣಕ್ಕೆ ಕರೆತರುವದಕ್ಕಾಗಿ ಹೋಗಿದ್ದಾರೆ. ಇಷ್ಟರಲ್ಲಿ ಬರುವರು. ಭೈರವನು :—ಪುರುಷರಿಲ್ಲದ ಮನೆಯಲ್ಲಿ ನಾನು ನಿಲ್ಲಲಾರೆ ; ವಟವೃಕ್ಷದಡಿಯಲ್ಲಿ ಕುಳಿತುಕೊಳ್ಳುವೆನು, ಹೋಗುತ್ತೇನೆ ; ಎಂದು ಹೊರಟು ಹೋದನು

ತೃಪ್ತಿಗಾಗಿ ಭೂರುದ್ರರನ್ನು ಅರಸುತ್ತ ಹೋದ ಕಥಾಪುರುಷನು ಎಲ್ಲಿಯೂ ಅವರನ್ನು ಕಾಣದೆ ಹಾ ಮೃಡಮೂರ್ತಿಗಳೇ ಎಂದು ಮಿಡುಕುತ್ತ ಶಿವ, ಶಿವ, ಈ ದಿವಸ ದೈವಗತಿಯು ಈರೀತಿ ಪರಿಣಮಿಸಿತೆಂದು ಚಿಂತಾತುರನಾಗಿ ಬರುತ್ತ ಆಲದಮರದ ಬುಡದಲ್ಲಿ ಭಸ್ಮರುದ್ರಾಕ್ಷಮಾಲಾಭರಣನಾಗಿ ಜಡೆಗಳಿಂದೊಪ್ಪುವ ಶಿವಕಲಾವಿಶೇಷದಿಂದ ವಿರಾಜಿಸುವ ಭೈರವನನ್ನು ದೂರದಿಂದಲೇ ಕಂಡು ಶರೀರದಲ್ಲೆಲ್ಲ ಶುಭ ಚಿಹ್ನಗಳು ತಲೆದೋರಿ ಸಾನಂದನಾಗಿ ಡಮರುಗಹಸ್ತನಾದ ತ್ರಿಶೂಲಧರನಾದ ಆ ಕಾಪಾಲಿಕನಿಗೆ ಆನತನಾಗಿ :-ಬುದ್ಧೀ, ಗೃಹಕ್ಕೆ ದಯಮಾಡಿಸಬೇಕೆಂದು ನಿವೇದಿಸಿ ಬಡವನ ಸೇವೆಯನ್ನು ಕೈಕೊಳ್ಳಬೇಕೆಂದು ವಿನಯವಾಗಿ ತಲೆಬಾಗಿ ಬೇಡಿಕೊಂಡನು. ಕಾಪಾಲಿಕನು :—ಭಕ್ತನೇ, ನೀನು ಅನ್ನದಾನಿಯೆಂದು ಹಾಗೂ ಬೇಡಿದವರಿಗೆ ಅವರಿಷ್ಟಾನುಸಾರವಾಗಿ ಧನಕನಕವಸ್ತ್ರಗಳನ್ನು ಕೊಡುವದರಲ್ಲಿ ವಿಖ್ಯಾತನೆಂದೂ ನಾಲ್ಕು ದಿಕ್ಕುಗಳಲ್ಲಿ ನಿನ್ನ ಕೀರ್ತಿಯು ಹಬ್ಬಿರುವದು ಅಷ್ಟೇ ಸಾಕು ; ನಮ್ಮ ಗೊಡವೆ ನಿನಗೇತಕ್ಕೆ? ಯಾಕಂದರೆ ನನ್ನ ವ್ರತವು ವಿಚಿತ್ರವಾದುದು. ಆರು ತಿಂಗಳಿಗೊಂದಾವರ್ತಿ ಮಾತ್ರ ಭೋಜನವು. ನರಮಾಂಸ ಭಕ್ಷಕನು ; ಅದರಲ್ಲಿಯೂ ವಿಶೇಷವುಂಟು ; ತಂದೆ-ತಾಯಿಗಳು ತಮ್ಮ ಪ್ರೀತಿಯ ಮಗನನ್ನು ನನಗೆ ಅರ್ಪಣಮಾಡುವದು ; ಇದರಲ್ಲಿ ಇನ್ನೊಂದು ಹೆಚ್ಚಿನ ಸಂಗತಿ ಎಂದರೆ, ಹಡೆದ ತಾಯಿಯು ತನಯನನ್ನು ತರಿದು ಅಡುಗೆ

ಯನ್ನು ಮಾಡಬೇಕು. ಆದುದರಿಂದ ಇಷ್ಟೆಲ್ಲ ತೊಂದರೆಯು ನಿನಗೆ ಬೇಡ. ನಿನ್ನ ಅಪೇಕ್ಷೆ ಇದ್ದರೆ ನಿನ್ನ ಕುಮಾರನ ಹಾಗೂ ಸತಿಯಳ ಅಭಿಮತವನ್ನು ತಿಳಿದ ಬಳಿಕ ನಮಗೆ ಓತಣಕ್ಕೆ ಕರೆಯುಬಹುದು.

ಇದೆಲ್ಲವನ್ನು ಸಿರಿಯಾಳ್ವನು ಚಿತ್ತಗೊಟ್ಟು ಕೇಳಿ ಹಸಾದವೆಂದು ಬಿಳ್ಕೊಂಡು ತನ್ನ ಮನ ಒಪ್ಪಿದಾಗ್ಯೂ ತನ್ನ ಮಡದಿಯನ್ನು ಮತ್ತು ಕುವರನನ್ನು ತಿಳಿಯಬೇಕೆಂದು ತನ್ನ ಮನೆಗೆ ಬಂದನು. ಚಿರುತೊಂಡನು ಚಿಂತಾತುರನಂತೆ ನಟಿಸುತ್ತ ತನ್ನರಸಿಗೆ:—ಪಾಲುಗಾರ್ತಿಯೇ, ಈ ದಿವಸ ಕಾಪಾಲಿಕನಪ್ಪ ರುದ್ರ ಮೂರ್ತಿಯು ಕಾಲಗತಿಗನುಸಾರವಾಗಿ ದೊರೆತಿರುವನು; ಆತನಿಗೆ ಬಾಲಕನ ಬಯಕೆಯಂತೆ; ಆದುದರಿಂದ ಬೇರೆಯವರ ಮಗನನ್ನು ಗೌಪ್ಯವಾಗಿ ತಂದು ಆತನಿಗೆ ಊಟ ಮಾಡಿಸಿದರೆ ಬರುವದು. ಇದನ್ನು ಧರ್ಮಸೂಕ್ಷ್ಮವನ್ನರಿತ ಚೆಂಗಳೆಯು ಕೇಳಕೇಳುತ್ತಲೆ ಅಸಹ್ಯಪಡುತ್ತ:—ದೇವರು ನಮಗೆ ಒದಗಿಸಿ ಕೊಟ್ಟಿರುವ ಈ ಪುಣ್ಯವಿಶೇಷವನ್ನು ಬೇರೊಬ್ಬರ ಪಾಲಿಗೆ ಬಿಡಬಹುದೇ? ನಮ್ಮ ಮಗನನ್ನೇ ಭೈರವ ಮೂರ್ತಿಗೆ ನಿವೇದಿಸುವಾ. ಬೇಗನೆ ಆ ಕಾಪಾಲಿಕನಿಗೆ ಬಿನ್ನವನ್ನು ಮಾಡಿ ಬರ್ರಿ, ಎಂದು ಸೂಚಿಸಲು ಕಥಾಪುರುಷನ ಆನಂದಕ್ಕೆ ಸೀಮೆ ಇಲ್ಲದಂತಾಯಿತು.

ಇತ್ತ ಕುಹಕ ವೇಷಧರನಾದ ಪನ್ನಗಾಭರಣನು ಚರಿತ್ರನಾಯಕನ ಕುಮಾರನಿರುವ ವಿದ್ಯಾನಿಲಯಕ್ಕೆ ಬಂದು ಚೀಲಾಳನನ್ನು ಕಾಣಲು ಆ ಹುಡುಗನು ಇದಿರೆದ್ದು ಬಂದು ಪೊಡಮಟ್ಟು ಕುಶಲವನ್ನು ಕೇಳಿ ತಾವು ದಯಮಾಡಿಸಿದ ಕಾರಣವಾವುದೆಂದು ಕೇಳಿದನು. ಆಗ ಪ್ರಚ್ಛನ್ನ ವೇಷದ ಶಂಕರನು ಕಣ್ಣಲ್ಲಿ ನೀರುತಂದು:—ಹಸುಮಗನೇ, ಈ ದಿವಸ ನಿನ್ನ ಜನನೀ ಜನಕರು ನಿನ್ನನ್ನು ಕೊಂದು ಭೈರವನಿಗೆ ಎಡೆಮಾಡುವರಂತೆ ಆದುದರಿಂದ ನೀನು ಶೀಘ್ರವಾಗಿ ಓಡಿ ಹೋಗಿ ಎಲ್ಲಿಯಾದರೂ ಅಡಗಿಕೊಂಡು ನೆಮ್ಮದಿಯಾಗಿರು, ಎಂದು ಉಸುರ್ಗರೆದನು. ಇದನ್ನು ಕೇಳಿ ಬುದ್ಧಿಶಾಲಿಯಾದ ಆ ಚಿಕ್ಕ ಮಗು:—ಅಯ್ಯನವರೇ, ನನ್ನನ್ನು ಆ ಮುನಿವರನಿಗೆ ಅರ್ಪಣಮಾಡಿದರೆ ಒಳ್ಳೇದಾಗುವದು; ನಾನು ಧನ್ಯನೆಂದು ಭಾವಿಸುವೆನು; ಕೆಡುವ ತನುವಿದು ಸತ್ಕಾರ್ಯಕ್ಕೆ ವಿನಿಯೋಗವಾದರೆ ಬಹಳ ನೆಟ್ಟಗಾಯಿತು, ಎಂದು ಆನಂದೋತ್ಸಾಹವನ್ನು ಪಡೆಯಲು ಕಾಪಾಲಿಯು ನಿರುಪಾಯನಾಗಿ ಅಲ್ಲಿಂದ ಮೆಲ್ಲನೆ ತೆರಳಿ ಮುನ್ನಿನ ಆಲದ ಮರದೆಡೆಗೆ ನಡೆದನು.

ಚೆಂಗಳೆಯು ಶಾಲೆಯಿಂದ ಮಗನನ್ನು ಕರೆಯಿಸಿ ಯಾವದ್ವೃತ್ತಾಂತವನ್ನು ಆತನಿಗೆ ವಿವರಿಸಿ ಅವನನ್ನಾಘ್ರಾಣಿಸಿ ಮುದ್ದಿಟ್ಟು ಅಕ್ಷಯವಾದ ಸುಖವನ್ನು ಪಡೆ, ಎಂದು ಹರಿಸಿ ಆತನಿಗೆ ನಿರ್ಮಲೋದಕದಿಂದ ಸ್ನಾನವನ್ನು ಮಾಡಿಸಿ.

ಭಸ್ಮವನ್ನು ತೊಡೆದು ಅನೇಕಾತ್ಮನೆನಿಸಿದ ವಿಶ್ವಾತ್ಮನನ್ನು ಅಡಿಗಡಿಗೆ ಧ್ಯಾನಿಸುತ್ತ ಇಂದು ನಮಗೆ ಸುಕೃತವಿಶೇಷವೆಂದು ಬಗೆಯುತ್ತ ಗಂಡನನ್ನು ಕರೆದು ಮುದ್ದಿನ ಕಣಿಯಂತಿರುವ ಆತ್ಮಜನನ್ನು ಮಣೆಯಮೇಲೆ ಕುಳ್ಳಿರಿಸಿ ಆತನನ್ನು ಭದ್ರವಾಗಿ ಹಿಡಿದುಕೊಂಡಿರಬೇಕಾಗಿ ಪತಿಗೆ ಹೇಳಿ ಹರನಾಮವನ್ನುಚ್ಚರಿಸುತ್ತಿರುವವರ ಕುಮಾರನನ್ನು ಖಡ್ಗದಿಂದ ತರಿದು ಕುತ್ತಿಗೆಯನ್ನು ನೆಲದ ಮೇಲಿಟ್ಟಳು! ಇದನ್ನೆಲ್ಲ ಆಕಾಶದಲ್ಲಿ ನಿಂತಿದ್ದ ದೇವತೆಗಳು ನೋಡಿ ಬೆರಗಾದರು. ಶಿರವನ್ನು ಅಲ್ಲಿಯೇ ಬಿಟ್ಟು ಚೆಂಗಳೆಯು ಮಗನ ಮಾಂಸದಿಂದ ಪಾಕವನ್ನು ಸಿದ್ಧಮಾಡಿದಳು. ಮನೆಯಲ್ಲಿರುವ ಚತುರೆಯಾದ ಚಂಡಿನಿ ಎಂಬ ತೊತ್ತು ಆ ತಲೆಯನ್ನು ತೆಗೆದುಕೊಂಡು ಅದನ್ನು ಹದವಾಗಿ ಅಟ್ಟು ಮೇಲೋಗರ ಮಾಡಿ ಬಚ್ಚಿಟ್ಟಳು.

ಚೆಂಗಳೆಯು ಅಡುಗೆಯು ಅಣಿಯಾಗಿದೆ. ಒಡೆಯರಾದ ಅಪೂರ್ವ ಭೈರವರನ್ನು ತ್ವರೆಯಿಂದ ಕರೆದುಕೊಂಡು ಬನ್ನಿರೆಂದು ಕಾಂತನಿಗೆ ನಿವೇದಿಸಿದಳು. ಆ ಮೇರೆಗೆ ಸಿರಿಯಾಳ್ವನು ಕಾಪಾಲಿ ಯೋಗಿಯನ್ನು ಹುಡುಕುತ್ತ ಆ ವಟವೃಕ್ಷದ ಹತ್ತರ ಬಂದು ನೋಡುತ್ತಾನೆ, ಆ ಭೈರವಮುನಿಯು ಅಲ್ಲಿರದಿರಲು, ಗಾಬರಿಯಾಗಿ ಅಲ್ಲಲ್ಲಿ ತಡಕುತ್ತ ಬೇಸತ್ತು ಭಯಗೊಂಡು ಬಾಯ್ಬಿಡುತ್ತ ಭೂರುದ್ರನೆ ಎಂದನ್ನುತ್ತ ಮೂರ್ಛೆಯನ್ನು ಹೊಂದಿದನು. ಆಗಲೇ ದಯಾನಿಧಿಯಾದ ಭರ್ಗನು ಆ ಕಾಪಾಲಿಕ ವೇಷದಿಂದಲೇ ಕನಿಕರದಿಂದ ಭಕ್ತನನ್ನು ಹಿಡಿದೆತ್ತಿ ಚೇತರಿಸುವಂತೆ ಮಾಡಿದನು. ಚಿರುತೊಂಡನು ಸಮಾಧಾನವನ್ನು ಹೊಂದಿ ಒಡೆಯರೇ ಜೋನವು ಸಿದ್ಧವಾಗಿದೆ, ತಡಮಾಡಬೇಡಿರಿ, ತೀವ್ರನಡೆಯಿರಿ ಎಂದು ಕೈಮುಗಿದು ವಿಜ್ಞಾಪಿಸಲು ಸಿರಿಯಾಳ್ವನೊಡನೆ ಆ ಮುನೀಶ್ವರನು ಅನ್ನದಾನದ ಅರಮನೆಗೆ ಬಂದನು. ನಿರೀಕ್ಷಿಸುತ್ತ ಕುಳಿತ ಚೆಂಗಳೆಯು ಇದಿರೆದ್ದು ಹೋಗಿ ಕಪಾಲಧರನಾದ ಯೋಗಿಗೆ ನಮಸ್ಕರಿಸಿ ಪಾದಪ್ರಕ್ಷಾಲನವನ್ನು ಮಾಡಿ ಶಿರದಲ್ಲಿ ಪಾದತೀರ್ಥವನ್ನು ತಳೆದು ದಂಪತಿಗಳು ಮುನಿವರನನ್ನು ಪೂಜಿಸಿ ಎಡೆ ಮಾಡಲು ಅಪ್ಪಣೆಯನ್ನು ಕೇಳಿದರು. ಚೆಂಗಳೆಯು ನೀಡುವಾಗ ಭೈರವನು ಇದರಲ್ಲಿ ಶಿರೋಮಾಂಸವು ಕಂಡು ಬರುವದಿಲ್ಲ. ಆದುದರಿಂದ ನನಗೆ ಈ ಎಡೆಯು ಬೇಡವೆಂದು ತಿರಸ್ಕರಿಸಲು, ಆ ಸಾಧ್ವಿಯು ಬೆದರಿದಳು. ಚಿರುತೊಂಡನು ಪತ್ನಿಯ ಮೋರೆಯನ್ನು ಮಿಕಿಮಿಕಿ ನೋಡಹತ್ತಿದನು. ಇದನ್ನೆಲ್ಲ ಕಣ್ಣಾರೆ ನೋಡಿದ ಅನ್ನದಾನಿಯ ವಿಶ್ವಾಸಪಾತ್ರಳಾದ ದಕ್ಷಳಾದ ಚಂಡಿನಿಯೆಂಬ ಸೇವಕಳು ಆ ಶಿರದಿಂದ ಮೇಲೋಗರವನ್ನು ಮಾಡಿರುವೆನೆಂದು ಹೇಳಿ ಅದನ್ನು ಸೇವಿಸಿರಿ ಎಂದು ಕಾಪಾಲಿಗೆ ನೀಡಿಬಿಟ್ಟಳು. ಆಗ ನಮ್ಮ ಸಿರಿಯಾಳ ಚಂಗಳೆಗೆ ಆದ ಹರ್ಷವನ್ನು ಬಣ್ಣಿಸುವದಕ್ಕಿಂತಲೂ ಪಾಠಕ ಮಹಾಶಯರೇ ಅದನ್ನು

ಊಹಿಸಲಿ ! ಕಪಟರೂಪದ ಕಾಪಾಲಿಯು ಒಂದಾದರೂ ಕೊರತೆಯಾಗಲೊಲ್ಲದೆಂದು ಬಗೆದು ನಮ್ಮೊಡನೆ ಊಟಕ್ಕೆ ಬಾ, ಎಂದು ಚಿರುತೊಂಡನಿಗೆ ಆಗ್ರಹ ಮಾಡಲು ಅದಕ್ಕೂ ಅವನು ಒಪ್ಪಿದನು. ಶೂಲಿಯು ಇದರಲ್ಲಿಯೂ ಇವರು ಸೋಲಲಿಲ್ಲವೆಂದು ಚಿಂತಿಸಿ ಮಗನಿಲ್ಲದ ಮನೆಯಲ್ಲಿ ಪ್ರಸಾದವನ್ನು ಕೈಕೊಳ್ಳುವದು ಹೇಗೆ? ಎಂದು ನಿಮ್ಮ ಚೀಲಾಳನನ್ನು ಕರೆಯಿರಿ, ಹೀಗೆ ದಂಪತಿಗಳಿಗೆ ತ್ರಿಶೂಲಧರನು ಹೇಳಿದನು. ಚಿರುತೊಂಡನು ಜಾಯೆಯ ಮುಖವನ್ನು ನೋಡಲು ಆಕೆಯು :—ನಾವೀರ್ವರು ಶಿವನಾಟದ ಗೊಂಬೆಗಳು. ಆ ಅಗಣಿತ ಮಹಿಮನ ಸೂತ್ರಕ್ಕೊಳಪಟ್ಟವರು ಎಂದು ಸಂತೋಷಚಿತ್ತಳಾಗಿ ನುಡಿದಳು. ಸಹಧರ್ಮಚಾರಿಣಿಯ ಮರ್ಮವನ್ನರಿತ ಚಿರುತೊಂಡನು ಆನಂದಯುತನಾಗಿ ಒಡೆಯರಾಜ್ಞೆಯಂತೆ ನೀನು ಕರೆ ಎಂದು ಭಾರ್ಯಳಿಗೆ ಹೇಳಿದನು. ಪತಿಯ ಅಪ್ಪಣೆಯ ಮೇರೆಗೆ ಕುಮಾರಪಿತನು (ಅಂದರೆ ಭೈರವ ತಪಸ್ವಿಯು) ನಿನ್ನನ್ನು ಬಯಸುವನು ಬೇಗನೆ ಬಾ, ಕುಮಾರ! ಎಂದು ಚೆಂಗಳೆಯು ಕರೆದಳು. ಆಗ ಎಡೆಯಲ್ಲಿ ನೀಡಿದ ಪ್ರಸಾದವೆಲ್ಲ ಮಾಯವಾಗಿ ಚೀಲಾಳನು ಹೊರಗಿಂದ ಓಡಿಬಂದು ಆ ತಪಸ್ವಿಗೂ ಮಾತಾಪಿತರಿಗೂ ನಮಸ್ಕರಿಸಲು ಪುನಃ ಭೈರವನ ಆರೋಗಣೆಗೆ ಮಗನು ದೊರಕಿದನೆಂದು ಚೆಂಗಳೆಯು ಉಬ್ಬಿ ಪರಮ ಸಂತೋಷವನ್ನು ಹೊಂದಿದಳು. ಚಿಕ್ಕವನಾದರೂ, ಧೀರನೂ, ಉಗ್ರ ಶಿವಭಕ್ತನೂ ಆದ ಚೀಲಾಳನನ್ನು ಮುನಿಪನು ಬಿಗಿದಪ್ಪಿ ಮುದ್ದಾಡಿ ಆ ಮಾತಾಪಿತರರಿಗೂ, ಬಾಲಕನಿಗೂ ತನ್ನ ಕೃತಕ ವೇಷವನ್ನಡಗಿಸಿ ನಿಜರೂಪದಿಂದ ತೋರಿದನು. ಆಗ ಶಿವನಿಷ್ಠರಾದ ಪತಿ-ಪತ್ನಿಯರು ಹಾಗೂ ಅವರ ಮಗನು ನಲಿದಾಡಿ ದಿವ್ಯಮೂರ್ತಿಯ ಚರಣಗಳಲ್ಲಿ ಹೊರಳಾಡಿ ಅಘೋರನಾದ ಆ ಶಾಂತ ಮೂರ್ತಿಯನ್ನು ಪರಿಪರಿಯಾಗಿ ಸ್ತುತಿಸಿ ಅವರೆಲ್ಲರ ಮೈಯಲ್ಲಿ ಬೆಮರೇರಿ ಆನಂದ ಪರವಶರಾಗಲು ಆಕಾಶದಲ್ಲಿರುವ ದಿವಿಜರಿಗೆ ಶಂಕರನು ಇವರ ಸದ್ಭಕ್ತಿಯನ್ನು ಕೊಂಡಾಡಿ ಇಚ್ಛಾಮಾತ್ರದಿಂದಲೇ ಪುಷ್ಪಕ ವಿಮಾನವನ್ನು ಬರಮಾಡಿ ಅದರಲ್ಲಿ ಆ ಮೂವರನ್ನು ಕುಳ್ಳಿರಿಸಿ ಕಾಂಚೀಪುರದಲ್ಲಿರುವ ಶಿವೈಕ್ಯರಾದ ಸುಜನರನ್ನು ಸಹಾ ಆ ದೇವಯಾನದಲ್ಲಿ ಕೂಡ್ರಿಸಿ ರಜತ ಗಿರಿಗೆ ಬರಮಾಡಿ ಚಿರುತೊಂಡನಿಗೂ, ಚೆಂಗಳೆಗೂ, ಚೀಲಾಳನಿಗೂ ಅಮೋಘವಾದ ಗಣಪದವಿಯನ್ನು ಕೊಟ್ಟು ಸಲಹಿದನು.



ಓಂ

# ೫೩. ಅತಿ ಭಕ್ತನು.



ಮೊದಲು ಸಿಕ್ಕಿದ ಮೀನ ಮುದದಿ ಶಿವಗೆಂದು ಬಿಡು । ವುದರಿಂದೆ ವಿಮಲ
ನೆನಸಿದತಿಭಕ್ತನೀ । ನೊದವಿಸಾನಂದ ಘನವೆನಗೆ

[ಶ್ರೀ ನಿಜಗುಣರು]



ತನಗೂ ತನ್ನ ಆಶ್ರಿತರಿಗೂ, ಸಂಸಾರವು ಸುಲಲಿತವಾಗಿ ಸಾಗುವದಕ್ಕೂ, ಹಾಗೂ, ತನ್ನ ಹಿತಾಪೇಕ್ಷಿಗಳಾದ ಪೂಜ್ಯರ ಕಾರ್ಯಕ್ರಮವು ಸಾಂಗವಾಗಿ ನಡೆಯುವದಕ್ಕೂ ಯಾವ ರೂಪದಿಂದಾಗಲಿ ಅಂದರೆ ಧನ, ಧಾನ್ಯ, ವಸ್ತ್ರ ಇತ್ಯಾದಿ ಪ್ರತಿಫಲವನ್ನು ಪಡೆಯಲಿಕ್ಕೆ ಯಾವ ನಿತ್ಯ ಕಜ್ಜವನ್ನು ಕೈಕೊಳ್ಳಬೇಕಾಗುವದೋ ಆ ಕೆಲಸಕ್ಕೆ ಕಾಯಕವೆಂದು ಹೇಳುವ ರೂಢಿಯುಂಟು. ಯಾವದೇ ಕಾಯಕವನ್ನವಲಂಬಿಸಲಿ ಅದರಲ್ಲಿ ದಕ್ಷತೆಯನ್ನು, ಸಮಯೋಚಿತ ಬುದ್ಧಿಯನ್ನು ದಿನಾಲು ವಹಿಸುತ್ತ ಪರಮಾತ್ಮನಲ್ಲಿಯೂ ಹಾಗೂ ವಂದ್ಯರಾದ ಸದ್ಭಕ್ತರಲ್ಲಿಯೂ ಪ್ರೇಮವನ್ನು ತಳೆದು ಪ್ರಪಂಚವನ್ನು ನಡೆಸಿದರೆ ಅದರಿಂದ ಸದ್ಗತಿಯಾಗುವದು ನಿಃಸಂದೇಹವು. ಮೀನಗಾರ ವಂಶದಲ್ಲಿ ಜನಿಸಿದ ಅತಿಭಕ್ತನೆಂಬವನೇ ನಮ್ಮ ಪ್ರಸ್ತುತ ಕಥಾನಾಯಕನು.

ಬಹುವೈಭವದಿಂದ ಮೆರೆಯುವ **ಚೋಳ**ಧರೆಯು ಚೆಲ್ವಾಗಿ ಶೋಭಿಸುತ್ತಿತ್ತು. ಶಾಸ್ತ್ರಜ್ಞರು ವೈಭವ ಎಂಬ ಪದವನ್ನು ಅನೇಕ ವಿಧವಾಗಿ ವರ್ಣಿಸಿರುವರು. ಶಿವಾರ್ಚನೆ, ಶಿವಾನುಭವದ ಅನುಕೂಲತೆ ಇವುಗಳ ಸೌಕರ್ಯವನ್ನುಂಟುಮಾಡಿಕೊಡುವ ಮಹನೀಯರ ಹಾಗೂ ವಿದ್ವಜ್ಜನರ ನೆಲಸುವಿಕೆ, ಲಲಿತಕಲೆಗಳ ಅಭ್ಯಾಸ, ಕೃಷಿವಾಣಿಜ್ಯ ಮುಂತಾದ ಧನಾದಿಸಾಧನ ಸಂಪತ್ತಿನ ವಿಪುಲತೆ, ಆಸ್ತಿಕ್ಯದ ಬೀಡಿನಂತಿರುವ ಶಿವನಿಲಯಗಳ ಆಗರ, ಗುಣವಂತ ಸಮೂಹ ಇತ್ಯಾದಿಯಾಗಿ ವೈಭವವಲ್ಲಿಯೆ ಅಡಕವಾಗುವದಾಗಿ ಸಾಮಾನ್ಯವಾಗಿ ಹೇಳಬಹುದು.

ಅತಿರಮಣೀಯವಾದ ಆ **ಚೋಳ**ಭೂಮಿಯಲ್ಲಿ **ತಿರುವಣ್ಣ** ಎಂಬ ಹೊಳೆಯು ಅದೇ ಹೆಸರಿನ ಪುರದ ಪಾರ್ಶ್ವದಲ್ಲಿ ಅಲ್ಲಿಯ ಜನತೆಯ ಹಾಗೂ ಸಕಲ ಪ್ರಾಣಿಗಳಿಗೆ ಮಹೋಪಕಾರಿಯಾಗಿ ಅಲ್ಲಿ ಸಮಭೂಮಿಯಾದುದರಿಂದ ಶಾಂತವಾಗಿಯೂ ಗಂಭೀರವಾಗಿಯೂ ಅನವರತವಾಗಿ ಪ್ರವಹಿಸುತ್ತಿತ್ತು. ಇದರಿಂದ ತೋಟಪಟ್ಟಿಗಳು, ಗದ್ದೆಗಳು, ಪೂದೋಟಗಳು ಹೆಚ್ಚಾಗಿದ್ದವೆಂದು ವಿವರಿಸುವದೇ ಬೇಡ. ಇಂಥ ಸುಕರವಾದ ಸ್ಥಳದಲ್ಲಿ ತಿರುವೆಣ್ಣೆ ಎಂಬ ಪಟ್ಟಣವು ಸಮಸ್ತ ಐಶ್ವರ್ಯದಿಂದಲೂ, ನಾನಾ ಕಸಬುಗಳನ್ನು ಕೈಕೊಂಡ ಜನರಿಂದಲೂ ರಂಜಿಸುತ್ತಿತ್ತು.

ಕುಲಕ್ರಮಾಗತವಾದ ಕಾಯಕದಲ್ಲಿ ನಮ್ಮ ಚರಿತ್ರನಾಯಕನು ಧುರೀಣನಾಗಿದ್ದನು. ಬೆಸ್ತರಲ್ಲಿ ಹುಟ್ಟಿದ ಕಲಂಕದ ಹೊರ್ತಾಗಿ, ಸದ್ಗುಣಗಳು ಆತನಲ್ಲಿ ಹೇರಳವಾಗಿದ್ದವು. ತನ್ನ ಉದ್ಯೋಗವನ್ನು ನಿಯಮದಿಂದ ತಪ್ಪದೆ ಸಾಹಸದಿಂದ ಮಾಡುವದರಲ್ಲಿ ಉತ್ಸುಕನಾಗಿದ್ದನು. ಮೀನಗಾರನಾಗಿದ್ದಾಗ್ಯೂ ಇನ್ನಿತರ ಪ್ರಾಣಿಮಾತ್ರದಲ್ಲಿ ದಯಾಪರನು. ಸತ್ಪಾತ್ರಕ್ಕೆ ಆತನ ಮನವೆಳಸುತ್ತಿತ್ತು. ಶಿವಭಕ್ತರಲ್ಲಿ ಆತನಿಗೆ ಪ್ರೀತಿಯು ಹೆಚ್ಚು. ಅವರೊಡನೆ ಕಳೆಯುವನು. ಸದ್ಭಕ್ತರನ್ನು ಗೌರವದಿಂದ ಕಾಣುತ್ತ ಅವರಿಗೆ ತನ್ನ ಕಾಯಕದಿಂದ ಬಂದ ಹಣವನ್ನು ತನ್ನ ಶಕ್ತಿಮೀರಿ ಕೊಡುತ್ತ ಉದಾರಿಯಾಗಿ ಜಂಗಮ ಪ್ರೇಮಿಯಾಗಿ ಶಿವಾನಂದಪರನಾಗಿ ಕಾಲಕಳೆಯುತ್ತಿದ್ದನು. ಈ ರೀತಿಯಾಗಿ ಕೆಲವು ವರ್ಷಗಳು ಗತಿಸಲು ಅವನ ಪ್ರಶಸ್ತವಾದ ನಡತೆಗನುಗುಣವಾಗಿ ಒಂದು ಶ್ರೇಯಸ್ಕರವಾದ ಬಯಕೆಯು ಹೊಳಯಿತು. ತಾನು ತೊರೆಗೆ ಹೋದಕೂಡಲೆ ಮೊದಲು ಸಿಕ್ಕ ಮೀನವನ್ನು ಶಿವಾರ್ಪಣವಾಗಲೆಂದು ಒಳ್ಳೇ ಭಕ್ತಿಯಿಂದ ಬಿಟ್ಟುಬಿಟ್ಟು ಬಳಿಕ ತನ್ನ ನಿತ್ಯವ್ಯವಹಾರವನ್ನು ಪೂರೈಸುತ್ತಿದ್ದನು. ಈತನ ಸರಳವಾದ ನಡೆಯೂ, ಶಿವೈಕ್ಯರಲ್ಲಿಯ ಪರಮಾದರವೂ, ಹಾಗೂ ಆತನ ವಿಚಿತ್ರತರವಾದ ದಿನಂಪ್ರತಿಯ ಶಿವಾರ್ಪಣವೂ ಪರಿಪೂರ್ಣನೂ ದಯಾಮಯನೂ ಆದ ಭಗವಂತನಿಗೆ ವೇದ್ಯವಾಗಿ ಒಂದು ಕೌತುಕದ ಸಂಗತಿಯು ವರ್ತಿಸಿತು.

ಒಂದು ದಿನ ಮುಂಜಾವಿನಲ್ಲಿ ಪರಮಾತ್ಮನನ್ನು ನೆನೆಯುತ್ತ, ಪೂಜ್ಯರನ್ನು ಸ್ಮರಿಸುತ್ತ ತನ್ನ ಕಾಯಕಕ್ಕನುಗುಣವಾದ ಸಕಲಸಾಧನಗಳಿಂದ ಆ ತೊರೆಗೆ ಹೋಗುವಾಗ ನಮ್ಮ ಚರಿತ್ರಲಾಮನಿಗೆ ಭುಜಗಳು ಹಾರಹತ್ತಿದವು. ಹೃದಯವು ವಿಕಸಿತವಾಗಿ ಸಂತೋಷವುಂಟಾಗಹತ್ತಿತು. ಆಗ ಆತನು ಹೊಳೆಯ ದಡದಲ್ಲಿ ತಕ್ಕ ಸನ್ನಾಹದೊಂದಿಗೆ ಕೂತು ತನ್ನ ಬಲೆಯನ್ನು ಬಿಟ್ಟು "ಮಹಾದೇವನೇ ನೀನು ಇಂಥ ಸ್ಥಾನದಲ್ಲಿ ನನ್ನನ್ನು ಹುಟ್ಟಿಸಿರುವೆಯಾದರೂ, ನಾನು ಶಿವಭಕ್ತನನ್ನು ಮರೆಯುವದಿಲ್ಲ; ಶಿವಾರ್ಪಣಕಾರ್ಯದಲ್ಲಿ ಅಜಾಗರೂಕನಾಗುವದಿಲ್ಲ.

ಶಿವ, ಶಿವ,'' ಎಂದು ಅನ್ನುವಷ್ಟರಲ್ಲಿಯೇ ತನ್ನ ಬಲೆಯು ಸ್ವಲ್ಪ ಅಲ್ಲಾಡಲು ಬಲೆಯನ್ನು ಹೊರಗೆ ಜಗ್ಗಿ ನೋಡಿದನು. ಆಶ್ಚರ್ಯಕರವಾದ ರತ್ನಖಚಿತ ವಾದ ಕನಕದಂತೆ ಪ್ರಕಾಶಿಸುವ ಅಪರಿಮಿತ ಬೆಲೆಯುಳ್ಳ ಬಾಳುವ ಮಹಾಮತ್ಸ್ಯವು ದೊರೆಯಿತು. ಅದನ್ನು ಶಿವಾರ್ಪಿತವಾಗಲೆಂದು ನಿತ್ಯನಿಯಮದ ಮೇರೆಗೆ ಭಕ್ತಿಯಿಂದ ಬಿಟ್ಟುಬಟ್ಟನು. ಆಗ ಎರಡನೇ ಸಾರೆ ಬಲೆಹಾಕಿದನು. ಮರಳಿ ಅದೇ ಮೀನವು ಗಾಳದಲ್ಲಿ ಸಿಕ್ಕಿತು. ಅದನ್ನು ಶಿವಾರ್ಪಿತವಾದ ವಸ್ತುವೆಂದು ಪ್ರವಾಹದಲ್ಲಿ ಹಾಕಿದನು. ಮೂರನೇ ಸಲ ಬೇರೆ ಸ್ಥಳದಲ್ಲಿ ಬಲೆಯನ್ನು ಬೀಸಿದನು. ಆಗ ಸಹ ಅದೇ ಬೇಟೆಯು ಕೈಗೆ ಬಂದಿತು. ದತ್ತಾಪಹಾರವು ಯುಕ್ತವಲ್ಲವೆಂದು ಅದನ್ನು ಹರಿಯುವ ನೀರಲ್ಲಿ ಚಲ್ಲಿ ಬೇರೆಡೆಯಲ್ಲಿ ಹೋಗಿ ಗಾಳವನ್ನು ಹೊಳೆಯಲ್ಲಿ ಹಾಕಿದನು. ಪರಮಾತ್ಮನ ಮಾಯೆಯಿಂದ ಎಷ್ಟು ಸಾರೆ ಬಲೆಯನ್ನು ಬೀಸಿದರೂ ಮರಳಿ, ಮರಳಿ ಅದೇ ಅಮೋಘವಾದ ಮತ್ಸ್ಯವೇ ದೊರಕುತ್ತಿತ್ತು. ಹೀಗಾಗಿ ನಮ್ಮ ಭಕ್ತಲಲಾಮನು ಬಲೆಯನ್ನು ಬೀಸಿ ಬೀಸಿ ಎರಡನೇ ಮತ್ಸ್ಯವನ್ನು ಕಾಣದೆ ಬೇಸತ್ತು ಇನ್ನು ಈ ಉದ್ಯೋಗವೇ ಸಾಕೆಂದು ಆ ಕಾಯಕವನ್ನು ಮಾಡುವವರಲ್ಲಿ ತನ್ನ ಉತ್ಪತ್ತಿಮಾಡಿದ ಮಹಾಕಾಯನೂ, ಮಹಾಕಾಲಮೂರ್ತಿಯೂ ಆದ ಶಂಕರನನ್ನು ಬಲವಾಗಿ ಭಕ್ತ್ಯಾವೇಶದಿಂದ ಚಿಂತಿಸಹತ್ತಿದನು. ಆಗಲೇ ಭಕ್ತ ರಕ್ಷಾಮಣಿಯಾದ ಕೃಪಾಸಮುದ್ರನಾದ ವಿಶ್ವೇಶ್ವರನು ಪ್ರಥಮಗಣಸಮೇತನಾಗಿ ಆತನಿಗೆ ಪ್ರಸನ್ನನಾಗಿ ಗಣಸಮೂಹದಲ್ಲಿ ಈತನಿಗೆ ಅತಿಭಕ್ತನೆಂಬ ಹೆಸರು ಸಾರ್ಥಕವೆಂದು ಪ್ರಶಂಸಿಸಿ, ಪ್ರಭುವನ್ನು ಪರಿಪರಿಯಾಗಿ ಸ್ತುತಿಸುತ್ತಿರುದ ನಮ್ಮ ವರಭಕ್ತನಿಗೆ ಶಾಶ್ವತವಾದ ಗಣಪದವಿಯನ್ನು ದಯಪಾಲಿಸಿದನು.



ಓಂ

# ೫೪. ಕಣಂಬುಲ್ಲನಂಬಿಯು.



ಅಂಬಿಕಾವಲ್ಲಭನೊಡಂಬಡೆ ಶಿರೋಜಂಗ । ಳಿಂ ಬೆಳಗನೆತ್ತಿ ದುರುತರ
ಕಣಂಬುಲ್ಲ । ನಂಬಿ ಪೊರೆಯನ್ನೆಡವಿಡದೆ ॥ ೧ ॥

[ಶ್ರೀ ನಿಜಗುಣರು]



ಅತ್ಯಂತ ಶೋಭೆಯಿಂದ ರಂಜಿಸುವ ಚೋಳಮಂಡಲದಲ್ಲಿ ಕಣಂಬೂರೆಂಬಪುರವು ಶಿವಾಲಯಗಳಿಂದಲೂ, ಹರಭಕ್ತರಿಂದಲೂ, ಧನಿಕರಿಂದಲೂ, ಹಲವು ವಿಧವಾದ ಉದ್ಯೋಗಗಳನ್ನು ಕೈಕೊಂಡ ಜನರಿಂದಲೂ, ಕೃಷಿಕರಿಂದಲೂ, ಜಲಸಮೃದ್ಧಿಯಿಂದಲೂ, ವನದೇವತೆಯ ಶೃಂಗಾರದಿಂದಲೂ ಮತ್ತು ವಿದ್ಯಾಮಂದಿರಗಳಿಂದಲೂ ಮನೋಹರವಾಗಿ ಒಪ್ಪುತ್ತಿತ್ತು. ಆ ಪಟ್ಟಣದಲ್ಲಿ ಬಡವನಾದ ಹಾಗೂ ಮುಗ್ಧನಾದ ನಂಬಿ ಎಂಬ ಭಕ್ತನು ಹುಲ್ಲನ್ನು ಮಾರಿ ಜೀವಿಸುತ್ತ ಬಂದ ಅಲ್ಪಧನದಿಂದ ಗುರುಲಿಂಗಜಂಗಮ ಸೇವಾತತ್ಪರನಾಗಿ, ಶಿವನಿಷ್ಠಾಪರನಾಗಿ, (ಆತನಲ್ಲಿ ತೃಪ್ತಿಯೂ, ಕಾರ್ಯನಿರ್ವಾಹಕ ಶಕ್ತಿಯೂ ಚೆನ್ನಾಗಿದ್ದುದರಿಂದ ಪ್ರತಿಫಲವು ದೊರೆತಷ್ಟರಲ್ಲಿಯೇ) ಶಿವಸುಖದೊಡನೆ ಕಾಲಯಾಪನೆ ಮಾಡುತ್ತಿದ್ದನು.

ಶರಣರ ಮಾರ್ಗವು ಅನ್ಯರಿಗೆ ತಿಳಿಯುವದು ದುಸ್ತರವು. ಯಾವದಾದರೊಂದು ಕಾಯಕವನ್ನು ಮಾಡುತ್ತ ದೇವರಿಂದ ಪೂರೈಸಲ್ಪಟ್ಟದ್ದರಲ್ಲಿಯೆ ಬೇರೊಬ್ಬರಲ್ಲಿ ತಮ್ಮ ಕೈಯೊಡ್ಡದೆ ಈಶಾರ್ಚನೆಗೆ ಬೇಕಾದ ವಸ್ತುಗಳನ್ನು ತಮ್ಮಷ್ಟಕ್ಕೆ ತಾವೇ ಒದಗಿಸಿಕೊಂಡು ಪರರಸಹಾಯವನ್ನು ಕೋರದೆ ನಿಜಭಕ್ತಿ ಎಂಬ ಸಾಧನದಿಂದ ಮುಕ್ತಿಕಾಂತೆಯನ್ನು ಆಯಾಸವಿಲ್ಲದೆ ತಮ್ಮ ಕೈವಶಮಾಡಿಬಿಡುವರು. ಭಗವಂತನು ಕೊಟ್ಟದ್ದರಲ್ಲಿಯೆ ಪಾತ್ರವರಿತು ವ್ಯಯಮಾಡುವ ಜಾಣ್ಮೆಯು ಇವರಲ್ಲಿ ಸಹಜವಾಗಿರುವದು. ಇವರ ನಿಷ್ಕಾಮ ಭಕ್ತಿಯೂ, ನಿರ್ದುಷ್ಟವಾದ ನಡೆಯೂ, ಅನವತರವಾಗಿರುವ ಅಸಾಧಾರಣ ಈಶ್ವರ ಭಕ್ತಿಯೂ

ಶಾಶ್ವತವಾದ ಸುಖವನ್ನು ಬಯಸುವವರೆಲ್ಲರೂ ಲಕ್ಷ್ಯದಲ್ಲಿಡಬೇಕಾದುದು ನಿರ್ವಿವಾದ ಸಂಗತಿಯೇ ಅಹದು.

ಕಣಂಬೂರಲ್ಲಿ ಅಡವಿಯಿಂದ ಸೌದೆಯನ್ನು ತಂದು ಅದನ್ನು ಮಾರಿ ಬಂದ ಹಣದಿಂದ ಶಿವಭಕ್ತರನ್ನು ಸಂತೋಷಪಡಿಸುತ್ತಿರುವ ನಮ್ಮ ಕಥಾನಾಯಕನಿಗೆ ಜನರೆಲ್ಲರೂ ಕಣಂಬುಲ್ಲನಂಬಿ ಎಂದು ಕರೆಯುತ್ತಿದ್ದರು. ಈ ರೀತಿಯಾದ ತನ್ನ ವ್ಯವಸಾಯವನ್ನು ಮಾಡುತ್ತಿರಲು ಒಂದು ದಿನ ಕಥಾಪುರುಷನು ಅರಣ್ಯಕ್ಕೆ ಹೋದಾಗ ಸಂಧ್ಯಾಸಮಯವಾಯಿತು. ಅಲ್ಲಿ ಒಂದು ರಮ್ಯವಾದ ಶಿವಾಲಯವು ಆತನ ದೃಷ್ಟಿಗೆ ಬಿತ್ತು. ಒಳಗೆ ಹೋಗಿ ಪರಮಾತ್ಮನಿಗೆ ಕೈಮುಗಿದು ಪ್ರದಕ್ಷಿಣೆಯನ್ನು ಮಾಡಿ ಸಾಷ್ಟಾಂಗ ಪ್ರಣಾಮವನ್ನು ಮಾಡಿ ಅರ್ಚಕನು ಗೈದ ಪೂಜೆಯನ್ನು ನೋಡಿ ನೋಡಿ ಸಂತುಷ್ಟನಾಗುವಾಗ ಆತನಿಗೆ ಕತ್ತಲೆಯಲ್ಲಿ ನಮ್ಮಪ್ಪ ಮಾದೇವನ ಗತಿ ಏನು ಎಂದು ಚಿಂತಿಸಹತ್ತಿದನು. ರಾತ್ರಿ ಕಾಲದಲ್ಲಿ ಈಶ್ವರನನ್ನು ಬಿಟ್ಟು ಹೋಗುವದು ಪ್ರಶಸ್ತವಲ್ಲೆಂದು ಬಗೆದು ಈ ಕಾಡಿನಲ್ಲಿ ಇಲ್ಲಿಯವರೆಗೆ ದೀಪವಿಲ್ಲದೆ ಅಂಧಕಾರದಲ್ಲಿದ್ದುದರಿಂದ ಪರಿತಾಪಪಟ್ಟು, ಗುಡಿಯ ಸುತ್ತುಮುತ್ತ ಬೆಳೆದಿರುವ ನಾಕಷ್ಟು ಒಣಹುಲ್ಲನ್ನು ಲಗುಬಗೆಯಿಂದ ಕಿತ್ತು ಅದನ್ನೆಲ್ಲ ಆ ಶಿವಾಲಯಕ್ಕೆ ತೀವ್ರವಾಗಿ ತಂದು ಸ್ವಲ್ಪ ಸ್ವಲ್ಪಾಗಿ ಉರಿಸುತ್ತ ಸ್ವಾಮಿಗೆ ಬೆಳಕು ಮಾಡುತ್ತ ರಾತ್ರಿಯನ್ನು ಕಳೆದು ಪ್ರಾತಃಕಾಲವಾಗುತ್ತಲೆ ತನ್ನ ವೃತ್ತಿಯನ್ನು ಮಾಡಲಿಕ್ಕೆ ಹೊರಟು ಬರುತ್ತ ಈ ವಿಪಿನದಲ್ಲಿ ಏಕಾಕಿಯಾಗಿರುವ ಶಿವಲಿಂಗ ಸನ್ನಿಧಿಗೆ ಈ ಹೊತ್ತಿನೆಂದ ದಿನಾಲು ಮುಚ್ಚಂಡೆಯಲ್ಲಿ ಬಂದು ಬೆಳಗಾಗುವವರೆಗೆ ಹುಲ್ಲು ಹೊರೆಗಳನ್ನು ಸುಡುತ್ತ ಕಣಂಬುಲ್ಲದೀಪ್ತಿಯಿಂದ ಪ್ರಕಾಶಗೊಳಿಸುವೆನೆಂದು ಸಂಕಲ್ಪಿಸಿ ಆ ಪ್ರಕಾರ ಮಾಡುತ್ತ ಅನೇಕ ವರ್ಷಗಳನ್ನು ಕಳೆದನು. ಹೀಗಿರುತ್ತಿರಲು ತನ್ನ ನಿತ್ಯ ನಿಯಮದಂತೆ ಒಂದು ದಿವಸ ದಿನಮಣಿಯು ಅಸ್ತವಾಗುವ ವೇಳೆಗೆ ಸರಿಯಾಗಿ (ಶಿವಭಕ್ತರು ತಪ್ಪದೆ ಧರಿಸುವ) ಭಸ್ಮರುದ್ರಾಕ್ಷಗಳನ್ನು ಶುಚಿರ್ಭೂತನಾಗಿ ತಳೆದು ಪಾರ್ವತೀ ಪತಿಯನ್ನು ಸ್ಮರಿಸುತ್ತ ಆ ದೇವಾಲಯಕ್ಕೆ ಬಂದು ನಾನಾ ವಿಧವಾದ ಸೌದೆಯ ಶಿವಡುಗಳನ್ನು ಅಲ್ಲಿ ಇಳುಹಿ ತಾಪತ್ರಯವನ್ನು ನಿವಾರಿಸುವ ಸಾಂಬಮೂರ್ತಿಯನ್ನು ಎವೆ ಇಕ್ಕದೆ ನೋಡುತ್ತ ಆತನ ಸ್ತೋತ್ರವನ್ನು ಮಾಡುತ್ತ ನಿತ್ಯಕ್ರಮದ ಕಣಂಬುಲ್ಲದೀಪ್ತಿಯಿಂದ ಬೆಳಗುತ್ತಿರಲು ಬ್ರಾಹ್ಮೀಸಮಯವು ಪ್ರಾಪ್ತವಾಯಿತು. ಆಗ ಮುಗ್ಧಭಕ್ತನ ತನ್ನ ಮೇಲಣ ಪ್ರೇಮವನ್ನು ಪರೆಹಚ್ಚಿ ನೋಡಬೇಕೆಂದು ಕೃಪಾನಿಧಿಯಾದ ಗಂಗಾಧರನು ಬಗೆದದ್ದರಿಂದ ಆ ಹುಲ್ಲಿನ ಶಿವಡುಗಳಿಗೆ ತಟ್ಟನೆ ಅಗ್ನಿಪ್ರವೇಶವಾಗಿ ಸೌದೆಯಲ್ಲಾ ಆ ಕ್ಷಣವೇ ಉರಿದು ಹೋಗಲು ನಮ್ಮ ಭಕ್ತಲಲಾಮನು ಚಿಂತಾತುರನಾಗಿ ಬಹಳ ಮರುಗಿದನು. ಶಿವ, ಶಿವ, ಏನು ಮಾಡಲಿ

ಎಂದು ಕಷ್ಟದಿಂದ ಮನಸೊಂದು ಕಳವಳ ಪಡುತ್ತಿರಲು ಆತನಿಗೆ ಒಂದು ಹಂಚಿಕೆಯು ಅಂಕುರಿಸಿತು ನನಗೆ ತಲೆಯಲ್ಲಿ ಬಹಳ ದಿವಸ ಎಣ್ಣೆಯನ್ನು ಉಂಡಿರುವ ಉತ್ತಮವಾದ ಜಡೆಗಳಿರುವವು. ಇದರಿಂದ ನನಗೆ ದೀವಿಗೆಯ ಪ್ರಯೋಜನವಾಗುವದೆಂದು ನಿರ್ಧರಿಸಿ ವೀರಾವೇಶ ಭಕ್ತಿಯಿಂದ ತನ್ನ ಮಸ್ತಕದಲ್ಲಿ ಸುಶೋಭಿಸುವ ಕೇಶಗಳಿಗೆ ಉರಿಯನ್ನು ಹಚ್ಚಿಕೊಂಡು ಕುಣಿದಾಡಿ ಪಾಡಿ ನಲಿದಾಡಿದನು. ಸ್ವಲ್ಪ ಹೊತ್ತಿನಲ್ಲಿಯೆ ಕೇಶಗಳೆಲ್ಲ ಉರಿದು ಹೋಗಿ ತಲೆಗೆ ಬೆಂಕಿ ಹತ್ತಿ ಛಿಟಿಲ್, ಛಿಟಿಲ್ ಸಪ್ಪಳವಾಗುತ್ತ ಶಿರವು ಜ್ವಾಲೆಯಿಂದ ವ್ಯಾಪ್ತವಾದರೂ ಅದರ ಪರಿವೆಯು ಶಿವ ಸಂತೋಷ ಚಿತ್ತನಾದ ಚರಿತ್ರಪುಂಗವನಿಗೆ ತಿಲಮಾತ್ರವಾದರೂ ಇಲ್ಲದಿರಲು ಭವರೋಗ ವೈದ್ಯನೂ, ಮುಕ್ತಿನಾಥನೂ ಆದ ಲಿಂಗಮೂರ್ತಿಯು ಆ ವಿಗ್ರಹದಿಂದಲೇ ಪ್ರಾಪ್ತನಾಗಿ ಭಕ್ತನ ಛಲಕ್ಕೂ ಆತನ ಅಚ್ಚಳಿಯದ ನಿಷ್ಠೆಗೂ ಮೆಚ್ಚಿ ದೈನ್ಯದಿಂದ ಪ್ರಾರ್ಥಿಸುತ್ತಿರುವ ನಂಬಿಯನ್ನು ಮೈದಡವಿ ಆತನ ತಲೆಯನ್ನು ನುಣ್ಣಗೆ ನೀವಿ ಇಮ್ಮಡಿ ಮುಮ್ಮಡಿಯಾದ ಜಟಾಭರಣವನ್ನು ಅನುಗ್ರಹಿಸಿ ತಾನು ಬರಮಾಡಿದ ಪ್ರಕಾಶಮಯವಾದ ದೇವಯಾನದಲ್ಲಿ ಆತನನ್ನು ಕುಳ್ಳಿರಿಸಿ ನಿತ್ಯವಾದ ಗಣಪದವಿಯನ್ನು ದಯಪಾಲಿಸಿದನು.



ಓಂ.

## ೫೫. ಎಳೆಯಾಂಡಗುಡಿಮಾರನು.



ಮಳೆಯೊಳ್ಕೈತರೆ ಶಾಲಿ ಮೊಳವಿತ್ತನಟ್ಟು ಭೂ । ತಳವರಿಯಲಿಕ್ಕಿ
ದೆಳೆಯಾಂಡಗುಡಿಮಾರ । ರೆಸಿ ಪಾಡೆನಗೆ ಮುದವನು ॥

[ಶ್ರೀ ನಿಜಗುಣರು]



ಉತ್ತಮ ಕುಲದಲ್ಲಿ ಹುಟ್ಟಿರಲಿ, ಪೆರಿಯವರಲ್ಲಿ ಜನಿಸಿರಲಿ ಆ ಸ್ಥಳದಲ್ಲಿ ಜನ್ಮವೆತ್ತಿದ ಮಾತ್ರಕ್ಕೆ ಅಷ್ಟೊಂದು ಪ್ರಾಶಸ್ತ್ಯ ಅಥವಾ ಹೀನತೆ ಯಾರಿಗೂ ಬರಲಾರದು. ಸುಜನರೊಪ್ಪುವ ಅನುಕರಣೀಯವಾದ ನಡೆ, ಆದರಣೀಯವಾದ ಸದ್ವರ್ತನಾತುರತೆ, ಪ್ರಾಣಿಮಾತ್ರಕ್ಕೆ ಯಾವ ವಿಧವಾದ ತೊಂದರೆಯಾಗದ ಉದ್ಯೋಗ ಕೈಕೊಳ್ಳುವಿಕೆ ಇವು ಮಾನವನ ಘನತೆಗೂ

ಆತನ ಶ್ರೇಯಸ್ಸಿಗೂ ಕಾರಣವಾಗುವದು ಸರ್ವ ಸಮ್ಮತವಾಗುವ ಸಂಗತಿಯೇ ಅಹುದು.

ಶೈವ ಕುಲದೀಪಕರ ನೆಲೆವನೆಯಾಗಿ, ಶಿವಾಗಾರಗಳ ಬೀಡಾಗಿ ಮಂಗಲದ ನಿವಾಸವಾಗಿ, ಸಕಲೈಶ್ವರ್ಯಕ್ಕಿಂಬಾಗಿ ಭೂತಲದಲ್ಲಿ ಚೋಳ ಧರೆಯು ಪ್ರಖ್ಯಾತವಾಗಿ ಮೆರೆಯುತ್ತಿತ್ತು. ವಿವಿಧ ಬೆಳಸಿನಿಂದ ಪೂರಿತವಾದ ಆ ಉರ್ವಿಯಲ್ಲಿ ಎಳೆಯಾಂಡ ಎಂಬ ಹೆಸರಿನ ಊರು ಹೊಲ ಗದ್ದೆ ತೋಟಪಟ್ಟಿಗಳಿಂದ ರಂಜಿತವಾಗಿ, ಶಿವಾಲಯ ಸಮೂಹಗಳಿಂದಲಂಕೃತವಾಗಿ, ಹರಭಕ್ತರಿಂದ ನಿಬಿಡವಾಗಿ ಶೋಭಿಸುತ್ತಿತ್ತು. ಅಲ್ಲಿರುವ ಮುಖ್ಯ ಗುಡಿಗೆ ದಿವಾಲು ತಪ್ಪದೆ ಸೇವೆಗಾಗಿ ಹೋಗುತ್ತಿದ್ದುದರಿಂದ ಎಳೆಯಾಂಡಗುಡಿಮಾರನೆಂಬ ಅಭಿಧಾನದಿಂದ ಹೆಸರಗೊಂಡ ಶಿವಪ್ರೇಮಿಯು ಸಾಹಸಿಗನು, ಶೂದ್ರಕುಲ ಸಂಭೂತನಾದರೂ, ಒಕ್ಕಲತನವನ್ನು ಮಾಡುತ್ತ ಅನೇಕ ಗೋವುಗಳನ್ನು, ಎಮ್ಮೆಗಳನ್ನು ಹಾಗೂ ವ್ಯವಸಾಯಕ್ಕೆ ಮುಖ್ಯ ಸಾಧನವೆನಿಸುವ ಬಲವುಳ್ಳ ಎತ್ತುಗಳನ್ನು ಚನ್ನಾಗಿ ಸಂರಕ್ಷಿಸುತ್ತಿದ್ದನು. ಜಾಣತನದಿಂದ ಕ್ರಮವರಿತು ಸಕಾಲದಲ್ಲಿ ತಕ್ಕ ಸನ್ನಾಹದಿಂದ ಶಿವಾರ್ಪಣಕ್ಕಾಗಿ ಬೆಳಯನ್ನು ಪಡೆಯಬೇಕೆಂಬ ಹವಣಿಕೆಯಿಂದ ಪರಮಾತ್ಮನಲ್ಲಿ ಸಂಪೂರ್ಣವಾದ ನಂಬಿಕೆಯನ್ನಿಟ್ಟು ಹೊಲದ ಕಾರ್ಯಗಳನ್ನು ಉತ್ಸಾಹದಿಂದ ಸಾಗಿಸುತ್ತಿದ್ದುದರಿಂದ ಬಹುಧನಾಢ್ಯನಾಗಿ ಕೊಡುಗೈ ದೊರೆಯಾಗಿ ಶಿವಭಕ್ತರ ನಿಧಿಯಾಗಿ ಅತುಲವಾದ ಸಂಭ್ರಮದಿಂದ ಯಶಸ್ವಿಯಾಗಿ ಬೆಳಗುತ್ತಿದ್ದನು. ತನ್ನ ಕ್ಷೇತ್ರದಲ್ಲಿ ಯಾವ ಕೆಲಸವನ್ನಾರಂಭಿಸಬೇಕಾದರೂ ಶಿವಭಾವನೆಯಿಂದ ಶಿವಭಕ್ತರ ಸಲುವಾಗಿ ಪೈರು ಬೆಳಯಬೇಕೆಂದು ಸಂಕಲ್ಪಿಸುತ್ತ ಬೀಜಗಳನ್ನು ಬಿತ್ತುವಾಗಲೂ ಬೆಳೆ ಬಂದಾಗ ಒಕ್ಕುವಾಗಲೂ ಜಂಗಮ ನಿಕರಕ್ಕೆ ತೃಪ್ತಿಯಾಗಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಆ ಆ ಕಾರ್ಯತತ್ಪರನಾಗುತ್ತಿದ್ದನು.

ಕಥಾನಾಯಕನು ಸನ್ಮಾರ್ಗಾವಲಂಬಿಯಾಗಿ, ಸ್ವಕಾರ್ಯ ಗಟ್ಟಿಗನಾಗಿ, ದಯಾಪರನಾಗಿ, ಶಿವನಾಮಸ್ಮರಣ, ಸಚ್ಛ್ರವಣ ಲವಲವಿಕೆಯುಳ್ಳವನಾಗಿ, ಧನಲೋಭಿಯಾಗದೆ ಬಹು ಉದಾರಗುಣವುಳ್ಳವನಾಗಿ ಸತ್ಪಾತ್ರದಾನ ಪ್ರೇಮಿಯಾಗಿ ಶಿವಭಕ್ತರ ನೆರೆಯನ್ನು ಕಾಂಕ್ಷಿಸುತ್ತ, ವಿಭೂತಿ ರುದ್ರಾಕ್ಷಗಳಿಂದೆಸೆವ ಭೂರುದ್ರರನ್ನು ಪೂಜಿಸುತ್ತ ಅವರಿಷ್ಟಾನುಸಾರವಾಗಿ ನಿರ್ವಂಚನೆಯಿಂದ ಅವರನ್ನು ತೃಪ್ತಿಗೊಳಿಸುವದರಲ್ಲಿ ಧುರೀಣನಾಗಿದ್ದುದರಿಂದ ದಿನಕ್ರಮೇಣ ಆತನ ಕೀರ್ತಿಪ್ರಭೆಯು ಭೂಮಂಡಲವನ್ನಾವರಿಸುತ್ತ ರಜತಗಿರಿಗಡರಿ ಸುಗುಣಗಳ ಸಾಕಾರ ಮೂರ್ತಿಯಾದರೂ ಭಕ್ತರನ್ನು ಪರೀಕ್ಷಿಸುವಾಗ ಮಾತ್ರ ನಿರ್ದಯನಾಗಿ ದುಷ್ಟನಂತೆ ನಟಿಸುವ ಅನಂತ ಕಲ್ಯಾಣ ನಿಧಿಯಾಗಿರುವ ಶಂಕರನಿಗೆ ಸಂತೋ

ಷವಾಗಿ ನನ್ನ ಭಕ್ತನಿಗೆ ಈ ಪರಿಯಾದ ಜಂಗಮ ಪ್ರೇಮವೇ ಒಳ್ಳೇದು ಆತನ ದಯಾಳು ಗುಣವನ್ನು ಹಾಗೂ ಆತನ ನಿಷ್ಠೆಯನ್ನು ಒರೆಹಚ್ಚಿ ನೋಡುವೆನೆಂದು ಬಗೆದನು.

ದಾನಗುಣವು ಸಾಧುವೆಂದು ಭಾವಿಸಬಹುದು; ಆದರೆ ದಾನವನ್ನು ಗ್ರಹಿಸುವವರ ತಾರತಮ್ಯವನ್ನು ತಿಳಿಯಬೇಕಾದುದು ಅತ್ಯವಶ್ಯವೇ ಸರಿಯು. ದುರಾಚಾರಿಗಳಿಗೂ, ದುಷ್ಟಟಗಳಿಗೀಡಾದವರಿಗೂ, ನೀಡಿದ ಧನದಿಂದ ದಾನಕೊಟ್ಟವನಿಗೆ ಕಲಂಕವೂ ಪಾಪವೂ ಬರುವದರಲ್ಲಿ ಸಂದೇಹವಿಲ್ಲ. ಆದುದರಿಂದ ದಾನ ತೆಗೆದುಕೊಳ್ಳುವವನ ಯೋಗ್ಯತೆಯನ್ನು ಹಾಗೂ ಆತನ ಮನೋಭಾವವನ್ನು ಚನ್ನಾಗಿ ತಿಳಿಯದ ಹೊರ್ತು ಆತನೊಡನೆ ವ್ಯವಹರಿಸುವದು ಒಳಿತಲ್ಲ. ಕ್ರೂರರಿಗೂ ದುಷ್ಟರಿಗೂ ದಾನವಾಗಿ ಕೊಟ್ಟದ್ದು ಪಾಪರಾಶಿಗೆ ಬಲೆಯೊಡ್ಡಿದ ಹಾಗೆಂದು ನಿರಾತಂಕವಾಗಿ ಹೇಳಬಹುದು. ಹೀಗಿರುವದರಿಂದಲೇ ನೀತಿಕಾರರು ಸತ್ಪಾತ್ರ ದಾನವೇ ದಾನವೆಂದು ನಿರ್ಧರಿಸಿರುವರು.

ಮಹೇಶನ ಸಂಕಲ್ಪಕ್ಕನುಗುಣವಾಗಿ ಕಥಾಪುರುಷನ ಸಿರಿಯು ಮೆಲ್ಲಮೆಲ್ಲನೆ ಬಯಲಾಗಹತ್ತಿತು. ಆದರೂ ಚರಿತ್ರಲಲಾಮನು ಚಿಂತಿಸಲಿಲ್ಲ. ತನ್ನ ಭಾಂಡಾರದಲ್ಲಿ ಶೇಖರಿಸಿದ ವಿತ್ತವೆಲ್ಲ ತೀರಲು ತನ್ನ ತೋಟಗಳನ್ನೂ ಗದ್ದೆಗಳನ್ನೂ, ಹೊಲಗಳನ್ನೂ ಹಾಗೂ ಇನ್ನಿತರ ಬೆಲೆ ಬರುವ ಸರ್ವ ಪದಾರ್ಥಗಳನ್ನೂ ಮಾರಿ ಬಂದ ಹಣದಿಂದ ತನ್ನ ನಿಯಮಿತವಾದ ದಾನಗುಣದಲ್ಲಿ ನಿರತನಾಗಿ ಪರಮಾತ್ಮನಿಷ್ಠನಾಗಿ ಕುಟುಂಬ ಚರಿತಾರ್ಥಕ್ಕಾಗಿ ಒಂದೇ ಗದ್ದೆಯನ್ನು ಮಾತ್ರ ಇಟ್ಟುಕೊಂಡಿದ್ದನು. ಕಾಲಕ್ರಮದಿಂದ ಭಕ್ತನ ದಾನಫಲದಿಂದ ದ್ರವ್ಯವೆಲ್ಲ ತೀರಿ ಬಹಳ ಬಡವನಾಗಿ ಭಾರ್ಯಾಸುತರ ಹೊಟ್ಟೆಗೆ ಸಾಕಾಗಬೇಕಾದರೆ ಪ್ರಯಾಸವಾದ ದಿವಸವೇ ಅತಿ ವೃಷ್ಟಿಯಾಗಿ ಇಡೀ ರಾತ್ರಿ ಮೋಡಗಳು ತೆರಪಿಲ್ಲದೆ ನೀರನ್ನು ಸುರಿಯುತ್ತಿದ್ದವು. ಎಲ್ಲಿ ನೋಡಿದರೂ, ಜಲಮಯವಾಗಿತ್ತು. ಮರುದಿವಸವಾದರೂ ಅದರಂತೆಯೇ ಮಳೆಯು ಹುಯ್ಯುತ್ತಿತ್ತು ಪ್ರಾಣಿಗಳು ನಡಗುವಂತೆ ಬಹು ಶೀತವಾಗಿತ್ತು. ಅಂಥ ಸಮಯದಲ್ಲಿ ಆದಿನ ಮುಚ್ಚಂಜೆಯಾದ ಬಳಿಕ ಸ್ವಲ್ಪ ಹೊತ್ತಿನಲ್ಲಿ ಗುಡುಗು ಮಿಂಚುಗಳು ಆರ್ಭಟಿಸುತ್ತಿರುವಾಗ ಲೋಕಪಾಲಕನಾದ ಭಗವಂತನು ಬಲು ಮುಪ್ಪಿನ ಋಷಿಯಾಗಿ ಮಳೆಹನಿಗಳಿಂದ ಮುಖವು ತೊಯಿದಿದ್ದರೂ ಅಲ್ಲಲ್ಲಿ ಉಳಿದಿರುವ ಪ್ರಕಾಶಮಯವಾದ ವಿಭೂತಿಯಿಂದ ಶೋಭಿಸುವ ಫಾಲವುಳ್ಳವನಾಗಿ ಜಡೆಯಲ್ಲಿ ಚಲುವಾದ ರುದ್ರಾಕ್ಷಗಳಿಂದ ಯುಕ್ತನಾಗಿ, ಮೈಮೇಲೆ ಹೆಚ್ಚಾಗಿ ಬಟ್ಟೆಗಳಿಲ್ಲದ್ದರಿಂದ ಚಳಿಯಿಂದ ಕಂಪಿಸುತ್ತ ನಮ್ಮ ಚರಿತ್ರಪುಂಗವನ ಮನೆ ಬಾಗಿಲಲ್ಲಿ ಬಂದು ಅಪ್ಪಾ ಕದಗಳನ್ನು ತೆರೆಯಿರಿ, ಹಸುವಾಗಿದೆ ಚಳಿಯಿಂದ ಬಳಲುತ್ತೇನೆ. ಮೊದಲು ನನ್ನನ್ನು

ಜಂಕಿಯ ಹತ್ತರ ಕೂಡ್ರಿಸು ಸ್ವಲ್ಪ ಕಾಸಿಕೊಳ್ಳುತ್ತೇನೆ ; ಹೀಗೆ ಸಣ್ಣ ಧ್ವನಿಯಿಂದ ಹೇಳಿದನು. ಕಥಾನಾಯಕನು ಇದನ್ನೆಲ್ಲ ಕೇಳಿದೊಡನೆ ಮುನೀಶ್ವರನನ್ನು ಬಹು ವಿನಯದಿಂದ ಒಳಗೆ ಕರೆದುಕೊಂಡು ಬಂದು ಉಚಿತಾಸನದಲ್ಲಿ ಕುಳ್ಳಿರಿಸಿ ಸಾಷ್ಟಾಂಗವಾಗೆರಗಿ, ಆದಿನ ಹೊರಗೆ ಹೋಗದಂತೆ ಮಳೆಹತ್ತಿದ್ದರಿಂದ ಮನೆಯಲ್ಲಿ ಅಹಾರ ಪದಾರ್ಥಗಳೂ, ಹಾಗೂ ಉರುವಲದ ಅಭಾವವಾದ್ದರಿಂದ ತಾಸಿದ್ದ ಸಣ್ಣ ಮನೆಯ ಜಂತಿಗಳನ್ನು ಕಿತ್ತು ಉರಿಮಾಡಿ ಆತನ ಚಳಿಯನ್ನು ಹೋಗಲಾಡಿಸಿ, ಉಣ್ಣೆಯ ಬಟ್ಟೆಗಳನ್ನು ತೊಡಿಸಿ, ನಡುಮನೆಗೆ ಬಂದು ತನ್ನ ಸಹಧರ್ಮ ಚಾರಿಣಿಗೆ ಇಂಧನಸಂಕಟ ಪ್ರಸಂಗದಲ್ಲಿ ಅತಿಥಿಯು ದೊರಕಿರುವನು. ಆತನಿಗೆ ಕ್ಷುಧೆಯುಂಟಾಗಿದೆ ಎಂದು ಚಿಂತಾಕ್ರಾಂತನಾಗಿ ಹೇಳಿದನು. ಆಗ ಕುಲವತಿಯಾದ ಗುಣವತಿಯು ನಿನ್ನೆ ಸಾಯಂಕಾಲದಲ್ಲಿ ನೀವು ನಮ್ಮ ಗದ್ದೆಯಲ್ಲಿ ಬಿತ್ತಿರುವ ಭತ್ತಗಳನ್ನು ಆಯ್ದುಕೊಂಡು ಬರ್ರಿ. ಆ ಭತ್ತದಿಂದಲ ಅಭ್ಯಾಗತನಾಗಿ ಬಂದಿರುವ ಪುರುಷನನ್ನು ಸತ್ಕರಿಸೋಣ ಎಂದು ಧೈರ್ಯದಿಂದ ಹೇಳಿದಳು. ಗಾಢಾಂಧಕಾರದಲ್ಲಿ ಮಿಂಚಿನ ಪ್ರಕಾಶದಲ್ಲಿ ಪ್ರವಾಹರೂಪವಾಗಿ ಹರಿಯುವ ನೀರಿನಲ್ಲಿಯೇ ಸಾಹಸದಿಂದ ಗದ್ದೆಗೆ ಹೋಗಿ ಕೆಸರಿನಲ್ಲಿ ಪ್ರಯಾಸಪಟ್ಟು ಆ ಯತಿಗೆ ಸಾಕಾಗುವಷ್ಟು ಭತ್ತಗಳನ್ನು ಆರಿಸಿಕೊಂಡು ಪರಮಾತ್ಮನ ಧ್ಯಾನಾಸಕ್ತನಾಗಿ ಮನೆಗೆ ಬಂದು ಪತ್ನಿಗೆ ಕೊಟ್ಟು ಸಮಯೋಚಿತ ಮೃದು ಮಧುರವಾದ ಬಿನ್ನಸುಡಿಗಳಿಂದ ತಾಪಸಿಯನ್ನು ಪಚರಿಸುತ್ತಿದ್ದರು.

**ಇ**ತ್ತ ಆ ಸಾಧ್ವಿಯು ಅಡುಗೆಯನ್ನು ಮಾಡುತ್ತ ತನ್ನ ತನಯುನಿಗೆ ಹಿತ್ತಲಲ್ಲಿರುವ ಕೀರೆ ಸೊಪ್ಪನ್ನು ಹಾಗೂ ಕದಳೀ ಫಲಗಳನ್ನು ತರುವದಕ್ಕೆ ಹೇಳಿದಳು. ಇದನ್ನು ಕೇಳಿದೊಡನೆ ಆ ಸತ್ಪುತ್ರನು ಹಿತ್ತಲಲ್ಲಿ ಜಾರಿಕೆಯಾಗಿದ್ದರೂ ಘನವಾದ ಮಳೆ ಬರುತ್ತಿದ್ದರೂ ಎಳ್ಳಷ್ಟಾದರೂ ಹೆದರದೆ ಕೀರೆಯ ಸೊಪ್ಪನ್ನು ಕೊಯ್ದುಕೊಂಡು ಉಡಿಯಲ್ಲಿಟ್ಟುಕೊಂಡು ಬಾಳೆಗಿಡಕ್ಕೆ ಬಂದು ಗೊನೆಗೆ ಕೈ ಹಾಕಲು ಸರ್ವ ಸೂತ್ರಧಾರಕನಾದ ಮಹಿಮನ ಅಪ್ಪಣೆಯ ಮೇರೆಗೆ ಸರ್ಪವು ಅಲ್ಲಿ ಭುಸುಗುಟ್ಟುತ್ತಿತ್ತು ; ಕಾರ್ಯಗೌರವವನ್ನು ಲಕ್ಷಕ್ಕೆ ತಂದು ಆ ಹಾವಿಗೆ ಬೆದರದೆ, ನಾವಿಗಂಜದೆ ಬಾಳೆಯ ಗೊನೆಯನ್ನು ಕೊಯ್ದನು ; ಕೂಡಲೇ ಆ ಅಹಿಯಿಂದ ಕಚ್ಚಲ್ಪಟ್ಟು ನೆಲಕ್ಕೊರಗಿದನು.

**ಹೊ**ತ್ತಾದರೂ ಪ್ರೀತಿಯ ತನುಜನು ಹಿತ್ತಲಿಂದ ಬರದಿರಲು ಶಿವ, ಶಿವ ಏನಾಯಿತೋ ಎಂದು ಗಾಬರಿಯಿಂದ ಪುತ್ರವಾತ್ಸಲ್ಯದಿಂದ ಚಿಂತಾತುರಳಾಗಿ ಸುರಿಯುತ್ತಿರುವ ಮಳೆಯಲ್ಲಿಯೇ ಹಿತ್ತಲಕ್ಕೆ ಹೋಗಿ ನೋಡುತ್ತಾಳೆ ? ಮುದ್ದಿನ ಮಗನು ಉಡೆಯಲ್ಲಿ ಕೀರೆಯ ಸೊಪ್ಪನ್ನು ಕೈಯಲ್ಲಿ ಬಾಳೆಯ ಗೊನೆಯನ್ನು ಹಿಡಿದುಕೊಂಡು ಸರ್ಪದಿಂದ ಘಾತಿಸಲ್ಪಟ್ಟು ಅಸುವನ್ನೀಗಿದ್ದನು. ದುಃಖವು

ಉಕ್ಕೇರಿ ಬರುತ್ತಿದ್ದರೂ ಅದನ್ನೆಲ್ಲ (ಪ್ರಸಂಗಾವಧಾನವನ್ನು ಲಕ್ಷಿಸಿ) ಅಡಗಿಸಿಕೊಂಡು ಸೊಪ್ಪನ್ನೂ ಬಾಳೆಯ ಹಣ್ಣುಗಳನ್ನೂ ಒಳಗೆ ತಂದು ನಿಜಪತಿಗೆ ನಡೆದ ಸಂಗತಿಯನ್ನು (ಏಕಾಂತದಲ್ಲಿ) ತಿಳಿಸಿ ಕೀರೆಯ ಸೊಪ್ಪನ್ನು ಸಹಾ ಅಟ್ಟಳು. ಪಾಕವು ಸಿದ್ಧವಾಗಲು ಜಾಯಾಪತಿಗಳು ಸಂತೋಷಚಿತ್ತರಾಗಿ ಯತಿವರನನ್ನು ಸ್ನಾನಮಾಡಿಸಿ ಪ್ರಸಾದವನ್ನು ಸೇವಿಸಿರಿ ಎಂದು ವಿಜ್ಞಾಪಿಸಿದರು. ಇರುವ ಒಬ್ಬ ಹಸುಳನು ಗತಿಸಿದನೆಂದು ಗಣನೆಗೆ ತಾರದ ದಂಪತಿಗಳ ವಿವೇಕವನ್ನು ಕಂಡು ಆ ಅತಿಥಿಯು ಕೌತುಕಪಡುತ್ತ ಇವರನ್ನು ಯಾವ ಪರಿಯಿಂದ ಸೋಲಿಸಬೇಕೆಂದು ನನ್ನ ಪಙ್ಕ್ತಿಗೆ ನೀನು ಕುಳಿತುಕೊಳ್ಳಬೇಕೆಂದು **ಎಳೆಯಾಂಡಗುಡಿಮಾರನಿಗೆ** ಹೇಳಲು ಅದಕ್ಕೆ ಆತನು ತಟ್ಟನೆ ಒಪ್ಪಿದನು. ಆಗ ಇನ್ನೇನು ಮಾಡಬೇಕೆಂದು, ಮುನಿಪನು ನಿಮ್ಮ ಮಗನನ್ನು ಊಟಕ್ಕೆ ಕರೆಯಿರಿ ಎಂದು ಹೇಳಲು ಪತ್ನಿಯು ಪತಿಯ ಮುಖವನ್ನು ನೋಡಲು ಶಿವನ ಅಪ್ಪಣೆಯಂತೆ ಆಗುವದು ; ಶಿವಾಜ್ಞೆಯನ್ನು ಮೀರುವದುಂಟೆ ? ಶಿವಸೇವಾ ಧುರಂಧರನಾದ ಸುತನನ್ನು ಅನುಮಾನಿಸದ ಕರೆ ಎಂದು ಅರ್ಧಾಂಗಿಗೆ ಕಥಾನಾಯಕನು ಹೇಳಿದನು. ತಾಯಿಯು ಕರೆದ ಕೂಡಲೆ ಪರಮಾತ್ಮನ ಸಂಕೇತದ ಮೇರೆಗೆ ಹಿತ್ತಲೊಳಗಿಂದ ತೇಜೋಮಯನಾಗಿ ಬಳಗುತ್ತಿರುವ ಆ ಪುತ್ರನು ಬಂದು ತಪಸ್ವಿಗೂ ಮಾತಾಪಿತರಿಗೂ ತಲೆಬಾಗಿ ಕೈ ಮುಗಿದುಕೊಂಡು ವಿನಯದಿಂದ ನಿಲ್ಲಲು ಪಾರ್ವತೀನಾಥನಿಗೆ ಆನಂದವಾಗಲು ದೇವದುಂದುಭಿಗಳು ಮೊಳಗಿದವು ; ಪುಷ್ಪವೃಷ್ಟಿಯಾಯಿತು ; ಪ್ರಕಾಶಮಯವಾದ ದೇವಯಾನವು ಅಲ್ಲಿಗೆ ಬಂದಿತು. ಆಗ ಮಹಾಸ್ವಾಮಿಯು ನಿಜರೂಪದಿಂದೊಪ್ಪಲು ಆ ಮೂವರು ಅನನ್ಯಭಾವದಿಂದ ಆತನನ್ನು ಸ್ತುತಿಸಿ ಪಾಡಿ ನಲಿದಾಡಿದರು. ಸಂತೋಷ ಸಾಗರದಲ್ಲಿ ಲೋಲಾಡುತ್ತಿರುವ ಚರಿತ್ರನಾಯಕನನ್ನು ಮತ್ತು ಆತನ ಸತಿಸುತರನ್ನು ಆ ವಿಮಾನದಲ್ಲಿ ಕೂಡ್ರಿಸಿ ಅವರಿಗೆ ಉನ್ನತವಾದ ಗಣಪದವಿಯನ್ನು ಅನುಗ್ರಹಿಸಿ ಗೌರೀರಮಣನು ಬಿಜಯಮಾಡಿದನು.



ಓಂ.

# ೫೬. ಅಡವಘೆಯ ಪೆರುಮಾಳೆಯರು.

ಶರಣರ್ಗೆ ತನಗುಳ್ಳ ಧರಣಿಯೊಡೆತನವಿತ್ತು । ಪರಮ ಪದವಾಳು
ವಡವಘೆಯ ಪೆರುಮಾಳೆ । ವಿರತಿಯನು ಬೇಡುವೆನು ನಿನ್ನ ॥

[ಶ್ರೀ ನಿಜಗುಣರು]



ನಂತ ಮೂರ್ತಿಯಾದುದರಿಂದ ಇಚ್ಛಾಮೂರ್ತಿಯೆಂದು, ವಿಶ್ವಂಭರನೆಂದು, ವಿಶ್ವಪಾಲನೆಂದು, ವಿಶ್ವಗರ್ಭನೆಂದು, ವಿಶ್ವಮೂರ್ತಿಯೆಂದು, ಯೋಗಿಜನಪ್ರಿಯನೆಂದು ಸದ್ಭಕ್ತರು ಪ್ರೀತಿಸುವ ಶಂಕರನ ನಿವಾಸವಾಗಿ ಅನಂತ ವಿಭವಗಳಿಂದ ಸರ್ವತೋಪರಿಯಾಗಿ ವಿರಾಜಿಸುವ ಸುಪ್ರಸಿದ್ಧವಾದ ಚೋಳ ಮಂಡಲದಲ್ಲಿ ತಿರುನಾಗ ಪಟ್ಟಣವು ಸಮಸ್ತ ಸಮೃದ್ಧಿಯಿಂದೆಸೆಯುತ್ತಿತ್ತು. ಆ ಪುರದಲ್ಲಿ ಶಿವಭಕ್ತರು ಹಾಗು ಸಕಲ ವ್ಯವಸಾಯಗಳನ್ನವಲಂಬಿಸಿದ ಪ್ರಜರು ಸುಖವಾಗಿದ್ದು ತಮ್ಮ ಕರ್ತವ್ಯವನ್ನು ಚನ್ನಾಗಿ ತಿಳಿದು ಮನುಷ್ಯರು ಎಂಬ ಪದವು ಯಾವ ವ್ಯಾಪಕ ಅರ್ಥವನ್ನು ಬೋಧಿಸುವದೋ ಅದರಂತೆ ಸಹಜವಾಗಿ ನಡೆಯುವದರಲ್ಲಿ ಅತಿ ಕುಶಲರಾಗಿದ್ದು ಅಲ್ಲಿಯ ಶಿವ ಮಂದಿರಗಳು ಆಸ್ತಿಕರ ಮನೋಮಂದಿರವನ್ನು ಸೆಳೆಯುತ್ತಿದ್ದವು. ಈ ಪರಿಯಾದ ಶಾಂತಿಯು, ಸಂತೃಪ್ತಿಯು ಆ ಸ್ಥಳದಲ್ಲಿರಬೇಕಾದರೆ ವಿಶೇಷವೇನು? ಎಂದು ಪಾಠಕ ಮಹಾಶಯರ ಉತ್ಸುಕತೆಯು ಹೆಚ್ಚಬಹುದು. ಆ ತಾಣದ ಅವನೀಶನಾದ ಅಡವಘೆಯ ಪೆರುಮಾಳೆಯೆಂಬ ಭೂಪನು ಶಿವೈಕ್ಯನಾಗಿ, ಪ್ರಜಾನುರಾಗಿಯಾಗಿ, ದಯಾಪರನಾಗಿ, ದಾನಶೂರನಾಗಿ, ಪ್ರಜಾಪಾಲನವಿಚಕ್ಷಣನಾಗಿ, ಶಿವೋಪಾಸನಾದಕ್ಷನಾಗಿ, ಶಿವಭಕ್ತರಿಗಿಷ್ಟವಾದುದನ್ನೆಲ್ಲ ಅವರ ಮನ-ಬಯಕೆಯಂತೆ ಆದರದಿಂದೀಯುತ್ತ, ದಿನಾಲು ತ್ರಿಕಾಲದಲ್ಲಿ ಶಿವಾರ್ಚನಾಪರನಾಗಿ ಸತ್ಕೀರ್ತಿಯಿಂದ ಪ್ರಕಾಶಿಸುತ್ತಿದ್ದನು.

ಆ ಪಟ್ಟಣದಲ್ಲಿ ಬುದ್ಧಿವಂತನಾದ, ವಾಣಿಜ್ಯ ಚತುರನಾದ, ದೀರ್ಘಸಾಹಸಿಯಾದ, ದಯಾದ್ರ್ರ್ಹೃದಯನಾದ, ಶಿವಭಕ್ತರಿಗೆ ಕಾಮಧೇನುಪ್ರಾಯನಾದ ಧನಪಾಲನೆಂಬ ವೈಶ್ಯಕುಲೋದ್ಭವನಾದ ಧರ್ಮಿಷ್ಠನು ಶಿವಭಕ್ತಿಸಂಪನ್ನನಾಗಿ ನಮ್ಮ ಕಥಾನಾಯಕನಿಗೆ ತಕ್ಕ ಮಿತ್ರನಾಗಿ ಒಪ್ಪುತ್ತಿದ್ದನು.

ಕಾಲಕ್ರಮದಿಂದ ಆ ಸೀಮೆಯಲ್ಲಿ ಮಳೆಯ ಅಭಾವವಾಗಿ ಬರಗಾಲವು ಪ್ರಾಪ್ತವಾಗಲು, ಅನ್ನಾರ್ಥಿಗಳಾಗಿ ಜನರು ಬಳಲುತ್ತಿರಲು (ತಕ್ಕ ಸಮಯವನ್ನೇ ನಿರೀಕ್ಷಿಸುತ್ತಿದ್ದ) **ಧನಪಾಲ**ನು ಆ ಧರೆಯ ಶೈವಸಮೂಹವನ್ನೆಲ್ಲ ಪ್ರೀತಿಯಿಂದ ಕರೆಯಿಸಿ ಅವರಿಗೆ ಬಿಡದಿಗಳನ್ನೆಲ್ಲ ಒದಗಿಸಿಕೊಟ್ಟು, ಅವರಿಗೆ ಪ್ರಸಾದದ ಕೊರತೆಯಾಗದಂತೆ ಮೂರು ಸಾವಿರ ದೊಡ್ಡ ಬತ್ತದ ಕಣಜಗಳಿಂದ ತೃಪ್ತಿಗೊಳಿಸಿದನು. ಭಕ್ತದೇಹಿಕನಾದ ಪರಮಾತ್ಮನ ಕೃಪೆಯಿಂದ ಸುವೃಷ್ಟಿಯಾಗಿ ಚೆನ್ನಾಗಿ ಬೆಳೆಬರಲು ಆ ಶಿವಭಕ್ತರು ಅಲ್ಲಿಂದ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು.

ದಾನರತನಾದ ನಮ್ಮ ಚರಿತ್ರ ಪುರುಷನು ತಾನು ಶಿವಭಕ್ತನಾಗಿ ಪ್ರಾಣಿದಯಾಪರನಾಗಿದ್ದು ಬರಗಾಲದಂಥ ಪ್ರಸಂಗದಲ್ಲಿ ತಕ್ಕಷ್ಟು ವಿಶೇಷವಾಗಿ ಅನ್ನದಾನವನ್ನು ಮಾಡಲಿಲ್ಲವೆಂದು ಚಿಂತಿಸಿ ತನ್ನ ವೈಶ್ಯ ಸ್ನೇಹಿತನ ಸತ್ಪಾತ್ರದಾನ ಗುಣವನ್ನು ತಿಳಿದು, ಆತನ ಸಮಯಕ್ಕನುಗುಣವಾದ ಸಾಹಸಕ್ಕೆ ಕೌತುಕಪಟ್ಟು ತನ್ನ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ಶಿವ ಶಿವ! ನನಗೆ ದೊರೆತನವೇ ಬೇಡವೆಂದು ನಿಶ್ಚಯಿಸಿ ಬೇಗನೆ ಗೆಳೆಯನಾದ **ಧನಪಾಲ**ನ ಸೌಧಕ್ಕೆ ಹೋದನು. ಅವನಿಪನು ಬಂದೊಡನೆ **ಧನಪಾಲ**ನು ಆ ನೃಪನನ್ನು ಬಹು ಗೌರವದಿಂದ ಕಂಡು ಉಚಿತಾಸನದಲ್ಲಿ ಮುಹೂರ್ತಗೊಳಿಸಿ ಕೈಮುಗಿದುಕೊಂಡು ನಿಮ್ಮಡಿಗಳು ಇತ್ತ ಬಿಜಯಮಾಡಿದ ಕಾರಣವೇನೆಂದು ವಿಜ್ಞಾಪಿಸಿದನು. ಅದಕ್ಕೆ ರಾಜನು ದೈನ್ಯವದನದಿಂದ ನೀನು ನನ್ನ ಮಾತಿಗೆ ಒಪ್ಪಬೇಕೆಂದು ವಿನಯದಿಂದ ಪ್ರಾರ್ಥಿಸಿಕೊಂಡನು. ಆ ದೊರೆಯು ಸದ್ಧರ್ಮಪರನೆಂದು, ಪರಮ ಶಿವಭಕ್ತನೆಂದು, ನಿಷ್ಕಪಟನೆಂದು, ಆತನ ಶ್ರೇಯಸ್ಸೆ ತನಗೆ ಶುಭವೆಂದು ತಿಳಿದ **ಧನಪಾಲ**ನು ಆ ವಸುಧಿಪನಿಗೆ ನಿಮ್ಮ ಇಚ್ಛೆಗೆ ಭಂಗವು ಬರಲಾರದೆಂದು ಹೇಳಿ ಸಂತೋಷದಿಂದ ಸಮ್ಮತಿಸಿದನು- ಆಗ ಆ ರಾಯನು :—"ಬಂಧು ಚಿಂತಾಮಣಿಯಾದ ವೈಶ್ಯ ಶಿಖಾಮಣಿಯೇ, ಈಗಲೇ ನನ್ನ ದೊರೆತವವನ್ನು ನಿನಗೆ ನೀಡುವೆನು. ಬರಗಾಲದಲ್ಲಿ ದೊರಕಿಸಿದ ಪುಣ್ಯವನ್ನು ನನಗೆ ಧಾರೆ ಎರೆ" ಎನ್ನಲು ಅದಕ್ಕೆ ಮರುಮಾತಿಲ್ಲದೆ ಧನಪಾಲನು ಹಾಗೆ ಮಾಡಿಬಿಟ್ಟನು. ಆ ಕ್ಷಣವೇ ನಮ್ಮ ಚರಿತ್ರ ಪುಂಗವನಿಗೆ ಆರ್ತರಕ್ಷಾಮಣಿಯಾದ ಅನಂತರೂಪಿಯಾದ ಉಮೆಯರಸನು ನಿಜರೂಪದಿಂದ ಕಾಣಿಸಿಕೊಂಡನು. ಕಥಾನಾಯಕನು ಭಕ್ತ್ಯಾವೇಶದಿಂದ ವಿಷವಿಭೂಷಣನನ್ನು ನುತಿಸಿ ಅಡಿಗಡಿಗೆ ಆತನ ಚರಣ ಕಮಲಗಳಲ್ಲಿ ಹೊರಳಾ

ಡುತ್ತ ಎಣೆಯಿಲ್ಲದಷ್ಟು ಹರ್ಷಾತಿರೇಕವನ್ನು ಹೊಂದಲು, ಜಾನ್ಹವೀ ಪತಿಯ ಇಚ್ಛಾಮಾತ್ರದಿಂದ ಪುಷ್ಪಕ ವಿಮಾನವು ಅಲ್ಲಿಗೆ ಪ್ರಾಪ್ತವಾಗಲು ಅದರಲ್ಲಿ ಆ ವರಭಕ್ತನನ್ನು ಕುಳ್ಳಿರಿಸಿ ಅವನಿಗೆ ಗಣಪದವಿಯನ್ನು ಕರುಣಿಸಿದನು.



ಓಂ.

# ೫೭. ಇಹಃಪಗೆಯಾಂಡನು.



ಮಡದಿಯನುಮೇಶಂಗೆ ಕೊಡಲೊಯ್ಯುತಿರ ಕಂಡು । ತಡೆಯ
ಬಂಧುಗಳ ನಿರಿದಿಹಃಪಗೆಯಾಂಡ । ರಡಿಗಳೆನಗೀಗೆ ಮುಕ್ತಿಯನು ॥

[ಶ್ರೀ ನಿಜಗುಣರು]



ಮದನಾರಿಯ ಸದ್ಭಕ್ತರಾದುದರಿಂದಲೇ ಮದವಿವರ್ಜಿತರಾದ, ಮಂಗಲ ಪ್ರದವಾದ ನಡೆಯುಳ್ಳವರಾದುದರಿಂದಲೇ ಮಹಾಕಾಲ ಮೂರ್ತಿಯ ಕೃಪೆಗೆ ಪಾತ್ರರಾದ, ಶೈವ ಮಹಾಜನರಿಂದ ರಂಜಿಸುವ ಅಖಿಲೈಶ್ವರ್ಯದಿಂದ ಶೋಭಿಸುವ, ಚೋಳೋರ್ವಿಯು ಮೇದಿನಿಗಲಂಕಾರವಾಗಿ ಹೆಸರ್ವಡೆದಿತ್ತು. ಇಂತೆಸೆವ ಆ ಸೀಮೆಯಲ್ಲಿ ಇಹಃಪಗೆಯಾಂಡನೆಂಬ ದೊರೆಯ ರಾಜಧಾನಿಯಾದ ಕಾವೇರಿ ಎಂಬ ಪುರವು ಕೆರೆಗಳಿಂದ ಯುಕ್ತವಾಗಿ, ಕೋಟೆ ಕೊತ್ತಲುಗಳಿಂದಲೂ, ಹರಮಂದಿರಗಳಿಂದಲೂ, ಅನೇಕ ಪ್ರಾಸಾದಗಳಿಂದಲೂ, ವಿದ್ಯಾನಿಕೇತನಗಳಿಂದಲೂ, ಧರ್ಮಶಾಲೆಗಳಿಂದಲೂ, ದೈವಭಕ್ತರಾದ ಪ್ರಜಾ ಸಮೂಹದಿಂದಲೂ, ಸುಪ್ರಸಿದ್ಧವಾಗಿ ಮೆರೆಯುತ್ತ ವಿವಿಧ ಬೆಳಸಿನಿಂದ ಸೊಗೆಯಿಸುವ ಹೊಲ ಗದ್ದೆ ತೋಟಗಳಿಂದ ಚಲ್ವಾಗಿ ಒಪ್ಪುತ್ತಿತ್ತು. ಬೇರೂರಿನವರು ಆ ಪುರ ಪ್ರವೇಶಮಾಡುವಾಗ ಅಲ್ಲಿಯ ಕಬ್ಬಿನ ಮತ್ತು ಭತ್ತದ ಗದ್ದೆಗಳ ಮನೋಹರತೆಯನ್ನು ಹಾಗೂ ಪುಷ್ಪೋದ್ಯಾನಗಳ ಸೌಂದರ್ಯವನ್ನು ನೋಡಿ ತಣಿಯುತ್ತಿದ್ದರು ; ಆ ಪಟ್ಟಣದಲ್ಲಿ ಬರಬರುತ್ತಲೆ ಅಲ್ಲಿರುವ ವಿದ್ಯಾನಿಲಯಗ

ಳನ್ನು, ಧರ್ಮಬೋಧೆಯ ಸಂಸ್ಥಾನ ಕಟ್ಟಡಗಳನ್ನು ವ್ಯಾಯಾಮ ಮಂದಿರಗಳನ್ನು, ಶಿಲ್ಪಕಲಾ ಭವನಗಳನ್ನು ನೋಡಿ ಅಚ್ಚರಿಪಡುತ್ತ ಅಲ್ಲಲ್ಲಿ ಕಂಗೊಳಿಸುವ ಅಂದವಾದ ಶಿವಾಲಯಗಳಲ್ಲಿ ಘಮಘಮಿಸುವ ಧೂಪದ ವಾಸನೆಯನ್ನು ಕಂಡು ಪೂಜಾಕಾಲದಲ್ಲಿ ಮಧುರಧ್ವನಿಗೊಳಿಸುವ ಘಂಟೆಯ ಸಪ್ಪಳ ಕೇಳಿ ಮತ್ತು ವೇದ ಘೋಷವು ಕರ್ಣದಲ್ಲಿ ಬಿದ್ದೊಡನೆ ಆನಂದಭರಿತರಾಗಿ ಮುಂದಕ್ಕೆ ಸಾಗುತ್ತಿದ್ದರು. ಆ ನೃಪತಿಯು ಬಹು ಧನಾಢ್ಯನು, ಹಾಗೂ ಉದಾರಿಯು ಎಂದು ಆತನ ಕೀರ್ತಿಯು ಪಸರಿಸಿದ್ದುದರಿಂದ ಚೇರ ಮತ್ತು ಚೋಳ ನಾಡಿನ ವಿದ್ವಾಂಸರು, ವೈದಿಕರು, ಅಂಗಹೀನರು, ಹಾಗೂ ನಿರಾಶ್ರಿತರು ಮತ್ತು ಜಂಗಮಾವಳಿಯು ರಾಜನಲ್ಲಿಗೆ ಬಂದು ಮನ್ನಣೆಯನ್ನು ಮತ್ತು ಪೋಷಣೆಯನ್ನು ಚನ್ನಾಗಿ ಹೊಂದುತ್ತಿದ್ದರು. ಶಿವಪ್ರೇಮಿಗಳಾದ ಪರಮ ಶಿವೈಕ್ಯರಿಗೆ ಧನ, ಧಾನ್ಯ, ವಸತಿ, ಗೃಹ, ವಾಹನ, ಆಭರಣ ಮೊದಲುಗೊಂಡು ಸರ್ವ ವಸ್ತುಗಳನ್ನು ಬಹುಪ್ರೀತಿಯಿಂದ ಅವರವರಿಷ್ಟಾನುಸಾರವಾಗಿ ಅವರ ಪಾತ್ರತೆಯನ್ನರಿತು ಕೊಡುವದರಲ್ಲಿ ಕಥಾನಾಯಕನು ದಕ್ಷನಾಗಿದ್ದನು. ಪ್ರಜಾ ಹಿತಚಿಂತಕನಾದ ಈ ಅರಸು ಶಿವಾರ್ಚನಾಪರನಾಗಿ ಹರ್ಷಪಡುತ್ತ ಲಿಂಗಮುಖವೆನಿಸುವ ಪೂಜ್ಯ ಜಂಗಮರಿಗೆ ಕಲ್ಪವೃಕ್ಷಪ್ರಾಯನಾಗಿ, ಇಂದುಧರನ ಭಕ್ತಾವಳಿಗೆ ಇಚ್ಛಿತ ವಸ್ತುಗಳನ್ನು ಕೊಡುವ ದಾನಶಾಲಿಯೆಂದು ಆ ರಾಯನ ಯಶಃಕಾಂತಿಯು ದಿಕ್ಕು ದಿಕ್ಕುಗಳಲ್ಲಿಯೂ ವ್ಯಾಪಿಸಿತ್ತು. ಚರಿತ್ರನಾಯಕನ ಶಿವರತಿಯು, ವಿದ್ಯಾವಿನೋದವು, ಸದ್ಧರ್ಮ ಪಾಲನಾತುರತೆಯು ಇವೆಲ್ಲ ಸುಗುಣಗಳು (ಅನಂಗನ ಚೆಲ್ವಿಕೆಯನ್ನು ಮೀರಿರುವ) ಆತನ ಸೌಂದರ್ಯವನ್ನು ಇಮ್ಮಡಿ ಮುಮ್ಮಡಿಯಾಗಿ ಏಕೆ ನೂರ್ಮಡಿಯಾಗಿ ಹೆಚ್ಚಿಸುತ್ತಿದ್ದವು. ಈ ರೀತಿಯಾಗಿ ಧರ್ಮಿಷ್ಠನಾಗಿ ಬಾಳುತ್ತ (ಕಾರ್ಯಕಾರಣದ ಗೋಜಿಗೆ ಹಾರಕ ಮಹಾಶಯರನ್ನೊಪ್ಪಿಸಿದ) ಶಿವಸಂಬಂಧಿಗಳಿಗೆ ಅವರಿಚ್ಛಿತ ವಸ್ತುಗಳನ್ನು ಕೊಡುವದರಲ್ಲಿ ಮೇಲೆನಿಸುವವನು ನಾನೇ ಎಂದು ಅಭಿಮಾನಪಡುತ್ತಿದ್ದನು.

**ನೂ**ರು ಸ್ತ್ರೀಯರು ನಮ್ಮ ಕಥಾನಾಯಕನ ಮಡದಿಯರು. ಶತಸಂಖ್ಯಾಕರಾದ ಆ ಸುಂದರಿಯರಲ್ಲಿ ರತ್ನಾವತೀ ರಾಣಿಯು ಸೌಂದರ್ಯದಲ್ಲಿ ಸ್ಮರನ ಸತಿಗಿಂತಲೂ ಮಿಗಿಲಾಗಿ. ಗುಣಮಣಿಭೂಷಿತಳಾಗಿ, ಉಮೆಯು ಸದಾಶಿವನಿಗೊಪ್ಪುವಂತೆ ಶೋಭಿಸುತ್ತ ಪತಿಯ ಮನೋರಮೆಯಾಗಿ ಆತನ ಭಾವವನ್ನು ತಿಳಿದು ರಮಣನ ಶಿವಭಕ್ತಿಗೂ, ಆತನ ದಾನಗುಣಕ್ಕೂ ಚ್ಯುತಿಬಾರದಂತೆ ಜಾಗರೂಕಳಾಗಿ ಜಗನ್ಮಾತೆಯೋಪಾದಿಯಲ್ಲಿ ಪ್ರಕಾಶಿಸುತ್ತಿದ್ದಳು. ಚರಿತ್ರಲಲಾಮನು ಶಿವಭಕ್ತರು ಬಂದೊಡನೆ ಬಹು ಭಯಭಕ್ತಿಯಿಂದ ಇದಿರೆದ್ದು ಹೋಗಿ ನಮಸ್ಕರಿಸಿ ಅಗ್ಗಣಿಯನ್ನು ಕೊಟ್ಟು ಉಚಿತಾಸನದಲ್ಲಿ ಕುಳ್ಳಿರಿಸಿ ಅವರನ್ನು ಸತ್ಕರಿಸಿ

ಅವರು ಅಪೇಕ್ಷಿಸಿದುದನ್ನೆಲ್ಲ ಕೊಟ್ಟು ಕರಿತುರಗಾದಿ ವಾಹನಗಳನ್ನು ಸಹಾ ಕೊಡುತ್ತಿದ್ದನು. ಈ ಮೇರೆಗೆ ನಿರಪೇಕ್ಷ ಬುದ್ಧಿಯಿಂದ ಗುರುಲಿಂಗಜಂಗಮ ತೃಪ್ತಿಕಾರ್ಯದಲ್ಲಿ ನಿರತನಾಗಿರಲು ಅವನ ಸತ್ಕರ್ಮ ಪ್ರಭಾವವು (ಕವಿಜನರಿಂದ ಕೀರ್ತಿಸಲ್ಪಟ್ಟ ಕೀರ್ತಿಸ್ತಂಭನಾದ) ಶಂಕರನಿಗೆ ವೇದ್ಯವಾಗಿ ಭಕ್ತನ ದಾನಗುಣಕ್ಕೆ ಮೆಚ್ಚಿ, ದಾನಿ ಎಂಬ ಆತನ ಬಿರುದು ಅವನಿಗೆ ಯೋಗ್ಯವಾಗಿ ಸಲ್ಲುವ ಪರಿಯನ್ನು ಭೂಜನರು ತಿಳಿಯಲೆಂದು ಯೋಚಿಸಿ ತಪಸ್ವಿ ವೇಷವನ್ನು ಧರಿಸಿ ಸೊಬಗಿನ ಸುಗ್ಗಿಯಂತಿರುವ ಬಹು ಕಮನೀಯವಾದ ಸೌಂದರ್ಯಾತಿಶಯದ ರೂಪವನ್ನು ತಾಳಿ ಕಾವೇರೀಪುರಕ್ಕೆ ದಯಮಾಡಿಸಿದನು. ಮನ್ಮಥನ ಚಲುವಿಕೆಯನ್ನು ಮೀರಿರುವ ಆ ಮನಮೋಹನಮೂರ್ತಿಯನ್ನು ಆ ಪಟ್ಟಣದ ಕೆಲವು ನಾರಿಯರು ನೋಡಿ ಬೆರಗಾದರು. ಇನ್ನು ಕೆಲವು ಸ್ತ್ರೀಯರು ಈ ಪುರುಷನನ್ನು ಕಣ್ತುಂಬಾ ನೋಡದವಳ ಜನ್ಮಕ್ಕೆ ಧಿಕ್ಕಾರವಿರಲೆಂದು ಉದ್ಗಾರ ತೆಗೆದರು ; ಮತ್ತೆ ಕೆಲವು ಲಲನೆಯರು ಯಾವ ತಾಯಿಯು ಈ ಅವರ್ಣನೀಯ ತೇಜಃಪುಂಜ ಮೂರ್ತಿಯನ್ನು ಹಡೆದಿರಬಹುದೆಂದು ವಿಚಾರದಲ್ಲಿ ಮುಳುಗಿದರು ; ಮತ್ತೆ ಕೆಲವು ಶಿವಧರ್ಮರತಿ ವಿಭೂಷಿತರಾದ ಚದುರೆಯರು ಇವನೇನು ಪುರುಷನೋ ಅಥವಾ ನಮ್ಮ ದೊರೆಯಾದ ಸಿಂಧುಬಲ್ಲಾಳನ (ಕಥಾನಾಯಕನ ಮತ್ತೊಂದು ಹೆಸರು,) ಸತ್ವವನ್ನು ಪರೀಕ್ಷಿಸಲು ಬಂದ ಪ್ರಚ್ಛನ್ನ ವೇಷದ ಭಗವಂತನೋ ಎಂದು ತಮ್ಮ ತಮ್ಮೊಳಗೆ ಶಂಕಿನತೊಡಗಿದರು ; ಮತ್ತೆ ಕೆಲ ಕಾಮಿನಿಯರು ಆ ಅಪೂರ್ವ ಪುರುಷನನ್ನು ಕಂಡು ಕಾಮದೇವನಿಗೆ ತಮ್ಮನ್ನು ಪೀಡಿಸಬಾರದೆಂದು, ತಾವು ಅಂಗಜ ವೈರಿಗೆ ಮೊರೆಹೊಕ್ಕ ಭಾಮಿನಿಯರೆಂದು ಎಚ್ಚರಿಸಿದರು. ಹದಿಬದೆಯ ಧರ್ಮವನ್ನು ತಿಳಿದು ನೀತಿಯಿಂದ ನಡೆಯುವ ಯುವತಿಯರಿಗೆ ಸಹಾ ಈ ತಾಪಸಿಯನ್ನು ನೋಡಿದೊಡನೆ ಹಿಂದಕ್ಕೆ (ಋಷಿಗಳಾಶ್ರಮದಿಂದ ನಿಬಿಡವಾದ) ದಾರುಕ ವನದಲ್ಲಿ ಅನ್ನಪೂರ್ಣಾ ವಲ್ಲಭನು ಚರಿಸಿದಾಗ ಸ್ತ್ರೀಯರಿಗೆ ಆದ ಸ್ಥಿತಿಯು ತಮಗೆ ಪರಿಣಮಿಸುವ ಹಾಗೆ ಅನುಮಾನವಾಗ ಹತ್ತಿತು. ಈ ಪರಿಯಾದ ಶೋಭೆಯನ್ನು ತಳೆದ ನೂತನ ಮುನಿಯು ನಮ್ಮ ಚರಿತ್ರ ಪುರುಷನ ಸಮೀಪಕ್ಕೆ ಬರುತ್ತಿರಲು ಅರಮನೆಯಲ್ಲಿ ತಟ್ಟನೆ ಅಮೃತರಸವು ಸುರಿಯುವಂತೆ ನಮ್ಮ ಭಕ್ತಲಲಾಮನಿಗೆ ಭಾಸವಾಗಲು, ಆತನು ಆಶ್ಚರ್ಯಪಟ್ಟು ಇದೇಕೆ ಹೀಗಾಯಿತೆಂದು ಪರಿಭಾವಿಸಹತ್ತಿದನು. ಅಷ್ಟರಲ್ಲಿ ಸುಕುಮಾರ ತನುವಿಂದೊಪ್ಪುತ್ತ ಲಲಾಟದಲ್ಲಿ ಬೆಳಗುತ್ತಿರುವ ಭಸಿತ ಭೂಷಿತನಾಗಿ ಕಂಠದಲ್ಲಿ ರುದ್ರಾಕ್ಷ ಮಾಲಾಭರಣದಿಂದ ಯುಕ್ತನಾಗಿ ಪಾದಗಳಲ್ಲಿ ಆವುಗೆಗಳನ್ನು ಧರಿಸಿ, ಕಂಕುಳಲ್ಲಿ ಭಿಕ್ಷದ ಜೋಳಿಗೆಯುಳ್ಳವನಾಗಿ ವಾಮಕರದಲ್ಲಿ ಕಮಂಡಲವನ್ನು ಹಿಡಿದುಕೊಂಡು ಬಲಗೈಯ್ಯಲ್ಲಿ ಲಾಕುಳದಿಂದ ಅಂದರೆ-ದಂಡದಿಂದ ಶೋಭಿತ

ನಾಗಿ ಜಗನ್ಮೋಹನ ಮೂರ್ತಿಯಾಗಿರುವ ಅಪೂರ್ವ ಯತಿಯನ್ನು ಕಂಡನು. ಛಿದ್ರವುಳ್ಳ ಪಾತ್ರೆಯಲ್ಲಿ ಮಡಗಿದ ದೀವಿಗೆಯ ಪ್ರಕಾಶವು ಹೊರಸೂಸುವಂತೆ ಈ ನೂತನ ಅತಿಥಿಯಲ್ಲಿ ಶಿವಕಳೆಯು ಬಲವಾಗಿ ಮಿಂಚುವದನ್ನು ಕಂಡು ಮೈಯ್ಯುಬ್ಬಿ ಸಂತೋಷಪಟ್ಟು ಭಕ್ತಿಯಿಂದ ಆ ಮುನಿಪತಿಗೆ ಪೊಡಮೊಟ್ಟನು. ಪ್ರೇಮದಿಂದೆರಗುವ ಭಕ್ತನನ್ನು ನೋಡಿ ತಾಪಸಿಯು ಸಂತೋಷದಿಂದ ಆತನ ಹಸ್ತವನ್ನು ಹಿಡಿದೆತ್ತಿ ಅವನನ್ನು ಅಂತಃಕರುಣದಿಂದ ನೋಡಿದನು- ಕೂಡಲೆ ಚರಿತ್ರನಾಯಕನು ಕೈಚಾಚಿ ಅತಿಥಿಗೆ ಹಸ್ತಾವಲಂಬನವನ್ನು ಕೊಟ್ಟು ನಿಜಮಂದಿರಕ್ಕೆ ಕರೆತಂದು ರತ್ನಮಯವಾದ ಕಾಂಚನ ಪೀಠದಲ್ಲಿ ಮುನೀಂದ್ರನನ್ನು ಕುಳ್ಳಿರಿಸಿ ಭಕ್ತಿಯಿಂದ ಮಹಾಪಾದಕ್ಕೆ ಮಜ್ಜನವನ್ನೆಸಗಿ ಆ ಪರಮ ಪಾವನ ಪಾದತೀರ್ಥವನ್ನು ತಲೆಯಲ್ಲಿ ಪ್ರೀತಿಯಿಂದ ಧರಿಸಿ, ತನ್ನ ರಾಣೀವಾಸದ ಕಾಂತೆಯರನ್ನು ಕರೆಸಿ ರನ್ನದಾರತಿಯನ್ನು ಮಹಾಪಾದಕ್ಕೆ ಬೆಳಗಿಸಿ ಕೈಗಳನ್ನು ಮುಗಿದು ದೇವರೇ! ಸ್ನಾನ ಶಿವಾರ್ಚನೆಯನ್ನು ಗೈದು ಪ್ರಸಾದವನ್ನು ಕೈಕೊಳ್ಳಬೇಕೆಂದು ಬಹು ವಿನಯದಿಂದ ಬೇಡಿಕೊಂಡು, ಮತ್ತೊಮ್ಮೆ ದಿವ್ಯಚರಣಯುಗ್ಮಕ್ಕಾನತನಾದನು. ಆಗ ದಿವ್ಯ ಶರೀರಿಯಾದ ಯಮಿಯು ನಸುನಗುತ್ತ ಎಲೆ ಭಕ್ತನೆ ! ನೀನು ಬೇಡಿದವರಿಗೆ ಅವರ ಅಪೇಕ್ಷೆಯಂತೆ ತೃಪ್ತಿಪಡಿಸುವಿಯೆಂಬ ನಿನ್ನ ಛಲವು ನನಗೆ ತಿಳಿದದೆ; ಸಹಜದಾನಿಗಳಲ್ಲಿ ನೀನೇ ಅಗ್ರೇಸರನೆಂಬುವದು ನನಗೆ ತಿಳಿದ ಹಳೆಯ ಸಂಗತಿಯಾಗಿದೆ ; ಮಹಾದಾನಿಯೆಂದು ನಿನ್ನ ಯಶವು ದಿಙ್ಮಂಡಲವನ್ನು ವ್ಯಾಪಿಸಿದ್ದರಿಂದ ನಿನ್ನನ್ನು ಕಾಣಬೇಕೆಂಬ ಕುತೂಹಲವಾದದ್ದರಿಂದ ಬಂದೆನಲ್ಲದೆ ಊಟಕ್ಕಾಗಲಿ ವಸ್ತ್ರಾಭರಣಗಳ ಅಭಿಲಾಷೆಯಿಂದಾಗಲಿ ನಾನು ಇಲ್ಲಿ ಬಂದಿರುವೆನಲ್ಲವೆಂದು ಠೀವಿಯಿಂದ ಹೇಳಿದನು. ಆಗ ಚರಿತ್ರಪುಂಗವನು. ತಾಪಸೋತ್ತಮನೇ ! ದಾನಿಯೆಂಬ ನನ್ನ ಬಿರುದು ನಿಮ್ಮಡಿಗಳ ಕೃಪಾವಿಶೇಷವೇ ಹೊರ್ತು ನಾನೆಷ್ಟರವನು. ನಿಮ್ಮ ದಯಾರಸಭರಿತವಾದ ಕಟಾಕ್ಷವೇ ನಕಲಕ್ಕೂ ಮೂಲವು ; ತಮ್ಮಿಚ್ಛಿತವನ್ನು ದಯಮಾಡಿ ಈಕ್ಷಣವೇ ಕೇಳಿರಿ. ಅದನ್ನು ನಾನು ಕೊಡಲು ಅಸಮರ್ಥನಾದರೆ ಸರಿಕರಾದ ನೃಪರು ನನ್ನನ್ನು ಏನೆಂದು ಭಾವಿಸುವರು ; ಈ ದೇಹವನ್ನು ತಮಗೆ ಒಪ್ಪಿಸುವೆನು, ಈ ಚಿತ್ತವನ್ನು ತಮ್ಮ ಸನ್ನಿಧಿಗೆ ನೀಡುವೆನು, ಈ ಸಂಪತ್ತೆಲ್ಲವೂ ಮಹಾಪಾದಕ್ಕೆ ಅರ್ಪಿಸುವೆನು ; ಮುನಿಶ್ರೇಷ್ಠನೇ ನಿನ್ನ ಮನಸ್ಸಿನಲ್ಲಿದ್ದುದನ್ನು ಬೇಡದಿದ್ದರೆ ಗಾಯತ್ರೀಪತಿಯ ಆಣೆಯು. ಈ ಪರಿಯಾಗಿ ಸರಸರನೆ ಧೀರನಾದ ಭಕ್ತನು ಬಿನ್ನವಿಸಿದ ನುಡಿಯನ್ನು ಕೇಳುತ್ತ (ನಿಜಭಕ್ತರೊಡನೆ ಸರಸವಾಡುವಲ್ಲಿ) ಅಪ್ರತಿಮನೆಂದು ಖ್ಯಾತನಾದ ನಮ್ಮ ಕೃತಕಯತಿಯು ಹಾಗಾಗರೆ ಬೇಡಿದ್ದನ್ನು ಕೊಡಲು ನೀನು ಸಿದ್ಧನಿರುವೆಯೋ ಒಳ್ಳೇದು ನಿನ್ನ ಸತಿಯರನ್ನು ಇಲ್ಲಿಗೆ ಬರ

ಮಾಡು ಎಂದು ಹೇಳಿದ ಕೂಡಲೆ ಶೃಂಗಾರ ದೇವತೆಗಳಂತೆ ರಂಜಿಸುವ ಲಾವಣ್ಯವತಿಯರಾದ ಸರ್ವಾಭರಣಭೂಷಿತರಾದ ಇನ್ನೂರು ಸಖಿಯರನ್ನು ಮುನಿಯ ಸನ್ನಿಧಿಯಲ್ಲಿ ನಿಲ್ಲಿಸಿ ಏನಪ್ಪಣೆ, ಆಜ್ಞೆಯನ್ನು ಗೈಯ್ಯುವದೆಂದು ವಿನಯವಾಗಿ ಇಹಃಪಗೆಯಾಂಡನು ವಿಜ್ಞಾಪಿಸಿದನು. ತಿಳಿಗೊಳದಲ್ಲಿ ಕಮಲವು ವಿರಾಜಿಸುವಂತೆ, ಆಕಾಶದಲ್ಲಿ ಚಂದ್ರನೊಪ್ಪುವಂತೆ, ನದಿಗಳಲ್ಲಿ ಗಂಗೆಯು ಶೋಭಿಸುವಂತೆ, ಸ್ತ್ರೀಮಂಡಲದಲ್ಲಿ ಮೃಡಾಣಿಯು ಬೆಳಗುವಂತೆ ಆ ರಮಣಿಯರಲ್ಲಿ ತೇಜಸ್ವಿನಿಯಾದ ರತ್ನಾವತಿಯು ಪುಣ್ಯರಾಶಿಯಂತೆ ಪ್ರಕಾಶಿಸುತ್ತಿದ್ದಳು. ಆ ಕಾಮಿನೀವೃಂದವು ಪುಷ್ಪಾಂಜಲಿಯನ್ನು ಮಾಡುತ್ತಿರುವಾಗ ಸೌಭಾಗ್ಯದಿಂದೆಸೆವ ಆ ರತ್ನಾವತೀ ದೇವಿಯನ್ನು ಕಂಡು ಅರಸನ ನೂರು ರಾಣಿಯರಲ್ಲಿ ಈ ನಾರಿಯೇ ಮೇಲೆಂದು ಮುನಿವರನು ತನ್ನಿಷ್ಟಕ್ಕೆ ಬಗೆಯುತ್ತಿರಲು ನಿನ್ನಿಷ್ಟವನ್ನು ವೇಗನೇ ಕೇಳಬೇಕೆಂದು ಸಿಂಧುಬಲ್ಲಾಳನು ಆಗ್ರಹ ಮಾಡಿದನು. ಈ ವರೆಗೂ ಯಾರೂ ಬೇಡದ ವಸ್ತುವನ್ನು ನಾನು ಬೇಡಿದರೆ ನೀನು ಒಪ್ಪಲಿಕ್ಕಿಲ್ಲೆಂದು ಹಿಂಜರೆಯುತ್ತೇನೆ. ಆ ಮುನಿಪನ ನೋಟವನ್ನು ಹಾಗೂ ಆತನ ಭಾವವನ್ನು ತಿಳಿದು ದೊರೆಯು—ಯತಿವರನೇ ನಿನಗಾವರಾಣಿಯ ಇಷ್ಟವೋ ಆ ರಮಣಿಯನ್ನು ಅನುಮಾನವಿಲ್ಲದೆ ಸ್ವೀಕರಿಸು ; ಇದರಲ್ಲಿ ಯಾವ ಅಭ್ಯಂತರವೂ ಇಲ್ಲ. ಹಾಗಾದರೆ ನಿನ್ನ ನೂರು ಮಡದಿಯರಲ್ಲಿ ನಿನ್ನ ಪ್ರೀತಿಯು ಯಾರ ಮೇಲೆ ವಿಶೇಷವಿರುವದೋ ಆ ಸಖಿಯೇ ನನಗೆ ಅರ್ಹಳು. ಹೀಗೆನ್ನುವ ಮುನಿರಾಯನ ಪ್ರಸಾದವಾಣಿಯನ್ನು ಕೇಳಿದೊಡನೆ ಕಡು ಹರ್ಷಿತನಾಗಿ ಆಗಬಹುದು ಆಗಬಹುದು ಸ್ವಾಮಿಾ ರತ್ನಾವತಿಯನ್ನು ಭವದೀಯ ಚರಣಗಳಿಗೆ ಅರ್ಪಿಸಿರುವೆನೆಂದು ಹೇಳುತ್ತ ಆ ರಾಣಿಗೆ ಋಷಿವರನ ಪರಿಚರ್ಯವನ್ನು ಮಾಡುವದೆಂದು ಮತ್ತು ಆತನ ಪ್ರಸಾದಕ್ಕೆ ಪಾತ್ರಳಾಗಬೇಕೆಂದು ಚನ್ನಾಗಿ ಬಿಂಬಿಸಿ ತನ್ನರಸಿಯ ಪವಿತ್ರವಾದ ಕೈಗಳನ್ನು ಶಿವಾರ್ಪಿತ ವಸ್ತುವೆಂಬ ಭಾವನೆಯಿಂದ ಹಿಡಿದು ನಾಲ್ಕು ಹೆಜ್ಜೆ ಮುಂದಕ್ಕೆ ಹೋಗಿ ರತ್ನಾವತೀದೇವಿಯನ್ನು ಮುನಿಪುಂಗವನಿಗೊಪ್ಪಿಸಿ ಆತನ ದಿವ್ಯಸರಸಿಜಗಳಿಗೆ ಸಾಷ್ಟಾಂಗವಾಗೆರಗಿ ತಾವು ಸುಖವಾಗಿ ಬಿಜಯಮಾಡಿರೆಂದು ಕೈಗಳನ್ನು ಮುಗಿದನು. ಭಕ್ತನೇ ಮಹಾದಾನಿಯೆಂಬ ನಿನ್ನ ಬಿರುದಿನಂತೆ ನಿನ್ನ ಸತಿಯಳನ್ನು ಸಹಾ ನನಗೆ ಕೊಟ್ಟು ನಿನ್ನ ಕೀರ್ತಿಯನ್ನು ಕಾಪಾಡಿಕೊಂಡಿ. ಆದರೆ ನಿನ್ನ ಬಳಗದವರು ಹಾಗೂ ನಿನ್ನರಸಿಯ ತಾಯಿ ತಂದೆಗಳು ಸುಮ್ಮನಿರುವರೇ ? ಆದ್ದರಿಂದ ಊರುದಾಟುವವರೆಗೂ ಮದುವಣಿಗನಂತೆ ಹೋಗುವ ಅಶ್ವಾರೂಢನಾದ ನನ್ನನ್ನು ಮತ್ತು ಹಯವನ್ನೇರಿ ನನ್ನೊಡನೆ ಹಿಂಬಾಲಿಸಿರುವ ಈ ನಿನ್ನ ಸಖಿಯನ್ನು ಯಾರೂ ತಡೆಯದಂತೆ ಜಾಗ್ರತೆಯಿಂದ ಕಾಯುವ ಭಾರವು ನಿನ್ನದಾದರೆ ಮಾತ್ರ ನೀನು ಕೊಟ್ಟ ದಾನವನ್ನು ನಾನು

ಗ್ರಹಿಸಬಹುದು. ಇಲ್ಲವಾದರೆ ನನಗೆ ಇದರ ಗೋಜು ಬೇಡವೆಂದು ಕಪಟಸಂನ್ಯಾಸಿಯು ಹೇಳಿದನು. ದಿವ್ಯ ಖಡ್ಗಧಾರಿಯಾಗಿ ನಿಮ್ಮಿಬ್ಬರನ್ನು ಸುರಕ್ಷಿತವಾಗಿರುವಂತೆ ನಾನು ನೋಡಿಕೊಳ್ಳುವೆನು. ನೀವು ಸಾಗಿರೆಂದು ಕಥಾನಾಯಕನು ಬಿನ್ನವಿಸಲು, ಈ ನೂತನ ದಂಪತಿಗಳು ಮೆಲ್ಲನೆ ಪುರದಲ್ಲಿ ತುರಗಾರೂಢರಾಗಿ ತೆರಳಿದರು. ಈ ಸುದ್ದಿಯನ್ನೆಲ್ಲ ರತ್ನಾವತೀ ದೇವಿಯ ಮನೆಯವರು ಹಾಗೂ ಇಷ್ಟಮಿತ್ರ ಬಾಂಧವರು ಕೇಳಿ ಅಯ್ಯೋ! ಅಯ್ಯೋ! ಒಬ್ಬ ಭಿಕ್ಷುಕನಿಗೆ ತನ್ನ ಪಟ್ಟದ ರಾಣಿಯನ್ನು ಕೊಡುವದುಚಿತವೇ ಎಂದು ಹೇಳಿ ಹೀಯಾಳಿಸುತ್ತ ಶಸ್ತ್ರಧಾರಿಗಳಾಗಿ ಆ ಯತೀಂದ್ರನನ್ನು ಅಡ್ಡಗಟ್ಟುವದಕ್ಕೆ ಸಜ್ಜಾಗಿ ಮುಂದೆ ಬರಲು ಅವರೆಲ್ಲರನ್ನೂ ನಿಷ್ಕರುಣೆಯಿಂದ ಕಥಾಪುರುಷನು ಸವರಿ ಬೊಬ್ಬಿರಿದು ಇನ್ನು ತಮಗೆ ಯಾವ ಆತಂಕವು ಇಲ್ಲವು; ವೀಥಿಯು ನಿಷ್ಕಂಟಕವಾಯಿತಷ್ಟೇ? ನೀವು ನಿರ್ಭಯರಾಗಿ ನಡೆಯಿರೆಂದು ಹೇಳಿ ಪುನಃ ನಮಸ್ಕರಿಸಿದನು. ಇಹಃಪಗೆಯಾಂಡನೇ ಈಗ ನೀನು ನಿನ್ನ ಪಟ್ಟಣಕ್ಕೆ ಹೋಗು. ನಾವು ಯಾವ ತಡೆಯಿಲ್ಲದ ಹೋಗುವೆವೆಂದು ಮುನಿನಾಥನು ಹೇಳಲು ಆಗ ಆತನಿಗೆ ಕಥಾನಾಯಕನು ಮತ್ತೊಮ್ಮೆ ಮಣಿದು ತನ್ನ ಪುರದ ದಾರಿಯನ್ನು ಹಿಡಿದನು. ರಾಜನು ಸ್ವಲ್ಪ ದಾರಿ ಹೋದಕೂಡಲೆ ಛಕ್ಕನೇ 'ಬಾ ಎಂಬ ಆರ್ತಧ್ವನಿಯಾಗಲು ಮತ್ತೊಮ್ಮೆ ವೈರಿಗಳಕಾಟವಾಯಿತೆಂದು ಆತನು ಹೊರಳಿ ನೋಡುತ್ತಾನೆ. ರಾಣಿಯು ಹತ್ತಿದ ಕುದುರೆಯ ಮಗ್ಗಲಲ್ಲಿ ಬರೇ ಕುದುರೆಯು ಕಾಣಹತ್ತಿತು; ಮುನಿಪತಿಯು ಅದೃಶ್ಯನಾಗಿರಲು ಇದನ್ನು ಕಂಡು ಕಥಾನಾಯಕನು ಬಹಳ ಕಳವಳಿಸಿ ವ್ಯಸನಾಕ್ರಾಂತನಾಗಿ ನೆಲಕ್ಕೆ ಬಿದ್ದು ಬಿಟ್ಟನು. ಆ ದುಃಖದಲ್ಲಿಯೇ ಫಕ್ಕನೆ ಕಣ್ದೆರದು ನೋಡುತ್ತಾನೆ. ತಾಪಸಿಯು ಹತ್ತಿದ ಕುದುರೆಯು ಮುದಿ ಎತ್ತಾಗಿ ಪರಿಣಮಿಸಿತ್ತು. ಮೊದಲು ನೋಡಿದ ಆ ಯತಿಯು ಯತಿಕುಲ ಮುಖ್ಯವಾದ ಗೌರೀರಮಣನಾಗಿ ಧಳಥಳಿಸಹತ್ತಿದನು. ಸುರರು ಉಘೇ ಉಘೇ ಎಂದು ಪುಷ್ಪ ವೃಷ್ಟಿಯನ್ನು ಮಾಡಿ ಸಂತೋಷದಿಂದ ಚಪ್ಪಾಳೆಯನ್ನಿಕ್ಕಿದರು. ರತ್ನಾವತೀದೇವಿಯ ಹಾಗೂ ಚರಿತ್ರನಾಯಕನ ಹರ್ಷಕ್ಕೆ ಕೊನೆಯಿಲ್ಲದಾಯಿತು ಜಾಯಾಪತಿಗಳು ಸುರಶ್ರೇಷ್ಠನನ್ನು ಬಾರಿ ಬಾರಿಗೂ ನಮಸ್ಕರಿಸಿ ರೋಮಾಂಚನಗೊಂಡು ಸ್ತುತಿಸುತ್ತ ಅವರಿಬ್ಬರ ಶರೀರದಲ್ಲಿ ಕಂಪವಾಗಿ ಸಂತೋಷಾಬ್ಧಿಯಲ್ಲಿ ಮುಳುಗಲು ಅನಂಗನ ವೈರಿಯಾದ ಪಶುಪತಿಯು ಸಿಂಧುಬಲ್ಲಾಳನಿಗೂ. ಪತಿ ಆಜ್ಞಾನಿರತಳಾದ ಆತನ ಭಾರ್ಯೆಗೂ ತಾನು ಬರಸಿದ ಪುಷ್ಪಕ ವಿಮಾನದಲ್ಲಿ ಕುಳ್ಳಿರಿಸಿ ಶಾಶ್ವತವಾದ ಗಣಪದವನ್ನಿತ್ತು ರಕ್ಷಿಸಿದನು.

೬೦.

# ೫೮. ಮೆರೆಮಿಂಡದೇವರು.

ಕರಿಗೊರಲನಾದೊಡಂ ಮರೆದು ಶರಣರ್ಗೆ ಬಂ । ದೆರಗದಿಹ ನಂಬಿ
ಯೊಡಗೂಡಿ ಪೊರೆಗೆಂದ । ಮೆರೆಮಿಂಡರೆನಗೆ ಶರಣಕ್ಕೆ ॥

[ಶ್ರೀ ನಿಜಗುಣರು]




ನಯಗುಣವು ವಿವೇಕ ದಂಗವಾಗಿರುವದಾಗಿ ಧೀರರಿಂದ ಗಣಿಸಲ್ಪಡುವದು. ಇದು ಜಾಣರೊಪ್ಪುವ ಮಾತೇ ಅಹುದು. ಅನೇಕ ಸುಗುಣಗಳು ವಿವೇಕದಲ್ಲಂತರ್ಭೂತವಾಗುವವಷ್ಟೇ? ಅವುಗಳೊಳಗೆ ವಿನಯವು ಅಡಕವಾಗದಿದ್ದರೆ ಉಳಿದಗುಣಗಳು ಪ್ರಕಾಶವಾಗಲಾರವು. ಇದು ಸುಜನರು ಅನುಮೋದಿಸುವ ಸಂಗತಿಯು. ವಿನಯದಿಂದಾಗುವ ಲೇಸು ತಿಳಿಯಬೇಕಾದರೆ ವಿನಯಶಾಲಿಗಳಿಗೆ ತಟ್ಟನೆ ಹೊಳೆದಷ್ಟು ವಿನಯಶೂನ್ಯರಿಗೆ ತೀವ್ರವಾಗಿ ಭಾಸವಾಗಲಾರದು.

**ತಾ**ಯಿತಂದೆ ಮುಂತಾದ ಹಿರಿಯರಿಗೂ, ಗುರುಗಳು-ಯೋಗಿಗಳು-ಸುಜನರು ಮುಂತಾದ ಪೂಜ್ಯರಿಗೂ ವಿಧೇಯನಾಗಿ ಅವರನ್ನು ಗೌರವದಿಂದ ಕಾಣುತ್ತ, ಅವರಿಗೆ ಭಕ್ತಿಭಾವದಿಂದ ಮಣಿದು ಆದರ ಪುರಸ್ಸರವಾಗಿ ಅವರೊಡನೆ ತಮ್ಮ ಮನೋಭೀಷ್ಟವನ್ನರಿಕೆ ಮಾಡುವಿಕೆ ಮೊದಲಾದ (ನಮ್ರತೆಯನ್ನು ತೋರ್ಪಡಿಸುವ) ನಡೆಗೆ ಆರ್ಯರು ವಿನಯವೆಂದು ಹೇಳುವರು. ಅವಿನಯವು ಹಾನಿಯನ್ನು ತಪ್ಪದೇ ತರುತ್ತದೆ. ಆದುದರಿಂದ ವಿನಯದಿಂದ ವರ್ತಿಸಬೇಕೆಂದು ಘಂಟಾಘೋಷವಾಗಿ ಸಕಲ ಧರ್ಮಪ್ರಚಾರಕರು ಬೋಧಿಸುವರು- ಅವಿನಯವನ್ನು ಕಂಡೊಡನೆ ಶೀಘ್ರವಾಗಿ ಗಣಾಚಾರವನ್ನು ಕೈಕೊಂಡ **ಮೆರೆಮಿಂ**ಡದೇವನೇ ನಮ್ಮ ಕಥಾನಾಯಕನು.

ಪ್ರಖ್ಯಾತವಾದ ಚೋಳಮಂಡಲದಲ್ಲಿ ತಿರುವಾರೂರೆಂಬ ಪಟ್ಟಣವು ಬುಧವ್ರಜದಿಂದಲೂ, ಭೂಸುರ ತಿಂಕಿಣಿಯಿಂದಲೂ, ಭಸ್ಮಪ್ರಿಯನಾದ ಹರನ

ಭಕ್ತ ಸಮೂಹದಿಂದಲೂ, ಭೂಸಾರವನ್ನುಣ್ಣಿಸುವ ಕೃಷಿಕರಿಂದಲೂ ಶಿವನಿಲಯಗಳಿಂದಲೂ ಮನೋಹರವಾಗಿ ಶೋಭಿಸುತ್ತ ಸಕಲೈಶ್ವರ್ಯದಾಗರವಾಗಿ ಮೆರೆಯುತ್ತಿತ್ತು. ಆ ಪುರದಲ್ಲಿನೆವನೇಕ ಶಿವಾಲಯಗಳಲ್ಲಿ ತಿರುವಾರೂರೇಶ್ವರ ದೇವಸ್ಥಾನವೇ ಮುಖ್ಯಗುಡಿಯಾದುದರಿಂದ ಅನೇಕ ಭಕ್ತರು ಆಗಾಗ್ಗೆ ಅಲ್ಲಿ ಕಿಕ್ಕಿರಿದು ದರ್ಶನಾಪೇಕ್ಷಿಗಳಾಗಿ ತಮ್ಮ ಸೇವೆಯನ್ನು ಪೂರೈಸಿ ತೆರಳುತ್ತಿದ್ದರು.

ಆ ತಿರುವಾರೂರಾಧಿಪತಿಯ ಜಾತ್ರೆಯು ಸಮೀಪಿಸಲು ಭಕ್ತಸಮೂಹವು ಆ ಶಿವಾಲಯಕ್ಕೆ ಹೆಚ್ಚಾಗಿ ಬರುವದನ್ನು ಕಂಡು ಗಣಾಚಾರಪಟುವಾದ **ಮೆರೆಮಿಂಡನು** ಸಂತೋಷಪಡುತ್ತಿದ್ದನು. ಉತ್ಸವದ ದಿವಸ **ಭಕ್ತಸ್ತೋಮವು** ತೇರನ್ನು ಭಕ್ತಿಯಿಂದೆಳೆಯುವದನ್ನು ಕಥಾಪುರುಷನು ಮನದಣಿಯಾಗಿ ನೋಡುತ್ತ ಭಕ್ತಿರಸಾವೇಶದಿಂದ ಮನವಾರೆ ನಲಿಯುತ್ತಿರುವ ವೈಭವಾತಿಶಯದ ಸಮಯದಲ್ಲಿ ರೂಪುಯೌವನದಿಂದ ಕಾಂತಿಯುಕ್ತನಾದ ನಂಬಿಯಣ್ಣನೆಂಬ ಶೈವನು ಚೆಲುವಾದ ಕುದುರೆಯಿಂದಿಳಿದು ಆ ಶಿವಗೃಹದಲ್ಲಿ ಕುಳಿತಿರುವ ಸದ್ಭಕ್ತರನ್ನು ಗಮನಿಸದೆ, ಆದರಿಸದೆ ಗರ್ಭಗುಡಿಯಲ್ಲಿ ಹೋಗುವಾಗ ಇಷ್ಟು ಅಲಕ್ಷದಿಂದ ವೈಮರೆತು ದೇಗುಲವನ್ನು ಪ್ರವೇಶಿಸುವ ಮೂರ್ಖನು ಇವನು ಯಾರೆಂದು ನಮ್ಮ ಉಗ್ರಭಕ್ತನು ನೆರೆದವರನ್ನು ಕೇಳಿದನು. ಆಗಲವರು ಈತನೇ ಶಿವಕುಮಾರನು; ಈತನಿಗೆ ಈಶ್ವರನು ದಿನಾಲು ಪಡಿಹೊನ್ನು ಕೊಟ್ಟು ಪ್ರೀತಿಸುವನು ಎಂದು ಹೇಳಲು ನಮ್ಮ ಚರಿತ್ರನಾಯಕನು ಏನು ಈ ಸೊಕ್ಕಿನವನಿಗೆ ಸತ್ಯಪ್ರತಿಜ್ಞನಾದ ವೃದ್ಧನಾದ ಶಿವನು ಪ್ರೀತಿಸುವನೋ? ಶರಣ ಸಮೂಹವನ್ನು ಗೌರವಿಸದ ದುಷ್ಟಭಕ್ತನಿಗೆ ದೇವಶಿಖಾಮಣಿ ಯೆನಿಸುವ ನಮ್ಮ ಪ್ರಭುವು ಒಲಿದಿರುವನೋ ನೋಡೋಣ ಈ ದುರುಳ ಭಕ್ತನನ್ನು ಬಡಿಯರಿ, ಜಡಿಯರಿ, ಪ್ರಹರಿಸಿರಿ, ಬಂಧಿಸರಿ ಹೀಗೆ ಕೋಪಾಟೋಪದಿಂದ ನುಡಿಯುತ್ತ ಇಂಥ ಭಕ್ತದ್ರೋಹಿಗೆ ಆಶ್ರಯ ಕೊಟ್ಟ ಶಿವನಾದರೂ ನಮ್ಮ ಶರಣರಿಗೆ ಹೊರಗೆಂದು ಆರ್ಭಟಿಸಲು ನಮ್ಮ ಭಕ್ತಲಲಾಮನ ಶಿವನಿಷ್ಠೆಯನ್ನು ಹಾಗೂ ಆತನ ಮನದೊಲವನ್ನು ಅರಿತ ಗಣಾಚಾರವ್ರತದ ಭಕ್ತರು ಕೂಡಲೆ (ಸೌಂದರ) ನಂಬಿಯನ್ನು ಮುತ್ತಲು ಆತನು ತಟ್ಟನೆ ದೇವಾಲಯದ ಬಾಗಿಲಗಳನ್ನು ಭದ್ರವಾಗಿ ಮುಚ್ಚಿಕೊಂಡು ಆ ಮಹಾಲಿಂಗ ಮೂರ್ತಿಯೆದುರಿಗೆ ನಿಂತು ಭಯಭೀತನಾಗಿ ನಡೆದ ಸಂಗತಿಯನ್ನು ಆ ಭಕ್ತವತ್ಸಲನಿಗೆ ಬಿನ್ನವಿಸಿದನು. ಆಗ ದಿವ್ಯಲಿಂಗಮಧ್ಯದಿಂದ ಕರುಣಾಕರನಾದ ಶಂಕರನು ನಡುಗುತ್ತ ಹೊರಗೆ ಬಂದು ಬಹುಗಾಬರಿಯಾದವನಂತೆ ನಟಿಸುತ್ತ ಮಗನೇ ನೀನೇಕೆ ಭಕ್ತರನ್ನು ವಂದಿಸದೆ ನನ್ನಲ್ಲಿಗೆ ಬಂದೆ? ನನಗೂ ಆ ನನ್ನ ನಿಜಶರಣರಿಗೂ ಅಂತರಿಸಬಹುದೇ ಎಂದು ನಂಬಿಯಣ್ಣನನ್ನು ಕೇಳಲು ಆಗ ಆ ನಂಬಿಯು ಒಡೆಯನೇ ನೀನು ಈ ಪರಿಯಾಗಿ ಬಳುಕುವಾಗ ನನ್ನ ಪಾಡೇನು, ನಾನು ಬದು

ಕುವದೆಂತು ಎಂದು ಆನತನಾಗಿ ನಿವೇದಿಸಿದನು. ಆಗ ಭಕ್ತಚಿಂತಾಮಣಿಯಾದ ಕೈಲಾಸಪತಿಯು ನಂಬಿಯೇ ಸುಮ್ಮನೆ ಮೆರೆಮಿಂಡನು ನನ್ನನ್ನು ಸಹ ಹೊರಗು ಮಾಡಿದನು. ನಾವಿನ್ನು ಇಲ್ಲಿ ನಿಲ್ಲುವುದು ಬೇಡೆಂದು ಹೇಳಿ ಗವಾಕ್ಷಮಾರ್ಗ ದಿಂದ ಅನ್ಯರಿಗೆ ತಿಳಿಯದಂತೆ ಮನೋಹರವಾದ ಉದ್ಯಾನಕ್ಕೆ ನಂಬೆಣ್ಣನೊಡನೆ ಬಂದು ಏಕಾಂತದಲ್ಲಿ ಸದ್ಬೋಧೆಯನ್ನು ಮಾಡಿ ಭಕ್ತನ ಚಿತ್ತವು ಶುದ್ಧವಾದ ಲಕ್ಷ ಣವನ್ನು ಕಂಡು ಈಗ ಸಕಾಲವೆಂದು ತಿಳಿದು ಮಗನೇ ಶಿವಭಕ್ತರು ಸಮರ್ಥರು, ಅವರು ನುಡಿದುದೇ ಮಂತ್ರವು. ಅವರು ನಡೆದುದೇ ಸನ್ಮಾರ್ಗವು, ಅವರು ಮಹಾಮಹಿಮರು, ಆ ಶರಣರಿಗೆ ಸಮವಾದ ವಸ್ತುವು ತ್ರಿಭುವನದಲ್ಲುಂಟೇ ? ಆ ಭಕ್ತರಿಗೆ ನೀನು ನಮಸ್ಕರಿಸದೆ ಗುಡಿಯೊಳಗೆ ಬಂದುದರಿಂದ ಅವರಿಗೆ ವಿರೋ ಧಮಾಡಿದಂತಾಯಿತು ; ಆದುದರಿಂದ ಆ ದೋಷಪರಿಹಾರಾರ್ಥವಾಗಿ ನೀನು ಚೋಳ ಭೂಮಿಯಲ್ಲಿ ವಿರಾಜಿಸುವ **ತಿರುನೀಲಕಂಠ** ಮೊದಲಾದ ಅರುವತ್ತು ಮೂರು ಪುರಾತನ ಪುಂಗವರನ್ನು ನಿಷ್ಕಲಂಕವಾದ ಭಕ್ತಿಯಿಂದ ಮಂಜುಳವಾದ ವಾಣಿಯಿಂದ ಸ್ತುತಿಸಿ, ಪಾಡಿ, ನಲಿದಾಡು ಅಂದರೆ ಆ ಶಿವನಿಂದೆಯ ದೋಷವು ತೊಲಗುವದೆಂದು ಚನ್ನಾಗಿ ಬಿಂಬಿಸಿದನು. ಬಳಿಕ ಮಹಿಮನಾದ ಪಶುಪತಿಯು ತನಗುಚಿತವಾದ ಜಂಗಮಾಕಾರವನ್ನು ತಾಳಿ, ಕೈಂಕರ್ಯದಿಂದ ತನ್ನೊಡನೆ ಮಾನವಾಕಾರವನ್ನು ಹೊಂದಿ ಬಂದಿರುವ ವೀರಭದ್ರ, ನಂದೀಶ್ವರ ಮೊದಲಾದ ಪ್ರಮಥರೊಡನೆ ಸೌಂದರನ ಕೂಡ ತಿರುವಾರೂರ ಗುಡಿಗೆ ಬಂದು ದೂರದಿಂ ದಲೇ ಕೈ ಬೆರಳಿನಿಂದ ಮೆರೆಮಿಂಡನನ್ನು ತೋರಿಸಿ ಆತನಿಗೆ ಶರಣಾಗತನಾಗೆ ನ್ನಲು ತನಗೆ ನಂಬೆಣ್ಣನು ಅಲ್ಲಿಂದಲೇ ಸಾಷ್ಟಾಂಗವಾಗಿ (ಮೆರೆಮಿಂಡನಿಗೆ) ನಮಸ್ಕರಿಸುತ್ತ ಬರುವದನ್ನು ಆ ವೀರಗಣಾಚಾರದ ಭಕ್ತನು ಕಂಡು ಅಯ್ಯೋ ಅಯ್ಯೋ ಶಿವಸುತನೆಂದು ಕೇಳಿ, ಕೇಳಿ ಆತನ ಮೇಲೆ ಕೈ ಎತ್ತಿದೆನು ; ಆತನನ್ನು ನಿವಾರಿಸುವದಕ್ಕೆ ಯತ್ನಿಸಿದೆನು ಆದುದರಿಂದ ನಾನು ಕಡುದೋಷಿಯಾದೆನು. ಶಿವದ್ರೋಹವನ್ನು ಮಾಡಿದ ತಪ್ಪಿಗಾಗಿ ನನ್ನನ್ನೇ ಮೃಡನಿಗೊಪ್ಪಿಸಿ ಬಿಡುವೆ ನೆಂದು ನಿರ್ಧರಿಸಿ ಹದನಾದ ಖಡ್ಗವನ್ನು ತಕ್ಕೊಂಡು ತನ್ನ ಕೊರಳನ್ನು ಕತ್ತರಿ ಸುವಷ್ಟರಲ್ಲಿಯೇ ಭಕ್ತಪ್ರೇಮಿಯಾದ ಸದಾಶಿವನು ಆತನ ಸಾಹಸವನ್ನು ತಡೆದು ನಿಜರೂಪವನ್ನು ತೋರಿಸಲು ಚರಿತ್ರಪುಂಗವನಿಗೆ ರೋಮಾಂಚನವಾಗಿ ಭಕ್ತಿ ಯು ಉಕ್ಕೇರಿ, ಸಾನಂದನಾಗಿ ಕಾರುಣ್ಯಮೂರ್ತಿಯನ್ನು ಪರಿಪರಿಯಾಗಿ ಸ್ತುತಿಸಿ ಆತನ ಚರಣಸರಸಿಜಗಳಲ್ಲಿ ಮಸ್ತಕವನ್ನೀಡಿ ಮೈಮರೆಯಲು ಪ್ರಮಥಾಧಿಪ ತಿಯು ಆತನನ್ನು ಅಭಯಹಸ್ತದಿಂದ ಹಿಡಿದೆತ್ತಿ ಕರುಣಿಸಿ, ಮೆರೆಮಿಂಡನ ಪರಿ ಚಯವನ್ನು ಮಗ್ಗುಲಲ್ಲಿದ್ದ ಪ್ರಮಥರಿಗೆ ಮಾಡಿಕೊಟ್ಟು ಆತನಿಗೆ ಶ್ರೇಷ್ಠವಾದ ಗಣಪದವಿಯನ್ನು ಅನುಗ್ರಹಿಸಿದನು.

**ಸುಂ**ರ ಮುಖ್ಯನು ನಿಯಮಿಸಿದಂತೆ ಪುರಾತನ ಪುಂಗವರನ್ನು ಸೌಂದರನು ಪಾಡುತ್ತ ಶಿವಾಲಾಪದಿಂದ ಸುಖವಾಗಿದ್ದನು. ಅಂಥ ಸತ್ಕಾಲಕ್ಷೇಪವನ್ನು ಪಾಠಕಮಹಾಶಯರಿಗೆ ದಯಾಘನನಾದ ಅನಘನು ಆಶೀರ್ವದಿಸಲೆಂದು ಲೇಖಕನು ಭಗವಂತನನ್ನು ಪ್ರಾರ್ಥಿಸುತ್ತಾನೆ.



ಓಂ.

# ೫೯. ಚಾರಮನು.



ಪೇಳದ್ಯೆದಲು ನಂಬಿ **ಕೇ**ಳಿ ಕೈಲಾಸಕ್ಕೆ । ದಾಳಿಯಿಟ್ಟೈತುಲ ಬಲ
ಚಾರಮನ ಚರಣ । ದೂಳಿಗದ ಭಂಟ ನೆನಿಸುವೆನು ॥

[ಶ್ರೀ ನಿಜಗುಣರು]



ಅನಾದ್ಯಂತನ ಕೃಪೆಗೆ ಪಾತ್ರವಾದುದರಿಂದಲೇ ಭರತಖಂಡವು ದೈವಭಕ್ತರ ಬೀಡಾಗಿ ರಂಜಿಸುವದು. ಆ ಅವನೀತಲದ ದಕ್ಷಿಣಭಾಗದಲ್ಲಿ **ಚೇರ** ಮಂಡಲವು ಸಮಸ್ತ ವಿಭವಾದಿಗಳಿಂದ ನೆರೆ ಶೋಭಿಸುತ್ತಿತ್ತು. ಸಕಾಲಕ್ಕೊದಗುವ ವರ್ಷಾಕಾಲವು, ಋತುಮಾನಸರಿಯಾಗಿ ಒಪ್ಪುವ ವಾತಾವರಣವು, ಬಲವಂತರಾದ ಕೃಷಿಕರು, ಜಾಣರಾದ ಶಿಲ್ಪಿಗಳು, ಆಗಮಜ್ಞರಾದ ಪಂಡಿತರು, ಶಿವಜ್ಞಾನಾಪೇಕ್ಷಿಗಳಾದ ಧೀಮಂತರು, ಸಕಲಕಲಾಮಂಡಿತರಾದ ಬುಧರು, ಈ ಪರಿಯಾದ ಸಲಕರಣೆಗಳ ನೆಲೆಯಾಗಿ **ಚೇರ** ಧರಿತ್ರಿಯು ಬಹುಮನೋಹರವಾಗಿ ಸೊಗಯಿಸುತ್ತಿತ್ತು. ಅಂತೆಸೆವ ಆ ಉರ್ವಿಯಲ್ಲಿ **ಕುಡುಂಗನೂರೆಂಬ** ಪಟ್ಟಣವು ಸಕಲೈಶ್ವರ್ಯದಾಗರವಾಗಿ ಪ್ರಜಾಪರಿಪಾಲನ ದಕ್ಷನಾದ **ಚಾರಮ**ನೆಂಬ ಶೈವಭೂಪನ ರಾಜಧಾನಿಯಾಗಿ, ಸಿರಿಗೆ ಮೂಲವಾದ ಕಲಾಭವನಗಳಿಂದಲೂ, ಸಮರ್ಥರಾದ ಒಕ್ಕಲಿಗರ ಸಮೂಹದಿಂದಲೂ, ಉತ್ಸಾಹಭರಿತರಾದ ಮೇಧಾವಿಗಳಿಂದಲೂ, ಸದ್ಭಕ್ತರ ತಿಂತಿಣಿಯಿಂದಲೂ, ವೈಭವದಿಂದ ಚೆಲ್ವಾಗಿರುವ ಶಿವಗೃಹಗಳಿಂದಲೂ ರಮಣೀಯವಾಗಿತ್ತು. ಆ ಮಹೀಪತಿಯು ಸದಾ

ಚಾರಿಯು, ಸಾತ್ವಿಕನು, ಸದ್ಗುಣಿಯು, ಸತ್ಪಥೋತ್ಸಾಹಿಯು, ಶಿವಕಾರ್ಯಗಳಲ್ಲಿ ಕಡು ಉದಾರಿಯು, ಪ್ರಜಾಹಿತಚಿಂತಕನು, ವಿವೇಕಸಂಪನ್ನನು, ಈ ಮೇರೆಗೆ ಸುಗುಣಗಳು ಆತನಲ್ಲಿ ಆಳವಟ್ಟಿದ್ದರೂ ಚಂದ್ರಮನು ಷೋಡಶಕಲಾಯುತನಾದರೂ ಕಿಂಚಿತ್ಕಲಂಕವಿದ್ದಂತೆ ನಮ್ಮ ಧರಣೀಶನಿಗೆ ಬ್ರಹ್ಮೋಪದೇಶದ ಕೊರತೆ ಮಾತ್ರವಿತ್ತು. ಆದರೂ ಆತನಿಗೆ ಕರುಣಾಕರನಾದ ಶಿವನಲ್ಲಿ ಬಹಳ ಪ್ರೇಮವು; ಆ ಅಪಾರಮಹಿಮನನ್ನು ಸ್ತುತಿಸುವನು, ಕೀರ್ತಿಸುವನು, ಪೂಜಿಸುವನು; ಧರ್ಮಾಚರಣೆಯಿಂದ ರಾಜ್ಯವಾಳುತ್ತಿದ್ದುದರಿಂದ ಪೂರ್ವದ ಹೆಸರ್ವಡೆದ ರಾಜರನ್ನು ಜನತೆಯು ಮರೆಯುವಂತಿತ್ತು.

ಶಾಂತನಾದ, ಸುಗುಣನಾದ, ಭವಭಂಜನನಾದ, ಉಮಾಮನೋರಮಣನಾದ, ನಿತ್ಯನ ಲಿಂಗದೇಹಕ್ಕೆ ನಮ್ಮ ಕಥಾನಾಯಕನು ದಿನಾಲು ಬಂದು ತನಗೆ ಸಂತೋಷವಾಗುವಂತೆ ಕ್ರಮವಾಗಿ ಅರ್ಚನೆಯನ್ನು ಮಾಡುತ್ತಿದ್ದನು. ಈ ರೀತಿಯಾಗಿ ಕೆಲವು ವತ್ಸರಗಳು ಕಳೆಯಲು ಭಕ್ತಬಂಧುವಾದ ಅಂತೆಯೇ ಸರ್ವಬಂಧವಿಮೋಚನನಾದ ಶಂಕರನಿಗೆ ಚಾರಮಕ್ಷಿತೀಶನ ಮೇಲೆ ಕಕ್ಕುಲತೆಯಾಗಿ (ಚಾಮರಾಯನು ಮಾಡುವ) ಪೂಜಾಸಮಯದಲ್ಲಿ ತನ್ನ ಪವಿತ್ರಪಾದದಲ್ಲಿಯ ಗೆಜ್ಜೆಗಳಿಂದ ಮಂಜುಳಧ್ವನಿಗೈಯ್ಯುತ್ತಿದ್ದನು. ಆ ಶಿವನಿಲಯದಲ್ಲಿ ಪ್ರತಿದಿವಸ ಈ ಮಂಗಲರವವನ್ನು ಆಲಿಸಿ ಕಥಾಪುರುಷನ ಆನಂದವು ಹೆಚ್ಚುತ್ತ ಭಕ್ತಿಯು ಇಮ್ಮಡಿ, ಮುಮ್ಮಡಿ, ನಾಲ್ಮಡಿಯಾಗಿ ಹೆಚ್ಚಾಗುತ್ತ ಭರದಿಂದ ಬೆಳೆಯಹತ್ತಿತು. ಈ ಪರಿಯಾಗಿ ಕೆಲವುಕಾಲ ಕಳೆಯಲು ಒಂದು ದಿವಸ ಸರ್ವಾತ್ಮನಾದ ನೀಲಲೋಹಿತನ ಆ ಗುಡಿಯಲ್ಲಿ ಶಿವಸೇವಾಸಮಯದಲ್ಲಿ ಪ್ರತಿನಿತ್ಯದಂತಾಗುವ ಆ ವಿಶಿಷ್ಟ ಮಧುರಧ್ವನಿಯಾಗದಿರಲು ನಮ್ಮ ಭೂಕಾಂತನು ವಿಸ್ಮಯಪಡುತ್ತ ಖತಿಗೊಂಡು, ದೇವಾ, ನೀನೇಗತಿಯೆಂದು ನೆರೆನಂಬಿದ ಈ ಭಕ್ತನ ಮೇಲೆ ಮುನಿಸೇತಕೆ ? ಯಾವ ಕೊರತೆಯನ್ನು ಕಂಡೆ, ಎಂದು ಸವಿನಯವಾಗಿ ಬಿನ್ನವಿಸಿದನು. ಆಗ ಭಕ್ತವತ್ಸಲನಾದ, ಸರ್ವಭೋಗಸಮೃದ್ಧನಾದ ನಿರಾಲಂಬನು ಶರಣಾಗತನಾದ **ಚಾರಮ** ನೃಪನ ಮೇಲೆ ದಯದೋರಿ ಅಶರೀರವಾಣಿಯಿಂದ ರಾಜನೇ ತಿರುವಾರೂರೆಂಬಲ್ಲಿ **ಸೌಂದರ**ನೆಂಬ ವರಭಕ್ತನಿರುವನು ; ಆತನು ಮನೋಹರವಾಗಿ ತಿರುಪಾಡುಗಳನ್ನು ಪಾಡುತ್ತಿದ್ದುದರಿಂದ ನನ್ನ ಲಕ್ಷವು ಅತ್ತಕಡೆಗೆ ಹೆಚ್ಚಾಗಿ ಹೋಗಿ ನೀನು ಮಾಡುವ ಪೂಜಾಕಾಲದಲ್ಲಿ ಸ್ವಲ್ಪ ಅಲಕ್ಷೆಯಾಗಿ ಕಾಲ್ಗೆಜ್ಜೆಯ ಸಪ್ಪಳವು ಎಂದಿನಂತಾಗಲಿಲ್ಲವೆಂದು ಹೇಳಿದನು. ಆ ಮಹಾವಾಕ್ಯವು ಕರ್ಣದಲ್ಲಿ ಬಿದ್ದೊಡನೆ ಚರಿತ್ರನಾಯಕನು ಅಚ್ಚರಿಪಟ್ಟು ಆ ಪರಿಯಿಂದ ಇಂಪಾಗಿ ಶಿವಭಕ್ತಿ ಪುರಸ್ಸರವಾಗಿ ಪಾಡುವ ಸೌಂದರೇಶನನ್ನು ಕಾಣಬೇಕೆಂಬ ಕುತೂಹಲವುಳ್ಳವನಾಗಿ ಮಿತಪರಿವಾರದೊಡನೆ ತಿರುವಾರೂರ ಪಟ್ಟಣದ ಹೊರ

ಭಾಗಕ್ಕೆ ಬಂದೊಡನೆ ಯೋಗಿವೇಷವನ್ನು ಧರಿಸಿ, ಕಾಷಾಯ ವಸ್ತ್ರಯುಕ್ತನಾಗಿ ಪಾದದಲ್ಲಿ ಹಾವುಗೆಗಳನ್ನು ಹಾಕಿಕೊಂಡು ಯೋಗದಂಡವನ್ನು ಕೈಯಲ್ಲಿ ಧರಿಸಿ **ಸೌಂದರ** (ರಾಜಪುತ್ರ)ನನ್ನು ನೋಡಬೇಕೆಂಬ ಲವಲವಿಕೆಯಿಂದ ಆ ಊರೊಳಗೆ ಬಂದು ಆ ಅರಸುಕುಮಾರನು ತಿರುವಾರೂರೇಶ್ವರನ ದೇವಾಲಯದಲ್ಲಿ ಭಗವತ್ಸೇವೆಗಾಗಿ ಹೋಗಿರುವದನ್ನು ತಿಳಿದು ಅಲ್ಲಿಗೆ ಹೋಗಿ ದೂರದಿಂದಲೇ ಕಾಂತಿಯುತನು, ಭೋಗಕಲಾಯುಕ್ತನು, ಶಿವನಾಮದಿಂದ ಜಿಂಹ್ವೆಯನ್ನು ದಣಿಸುವವನು, ಶಿವಪೂಜಾರತನು ಆದ **ಸೌಂದರ** (ನಂಬಿಯಣ್ಣ) ನನ್ನು ಕಂಡು ಸಾನಂದನಾಗಿ ವಿಸ್ಮಿತನಾದನು. ಆ ದೊರೆಯನ್ನು ನೋಡಿದೊಡನೆ ನಾನೇಕೆ ಕೈಮುಗಿಯಲಿಲ್ಲವೆಂದು ವ್ಯಸನಪಡುತ್ತ ಆ ಗುಡಿಯ ಪೌಳಿಯೊಳಗೆ ಪ್ರಯಾಣಾಯಾಸದಿಂದ ವಿಶ್ರಮಿಸಬೇಕೆಂದು ಮಲಗಲು ಸ್ವಲ್ಪ ಹೊತ್ತಿನಲ್ಲಿಯೇ ಸ್ವಪ್ನದಲ್ಲಿ ಪುರಾಣಪುರುಷನಾದ ಸದಾಶಿವನು ಚಾರಮನೇ ನನ್ನ ತನುಜನಾದ ನಂಬಿಯು ಯಾವ ಕಾರ್ಯದಲ್ಲಿಯಾದರೂ ಇರಲೊಲ್ಲನೇಕೆ ಆತನಿಗೆ ನೀನು ನಮಿಸು ಹೀಗೆ ಹೇಳಲು ಅಷ್ಟರಲ್ಲಿ ನಮ್ಮ ಯೋಗಿವೇಷದ ಅರಸು ತಟ್ಟನೆ ಕಣ್ದೆರೆದು ಸಾನಂದಾಶ್ಚರ್ಯಭಯಚಕಿತಹೃದಯನಾಗಿ ಮುಖಪ್ರಕ್ಷಾಲನಂಗೈದು ಉತ್ಸಾಹದಿಂದ ಹರಸುತನನ್ನರಸಲು ಆತನು ಸಮೀಪದಲ್ಲಿಯೇ ಶಿವಭಕ್ತರೊಡನೆ ಹೇಮಗಜಗಗಳಿಂದ ಆಟವಾಡುವದನ್ನು ಕಂಡು ಅಲ್ಲಿಗೆ ಹೋಗಿ ಆ ಭಕ್ತರೊಡನೆ ಆಟವಾಡಲು ಸೌಂದರನ ಹೊರ್ತಾಗಿ ನಮ್ಮ ನೂತನಯತಿ ಮೊದಲ್ಗೊಂಡು ಎಲ್ಲರೂ ಸೋಲಲು **ಚಾರಮ** ಭೂಪನು ಆಶ್ಚರ್ಯಪಡುತ್ತ **ನಂಬಿಯಣ್ಣ**ನ ಪಾದಕ್ಕೆರಗಲು ಆತನು ನೀನಾರೆಂದು ಕೇಳಿದನು. ಶಿವತನಯನೇ ನಾನು ನಿನ್ನ ಭಕ್ತಿಯ ಕೀರ್ತಿಯನ್ನು ತಿಳಿದು ಕುಡುಂಗಲೂರಿನಿಂದ ಬಂದೆನು ; ನಾನೇ ಚಾಮರಾಯನು ಹೀಗೆ ಚರಿತ್ರಲಲಾಮನು ಸಂತೋಷದಿಂದುಸುರಿದನು, **ಸೌಂದರ** ಭೂವರನು ಇದನ್ನು ಕೇಳಿದೊಡನೆ ಬಹಳ ಹರ್ಷಪಟ್ಟು ಅತಿಥಿನೃಪನಿಗೆ ಸನ್ಮಾನವನ್ನು ಮಾಡಿ ಆತನ ಘನತೆಗೆ ತಕ್ಕಂತೆ ಸಂತೈಸಿದನು. ಗಜಗಗಳನ್ನು ಒಡ್ಡುವಾಗ ನಾವೆಲ್ಲರೂ ತಪ್ಪುತ್ತಿರುವಾಗ ನಿಮ್ಮ ಆಟವು ತೃಪ್ತಿಕರವಾಗಿ ಪೂರೈಸಿತು ಇದು ಕೌತುಕವಾಗಿದೆ ಎಂದು ಸೌಂದರೇಶನಿಗೆ ಕಥಾನಾಯಕನು ಹೇಳಿದನು. ಆಗ ದೇವಕುಮಾರನು ಚಾರಮಕ್ಷಿತೀಶನೇ ನಾನು ಆಟದಲ್ಲಿ ಒಡ್ಡಿದ ಗಜಗಗಳನ್ನು ಲಿಂಗಗಳೆಂದು ನೆನೆದು ನನ್ನ ಕೈಯಲ್ಲಿರುವ ಗಜಗವನ್ನು ಪುಷ್ಪವೆಂದು ಭಾವಿಸಿ ಶಿವನಿಷ್ಠೆಯಿಂದ ಇಡುವದರಿಂದ ಆಟವು ಸುಗಮವಾಗುವದೆಂದು ರಹಸ್ಯದಲ್ಲಿ ತಿಳಿಸಿದನು. ಹೊಸತಾಗಿ ತಿಳಿದಮೇರೆಗೆ ಚರಿತ್ರನಾಯಕನು ಗಜಗದಾಟವನ್ನಾಡಲು ಆಟವು ಸುಖಕರವಾಗಿ ಪರಿಣಮಿಸಲು ಪುನಃ ನಂಬಿಯಣ್ಣನ ಚರಣಕ್ಕಾನತನಾದನು. ಮುಚ್ಚಂದೆಯಾಗಲು ಪುನಃ ಅಭವನ ಮಗನಾದ ನಂಬಿಯು

ಅತಿಥಿಪುಂಗವನನ್ನು ತನ್ನ ಮೈನೆರಳಿನಂತಿರುವ ಮನೋವಲ್ಲಭೆಯಾದ ಪರಿವಿ ನಾಚಿಯ ಮನೆಗೆ ಕರೆತಂದು ಸ್ನಾನಭೋಜನಾದಿಗಳನ್ನು ಪೂರೈಸಿ ಶಿವಗೋಷ್ಠಿಯಲ್ಲಿ ರಾತ್ರಿಯನ್ನೆಲ್ಲ ನಿಮಿಷವಾಗಿ ಕಳೆದನು.

ಪ್ರಾತಃಕಾಲವಲ್ಲಿ ಉಭಯ ಕ್ಷಿತಿಪರು ವರಶಿವಾಕ್ಷರಗಳನ್ನು ನೆನೆಯುತ್ತ ಒಬ್ಬರನ್ನೊಬ್ಬರು ವಂದಿಸಿ, ಶುಚಿರ್ಭೂತರಾದ ಬಳಿಕ **ಚಾರಮ** ದೊರೆಯು **ಸೌಂದರೇಶ**ನಿಗೆ ಕೈಮುಗಿದು ವಿನಯದಿಂದ ಪೊಡಮಟ್ಟು ದೇವಾ ನೀನು ನನ್ನ ಪಟ್ಟಣಕ್ಕೆ ಬಂದು ನನ್ನನ್ನು ಕಂಡು ಹೋಗಬೇಕು ಈ ಬಗ್ಗೆ ನನಗೆ ಪ್ರೀತಿಯಿಂದ ವಚನವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಅದಕ್ಕೆ ಸೌಂದರನು ಎಲೈ ಚೇರಾಧಿಪನೇ ನಿನ್ನ ಪುರಕ್ಕೆ ಬಿಜಯ ಮಾಡದಲೆ ನಾನು ಬೇರೆಡೆಯಲ್ಲಿ ಹೋಗುವದಿಲ್ಲವೆಂದು ಭಾಷೆಯನ್ನು ಕೊಟ್ಟನು. ಬಳಿಕ ಚರಿತ್ರಪುಂಗವನು **ನಂಬಿಯಣ್ಣ**ನಿಗೆ ಪುನಃ ನಮಸ್ಕರಿಸಿ ಆತನ ಅಪ್ಪಣೆಯನ್ನು ತಕ್ಕೊಂಡು ತನ್ನ ಊರಿಗೆ ಬಂದು ಪ್ರಜಾಪಾಲನ ದಕ್ಷನಾಗಿ ಶಿವಸೇವೆಯಲ್ಲಿ ಕಾಲವನ್ನು ಕಳೆಯುತ್ತಿದ್ದನು.

ಇತ್ತ ತಿರುವಾರೂರಲ್ಲಿ **ನಂಬಿಯಣ್ಣ**ನು ಶಿವಕಾಲಕ್ಷೇಪವನ್ನು ಮಾಡುತ್ತಿರಲೊಂದು ದಿನ ಶಿವಸಂಕೇತದಂತೆ ನಮ್ಮ ಚರಿತ್ರಪುರುಷನಲ್ಲಿಗೆ ಹೋಗಬೇಕೆಂಬ ಕಾಂಕ್ಷೆಯಾಯಿತು. ತನಗೆ ಸಾಕಷ್ಟು ಪರಿವಾರದಿಂದ **ಸೌಂದರನು** ಹೊರಟು ತಿರುನಾಗಪಟ್ಟಣಕ್ಕೆ ಬಂದು ಅಲ್ಲಿಯ ಶಿವಲಿಂಗಗೃಹಕ್ಕೈದಿ ಮನದಣಿವಂತೆ (ಭವರೋಗ) ವೈದ್ಯನಾದ ಶಂಕರನನ್ನು ಅರ್ಚಿಸಿ ಮಹಾದೇವನೇ ನಾನು **ಚಾರಮನ** ಪುರಕ್ಕೆ ಹೊರಟಿರುವೆನು ; ನನಗೊಂದು ರೆಕ್ಕೆಯ ಕುದುರೆಯನ್ನು ಮತ್ತು ಬೆಳ್ಗೊಡೆಯನ್ನು ದಯಪಾಲಿಸಬೇಕೆಂದು ನಿವೇದಿಸಿದನು. ಆಗ ಭಕ್ತಾಭೀಷ್ಟನಾದ ಮೃಡನು ತನ್ನ ತನಯನಿಗೆ ಗರುಡನವೇಗವನ್ನೂ ಗಾಳಿಯ ಶಕ್ತಿಯನ್ನು ಮೀರುವ ಪಕ್ಷದವಾಜಿಯನ್ನು ಹಾಗೂ ಪ್ರಕಾಶಮಯವಾದ ಬೆಳ್ಗೊಡೆಯನ್ನು ಪ್ರೀತಿಯಿಂದ ಕರುಣಿಸಿದನು. ಮಾರ್ಗದಲ್ಲಿ ಬರುತ್ತ ಕೊಂಗು ದೇಶವನ್ನು ದಾಂಟಿ ಬರಬರುತ್ತ ಮಧ್ಯಮಾರ್ಗದಲ್ಲಿ ಘೋರಾರಣ್ಯವನ್ನತಿಕ್ರಮಿಸಿ ಕ್ರಮವಾಗಿ ಪ್ರಯಾಣ ಬೆಳಿಸುತ್ತ ಕುಡಂಗನೂರ ಹೊರಬದಿಯಲ್ಲಿ ಬರೋಣ ಅಲ್ಲಿರುವ ಪುಷ್ಪೋದ್ಯಾನ, ಕಬ್ಬಿನತೋಟ. ಭತ್ತದ ಚಲ್ವಾದ ಬೆಳಸು, ತರತರದ ಹಣ್ಣಿನ ತೋಟಗಳ ಸಾಲು ಈ ತೆರದ ವನದೇವತೆಯ ಸೊಬಗನ್ನು ನೋಡಿ ಸಂತೋಷಪಡುತ್ತ ಅಲ್ಲಿ ಕಂಗೊಳಿಸುವ ಶಿವಾಲಯಗಳ ಅಲಂಕೃತವಾದ ಗೋಪುರಗಳನ್ನು ಹಾಗೂ ಗಾಳಿಯಲ್ಲಿ ಸುಳಿಯುತ್ತಿರುವ ಬಹು ಎತ್ತರವಾದ ವೃಷಭಧ್ವಜಗಳನ್ನು ಕಂಡು ಆನಂದಪಟ್ಟು ಆ ಊರ ಅಗಸೆಬಾಗಿಲಕ್ಕೆ ಬರುತ್ತಿರುವದನ್ನು ಅಲ್ಲಿಯ ಚಾರರು ಓಡಿಹೋಗಿ ತಮ್ಮ ಅರಸನಿಗೆ **ಸೌಂದರೇಶ**ನ ಆಗಮನವನ್ನು ತಿಳುಹಿ

ಸಲು ಆತನು ಹರ್ಷಪಟ್ಟು ಕೂಡಲೆ ಕರಿತುರಗಪದಾತಿ ಮುಂತಾದ ಸಕಲ ಸನ್ನಾಹದೊಡನೆ ಬಂದು ಮಂಗಲವಾದ್ಯಗಳು ಭೋರ್ಗರೆಯುತ್ತಿರುವಾಗ **ನಂಬಿಯಣ್ಣ**ನನ್ನು ಎದುರ್ಗೊಂಡು ತನ್ನರಮನೆಗೆ ಕರೆದುಕೊಂಡು ಬಂದು ಉಚಿತವಾದ ಸನ್ಮಾನವನ್ನು ಮಾಡಿ ಪಾದಪ್ರಕ್ಷಾಲವನ್ನು ಮಾಡಿ ಪಾದೋದಕವನ್ನು ಶಿರಸ್ಸಿನಲ್ಲಿ ಧರಿಸಿ ವಿನಯವಾಗಿ ಮಣಿದು ಕುಶಲ ಪ್ರಶ್ನೆಗಳನ್ನು ಮಾಡಿ ಯೋಗಕ್ಷೇಮವನ್ನು ಕೇಳಿ ಮತ್ತು ಬಿನ್ನವಿಸಿ ಮಧ್ಯಾಹ್ನವಾಗುತ್ತಲೆ ಭೋಜನವನ್ನು ಪೂರೈಸಿ **ಸೌಂದರ**ನನ್ನು ಬೇರೊಂದು ಸೌಧಕ್ಕೆ ಕಳಿಸಿ ಅಲ್ಲಿ ಆತನನ್ನು ಓಲಗಿಸುವದಕ್ಕೆ ಕುಶಲರಾದ ವಿಲಾಸಿನೀಸಮೂಹವನ್ನು ಕಳಿಸಲು ಆತನು ಸಂಗೀತ ಸಾಹಿತ್ಯ ವಿನೋದದಿಂದ ಶಿವಮುಗ್ನನಾಗಿ ವಿಹರಿಸಿದನು.

**ಸಂ**ಭ್ರಮದಿಂದ **ಚಾರಮ**ನೃಪನೊಡನೆ **ಸೌಂದರ**ನು ಸಾನಂದನಾಗಿರುಲೊಂದು ದಿನ ಮುಂಜಾವಿನಲ್ಲಿ ಅಲ್ಲಿಯ ಉಪವನದ ಪ್ರಸಾದವನ್ನೇರಿ ಸಮೀಪದಲ್ಲಿರುವ **ತಿರುವಂಜಕಳೇಶ್ವರ** ಮಂದಿರದ ಕನಕಕಲಶಗಳನ್ನು ನೋಡಿ ಬಹು ಸಂತೋಷಪಟ್ಟು ಶೀಘ್ರವಾಗಿ ಅಲ್ಲಿಗೆ ಹೋಗಿ ಸಕ್ರಮವಾಗಿ ಭಸ್ಮರುದ್ರಾಕ್ಷಗಳನ್ನು ತಳೆದು ಅತುಲೋತ್ಸಾಹ ಭಕ್ತಿಯಿಂದ ಪೂಜಿಸಿ ತಿರುಪಾಡುಗಳಿಂದ ಪಾಡಿ ನಲಿದಾಡಿ ಆನಂದಾತಿಶಯದಲ್ಲಿ ಲೋಲಾಡಿದನು. ನಿಜಭಕ್ತನಾದ ತನ್ನ ಮಗನ ಭಕ್ತಿರಸದಿಂದ ಪ್ರೀತನಾದ (ಸರ್ವಸೂತ್ರಧಾರನಾದ, ಮನೋನಾಥನಾದ) ನೀಲಗ್ರೀವನು ಇಂದ್ರನ ಐರಾವತವನ್ನು **ಸೌಂದರ**ನೆಡೆಗೆ ಕಳಿಸಿದನು. **ನಂಬಿಯಣ್ಣ**ನು ದೇವೇಂದ್ರನ ಆನೆಯನ್ನು ಕಂಡೊಡನೆ ಪೂರ್ವದಲ್ಲಿ ಸರ್ವೇಶ್ವರನು ಕೈಲಾಸದಲ್ಲಿ ತನಗೆ ತಿಳಿಸಿದ ಕುರುಹನ್ನು ಸ್ಮರಿಸಿ ಪರಮಾನಂದಯುಕ್ತನಾಗಿ ತಟ್ಟನೆ ಸುರಗಜವನ್ನು ಅಡರಿದನು. **ಸೌಂದರನು** ದಂತಿಯನ್ನಾರೋಹಣ ಮಾಡಿದೊಡನೆ ಅದು ಆಕಾಶಕ್ಕೆ ಜಿಗಿಯುವದನ್ನು ನೆರೆದಜನರು ನೋಡಿ ಕೌತುಕಪಟ್ಟರು.

**ಸೌಂದರೇಶನ** ಸಂಗಡಿಗನಾಗಿ ಆತನೊಡನೆ ಯಾವಾಗಲೂ ಕೈಯಲ್ಲಿ ನಿಶಾನೆಯನ್ನು ಹಿಡಿದುಕೊಂಡು ಆತನ ಮುಂಭಾಗದಲ್ಲಿಯೆ ನಲಿದಾಡುವ **ಕುರುಂಬ**ನೆಂಬ ಭೂವರನು **ಸೌಂದರನ** ಅಪೂರ್ವಗತಿಯನ್ನು ಕಂಡು ಬೆರಗಾಗಿ ಪುರಜನರು ನೋಡನೋಡುವಷ್ಟರಲ್ಲಿಯೆ ಹಸ್ತದಲ್ಲಿ ಹಿಡಿದ ವೃಷಭಧ್ವಜದೊಡನೆ ಅಂತರಿಕ್ಷಕ್ಕೆ ಪುಟನೆಗೆದು **ಸೌಂದರೇಶನ** ಮುಂದೆಯೇ ಧ್ವಜವನ್ನೆತ್ತಿಕೊಂಡು ಹೋಗುತ್ತಿದ್ದನು.

ಇದೆಲ್ಲವನ್ನು **ಸೌಂದರ**ನ ಮಂತ್ರಿಯಾದ ತುಂಬುರನೆಂಬವನು ತಾನು ಭೂಮಿಯಲ್ಲಿ ಉಳಿದುದಕ್ಕಾಗಿ ದುಃಖಾಕುಲನಾಗಿ ಕಂಗೆಟ್ಟು ಕುಡುಂಗನೂರಿಗೆ ಬಂದು ರಾಜಮಂದಿರವನ್ನು ಹೊಕ್ಕು ಸ್ನಾನಕ್ಕೆ ಹೊರಟಿರುವ **ಚಾರಮ**

ಭೂಪತಿಯನ್ನು ಕಂಡು **ಸೌಂದರೇಶನ** ಅಗಲುವಿಕೆಯನ್ನು ವಿವರಿಸಿದನು. ಕೂಡಲೆ ನಮ್ಮ ಕಥಾನಾಯಕನು ಲಗುಬಗೆಯಿಂದ ತನ್ನ ಹನ್ಮ್ಯವನ್ನು ಬಿಟ್ಟು ಹೊರಗೆ ಬಂದು ಶಿವ, ಶಿವ, ಹರಸುತನು ನನಗೆ ಹೇಳದೆ ಹೋದನೆ ಎಂದೆನ್ನುತ್ತ **ಸೌಂದರನು** ಕೊಟ್ಟ ಅಮೋಘವಾದ ಅಶ್ವವನ್ನು ತರಿಸಿ ಆಹಯಾರೋಹಣ ವನ್ನು ಮಾಡಿ ಪವನವೇಗವನ್ನತಿಕ್ರಮಿಸುವ ವೇಗದಿಂದ ಗಗನಕ್ಕೆ ಹಾರಿ ರಜತ ಗಿರಿ ಮಾರ್ಗದಲ್ಲಿ ಆ ರೆಕ್ಕೆಯ ಕುದುರೆಯೊಡನೆ ಸುರಪನಕರಿಯನ್ನು ಕೂಡಿ ಕೊಂಡನು.

**ದಾ**ರಿಯಲ್ಲಿ ಶರಣೆಯಾದ **ಕಾರಿಕಾಲಮ್ಮೆಯು** ತಲೆಯಿಂದಲೆ ಕೈಲಾಸಗ ಮನಮಾಡುವದನ್ನು ನೋಡಿ **ಸೌಂದರ-ಚಾರನು** ಧರಣೀಶರು ಶಿವಲೀಲೆಯು ವಿಚಿತ್ರವೆಂದು ವಿಸ್ಮಯಾನಂದೋತ್ಸಾಹ ಯುಕ್ತರಾದರು. ಈ ರೀತಿಯಾಗಿ ಕೈಲಾಸದ ಮಹಾದ್ವಾರಕ್ಕೆ ಬಂದು **ಸೌಂದರ ಚಾರಮರು** ಗಜತುರಗದಿಂದಿಳಿ ದರು. ಇವರಿಬ್ಬರ ಮುಂದೆ **ಕುರುಂಬ**ನು ವೃಷಭಧ್ವಜವನ್ನು ಎತ್ತಿ ಹಿಡಿ ದಿದ್ದನು ಈ ಮೂವರು ಸಂಭ್ರಮದಿಂಡ ಆ ಮಹಾದ್ವಾರವನ್ನು ಪ್ರವೇಶಮಾ ಡುತ್ತಿರುವಾಗ ನಂದಿಮಹಾಕಾಳರು ಚರಿತ್ರಪುರುಷನನ್ನು ತಡೆದು **ಚಾರಮನೇ** ನಿನಗೆ ಉಪದೇಶವಿಲ್ಲದ್ದರಿಂದ ನೀನು ಒಳಗೆ ಹೋಗುವದುಚಿತವಲ್ಲೆಂದು ನಿಲ್ಲಸಿ ದರು. ಆಗ **ನಂಬಿಯಣ್ಣನು, ಚಾರಮನೇ** ನಾನು **ಕುರುಂಬ**ನೊಡನೆ ದೇವತಾಸಾರ್ವಭೌಮನ ಸನ್ನಿಧಿಗೆ ಹೋಗಿ ನಿನ್ನನ್ನು ಕರಿಸಿಕೊಳ್ಳುವೆನೆಂದು ಹೇಳಿ ಆತನನ್ನು ಸಂತೈಸಿದನು. ಆ ದಿವ್ಯಸ್ಥಾನದಲ್ಲಿ ಜಯ ಜಯ ಧ್ವನಿಯು, ಮಂಗಲರವವು, ಸದ್ಗೀತ ಸಂಗೀತನಾದವು, ತುಂಬುರರ ಇಂಪಾದ ಗಾಯನವು, ಅಲ್ಲಿರುವ ಪುಣ್ಯಾತ್ಮರ ಮನಸ್ಸನ್ನು ಸೆಳೆಯುತ್ತಿರುವದನ್ನು ಕಂಡು ಪ್ರಮಥಾಧಿಪ ನನ್ನು ದೂರದಿಂದಲೇ **ಸೌಂದರನು** ನೋಡಿ ತಲೆಬಾಗಿಸಿ ಕೈಮುಗಿದು ಪುನಃ ಪುನಃ ಮಣಿದು ಮಹಾಪ್ರಭುವೇ **ಚಾರಮನಿಗೆ** ಉಪದೇಶವಿಲ್ಲೆಂದು ನಂದಿನಾ ಥನು ಆತನನ್ನು ತಡೆದಿರುವನು ; ನೀನು ಕರುಣಿಸು ಹೀಗೆ **ಸೌಂದರನು** ಬಿನ್ನ ೨ಸಲು ದಯಾನಿಧಿಯಾದ ಶಂಕರನು ನಂದೀಶ್ವರನನ್ನು ಕರೆದು **ಚಾರಮನಿಗೆ** ಉಪದೇಶವನ್ನು ಮಾಡೆಂದಾಜ್ಞಾಪಿಸಿದನು. ಉಪದೇಶವನ್ನು ಪಡೆದು ಪುನೀ ತನಾದ ಚರಿತ್ರಲಲಾಮನು ಶಿವನ ಒಡ್ಡೋಲಗಕ್ಕೆ ಬಂದು ಮೈಯ್ಯಿಕ್ಕಿ ಆನಂದಾ ಸ್ರುಗಳು ಹರಿಯುತ್ತಿರುವಾಗ ಪರಮಾತ್ಮನನ್ನು ರೋಮಾಂಚನಗೊಂಡು ಸ್ತುತಿಸಿ ಹರ್ಷಪಡುತ್ತ **ಸೌಂದರ**ನ ಮಗ್ಗಲಲ್ಲಿ ಕುಳಿತುಕೊಂಡನು **ಕಾರಿಕಾಲಮ್ಮೆಯು** ತಮಗಿಂತ ಮುಂಚಿತವಾಗಿಯೇ ದಿವ್ಯಸನ್ನಿಧಿಯಲ್ಲಿ ಬಂದಿರುವದನ್ನು ಕಂಡು **ಸೌಂದರ ಚಾರಮರು** ಅಚ್ಚರಿಪಟ್ಟರು. ಭಕ್ತಚಿಂತಾಮಣಿಯಾದ ಗೌರೀರಮ ಣನು **ಕಾರಿಕಾಲಮ್ಮೆಗೂ, ಕುರುಂಬರಿಗೂ,** ನಮ್ಮ ಚರಿತ್ರನಾಯಕನಾದ

**ಚಾರಮನಿಗೂ** ಗಣಪದವಿಯನ್ನು ಕರುಣಿಸಿ **ಸೌಂದರನಿಗೆ** ಮುನ್ನಿನ ಪುಷ್ಪದತ್ತ ಪದವಿಯನ್ನು ಕೊಟ್ಟನು.

**ಈ** ಆಖ್ಯಾಯಿಕೆಯಿಂದ ಮಾನವನು ಎಂಥ ಪಂಡಿತನಿರಲಿ, ವಿದ್ವಾಂಸನಿರಲಿ, ಜ್ಞಾಣನಿರಲಿ, ಬಹುಶ್ರುತನಿರಲಿ, ತಕ್ಕ ಗುರೂಪದೇಶವಿಲ್ಲದೆ, ಆ ವರಗುರು ಕಾರುಣ್ಯವಿಲ್ಲದೆ ಪರಮನಸಾನ್ನಿಧ್ಯವು ದುರ್ಲಭವೆಂದು ಪಾಠಕಮಹಾಶಯರಿಗೆ ಹೊಳೆಯದೆ ಇರಲಾರದು.

**ಸಾ**ಕಾಂತರವು ಚೇರಮರಾಯನು ಸೌಂದರನನ್ನು ಸಂದರ್ಶಿಸಬೇಕೆಂದು ಬೇರೆವೇಷದಿಂದ ತಿರುವಾರೂರಿಗೆ ಬಂದು ಅಲ್ಲಿಯ ಮುಖ್ಯ ಶಿವಮಂದಿರಕ್ಕೆ ಬಂದು ಮಹಾದೇವನಿಗೆ ಮಣಿದು ವಿಶ್ರಮಿಸುತ್ತಿರುವಾಗ ಕಾಮಶಾಸ್ತ್ರದಲ್ಲಿ ಹೆಚ್ಚೆಚ್ಚಾಗಿ ಭೋಗಲಂಪಟರಾದವರು ಯಾವ ಚಿನ್ಹಗಳಿಂದ ಯುಕ್ತರಾಗಿರುವರೋ ಅವೆಲ್ಲಾ ಲಕ್ಷಣಗಳಿಂದ ಕೂಡಿದ ಸೌಂದರನನ್ನು ಲಕ್ಷಿಸಿದನು ; ಆಗ ಆತನು ಜೂಜಾಡುತ್ತಿದ್ದನು ; ಅಹಹಾ, ಶಿವನನ್ನು ಒಲಿಸಿದರೂಪವು ಇದೆಯೋ ? ಶಿವ ಶಿವಾ ಇದೆಲ್ಲವೂ ಆ ಜಗದಾಣ್ಮನಿಗೆ ಮಾತ್ರ ವೇದ್ಯವು ಎಂದು ಸ್ವಲ್ಪ ನಕ್ಕು ವಿಶ್ರಮಿಸಬೇಕೆನ್ನುವಷ್ಟರಲ್ಲಿಯೆ ಸ್ವಲ್ಪ ತೂಕಡಿಕೆಯು ಬರಲು ಆಗಲೇ ಕನಸಿನಲ್ಲಿ ವಲ್ಮೀಕಿನಾಥನನ್ನು ಕಂಡು ಥಕ್ಕನೆ ಕಣ್ದೆರೆದು ಅಕ್ಷಿಗಳನ್ನೊರಸಿಕೊಂಡು ತಟ್ಟನೆ ಸೌಂದರನಿದ್ದಲ್ಲಿಗೆ ಬಂದು ನವರತ್ನದ ಹಾರವನ್ನು ಕಾಣಿಕೆಯಾಗಿ ಆತನಿಗೆ ಕೊಟ್ಟು ನಮಸ್ಕರಿಸಿದನು. ಪೂರ್ವೋಕ್ತರೀತಿಯಲ್ಲಿ ಸುವರ್ಣಗಜಗದ ಆಟವು ನಡೆಯಲು ಅದರ ಗುಟ್ಟನ್ನು **ಸೌಂದರ**ನಿಂದ ತಿಳಿದು ಲಿಂಗಾವಧಾನಿಗಳ ಮಹಿಮೆಯನ್ನು ತಿಳಿಯುವದು ನನ್ನಳವಲ್ಲವೆಂದನು. **ಸೌಂದರನು** ಅತಿಥಿಗೆ ನೀವು ಯಾವ ದೇಶದವರೆಂದು ಕೇಳೋಣ ನಾನು ಮಲೆಯಾಳದೇಶದ ಒಡೆಯನು ನನ್ನ ಹೆಸರು ಚೇರಮಾಂಕನು ನಿಮ್ಮ ಸೇವೆಗೆ ಬಂದಿರುವೆನು ನಿಮ್ಮನ್ನು ನೋಡಿ ಈ ವಿಶೇಷ ಕಾಮಲಂಪಟನಿಗೆ ಪರಮಾತ್ಮನು ಸಂತೋಷಪಡುವನೇ ಎಂದು ನಗುತ್ತಿರುವ ಸಮಯದಲ್ಲಿ ನಾನು ಆ ಗುಡಿಯಲ್ಲಿದ್ದಾಗ ಕನಸಿನಲ್ಲಿ ಉಮಾವರನಾದ ವಲ್ಮೀಕಿನಾಥನು ನನಗೂ ನಂಬಿಗೂ ಭೇದವಿಲ್ಲೆಂದು ಅಪ್ಪಣೆ ಮಾಡಿದನು. ಶಿವಲಿಂಗಾರ್ಪಿತಾವಧಾನಪರಿಣತನು ಯಾವ ರೀತಿಯಲ್ಲಿದ್ದರೇನು ಅವನು ಆಡಿದುದೇ ಮಂತ್ರವು ಅವನ ನಡೆಯೇ ವಿಹಿತವು ; ಸಕಲ ಭೋಗೋಪಭೋಗವನ್ನು ಲಿಂಗಮುಖಾಂತರವಾಗಿಯೇ ಸ್ವೀಕರಿಸುವನು : ಇದೆಲ್ಲವನ್ನು ಭ್ರಾಂತನಾದ ನಾನು ಹ್ಯಾಗೆತಾನೆ ತಿಳಿಯುವೆನೆಂದು ಚೇರಮನು ನಂಬಿಯನ್ನು ಕೊಂಡಾಡಿದನು. ಆಗ **ಸೌಂದರ**ನು **ಚೇರಮ**ನನ್ನು ಸಂತೈಸಿ ಸ್ನಾನಮಾಡಿಸಿ ಅರ್ಪಿತಕ್ಕೆ ಕೂತಾಗ ಅತಿಥಿಯು ಹಾಲನ್ನುಣ್ಣದಿರಲು ಅದರ ವ್ರತವೇನೆಂದು ಆತನನ್ನು ಕೇಳಲು ಅದಕ್ಕೆ ಚರಿತ್ರಪುರುಷನು ಅಯ್ಯಾ ಹಿಂದಕ್ಕೆ ವಾಘ್ರಪಾದ

ಮುನಿಯು ತಪಸ್ಸಿನಿಂದ ಗಿರಿಜಾಪತಿಯನ್ನೊಲಿಸಿ ಪರಶಿವನ ನಾಟ್ಯವನ್ನು ಕಂಡು ಆತನ ಪಾದವನ್ನೀಕ್ಷಿಸಿ ಸುಕೃತಿಯಾದನು ; ಆ ಮಹಿಮನ ಪಾದಾರವಿಂದವನ್ನು ನೋಡದಹೊರ್ತು ನಾನು ಪಾಲನ್ನು ತೆಗೆದುಕೊಳ್ಳುವದಿಲ್ಲವೆಂದು ಹೇಳಿದನು. ಅದಕ್ಕೆ ಶಿವಸುತನು ಇದಾವ ದೊಡ್ಡಕೆಲಸವೆಂದು ಹೇಳಿ ಹೊನ್ನಿನತಾಳಗಳನ್ನು ಕೈಯ್ಯಲ್ಲಿ ಹಿಡಿದು ವಲ್ಮೀಕಿನಾಥನಾಲಯಕ್ಕೆ ಬಂದು ಭಕ್ತಿರಸಾವೇಶದಿಂದ ಭಗವಂತನನ್ನು ಪ್ರಾರ್ಥಿಸಲು ವಿಶ್ವಪತಿಯು ನಿನ್ನಿಷ್ಟವೇನೆಂದು ಕೇಳಲು ಕೇರಳಾಧಿಪನು (ಅಂದರೆ ಚೇರಮನು) ಮಾಡುವ ಪೂಜಾಕಾಲದಲ್ಲಿ ತಾಂಡವಲೀಲೆಯನ್ನು ಕರುಣಿಸಬೇಕೆಂದು ಸೌಂದರನು ಬೇಡಿಕೊಳ್ಳಲು ಅದಕ್ಕೆ ಈಶನೊಪ್ಪಿದನು. ತನ್ನ ಮನಬಯಕೆಯು ಈಡೇರಲು ಚೇರಮನು ಸೌಂದರನೊಡನೆ ಕೆಲವು ದಿವಸ ಸುಖಿಸಿದನು. ಈ ಪರಿಯಾಗಿ ಶಿವಾರ್ಪಣಭಾವದಿಂದ ಕೆಲವುಕಾಲವು ಗತಿಸಲು ಚೇರಮನು ಹರತನಯನಿಗೆ ವಂದಿಸಿ ನೀನು ಶಿವಾಜ್ಞೆಯಿಂದ ಕೈಲಾಸಕ್ಕೆ ಹೋಗುವ ವೇಳೆಯಲ್ಲಿ ನನ್ನ ನಗರಕ್ಕೆ ಬಂದು ನನಗೆ ತಿಳಿಸಿ ಹೋಗಬೇಕೆಂಬ ಬಗೆಗೆ ನಂಬುಗೆಯನ್ನು ಆತನಿಂದ ಪಡೆದು ತನ್ನ ಮಲೆಯಾಳ ದೇಶಕ್ಕೆ ಸಾಗಿ ತನ್ನ ಪುರಕ್ಕೆ ಬಂದು ಶಿವಸೇವಾನಿರತನಾಗಿದ್ದನು. ಕೆಲವು ಕಾಲಾನಂತರ ಸೌಂದರನು ಚೇರಮನ ಪುರಿಗೆ ಬರಲು ಆತನು ಊರನ್ನೆಲ್ಲ ಶೃಂಗರಿಸಿ ಅತಿಥಿಯನ್ನು ಸನ್ಮಾನಿಸಿದನು. ಆಗ ಸೌಂದರನು ಭಕ್ತಿ-ಸಮ್ಯಗ್-ಜ್ಞಾನ-ವೈರಾಗ್ಯಗಳು ಅಳವಟ್ಟು ರಸಭಾವಗಳು ಕಲೆಯಲು ಶಿವಕೃಪೆಯಾಗುವದೆಂದು ಚೇರಮನಿಗೆ ಹೇಳಿದನು ನಂತರ ಸೌಂದರನು ತಿರುವಂಜಕಳೇಶ್ವರನನ್ನು ಪೂಜಿಸಿ ನಾನು ಕೈಲಾಸಕ್ಕೆ ಹೋದನೆಂದು ಚೇರಮನಿಗೆ ತಿಳಿಸೆಂದು ತುಂಬರನಿಗೆ ಹೇಳಿ ಐರಾವತವನ್ನೇರಿದನು. ಆಗ ತುಂಬರನು ಚೇರಮನಿಗೆ ನಡೆದ ವಿಷಯವನ್ನರುಹಿ ಸೌಂದರನಿಗಾಗಿ ಕೊಟ್ಟ ಅದ್ಭುತವಾದ ರೆಕ್ಕೆಯ ಕುದುರೆಯನ್ನು ಕೊಟ್ಟನು. ಆಗ ಚೇರಮನು ಭಸ್ಮಲೇಪನವೆಂಬ ವಜ್ರದಂಗಿಯನ್ನು ತೊಟ್ಟು ಶಿವಪಂಚಾಕ್ಷರಿಯೆಂಬ ಕಡಿವಾಣವನ್ನು ಹಿಡಿದು ರುದ್ರಾಕ್ಷಾಭರಣ ಭೂಷಿತನಾಗಿ ಆ ದಿವ್ಯಾಶ್ವವನ್ನೇರಿ ಭಕ್ತಿನಿಷ್ಠೆ ಎಂಬ ಸುಖಾಸನದ ಮೇಲೆ ಕುಳಿತು ತನ್ನ ಪುತ್ರಮಿತ್ರ ಸಮೂಹವಾದಿಯಾಗಿ ಅವರಿಗೆ ಸೂತ್ರಗಳನ್ನು ಹಿಡಿಯಲಿಕ್ಕೆ ಹಚ್ಚಿ ಅವರೊಡನೆ ತನ್ನ ಬಗಲಲ್ಲಿ ತಾನು ಬರೆದ ಶಿವನ ಕಾವ್ಯವನ್ನು ಇಟ್ಟುಕೊಂಡು ಆಕಾಶಕ್ಕೆ ಅಡರಲು ತುಂಬರಾದಿಯಾಗಿ ಪರಿಜನರು ಹಿಂಬಾಲಿಸಿದರು. ಗಗನ ಮಧ್ಯಮಾರ್ಗದಲ್ಲಿ ಸೌಂದರನೂ, ಚೇರಮನೂ ಕೂಡಿದರು- ಕೈಲಾಸದಲ್ಲಿ ಜಯಧ್ವನಿಯು ಮೊಳಗುತ್ತಿರುವಾಗ ಸಕಲರು ಸಾಂಬನ ಸನ್ನಿಧಿಯನ್ನು ಹೊಂದಿ ಪರಮಾತ್ಮನನ್ನು ಸ್ತುತಿಸಿ ಧನ್ಯರಾದರು. ಚೇರಮನು ತನ್ನ ಕಾವ್ಯವನ್ನು ಶಂಕರನಿಗೆ ನಿವೇದಿಸಲು ಪರಮಾತ್ಮನು ಸಂತೋಷಪಟ್ಟು ಆತನಿಗೆ ಗಣಾಧಿಪತ್ಯವನ್ನು ಅನುಗ್ರಹಿಸಿ ಮಿಕ್ಕವ

ರಿಗೆ ತನ್ನ ಸಾನ್ನಿಧ್ಯದಲ್ಲಿಯೇ ಅವರವರ ತಾರತಮ್ಯಾನುಗುಣವಾಗಿ ಸ್ಥಾನಗಳನ್ನು ಕರುಣಿಸಿದನು.



೭೦.

# ೭೦. ಕುರುಂಬರು.



ನಂಬಿಯಣ್ಣನ ಮನದೊಳಿಂಬಾಗೆ ಮುಂದೆ ಗುಡಿ । ಯಂ ಬಿಡದೆ
ಪಿಡಿದು ನಡೆದ ಪಿರುವಾಳವಿ ಕು । ರಂಬರೆಂ ಕೂರ್ತು ನಮಿಸುವೆನು ॥

[ಶ್ರೀ ನಿಜಗುಣರು]



ಘನೀಯವಾದುದೇ ಸರಿ ಸಜ್ಜನರ ಸಂಗವು ; ಪ್ರಶಸ್ತವಾದುದೇ ಅಹುದು ಶಿವಾನುಭವಿಗಳೊಡನಾಟವು ; ಇಷ್ಟವಾದುದೇ ಸತ್ಯ ಶಿವೈಕ್ಯರ ಕೂಟವು ; ಸ್ಪೃಹಣೀಯವಾದುದೇ ನಿಶ್ಚಯ ಲಿಂಗಾವಧಾನಿಗಳ ನೆರೆಯು. ಪುಣ್ಯಪರಿಪಾಕದಿಂದಲೇ ಅಂತಪ್ಪ ಮಹಾತ್ಮರ ಕಲಿಯುವಿಕೆಯು ; ಹೀಗೆನ್ನುತ್ತ ಸದ್ಗತಿಯನ್ನು ಬಯಸುವಾತನು ಸುಮ್ಮನಿರಬಹುದೇ ? ಅಲ್ಲಲ್ಲ. ನೀತಿಯನ್ನವಲಂಬಿಸುತ್ತ, ಸದಾಚಾರವನ್ನಾಚರಣೆಯಲ್ಲಿ ತರುತ್ತ ಸನ್ಮಾರ್ಗರತರನ್ನರಸುತ್ತ, ಶಿವಾನುರಾಗಿಗಳನ್ನು ಹಂಬಲಿಸುತ್ತ ತಡಕಿ ಶಿವಮಾನಸಚಿತ್ತನಾಗಿ ಚಿತ್ತಜಾರಿಯನ್ನು ಸಹಜ ಪ್ರೇಮದಿಂದ ಅನವರತವೂ ನೆನೆಯುತ್ತಿದ್ದರೆ ಆ ಗುಣನಿಧಿಯ ಕಾರುಣ್ಯದಿಂದ ಪರಶಿವಸಾಮೀಪ್ಯಸಾಧನೆಯು ಯಾವದಾದರೊಂದು ತೆರದಿಂದ ದೊರಕುವಂತೆ ತನ್ನಲ್ಲಿಯೇ ಜನಜೀವನೆನಿಸುವ ಮೃಡನ ಕೃಪೆಯಿಂದ ಒಂದಿಲ್ಲೊಂದು ಬಗೆಯು ಸ್ಫುರಿಸುವದು.

ಅಪ್ರತಿಮ ಬಲಯುತನಾದ ಶಂಕರನು ಶರಧಿಮಥನಕಾಲದೊಳುದಯಿಸಿದ ಭೀಕರವಾದ ವಿಷದಿಂದ ಪ್ರಪಂಚವೆಲ್ಲವೂ ನಾಶವಾಗಬಾರದೆಂದು ತನ್ನ

ಕಂಠದಲ್ಲಿ ಧರಿಸಬೇಕೆಂದು ಆ ಗರಳವನ್ನು ಅಂಗೈಯಲ್ಲಿ ತೆಗೆದುಕೊಂಡು ಅದರಲ್ಲಿ ತನ್ನ ರೂಪವನ್ನು ಕಂಡು ಹೊರಗೆ ಬಾರೆನಲು ಆ ಪ್ರತಿಬಿಂಬದಲ್ಲಿ ಜೀವಕಳೆ ದುಂಬಿ ಹೊರಗೆ ಬರಲು ಆ ಚಲುವ ವ್ಯಕ್ತಿಗೆ ಹೂವುಗಳನ್ನು ತಂದೊಪ್ಪಿಸುವ ಕಾರ್ಯವನ್ನು ನಿಯಮಿಸಿ ಆತನಿಗೆ ಪುಷ್ಪದತ್ತನೆಂದು ಕರೆದನು. ಹೀಗೆ ಸುರಂಗಮಹಾಕವಿಯು ವಿವರಿಸುವನು. ಆದರೆ ಶಿವಕವಿಬೊಮ್ಮರಸನು ಪುಷ್ಪದತ್ತನ ಉತ್ಪತ್ತಿಯನ್ನು ಬೇರೊಂದು ಪರಿಯಾಗಿ ಹೇಳಿರುವನು :—ಗಿರಿಜಾಕಲ್ಯಾಣ ಸಮಯದಲ್ಲಿ ಪಾವನನಾದ, ನಿಸ್ಸಂಗನಾದ ಪರಮಾತ್ಮನು ಕನ್ನಡಿಯಲ್ಲಿ ತನ್ನನ್ನು ನೋಡಿಕೊಂಡು ಆ ಮೂರ್ತಿಗೆ ಬಾರೆನಲು ಅಂದರೆ ಹೊರಗೆ ಕರೆಯಲು ಆ ರೂಪೇ ಸತ್ಯಸಂಕಲ್ಪನ ಇಚ್ಛಾಮಾತ್ರದಿಂದ ಆಕಾರವನ್ನು ತಾಳಿ ಮುಂದೆ ಬಂದು ನಿಲ್ಲಲು ಆ ಸುಂದರಮೂರ್ತಿಗೆ ಪುಷ್ಪದತ್ತನೆಂದು ಅಭಿಧಾನವಿತ್ತು ಹೂವಿನ ಕಾಯಕವನ್ನು ಹಚ್ಚಿದನು.

ಮೇಲೆ ಉದಹರಿಸಿದ ಗಣೇಶನೇ ವಿಧಿವಶನಾಗಿ ಭೂಮಿಗವತರಿಸಿ ಸುಂದರನಾದುದರಿಂದ ಸೌಂದರನೆಂದು ಕರೆಯಲ್ಪಟ್ಟು, ಷಡ್ವಿಕಾರರಹಿತನಾದ ಶಿವನಿಂದ ನಂಬುಗೆಯನ್ನು ಪಡೆದು ಬಂದುದರಿಂದ ನಂಬಿಯಣ್ಣನಾಮದಿಂದೊಪ್ಪುತ್ತ ಈಶ್ವರಲೀಲೆಯಿಂದ ಅರಸೊತ್ತಿಗೆಯನ್ನು ಪಡೆದು ಪರಮಶೈವನಾಗಿ ಧರಣಿಯಲ್ಲಿರುವ ದೇವಾಲಯಗಳಿದ್ದೆಡೆಗೆ ಹೋಗಿ ಸದಾಶಿವನನ್ನು ಸಾನಂದನಾಗಿ ಪೂಜಿಸಿ ತಿರುಪಾಡುಗಳಿಂದ ಪಾಡಿ ನಿತ್ಯವೂ ಪಡಿಹೊನ್ನನ್ನು ಆ ಮಹಿಮನಿಂದ ಪಡೆದು ತನ್ನ ಐಹಿಕಭೋಗಕ್ಕೂ ಮಹೇಶ್ವರರಿಗೂ ಪರಿಜನರಿಗೂ ಯಥೇಚ್ಛವಾಗಿ ಸೂರೆಗೊಡುತ್ತ ವಿಲಾಸಿನಿಯ ಸಂಗದಲ್ಲಿದ್ದರೂ ಅದರಿಂದಾಗುವ ರತಿಯನ್ನು ಪರಮನಿಗೆ ನಿವೇದಿಸುತ್ತ ಸುಖಿಯಾಗಿದ್ದನು.

ಚೋಳಮಂಡಲದಲ್ಲಿ ಪೆರಮಳವಿ ಎಂಬ ಪುರವು ಭಗವದ್ಭಕ್ತರಿಂದ, ಸಕಲ ವಿಭವದಿಂದ ರಂಜಿಸುತ್ತಿತ್ತು, ಆ ಪುರದ ದೊರೆಯು ಕುರುಂಬನೆಂಬವನು. ಸದ್ಗುಣಿಯಾಗಿ ಭಕ್ತದೇಹಿಯಾದ, ಜಗತ್ಪ್ರಾಣನಾದ, ಶೂಲಿಯನ್ನು ಸೇವಿಸುತ್ತ· ಧರ್ಮಕ್ಕೆ ಚ್ಯುತಿಬಾರದಂತೆ ನಡೆಯುತ್ತ ತನ್ನ ಸೀಮೆಯನ್ನು ನಿಷ್ಕಲಂಕವಾಗಿ ಪಾಲಿಸುತ್ತ ಪ್ರಜರನ್ನು ಮಕ್ಕಳೋಪಾದಿಯಲ್ಲಿ ಕಾಣುತ್ತಿದ್ದುದರಿಂದ ಜನಸಮೂಹವು ಆ ಭೂನಾಥನನ್ನು ಹಾಡಿಹರಿಸುತ್ತ ತಮ್ಮ ಪ್ರಭುವಿಗೆ ಶಾಶ್ವತವಾದ ಶ್ರೇಯಸ್ಸುಂಟಾಗಲೆಂದು ನಿರಾಧಾರನಾದ ಈಶ್ವರನನ್ನು ಸ್ತುತಿಸುತ್ತಿದ್ದರು. ಶಿವಸಂಬಂಧಿಗಳೆನಿಸುವ ಶಿವಭಕ್ತರ ಪರಿಚರ್ಯದಿಂದ ಆತನಿಗೆ ಶಿವಗೋಷ್ಠಿಯಲ್ಲಿ ಮನವೆಳಸಿ ಸಮರ್ಥನಾದ ಸದ್ಭಕ್ತಪುಂಗವನನ್ನು ಆಶ್ರೈಸಬೇಕೆಂದು ಹವಣಿಸುತ್ತಿದ್ದನು. ಬರಬರುತ್ತ ಸಂಸಾರದಲ್ಲಿ ಹೇಯವು ಹುಟ್ಟಿ ವಿರತಿಭಾವವು ಅಳವಟ್ಟು ತನ್ನ ಭೂಮಿಯನ್ನು ಅಲ್ಲಿಯ ಚಾಣರಿಗೆ ನೀವೇ ನೋಡಿಕೊಳ್ಳಿರೆಂ

ದೊಪ್ಪಿಸಿ ಶಿವನನ್ನು ಮೆಚ್ಚಿಸಿದ ಸೌಂದರಕುಮಾರನ ಸತ್ಕೀರ್ತಿಯನ್ನು ತಿಳಿದು ಆ ನಂಬಿಯಣ್ಣನು ತಿರುವಾವಲೂರಿಂದ ವೈಭವದಿಂದ ಶಿವಕ್ಷೇತ್ರಗಳಿಗೆ ಹೊರಟಿರು ವನೆಂದು ವಾರ್ತೆಯನ್ನು ಕೇಳಿ ರಾಜನಿಗೆ ಸಲ್ಲುವ ಲಕ್ಷಣಗಳಿಂದ ಯುಕ್ತನಾಗಿ ಕಾಲುಗಳಲ್ಲಿ ಭಂಗಾರದ ಕಿರುಗೆಜ್ಜೆಯನ್ನು ಕಟ್ಟಿಕೊಂಡು ಬೆಲೆಯುಳ್ಳ ವಸ್ತ್ರಾಭರ ಣಗಳಿಂದ ಭೂಷಿತನಾಗಿ ಮನೋಹರವಾದ ಬಸವನ ಚಿತ್ರದಿಂದೆಸೆವ ನಿಶಾನೆ ಯನ್ನು ಕೈಯಲ್ಲಿ ಹಿಡಕೊಂಡು ಆ ಲಿಂಗಾರ್ಪಣಾನುಭವಿಶ್ರೇಷ್ಠನ ಕೈಕ ರ್ಯವನ್ನು ಮಾಡಿ ಗತಿಗಾಣುವೆನೆಂದು ನಿರ್ಧರಿಸಿ ಆಗಲೆ ಅಲ್ಲಿಗೆ ಬಂದು ದೂರದಿಂದಲೇ, ಅಲಂಕೃತವಾದ ಗಜವನ್ನೇರಿ ಮಂತ್ರಿಯಾದ ತುಂಬರ ಮುಂ ತಾದ ಮಿತಪರಿವಾರವೊಡನೆ ಬರುವ ಪುಣ್ಯಮೂರ್ತಿಯಾದ ಸೌಂದರೇಶನನ್ನು ಕಣ್ತುಂಬಾ ನೋಡಿ ಹರ್ಷಪಟ್ಟು ಮೈಯೆಲ್ಲ ಸಂತೋಷಚಿನ್ಹಗಳಿಂದ ಕೂಡಿ ಆತನ ಸಮಿಪದಲ್ಲಿ ಬಂದು ಭಯಭಕ್ತಿಯಿಂದ ನಮಸ್ಕರಿಸಿದನು. ಆಗ ನಂಬಿ ಯಣ್ಣನು ನೀನಾರೆಂದು ಕೇಳಲು ತನ್ನ ವಿಸ್ತೃತ ಸಂಗತಿಯನ್ನರುಹಿ ನಿಮ್ಮಡಿಗಳ ಸೇವೆಯನ್ನು ಪಾಲಿಸಬೇಕೆಂದು ನಿವೇದಿಸಿ ಯಾವಾಗಲೂ ನಿಮ್ಮೊಡನೆ ವೃಷಭ ಧ್ವಜವನ್ನು ಧರಿಸಿ ನಿಮ್ಮ ಛಾಯೆಯಂತಿರುವದೇ ನನ್ನ ಹಂಬಲವೆಂದು ಅರಿಕೆ ಮಾಡಿಕೊಳ್ಳಲು ಅದಕ್ಕೆ ಸೌಂದರನು ಆನಂದದಿಂದೊಪ್ಪಿಕೊಂಡಿರಲು ಅನೇಕ ಶಿವಾಲಯಗಳನ್ನೂ ಇತರ ಪ್ರದೇಶವನ್ನೂ ಚರಿತ್ರನಾಯಕನು ನಂಬಿಯಣ್ಣನೊ ಡನೆ ಸುತ್ತುತ್ತ ಶಿವವಿಲಾಸದಿಂದ ನಿಶ್ಚಿಂತನಾಗಿದ್ದನು.

ಲಿಂಗ-ಗೇಹವೆನಿಸುವ ಪವಿತ್ರ ಕ್ಷೇತ್ರಗಳನ್ನೆಲ್ಲ ಸಂಭ್ರಮದಿಂದ ಪ್ರೇಮ ಪುರಸ್ಸರವಾಗಿ ಪರ್ಯಟನಮಾಡುತ್ತ ತಿರುವಾವಲೂರಿಗೆ ಬರಲು ಸೌಂದರನಿಗೆ ಮಲೆಯಾಳದಧಿಪತಿಯಾದ ಚಾರಮನಪುರಕ್ಕೆ ಹೋಗಬೇಕೆಂಬ ಅಭಿಲಾಷೆಯಾ ಗಲು ಆತನಲ್ಲಿಗೆ ಹೋಗಲು ಆ ಶಿವಸುತನ ಮೈನೆರಳಿನಂತೆ ಕಥಾಪುರುಷನು ವೃಷಭಧ್ವಜದೊಂದಿಗೆ ಆತನನ್ನು ಕೂಡಿಕೊಂಡಿದ್ದನು. ಶಿವಪ್ರೇಮಿಯಾದ ಆ ಚೇರಮಭೂಪತಿಯ ರಾಜಧಾನಿಯ ಮಗ್ಗುಲಲ್ಲಿರುವ ತಿರುವಂಜಕಳೇಶ್ವರ ನನ್ನು ಸೌಂದರನು ಮನದಣಿವಂತೆ ಕ್ರಮವಾಗಿ ಪೂಜಿಸಿದನು. ಆಗ ಭಗವ ತ್ಸಂಕೇತದ ಮೇರೆಗೆ ಸುರಪತಿಯ ಕರಿಯು ಅಲ್ಲಿಗೆ ಬರಲು ಸೌಂದರನಿಗೆ ತನ್ನ ಪೂರ್ವದ ಸ್ಥಾನವು ನೆನಪಾಗಿ ಐರಾವತವನ್ನು ಹತ್ತಿ ರಜತಾದ್ರಿಗೆ ನಡೆದನು. ಅದನ್ನು ನೋಡಿದೊಡನೆ ನೆರೆದ ಜನರೆಲ್ಲರೂ ಆಶ್ಚರ್ಯಪಡುವಂತೆ ನಮ್ಮ ನಾಯಕನು ಪ್ರಮಥರನ್ನು ಸ್ಮರಿಸುತ್ತ, ಶಿವಸಂಕೀರ್ತನೆಯನ್ನು ಮಾಡುತ್ತ ವೃಷಭಧ್ವಜದೊಂದಿಗೆ ಆಕಾಶಕ್ಕೆ ಶಿವತೇಜಸ್ಸಿನಿಂದ ಹಾರಿ ಗಗನಮಾರ್ಗದಲ್ಲಿ ಸೌಂದರನ ಮುಂದೆ ಸಂಭ್ರಮಾತಿಶಯದಿಂದ ಸಾಗುತ್ತಿದ್ದನು. ಸೌಂದರನಿತ್ತ ಪಕ್ಕದ ಹಯವನ್ನೇರಿ ಶಿವಾನುಭವರಸಜ್ಞನಾದ ಚಾರಮಭೂಕಾಂತನು ಕೈಲಾ

ಸಾದ್ರಿಗೆ ಹೋಗುವ ಮಧ್ಯಮಾರ್ಗದಲ್ಲಿ ನಂಬಿಯಣ್ಣ ಕುರುಂಬರನ್ನು ಕೂಡಿಕೊಂಡನು. ಈ ಮೂವರು ಪ್ರಮಥಾಧಿಪನನ್ನು ಹೊಂದಿ ಆ ಮಹಿಮನನ್ನು ಕೊಂಡಾಡಿ ಪ್ರೇಮಾಶ್ರುಗಳು ಸುರಿಯುತ್ತಿರಲು ಚಾಮರನಿಗೆ ಗಣಪದವಿಯನ್ನು, ಸೌಂದರನಿಗೆ ಮುನ್ನಿನ ಗಣೇಶತ್ವವನ್ನು ನಮ್ಮ ಚರಿತ್ರಪುಂಗವನಿಗೆ ಸಾಲೋಕ್ಯದೈಸಿರಿಯಾದ ಆ ಅವಿರಳ ಬ್ರಹ್ಮಸ್ವರೂಪವನ್ನು ದಯಪಾಲಿಸಿದನು.

ಪಾಠಕಮಹಾಶಯರಲ್ಲಿ ನಂದಿಧ್ವಜದ ಮೇಲೆ ಆದರವು ವಿಸ್ತೃತವಾಗಲಿ; ಧರ್ಮರೂಪಿಯಾದ ಬಸವನು ಓದುಗರಲ್ಲಿ ಶಿವಭಕ್ತಿಯನ್ನು ಹೆಚ್ಚಿಸಲಿ.

ಓಂ.

# ೬೧—೬೨. ಜಡೆಯನಯನಾರು—ಯಿಸ್ಯ ಜ್ಞಾನಿದೇವಿ.



ಪೊಡವಿ ಬಣ್ಣಿಸೆ ದೇವರೊಡೆಯ ನೊಲುಮೆಯನೊಪ್ಪಿ । ವಿಡಿದ
ಸೌಂದರನಪಿತನಾಗಿ ಜಸವೆತ್ತ । ಜಡೆಯನೈನಾರ ಸುತನಪ್ಪೆ ॥೧॥
ಭೂಮಿನುತ ನಂಬಿಯು ಮಾವರನ ಕರುಣದಿಂ । ದೋವಿ ಪಡೆದ
ಮಲ ತರುಣಿಯಸ್ಯಜ್ಞಾನ । ದೇವಿಯರ ಸೂನು ಧಿಟವಾನು ॥೨॥

[ಶ್ರೀ ನಿಜಗುಣರು]




ಗಲಮಯವಾದುದು **ಚೋಳ** ಭೂಮಿಯು. ಆ ಅವನಿಯ ಒಡೆಯರು ಸತ್ಯವಂತರು, ಈಶ್ವರಾಭಿಮಾನಿಗಳು, ಪ್ರಜಾಪ್ರೇಮಿಗಳು. ಆ ಧರೆಯು ಜಲತರುಗಳಿಂದ ಸಮೃದ್ಧವಾಗಿ ಸಕಲರು ಕರ್ತವ್ಯನಿರತರಾದುದೇ ಅಲ್ಲಿಯ ವಿಶೇಷವು. ಕಂಗೊಳಿಸುವ ಶಿವಾಲಯಗಳು ಅಲ್ಲಿ ಹೆಚ್ಚಾಗಿದ್ದವು. ಆ ಸೀಮೆಯಲ್ಲಿ ತಿರುವಾವಲೂರ (ಪಾಠಾಂತರವು **ತಿರು**ನಾವಲೂರ) ಎಂಬ ಪಟ್ಟಣವು ಸಮಸ್ತ ವೈಭವದಿಂದ ಹೆಸರಾಗಿತ್ತು. ಅ ಪುರಿಯನ್ನು ನರಸಿಂಗಮೊನೆಯರು ಎಂಬ ಉಪ

ನಾಮವುಳ್ಳ ಉತ್ತುಂಗಚೋಳನು ಸದ್ಧರ್ಮದಿಂದ ಪಾಲಿಸುತ್ತ ಶೈವನಾಗಿ ಮೆರೆಯುತ್ತಿದ್ದರೂ ಪುತ್ರಸಂತಾನವಿರಲಿಲ್ಲ.

ಆ ಪಾವನವಾದ ಪಟ್ಟಣದಲ್ಲಿಯೇ ವೇದವೇದಾಂಗ ಪರಿಣತನೂ, ಉಪನಿಷತ್ಪುರಾಣ ವಿಶಾರದನೂ, ಆಗಮಜ್ಞನೂ, ಸಕಲ ಶಿವಶಾಸ್ತ್ರಕೋವಿದನೂ, ಚರಿತ್ರಾರ್ಹನಾದ ಶೈವನೂ ಆದ **ಜಡೆಯುನಯನಾರು** ಎಂಬ ಶಿವಜ್ಞಾನ ನಿಧಿಯೇ ನಮ್ಮ ಕಥಾನಾಯಕನು. ಸುಗುಣಸಮೂಹವೆನಿಸಿದ ಕಥಾಪುರುಷನು (ಶ್ರವಣ-ಕೀರ್ತನ-ಸ್ಮರಣ-ಪಾದಸೇವನ - ಅರ್ಚನ-ವಂದನ-ದಾಸ್ಯ-ಸಖ್ಯ- ಆತ್ಮನಿವೇದನೆ ಎಂಬ) ನವವಿಧವಾದ ಭಕ್ತಿಯುಳ್ಳವನಾಗಿ ಶಿವೇತರದೈವಕ್ಕೆ ಮಣಿಯನು ; ಪರದೇವತಾ ವರ್ಣನೆಯ ಕಾವ್ಯಗಳನ್ನು ಪಠಿಸನು ; ಶೈವರ ಹೊರ್ತಾಗಿ ಬೇರೆಯವರೊಡನೆ ಬೆರೆಯನು ; ಈಶ್ವರ ಪ್ರಸಾದವನ್ನು ಬಿಟ್ಟು ಮತ್ತೊಂದನ್ನು ಸೇವಿಸನು ; ಶಿವಗೋಷ್ಠಿಯ ವಿನಃ ಇತರ ವಿಲಾಸವೇ ಆತನಲ್ಲಿರಲಿಲ್ಲ ; ಸ್ಥಾವರಲಿಂಗ ಪೂಜಕನಾಗಿದ್ದರೂ ಶಿವಾಚಾರಕ್ಕೆ ಲೋಪವಿಲ್ಲದೆ ನಡೆಯುವ ವೀರವ್ರತದವನಾಗಿ ಶೋಭಿಸುತ್ತಿದ್ದನು.

**ಪಾ**ರ್ವತಿಯಂತೆ ಸದ್ಗುಣಿಯು, ಕಂದರ್ಪನ ಪ್ರಾಣಸ್ವರೂಪಳಂತೆ ಚಲುವೆಯು, ಮೈತ್ರೇಯಿಯಂತೆ ಶಿವಧರ್ಮವನ್ನರಿತವಳು, ಸಚ್ಚರಿತ್ರಳು, ಸಾಕಾರ ಪುಣ್ಯಮೂರ್ತಿಯು, ಶಿವವ್ರತಗಳನ್ನೇ ಪಾಲಿಸುವ ಮಾನವತಿಯು, ಪತಿಯ ಇಂಗಿತವನ್ನು ತಿಳಿದು ಅದಕ್ಕನುಗುಣವಾಗಿ ನಡೆಯುವವಳು, ಆದ ಯಸ್ಯಜ್ಞಾನಿದೇವಿ ಎಂಬ ಹೆಸರಿನಿಂದ ಬೆಳಗುವ ನಾರೀಮಣಿಯೇ ನಮ್ಮ ಪ್ರಸ್ತುತ ಚರಿತ್ರನಾಯಕಳು.

**ಸ**ತ್ಯ-ಜ್ಞಾನ-ಧರ್ಮ-ದಯಾ-ಶಮೆ-ದಮೆಗಳೆಂಬ ಷಡ್ಗುಣಗಳಿಂದ ಮಂಡಿತನಾದ ತನ್ನ ಇನಯನು ಚಿಂತೆಗೊಳಗಾದುದನ್ನು ಆತನ ಸತಿಯು ನೋಡಿ ಶಿವಭಕ್ತರಿಗೂ ಚಿಂತೆಯು ಬಾಧಿಸುವದೇ ? ಅವರು ವ್ಯಾಕುಲರಾಗಬಹುದೇ ? ಅದೇನು ನಿಮ್ಮ ಮನಸಿನ ದುಗುಡವು ? ಹೀಗೆನ್ನಲು ಆ ಭಾಮೆಯ ಪತಿಯು ರಮಣಿಯೇ ಶಿವಾನುಭವಪ್ರಸಂಗನಿರತನಾಗಿದ್ದರೂ ಕಿಂಚಿತ್ಪಾಪಶೇಷದಿಂದಲೋ ಅಥವಾ ಯಾವ ಪರಿಯಿಂದಲೋ ಮಗನಿಲ್ಲವೆಂಬ ಕೊರತೆಯು ಗೃಹಸ್ಥಾಶ್ರಮಿಯಾದ ನನ್ನನ್ನು ಪೀಡಿಸುವದೇ ಹೊರ್ತಾಗಿ ನೀನು ನಿಶ್ಚಯನಾಗಿ ಹೇಳಿದಂತೆ ಶಿವಸೇವಾತತ್ಪರರಿಗೆ ಶಿವಧರ್ಮರಕ್ಷಣೆಯೇ ಮುಖ್ಯವಾದ ಧ್ಯೇಯವುಳ್ಳವರಿಗೆ ಅನ್ಯಥಾ ಹಂಬಲವಾಗದು ; ಆದುದರಿಂದಲೇ ಯಾವ ವ್ಯಸನವೂ ತಲೆದೋರದು. ಕಾಂತನಿಗೆ ಸಂಜೀವಿನಿಯಂತಿರುವ ಆ ಪತಿವ್ರತೆಯು ಕುಲದೈವವಾದ (ಅದೇ ಊರಲ್ಲಿರುವ) ವಲ್ಮೀಕಿನಾಥನನ್ನು ಅಚ್ಚಳಿಯದ ಅಮಳಭಕ್ತಿಯಿಂದ ನಿಶ್ಚಲನಾಗಿ ಭಜಿಸು ಅಂದರೆ ಕುಲದೀಪಕನೂ ವಂಶವನ್ನೇ ಪವಿತ್ರ

ಗೊಳಿಸುವವನೂ ಆದ ಶೋಭನವಾದ ಮಗುವು ಶಿವಕಾರುಣ್ಯದಿಂದ ಜನಿಸಿ ಮಾತಾಪಿತರಿಗೆ ಸದ್ಗತಿಯು ದೊರೆಯುವದರಲ್ಲಿ ಸಂದೇಹವೇ ಬೇಡಾ ಹೀಗೆ ವಿನಯದಿಂದ ನಿವೇದಿಸಿದಳು.

**ಕೈ**ಲಾಸದಲ್ಲಿ ಮಹಾದೇವನು ಓಲಗದಲ್ಲಿ ವಿರಾಜಿಸುತ್ತಿರುವಾಗ ಹೂವಿನ ಕಾಯಕದ ಮೇಲೆ ನಿಯಮಿಸಲ್ಪಟ್ಟ ಪುಷ್ಪದತ್ತನೆಂಬ ಗಣನು ಹಾಗೂ ಕಮಲವಲ್ಲಿ—ಅರುಂಧತಿ (ಪಾಠಾಂತರವು ಕನಕಲತೆ-ಕಾಂತಿಮತಿ) ಯರೆಂಬ ರುದ್ರಕನ್ನಿಕೆಯರು ಪೂದೋಟದಲ್ಲಿ ಹೋದಾಗ ಪರಸ್ಪರ ನೋಡಿದಾಗ ಆ ಮೂವರು ಒಬ್ಬರಿಗೊಬ್ಬರು ಮನಸೋತಿದ್ದರು. ಸನ್ನಿಧಿಗೆ ಬಂದಿರುವ ಕಾಮವಿಕಾರದ ಇವರ ಈ ಲಕ್ಷಣಗಳನ್ನು ಕಂಡು ಪ್ರಭುವಿನ ಅನುಮತಿಯಿಂದ ಪಾರ್ವತಿಯು ಆ ಮೂವರಿಗೂ ನೀವು ಇಲ್ಲಿರುವದು ಅನುಚಿತವು; ಈ ಸ್ಥಾನವು ಸ್ಥಾನವು ಸಾಲೋಕ್ಯ-ಸಾಮಿಪ್ಯ-ಸಾರೂಪ್ಯ-ಸಾಯುಜ್ಯವೆಂಬ ನಾಲ್ಕು ತೆರದ ನಿತ್ಯಸುಖವನ್ನು ಭೋಗಿಸುವ ತಾಣವಿದು; ಅನಂಗನ ದೊರೆತನ ಇಲ್ಲಿ ಸಲ್ಲದು. ಕಾರಣ ನೀವೆಲ್ಲರೂ ಕರ್ಮಭೂಮಿಯಲ್ಲಿ ಜನಿಸಿ ನಿಮ್ಮ ವಾಸನೆಯನ್ನು ತೀರಿಸಿಕೊಳ್ಳಿರೆಂದು ಹೇಳಿದಳು. ಸೌಂದರನೆಂಬ ಉಪನಾಮವುಳ್ಳ ಪುಷ್ಪದತ್ತನು ಕೃತಾಪರಾಧಕ್ಕೆ ಪಶ್ಚಾತ್ತಾಪಪಟ್ಟು ಮನ್ನಿಸಬೇಕೆಂದು ಸರ್ವತಂತ್ರನಾಯಕನೆನಿಸುವ ಶಂಕರನಿಗೆ ಬೇಡಿಕೊಂಡನು. ಆಗ ದಯಾಶಾಲಿಯಾದ ಪರಮಾತ್ಮನು ನಿನಗೆ ಅಜ್ಞಾನವು ಮುಸುಕದಂತೆ ನಾನು ನಿನ್ನ ಸಖನೂ, ಸಂಗಡಿಗನೂ ಆಗಿ ನಿನಗೆ ಒದಗುವ ಸಂಕಟವನ್ನು ನಿವಾರಿಸುತ್ತೇನೆ. ಆ ಕನ್ಯೆಯರೀರ್ವರೂ ನಿನ್ನ ಸಖಿಯರಾಗುವರು ; ಅವರೊಡನೆ ವಿಲಾಸವನ್ನು ಹೊಂದು; ಕೆಲವು ಕಾಲಾನಂತರ ನಿಮ್ಮೆಲ್ಲರನ್ನು ಕರಿಸಿಕೊಳ್ಳುವೆನು ಹೀಗೆಂದು ನಂಬಿಗೆಯನ್ನು ಕೊಟ್ಟು ಭೂಲೋಕದಲ್ಲಿ ಜನ್ಮಧಾರಣೆ ಮಾಡುವದಕ್ಕೆ ಹಚ್ಚಿದನು.

**ಆ** ಊರದೊರೆಯ ಸತಿಯು ಶಿವಾಲಯಕ್ಕೆ ಕೆಲವು ವರ್ಷಗಳ ಹಿಂದೆ ಹೋದಾಗ ಈಶ್ವರನಿಗಾಗಿ ಮಿಸಲಿಟ್ಟ ಚಲುವಾದ ಕಣಗಿಲದ ಸರವನ್ನು ತೆಗೆದುಕೊಂಡು ಉತ್ತುಂಗಚೋಳನು ಅರಿಯದಂತೆ ಆತನ ಹಿರಿಯ ಅರಸಿಗೆ ಕೊಡಲು ಅದನ್ನು ಅವಳು ತನ್ನ ಭೋಗಕ್ಕಾಗಿ ಪರಿಗ್ರಹಿಸಲು ಆ ವಲ್ಮೀಕಿನಾಥನ ಅರ್ಚಕನು ಆ ಸಖಿಯರನ್ನು ಬೆನ್ನಟ್ಟಿ ಬಂದು ನಡೆದ ಸಂಗತಿಯನ್ನು ಭೂನಾಥನಾದ ನರಸಿಂಗಮೊನೆಯರಿಗೆ ವಿವರಿಸಲು ಶಿವದ್ರೋಹವನ್ನು ಸೈರಿಸದ ಆ ಧರಣಿಪನು ವೀರೋದ್ರೇಕದಿಂದ ಶಿವಸ್ಮರಣೆಯನ್ನು ಮಾಡುತ್ತ ಶಿವನಿಷ್ಠಳಾದರೂ ಅಜಾಗರೂಕತೆಯಿಂದ ಮಾಡಿದ ತಪ್ಪಿಗಾಗಿ ತನ್ನ ಧರ್ಮಪತ್ನಿಯ ಮೂಗನ್ನು ಹಾಗೂ ಕೈಗಳನ್ನು ತರಿದನು. ಯೋಗಗಮ್ಯನನಿಸುವ ಮೃಡನು ಶಿವಭಕ್ತಿನಿರತಳಾದ ಅರಸಿಯ ತಪ್ಪನ್ನು ಮನ್ನಿಸಿ ಘ್ರಾಣೇಂದ್ರಿಯವನ್ನು ಹಾಗೂ ಹಸ್ತಗ

ಳನ್ನು ಮುಂಚಿನಂತೆ ಅನುಗ್ರಹಿಸಿ ನಿಮ್ಮ ಇಷ್ಟವೇನೆಂದು ದಂಪತಿಗಳನ್ನು ಕೇಳಿದನು. ಆಗ ಅವರು ಸುತನನ್ನು ಬಯಸಿದರು. ಇದನ್ನು ಕೇಳಿ ವಲ್ಮೀಕಿನಾಥನು ಮುಂದೆ ಜಡೆಯನಯನಾರರಿಗೆ ಸೌಂದರಗಣೇಶನು ಮಗನಾಗಿ ಹುಟ್ಟುವನು ಅವನಿಂದಲೇ ನಿಮಗೆ ಶುಭವಾಗುವದೆಂದು ಹರಿಸಿ ಅದೃಶ್ಯನಾದನು.

**ಶಿ**ವಾಜ್ಞಾನುಸಾರವಾಗಿ ಪುಷ್ಪದತ್ತನು ಚರಿತ್ರನಾಯಕನ ಸಹಧರ್ಮಿಣಿಯಾದ ಯಸ್ಯಜ್ಞಾನಿದೇವಿಯ ಗರ್ಭಾಂಬುಧಿಯನ್ನು ಪ್ರವೇಶಮಾಡಿದನು. ಆ ದೇವಿಯು ತನಗೆ ಬಸಿರು ಉಂಟಾಗಲು ಶಿವಪ್ರೀತಿಗೆ ಪಾತ್ರವಾಗುವಂತೆ ಶಿವಾಲಾಪ-ಶಿವಪೂಜೆ-ಶಿವಗೋಷ್ಠಿ-ಶಿವಸ್ತುತಿ-ಶಿವಚಿಂತನ ಮಾನಸಳಾಗಿ ಕ್ರಮವಾಗಿ ನವಮಾಸಗಳು ತುಂಬಿದ ಬಳಿಕ ಶುಭಮುಹೂರ್ತದಲ್ಲಿ ತೇಜಸ್ವಿಯಾದ ಅರ್ಭಕನನ್ನು ಹೆತ್ತಳು. ಶಿವಾಗಮನಿಷ್ಠನು, ಶಿವಾನುಭವಧುರೀಣನು ಆದ ಕಥಾಪುರುಷನು ತನ್ನ ದಿವ್ಯಜ್ಞಾನದಿಂದ ತನ್ನ ಮಗುವಿನ ಉತ್ಪತ್ತಿಯ ಬಗೆಯನ್ನು ತಿಳಿದು ಆ ಸುಂದರಕುವರನಿಗೆ ವಿಧ್ಯುಕ್ತವಾಗಿ ಜಾತಕರ್ಮವನ್ನು ಮಾಡಿಸಿ ದಿವ್ಯಭೋಗನಾದ ಉಮೆಯರಸನಿಂದ ನಂಬುಗೆಯನ್ನು ಪಡೆದ ಕುಮಾರನಿಗೆ ನಂಬಿಯಣ್ಣನೆಂಬ ನಾಮಕರಣವನ್ನು ಮಾಡಿಸಿ ಯಥಾಶಕ್ತಿಯಾಗಿ ಧರ್ಮಕಾರ್ಯವನ್ನು ಹಾಗೂ ಪಾತ್ರವರಿತು ದಾನವನ್ನು ಮಾಡಿ ದೇವಕುಮಾರನೋಪಾದಿಯಲ್ಲಿ ಬೆಳೆಯುತ್ತಿರುವ ಮಗನನ್ನು ನೋಡಿ ಸಂತೋಷಪಡುತ್ತಿದ್ದನು.

**ಮೂ**ರು ನಾಲ್ಕು ವರ್ಷದ ಮಗನಾದ ನಂಬಿಯು ಎಳೆಮಕ್ಕಳೊಡನೆ ಕಿರುಬಂಡಿಯನ್ನಾಡುತ್ತಿರುವಾಗ ದೈವಗತಿಯಿಂದಲೋ (?) ಅಥವಾ ಮದೋದಕದ ತಿಂಡಿಯಿಂದಲೋ ಅಲ್ಲಿಯ ರಾಜನಕರಿಯು ತನ್ನ ಕಾಲಿಗೆ ಕಟ್ಟಿದ ಸರಪಣಿಯನ್ನು ಹರಿದೊಗೆದು ಭಯಂಕರವಾಗಿ ಹಾವಳಿಯನ್ನು ಮಾಡುತ್ತಿರಲು ಜನರೆಲ್ಲರೂ ಗೋಳಿಡುತ್ತಿದ್ದರು. ಆ ದಂತಿಯು ಬರುವ ಮಾರ್ಗದಲ್ಲಿಯ ಮಕ್ಕಳೆಲ್ಲರೂ ಆಗಜದ ಆರ್ಭಟಕ್ಕೆ ಓಡಿಬಂದು ಸರಿದು ನಿಂತುಕೊಂಡರು. ನಂಬಿಯು ಮಾತ್ರ ಧೈರ್ಯಗುಂದದೆ ವಿಕ್ರಮಸಿಂಹದ ಮರಿಯಂತೆ, ಗಿರಿಯಂತೆ ಸ್ಥಿರವಾಗಿ ನಿಲ್ಲಲು ಆ ದ್ವಿರದವು ಆ ಕುಮಾರನನ್ನು ಪ್ರದಕ್ಷಿಣೆ ಪೂರ್ವಕವಾಗಿ ಸನ್ಮಾನಿಸಿ, ಮೊಣಕಾಲೂರಿ ಆತನಿಗೆ ತನ್ನ ಸೊಂಡಲಿನಿಂದ ನಮಸ್ಕರಿಸಿ ಹಸುಮಗನಿಗೆ ಎಳ್ಳಷ್ಟು ಧಕ್ಕಿ ತಗಲದಂತೆ ಸುರಕ್ಷಿತವಾಗಿ ಆತನನ್ನು ತೆಗೆದುಕೊಂಡು ತನ್ನ ಕುಂಭದಲ್ಲಿರಿಸಿ ವಿಲಾಸದಿಂದ ನಡೆಯಿತು. ಈ ಮಗುವಿನ ತಾಯ್ತಂದೆಗಳು ತಮ್ಮ ತನಯನು ಆನೆಯ ಪಾಲಾದನೆಂದು ಬಾಯ್ಬಿಟ್ಟರು. ಕರಿಯು ತನ್ನ ಮಸ್ತಕದಲ್ಲಿ ಆ ಮಗುವನ್ನು ಆನಂದದಿಂದ ಇರಿಸಿಕೊಂಡದ್ದನ್ನು ಕಂಡು ಪುರಜನರು ಚಕಿತರಾದರು. ನರಸಿಂಗಮೊನೆಯ ಭೂಪನು ಇದನ್ನರಿತು ಅಚ್ಚರಿಪಟ್ಟು ಆ ಕಂದನು ತಮ್ಮ ಸಿಂಹಾಸನಕ್ಕೆ ಯೋಗ್ಯನೆಂದು ಬಗೆದು ಈ ಚೆಲುವನನ್ನೇ

ತಮ್ಮ ಮಗನನ್ನಾಗಿ ಮಾಡಿಕೊಳ್ಳಬೇಕೆಂದು ನಿರ್ಧರಿಸಿ ಆ ಪಟ್ಟದ ಇಭದಮೇಲಿರುವ ಕುಮಾರನನ್ನಿಳಿಸಿಕೊಂಡು ಆ ಮಗುವನ್ನು ಬಿಗಿದಪ್ಪಿ ಮುಂಡಾಡಿ ಮೈಯಲ್ಲ ಕಂಪವಾಗಿ ಇಷ್ಟೊಂದು ಪರಿ ಆನಂದವಾಗಬೇಕಾದರೆ ಈತನೇ ತನಗೆ ಗತಿನಾಯಕನಾಗುವನೆಂದೆಣಿಸಿ ಆ ತರಳನ ತಾಯ್ತಂದೆಗಳನ್ನು ಕರಿಸಲು ಆ ಮಾತಾಪಿತರು ತಮ್ಮ ಮಗುವು ಸುಖವಾಗಿರುವದನ್ನು ಕಂಡು ಹರ್ಷಪಡಲು ಅವರಿಗೆ ಅರಸನು ಸನ್ಮಾನವನ್ನು ಮಾಡಿ ಭೂಸುರದಂಪತಿಗಳೇ ನನಗೆ ಸಂತಾನವಿಲ್ಲದ್ದರಿಂನ ನಿಮ್ಮ ಅಪತ್ಯವನ್ನು ನನಗೆ ಕೊಟ್ಟು ಬಿಡಿರಿ ಆ ಕಂದನನ್ನು ನನ್ನ ಮಗುವನ್ನಾಗಿ ಮಾಡಿಕೊಂಡು ಆತನನ್ನು ಚನ್ನಾಗಿ ಸಂರಕ್ಷಣೆಯನ್ನು ಮಾಡಿ ವಿದ್ಯಾಬುದ್ಧಿಗಳನ್ನು ಕ್ರಮವಾಗಿ ಕಲಿಸುವೆನು ; ನಿಮಗೆ ಯಥೇಚ್ಛವಾಗಿ ಧನವನ್ನು ಕೊಡುವೆನು ಹೀಗೆ ಬಹು ವಿನಯದಿಂದ ಹೇಳಿಕೊಂಡನು. ಆಗ ನಮ್ಮ ಶಿವದ್ವಿಜರೀರ್ವರು ತಮ್ಮೊಳಗೆ, ರಾಜನು ಬಲ್ಮೆಯಿಂದ ತಮ್ಮ ಸುತನನ್ನು ಸೆಳೆದರೆ ತಾವೇನು ಮಾಡುವದು ಈಗಲಾದರೂ ಆತನು (ನೃಪನು) ಮಗುವನ್ನು ಚನ್ನಾಗಿ ಆರೈಕೆ ಮಾಡಿ ಸಲಹುವನೆಂದು ವಿನಯವಾಗಿ ವಚನಕೊಡುತ್ತಿರುವನು. ಆದುದರಿಂದ ನಮ್ಮ ಹಸುಳನಿಗೆ ಅಭ್ಯುದಯವಾಗುವದರಿಂದ ಈತನನ್ನು ಆ ಸಜ್ಜನನಾದ ಅರಸನಿಗೆ ಒಪ್ಪಿಸಿಬಿಡುವಾ ಎಂದು ಬಗೆದು ಭೂವಲ್ಲಭನಿಗೆ ತಮ್ಮ ಸಮ್ಮತಿಯನ್ನು ಪ್ರೀತಿಯಿಂದ ಕೊಟ್ಟು (ರತ್ನಪರೀಕ್ಷಕನಾನ ಚಿನಿವಾರನಿಗೆ ವಜ್ರವನ್ನು ಕೊಟ್ಟಹಾಗಾಯಿತೆಂದು) ಹಿಗ್ಗಿದರು.

**ನೂ**ತನ ಕುಮಾರನನ್ನು ತಮ್ಮ ಅರಮನೆಗೆ ತೆಗೆದುಕೊಂಡು ಹೋದೊಡನೆ ಆ ಚೋಳಭೂಪನಿಗೆ ಹಿಂದಕ್ಕೆ ವಲ್ಮೀಕಿನಾಥನು ಅಪ್ಪಣೆ ಕೊಡಿಸಿದ ಸಂಗತಿಯು ಸ್ಮರಣೆಗೆ ಬಂದು ಕೃತಕೃತ್ಯನಾದೆನೆಂದು ತನ್ನ ಪ್ರಾಣದರಸಿಗೆ ತಿಳುಹಲು ಆ ಸತಿಯ ಆನಂದಕ್ಕೆ ಎಣೆ ಇಲ್ಲದಾಯಿತು. ಸರ್ವಚಕ್ಷುವಾದ ಭಗವಂತನ ಲೀಲೆಯು ಅತ್ಯಗಾಧವಾದುದೇ ಸರಿಯು. ಪಟ್ಟದ ರಾಣಿಯು ಮಗುವನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುದ್ದಾಡಿದಳು. ರಾಜಕುಮಾರನಿಗೊಪ್ಪುವ ಸಕಲ ವಿದ್ಯೆಗಳಲ್ಲಿಯೂ ಆ ಕುವರನನ್ನು ಪಾರಂಗತನನ್ನಾಗಿ ಮಾಡಿ ಪ್ರಾಪ್ತವಯಸ್ಕನಾದುದನ್ನು ನೋಡಿ ಚೋಳನೃಪತಿಯು ತನ್ನ ತುಂಬರ ಮಂತ್ರಿಗೆ ಅನುರೂಪಳಾದ ಸುಶೀಲ ಸದ್ವಂಶಜಳಾದ ಕನ್ನಿಕೆಯನ್ನು ಗೊತ್ತುಪಡಿಸುವದಕ್ಕೆ ಅಪ್ಪಣೆ ಮಾಡಿದ ಮೇರೆಗೆ ಆತನು ತಕ್ಕ ವಧುವನ್ನು ಆರಿಸಿ ವಿವಾಹೋಚಿತವಾದ ಕಾರ್ಯಗಳು ಉಭಯನೃಪರಲ್ಲಿ ನಡೆದವು. ಪರಿಣಯವು ಕನ್ಯೆಯ ಗೃಹದಲ್ಲಿ ನಡೆಯಬೇಕಾಗಿ ಗೊತ್ತಾಯಿತು. **ತಿರಿಮಂದ** ಪುರದಲ್ಲಿ ಮಾಂಗಲ್ಯಧಾರಣ ಮಹೋತ್ಸವದ ಸಿದ್ಧತೆಯು ಸಂಭ್ರಮದಿಂದ ನಡೆಯುತ್ತಿರಲು ಇತ್ತ ರಜತಗಿರಿವಾಸಿಯಾದ **ಮನ್ಮಥಧ್ವಂಸಿಯು** ತನ್ನ ರಾಣಿಯೊಡನೆ

ಭವಾನೀ ಪುಷ್ಪದತ್ತನು ನಂಬಿ ಎಂಬ ಹೆಸರಿನಿಂದ ಭೂಮಿಯಲ್ಲಿ ಯುವರಾಜನಾಗಿರುವನು. ಆತನೊಡನೆ ಮೋಹಿಸಿದ ರುದ್ರಕನ್ಯೆಯರೀರ್ವರೂ, ಪರಿವೆನಾಚಿ, ಸಂಕಿಲೆನಾಚಿಯೆರೆಂಬಭಿಧಾನದಿಂದ ವಿರಾಜಿಸುತ್ತಿರುವರು. ಇವರೊಡನೆ ನನ್ನ ಕುವರನು ಬೆರೆಯುವಂತೆ ಮಾಡಿ ಆಗಾಗ್ಗೆ ಶಿವತತ್ವವನ್ನರುಪಿ ಮಾಯೆಯು ಹೆಚ್ಚಾಗಿ ಆವರಿಸದಂತೆ ಮಾಡಿ ಪುನಃ ಇಲ್ಲಿಗೆ ಬರುವಂತೆ ಮಾಡುವೆನೆಂದು ಹೇಳಿದನು. ಬಳಿಕ ತನ್ನ ನಿಜರೂಪವನ್ನಡಗಿಸಿ ಹಣ್ಣಾದ ಮುದುಕನಾಗಿ ಹರಕುಹರಕಾದ ಕಾಷಾಯ ವಸ್ತ್ರಗಳನ್ನು ಧರಿಸಿ ಹಗುರಾದ ಕಮಂಡಲವನ್ನು ಹಿಡಿದು ಮುರುಕಾದ ಸಣ್ಣಲಾಕುಳವನ್ನು ಪಿಡಿದು ಬಳಕುತ್ತ ಲಗ್ನಮಂಟಪವನ್ನು ಹೊಕ್ಕು ಅಲ್ಲಿಯ ಜೋಯಿಸರೊಡನೆ ಕಾಲುಕೆದರಿ ಜಗಳತೆಗೆದು ಅವರು ಹೊರಗೆ ನೂಕಲು ಅಲ್ಲಿಯ ಸಿದ್ಧತೆಗಳನ್ನು ಕೆಡಿಸಿ ಚಲ್ಲಿಕೊಡಲು ರಾಜಭಟರು ಈತನನ್ನು ಹಿಡಿದು ತಮ್ಮ ಪ್ರಭುವಿನ ಸಮ್ಮುಖದಲ್ಲಿ ನಿಲ್ಲಿಸಲು ಕುಹಕವೇಷಧಾರಿಯು ಅರಸನೊಡನೆ ರಾಯನೇ ನೀನು ಅಳಿಯನೆಂದು ಭಾವಿಸುವ ಹುಡುಗನು ನನ್ನ ತೊತ್ತಿನ ಮಗನು ಇಕೋ ಈ ಪತ್ರವನ್ನು ಎಂದು ಮಂದಹಾಸದಿಂದಿರಲು ಅವರು ಅಶುಭನುಡಿಯುವ ವೃದ್ಧನನ್ನು ಹೊರಗೆ ಕಳಿಸಿರೆಂದು ಚರರಿಗೆ ಆಜ್ಞಾಪಿಸಿ ವಿವಾಹವು ನಿಂತುಹೋಗುವದೆಂದು ಶಂಕಿಸಿ ತಿರುಮುಂದನಪುರದ ವಿಭುವು ಕಳೆಗುಂದಿ ಈಶ್ವರಚಿತ್ತವಿದ್ದಂತಾಗಲೆಂದು ಆ ಜಗದೊಡೆಯನನ್ನು ಸ್ಮರಿಸಲನುವಾದನು.

**ಬ**ಳಿಕ ತಿರುವಾವಲೂರಿಂದ ಆ ತಿರುಮುಂದನಪುರದ ಮಧ್ಯಮಾರ್ಗದವರೆಗೆ ಬಂದ ವಿವಾಹೋತ್ಸವಕ್ಕಾಗಿ ಬಂದ ಜನಸಮೂಹದಲ್ಲಿ ಆ ಮುಪ್ಪಿನ ತಪಸ್ವಿಯು ನೀವೆಲ್ಲಿಗೆ ಹೊರಟಿರುವಿರಿ ? ನಿಮ್ಮ ನಂಬಿಯು ನಮ್ಮ ತೊತ್ತಿನ ಮಗನು ; ಆತನನ್ನು ಕರೆದುಕೊಂಡು ಹೋಗುವೆನು ಎನಲು ನೆರೆದವರು ಅದನ್ನು ಕೇಳಿ ಇದಾಗದ ಮಾತು ಈ ಮುದುಕನನ್ನು ಅಟ್ಟಿಬಿಡಿರಿ ಎಂದೆನ್ನಲು ಎಲ್ಲರೂ ರಾಜನ ಪರವಾಗಿ ಹೇಳುವರೇ ಹೊರ್ತು ಬಡವನನ್ನು ಕಂಡು ನ್ಯಾಯವಾದುದನ್ನು ತಿಳಿಸುವವರು ಭೂಮಿಯಲ್ಲಿ ಯಾರು ಉಂಟು ? ನಿಮ್ಮ ಚೋಳರಾಯನು ಎಲ್ಲಿರುವನು ಅವನೊಡನೆ ಎಲ್ಲ ಸಂಗತಿಯನ್ನು ತಿಳಿಸುವೆನು ಎಂದು ಆಗ್ರಹದಿಂದ ನಂಬಿಯೊಡನೆ ಕುಳಿತ ನರಸಿಂಗಮೊನೆಯರಿದ್ದಲ್ಲಿಗೈತಂದನು. ಧರ್ಮಜ್ಞನಾದ ಭೂಪಾಲಕನೇ ಸಟೆದಿಟವೆಂಬುದನು ವಿಚಾರಿಸು. ಈ ನಂಬಿಯು ನಮ್ಮ ತೊತ್ತಿನ ಮಗನು. ಇಲ್ಲಿರುವ ಓಲಿಯನ್ನು ನೋಡು, ಪ್ರಮಾಣಪತ್ರ ವಿದೆ ಹೀಗೆ ನಿಷ್ಠುರವನ್ನಾಡುತ್ತಿರಲು ರಾಯನು ಆಲೋಚನೆಗೊಳಗಾಗಲು ಚತುರನಾದ ಮಂತ್ರಿಯು ಆ ಪತ್ರವನ್ನು ತೆಗೆದುಕೊಂಡು ವೃದ್ಧಯೋಗಿಯು ಹೇಳುವ ಸ್ಥಳಕ್ಕೆ ಹೋಗಿ ವಿಚಾರಿಸಬೇಕೆಂಬ ಬಯಕೆಯನ್ನು ಯುವರಾಜನಿಗೂ ಆತನ

ಪಾಲಕ ತಂದೆಗೂ ನಿವೇದಿಸಲು ಅದಕ್ಕೆ ಅವನೀಶನು ಮರುಮಾತಿಲ್ಲದೆ ಒಡಂಬಡುವಷ್ಟರಲ್ಲಿ ಆ ಮುಂದನಪುರದ ರಾಜಚರರು ವೇಗದಿಂದ ಬಂದು ಲಗ್ನದ ಹಂದರದಲ್ಲಿ ನಡೆದ ದುಃಸಂಗತಿಗಳನ್ನೆಲ್ಲ ಅರುಹಿದರು. ಆಗ ಸೌಂದರನೆಂದು ಚೋಳಕ್ಷಿತೀಶನಿಂದ ಕರೆಯಲ್ಪಟ್ಟ ನಂಬಿಯು ಆ ಪ್ರಮಾಣಪತ್ರವನ್ನು ಕಸಿದುಕೊಂಡು ಹರಿದು ಹಾಕಲು ಅದಕ್ಕೆ ವೃದ್ಧನು ಎಲವೋ ನೀನು ನರಸಿಂಗಮೊನೆಯರ ಪುತ್ರನಲ್ಲ ಸಾಕುಮಗನು. ನೀನು ನನ್ನ ವಂಶಾವಳಿಯವರಾದ ಯಜ್ಞಜ್ಞಾನಿದೇವಿ ಜಡೆಯನಯನಾರರಿಂದ ಪೋಷಿಸಲ್ಪಟ್ಟವನು ; ನನ್ನ ತೊತ್ತಿನ ಮಗನು ನೀನು ಸಣ್ಣವನಿದ್ದುದರಿಂದ ಜೋಪಾನಕ್ಕಾಗಿ ನಿನ್ನನ್ನು ಅವರಲ್ಲಿ ಬಿಟ್ಟು ಹೋಗಿದ್ದೆನು. ಈಗ ನೀನು ವಯಸ್ಸಿಗೆ ಬಂದಿರುವೆ ನಾನು ಹಣ್ಣಾದ ಮುದುಕನಾಗಿರುವೆನು. ನೀನು ನನ್ನ ಶುಶ್ರೂಷೆಗೆ ತಕ್ಕವನಾಗಿರುವೆ ; ನಡೆ ಎನ್ನಲು ನಂಬಿಯು ಮನಸಿಲ್ಲದೆ ಕಡುಸಿಟ್ಟಿನಿಂದ ವೃದ್ಧನೊಡನೆ ಹೊರಟನು. ಪ್ರಮಾಣಪತ್ರದ ಮೂಲಪ್ರತಿಯನ್ನು ಇಸಕೊಂಡು ತುಂಬರನು ಓದಿನೋಡಲು ಇಂಥ ಸಂವತ್ಸರದಲ್ಲಿ ಇವರಿವರ ಸಾಕ್ಷಿಗಳ ಮೇರೆಗೆ ಪೂರ್ವೋಕ್ತದಂಪತಿಗಳಿಗೆ ಜೋಪಾನಮಾಡಲಿಕ್ಕೆ ಕೊಟ್ಟಮಗನಾಗಿ ಇರುವ ಭಾವವು ಸೊಗಸಾಗಿ ಬಣ್ಣಿಸಿತ್ತು ಆ ಮುದುಕ ಋಷಿಯ ಆಗ್ರಹದ ಮೇರೆಗೆ **ಸೌಂದರ, ತುಂಬರ** ಮುಂತಾದವರು ಆ ಯೋಗಿಯೊಡನೆ ತಿರುನಲ್ಲೂರಿಗೆ ಬಂದು ವಿಚಾರಿಸಲು ಅದ್ಭುತಮಹಿಮನ ಲೀಲೆಯಿಂದ ಅಲ್ಲಿಯ ಬ್ರಾಹ್ಮಣರು ಮುದುಕನು ಹೇಳಿದಂತೆಯೇ ತಲೆ ಹಾಕಿದರು. ಆಗ ನಂಬಿಯು ರೋಷಾಕುಲನಾಗಿ ಆ ಪತ್ರವನ್ನು ಪುನಃ ಹರಿದೊಗೆಯಲು ಇನ್ನೊಂದು ಪಡಿಪತ್ರವಿದೆ ನೋಡೆಂದು ಅಲ್ಲಿಯ ಶಿವಾಲಯದಲ್ಲಿ ಪಾದುಕೆಗಳನ್ನು ಧರಿಸಿಕೊಂಡು ಹೊಕ್ಕನು. ಈರೀತಿ ಅನಾಚಾರದಿಂದ ದೇವಾಲಯದಲ್ಲಿ ಹೋಗುವದನ್ನು ನೋಡಿ ಈತನನ್ನು ಕೊಲ್ಲುವೆನೆಂದು ನಂಬಿಯಣ್ಣನು ಬೆನ್ನಟ್ಟಿದನು. ನಂಬಿಯು ನೋಡನೋಡುವಷ್ಟರಲ್ಲಿ ಆ ಅಪೂರ್ವ ಮುದುಕನು ಲಿಂಗದಲ್ಲಿಯೇ ಮಾಯವಾದನು. ಆಗ ದೇವಕುಮಾರನಿಗೆ ಪೂರ್ವವಾಸನೆಯು ತಲೆದೋರಿ ಭಯಚಿಂತಾಕ್ರಾಂತನಾಗುವಷ್ಟರಲ್ಲಿ ಐಮೊಗನು ಸಾಕಾರನಾಗಿ ಸೌಂದರನೆದುರಿಗೆ ಶೋಭಿಸಲು ನಂಬಿಯು ಆತನ ಪಾದಗಳಲ್ಲಿ ಹೊರಳಾಡಿ ಬಿಕ್ಕುತ್ತ ಇಷ್ಟು ದಿವಸಗಳು ವ್ಯರ್ಥವಾಗಿ ಹೋದವು ಈರೀತಿ ನನ್ನನ್ನು ಕಾಡುವದುಚಿತವೇ ? ಎನಲು ತ್ರಿನಯನನು ಮಗನನ್ನು ಸಂತೈಸಿ ತಾಳಗಳನ್ನು ಕೊಟ್ಟು ತಿರುಪಾಡುಗಳನ್ನು ಪಾಡೆಂದು ಹೇಳಿ ಆತನಿಗೆ ಪಡಿಹೊನ್ನನ್ನು ಕೊಟ್ಟು ನೀನು ದಿನಾಲು ಲಿಂಗಗೇಹಗಳಿದ್ದಲ್ಲಿ ಹೋಗಿ ತಿರುಪಾಡುಗಳನ್ನು ಪಾಡು ನಿನಗೆ ನಿತ್ಯವೂ ಪಡಿಹೊನ್ನನ್ನು ಕೊಡುವೆನೆಂದು ಹೇಳಿದನು. ತುಂಬರ ಮಂತ್ರಿಯು ಇದನ್ನು ನೋಡಿ ಅರಸುಕುಮಾರನಿಗೆ ದೇವಾ ನೀವು ದೇವಕುಮಾರರು ನಾನು ನಿಮ್ಮ

ಮಗನು ನನ್ನನ್ನು ಕಾಯುವದೆಂದು ಪೊಡಮಡಲು ನಂಬಿಯಣ್ಣನು ಅಭಯ ವೆಂದು ಆತನ ಮಸ್ತಕದಮೇಲೆ ಹಸ್ತವನ್ನಿಟ್ಟು ಬಂದ ಶಿವಭಕ್ತರಿಗೆ ಭೂರಿ ಧನ ದಿಂದ ತೃಪ್ತಿಪಡಿಸಿದನು. ಇದೆಲ್ಲವನ್ನು ತಿಳಿದು ನರಸಿಂಗಮೊನೆಯರಿಗೆ ಆದ ಸಂತೋಷಕ್ಕೆ ಸೀಮೆ ಇಲ್ಲದಾಯಿತು. ಮತ್ತು ಕಥಾನಾಯಕ ನಾಯಕಿಯರಾದ ಜಡೆಯನಯನಾರರಿಗೂ, ಯಸ್ಯಜ್ಞಾನಿದೇವಿಗೂ ಆದ ಹರ್ಷವನ್ನು ಬಣ್ಣಿಸಲಳ ವಲ್ಲ. ಈ ಅದ್ಭುತ ಮಹಿಮೆಯನ್ನು ಕೇಳಿ ಕುರುಂಬನೆಂಬ ಅವನೀಶನು ಸೌಂದ ರನ ಸನ್ನಿಧಿಗೆ ಬಂದು ದೇವಾ ಅನವರತವೂ ನಿನ್ನೊಡನೆ ನಂದಿಧ್ವಜದ ಕಾಯಕ ದಿಂದಿರುವೆನೆಂದು ಪ್ರಾರ್ಥಿಸಲು ನಂಬಿಯೊಪ್ಪಿದನು. ತರುವಾಯ ಬ್ರಹ್ಮಾಂಡ ನಾಯಕನಾದ ಗಂಗಾಧರನು ಕಾಲಕ್ರಮವಾಗಿ ತನ್ನ ಮಗನಾದ ನಂಬಿಗೆ ಕರಿತು ರಗಾದಿ ಸೇನಾಬಲವನ್ನೂ, ರತ್ನಾಭರಣಗಳನ್ನೂ, ಪರಿವಿನಾಚಿ, ಸಂಕಿಲಿನಾಚಿ ಯುವರನ್ನೂ ಸಜ್ಜುಗೊಳಿಸಿ ಸುಖದಿಂದಿಟ್ಟನು.

**ಉ**ತ್ತುಂಗಚೋಳಮಹೀಪಾಲನು ಶಿವಸುಖದಿಂದಿರುತ್ತಿರಲು ಅವನ ಹಿರಿ ಯರಾಣಿಯು ವಿಧಿವಶಳಾಗಲು ಅವಳ ಅಸ್ಥಿಗಳನ್ನು ಗಯಾಕ್ಷೇತ್ರಕ್ಕೆ ಕಳಿಸ ಬೇಕೆನ್ನುವಷ್ಟರಲ್ಲಿ ಆತನ ಗುರುಗಳು ಅಲ್ಲಿಗೆ ಬರಲು ಗಯಾಕ್ಷೇತ್ರದ ಮಹಿಮೆ ಯನ್ನು ತಿಳಿಸಬೇಕೆಂದು ಪ್ರಾರ್ಥಿಸಲಾಗಿ ಆತನು ರಾಜನಿಗೆ ವಿವರಿಸಿದುದು ಹ್ಯಾಗಂದರೆ:—ಪೂರ್ವಕಾಲದಲ್ಲಿ ಬ್ರಹ್ಮನಿಗೆ ಯಕ್ಷಕಾಮಿನಿಯಲ್ಲಿ ಗಯನೆಂಬ ರಾಕ್ಷಸನು ಜನಿಸಿದನು. ಆಗ ಆತನು ಜಗತ್ಕಂಟಕನಾಗಿ ಜನರನ್ನು ಬಾಧಿ ಸುತ್ತಿರಲು ಪಿತಾಮಹನು ಬಂದು ಮಗುವೇ ನೀನು ಈವರೆಗೆ ಸರ್ವಭೋಗ ಗಳನ್ನು ಅನುಭವಿಸಿರುವಿ ಈಗ ನೀನು ಮಾರಾರಿಯನ್ನು ಭಜಿಸಿ ಸ್ಥಿರಮುಕ್ತಿ ಯನ್ನು ಪಡೆ ಎಂದು ಚನ್ನಾಗಿ ಬುದ್ಧಿ ಹೇಳಲು ಆ ದನುಜನು ಪಂಚಾಗ್ನಿಮಧ್ಯ ದಲ್ಲಿ ನಿಂತು ಘೋರವಾಗಿ ಅಗಣಿತ ದಿವ್ಯವರ್ಷ ತಪಸ್ಸನ್ನು ಮಾಡುತ್ತಿರಲು ಸಾಂಬನೊಲಿದು ಆತನೆಡೆಗೆ ಬಂದು ವರವನ್ನು ಕೇಳೆನ್ನಲು ಆಗ ಆ ಅಸುರನು ನಾನು ಶಿಲಾರೂಪಿಯಾಗುವೆನು ನನ್ನ ಬೆನ್ನಿನಲ್ಲಿ ನಿಮ್ಮ ಪಾದವನ್ನಿರಿಸಬೇ ಕೆಂದು ಬೇಡಿಕೊಳ್ಳಲು ಅದಕ್ಕೆ ಗೌರೀಪತಿಯೊಪ್ಪಿ ಮತ್ತೊಂದು ವರವನ್ನು ಬೇಡೆಂದು ಹೇಳಿದನು. ಆಗ ಆ ರಕ್ಕಸನು ಅನೇಕ ಪವಿತ್ರ ಕ್ಷೇತ್ರಗಳಲ್ಲಿ ಇದು ಅಧಿಕವಾಗುವಂತೆ ಆಶೀರ್ವದಿಸು ಮತ್ತು ಈ ರುದ್ರಪಾದದಲ್ಲಿ ಯಾರು ಪಿಂಡ ಪ್ರದಾನ ಮಾಡುವರೋ ಅವರ ಏಳು ಪಿತೃಗಳು ಸದ್ಗತಿಯನ್ನು ಹೊಂದ ಲೆಂದು ಬೇಡಿಕೊಂಡನು ಅದಕ್ಕೆ ಸರ್ವಲೋಕೈಕನಾಥನಾದ ವಿಷಕಂಠನು ತಥಾಸ್ತು ಎಂದು ಹೇಳಿ ಹೊರಟುಹೋದನು. ಆ ದೈತ್ಯನು ಶಿಲಾರೂಪಿಯಾಗಿ ಒಪ್ಪುತ್ತಿರುವನು.

ಒಂದೇ ಪಾದವುಳ್ಳ ಸ್ಥಾನದಲ್ಲಿ ಅಷ್ಟೊಂದು ಪ್ರಾಶಸ್ತ್ಯವಿರಲು ಪರಶಿವ ಮೂರ್ತಿಯು ಮುವತ್ತು ವರ್ಷ ಪರಿವಿನಾಚಿಯ ಗೃಹದಲ್ಲಿ ಸೌಂದರನ ಸಖನಾಗಿ ಪಾದಗಳನ್ನು ಅನೇಕಾನೇಕ ಸಾರೆ ಇಟ್ಟಿರುವದರಿಂದ ಆ ಪರಿವಿನಾಚಿಯ ಅಂಗಳವೇ ಗಯೆಗಿಂತ ಮೇಲಾದುದೆಂದು ಹೇಳಿದನು. ಆ ಪ್ರಕಾರ ಪರಿವೆಯ ಮನೆಯ ಅಂಗಳದಲ್ಲಿ ಪಿಂಡಪ್ರದಾನ ಮಾಡಲು ಸುರರು ಹೂವಿನ ಮಳೆಗರೆಯುತ್ತಿರುವಾಗ ಆತನ ನಿಜಪಿತೃಗಳು ರುದ್ರಲೋಕವನ್ನೈದಿದರು. ತನಗೆ ಬೇಕಾದ ವಸ್ತುವು ಹತ್ತಿರದಲ್ಲಿಯೇ ಇದ್ದರೂ ಅಲಕ್ಷ್ಯೆಯಾಗುವಂತೆ ಶಂಕರನನ್ನು ಸಂಗಡಿಗನನ್ನಾಗಿ ಮಾಡಿಕೊಂಡಿರುವ ಸೌಂದರನೇ ಮೇಲೆಂದು ತನ್ನ ಕುವರನಿಗೆ ಜಯ ಜಯ ಎಂದು ಅನ್ನುತ್ತ ನಮಸ್ಕರಿಸಿದನು. ಆಗ ಸೌಂದರೇಶನು ತಂದೆಯನ್ನು ಹಿಡಿದೆತ್ತಿ ಶೈವಭೇದವನ್ನೂ ಶೈವಾಗಮದ ಮತವನ್ನೂ ತಿಳುಹಿಸಿ ಲಿಂಗಾರ್ಪಿತಾವಧಾನದ ಪರಿಯನ್ನು ತಿಳಿಸಿ ಜಡೆಯನಯನಾರು ಮತ್ತು ಯಸ್ಯಜ್ಞಾನದೇವಿಯರ ಪ್ರೀತಿಗೆ ಪಾತ್ರನಾಗಿದ್ದನು. ಈ ಮೂವರು ಶಿವಾವಧಾನಿಗಳಾಗಿರಲು ಕೆಲವು ದಿನಗಳು ಕಳೆಯಲು ಪರಮೇಶ್ವರನು ಅವರಿಗೆ ಶಿವಲೋಕಕ್ಕೆ ತೆಗೆದುಕೊಂಡು ಹೋದನು. ನಂಬಿಯಣ್ಣನು ಸಮಸ್ತ ಸುಖಗಳನ್ನು ಅನುಭವಿಸುತ್ತ ಅದರಿಂದಾಗುವ ಆನಂದವನ್ನೆಲ್ಲ ಪಶುಪತಿಗೆ ಅರ್ಪಣವಾಡುತ್ತ ಶಿವವಿಲಾಸದಿಂದ ರಂಜಿಸುತ್ತಿದ್ದನು.



ಓಂ.



# ೬೩. ಸೌಂದರನಂಬಿಯು.



**ಮ**ನಸಿಜಾರಿಯ ಭಕ್ತನೆನಿತು ಧನಮಂ ಬೇಡ । ಲನಿತುಮಂ ಕೊಟ್ಟಕಡುಚಾಗಿ **ನರಸಿಂಗ ಮೊನೆ** । **ಯೂಂಡ** ಶಾಂತಮಿರಿಸೆನ್ನ ॥೧॥ ತ್ರಿಣಯನಂ ತಾನೊಲಿದು ಗಣಿಕೆಯರ ಮನೆಗೆ ಕುಂ । ಟಣಿಯಾಗಿ ನಡಿಸಿದಧಿಕ **ನಂಬಿಗೆ** ಮನಂ । ದಣಿವಂತೆ ನಮಿಸಿ ನಲಿಯುವೆನು ॥೨॥ ಪೊಡಮಿಬಣ್ಣಿಸೆ ದೇವರೊಡೆಯ ನೊಲುಮೆಯನೊಪ್ಪಿ । ಮಿಡಿದ **ಸೌಂದರನ** ಪಿತನಾಗಿ ಜಸವೆತ್ತ । **ಜಡೆಯ ನೈನಾರ** ಸುತನಪ್ಪೆ ॥೩॥ ಭೂವಿನುತ **ನಂಬಿಯು**ನುಮಾವರನ ಕರುಣದಿಂ । ದೋೕವಿಪಡೆದ ಮಲತರುಣಿ **ಯಿಸೈಜ್ಞಾನ** । **ದೇವಿ**ಯರ ಸೂನುಧಿಟವಾನು ॥೪॥ **ನಂಬಿಯಣ್ಣ**ನ ಮನದೊಳಿಂಬಾಗೆ ಮುಂದೆ ಗುಡಿ । ಯಂ ಬಿಡದೆ ಪಿಡಿದು ನಡೆದಪಿರುಮಾಳವಿ **ಕು** । **ರುಂಬರಂ** ಕೂರ್ತುನಮಿಸುವೆನು ॥೫॥ ಶಿವನ ಮೆಲ್ಲಡಿ ನೋಯಲವನಿಯೊಳು ನಡಿಸುತಿರೆ । ತವೆ ಮುಳಿದು ನಂಬಿಯೊಳು ನಂದ **ಕಲಿಕಾಮ** । ನವಿರತಂ ಲೇಸುಗೊಡಲೆನಗೆ ॥೬॥ ಕರಿಗೊರಲನಾದೊಡಂ ಮರೆದು ಶರಣರ್ಗೆ ಬಂ । ದೆರಗದಿಹ **ನಂಬಿ**ಯೊಡಗೂಡಿ ಪೊರಗೆಂದ । **ಮೆರಿಮಿಂಡ**ರೆನಗೆ ಶರಣಕ್ಕೆ ॥೭॥ ಪೇಳದೈದಲು **ನಂಬಿ** ಕೇಳಿಕೈಲಾಸಕ್ಕೆ । ದಾಳಿಯಿಟ್ಟತುಲಬಲ **ಚೇರಮ**ನ ಚರಣ । ದೂಳಿಗದ ಭಂಟನೆನಿಸುವೆನು ॥೮॥ ನೇರಿತಹಶರಣ ಸಂಚಾರ ಮಾರ್ಗದೊಳು ಸುವಿ । ಚಾರದಿಂದಡಿಯ ನಿಡದೆ ತಲೆಯೊಳು ನಡೆದ । **ಕಾರಿಕಾಲಮ್ಮೆ**

---

ಇದರಲ್ಲಿ ಕೆಲವು ಪುರಾತನರ ಚರಿತ್ರೆಯು ಸಮಯೋಚಿತವಾಗಿ ಬಂದಿರುವದು.

ಪೊರೆಯೆನ್ನ ॥೯॥ ವಾಸವಾದಿಗಳರಿಯದೀಶನಂ ನಿಜಯೊಗ ।
ವಾಸಕ್ಕೆ ಬರಿಸಿ ಧರೆಗೆ ತೋರಿಸಿದ **ಸೋ** । **ಮಾಸಿಮಾರ**ರನೆ ಬಲ
ಗೊಂಬೆ ॥೧೦॥ [ಶ್ರೀ ನಿಜಗುಣರು]



ತಿವ್ರತಾಶಿರೋಮಣಿಯಾದ **ಅನಸೂಯೆ**ಯ ಹದಿಬದೆಯ ಧರ್ಮವನ್ನು ಜಗತ್ತಿಗೆ ತೋರ್ಪಡಿಸಬೇಕೆಂಬಭಿಲಾಷೆಯಿಂದ ಜಿತೇಂದ್ರಿಯನಾದ ನಿಸ್ಪೃಹನಾದ ಶಂಕರನು, ಹರಿವಿರಂಚಿಗಳೊಡನೆ ಆ ಪಾವನಶೀಲೆಯ ಬಳಿಗೆ ಯೋಗಿವೇಷದಿಂದ ಬರಲು ಅತ್ರಿಋಷಿಯ ಸಹಧರ್ಮಚಾರಿಣಿಯು ಉಚಿತವಾದ ಸತ್ಕಾರವನ್ನು ಮಾಡಿ ಅವರನ್ನು ಅರ್ಪಿತಕ್ಕೆ ಕರೆದಳು. ಆಗ ಈ ವೇಷಧಾರಿಗಳಾದ ಯತಿಗಳು ದಿಗಂಬರೆಯಾಗಿ ನೀನು ಪ್ರಸಾದವನ್ನು ನೀಡಿದರೆ ನಾವು ಸ್ವೀಕರಿಸುವೆವೆಂದರು. ಆಗ ಆ ಮಾನಿನಿಯು ಆರ್ತರಕ್ಷಾಮಣಿಯಾದ ಶಂಭುವಿನನ್ನು ಸ್ಮರಿಸಿ, ಪತಿಯಪಾದಗಳನ್ನೀಕ್ಷಿಸಿ ತನ್ನೊಳಗೆ ತನ್ನ ಸತ್ವವನ್ನು ಕಾಯ್ದುಕೊಳ್ಳಬೇಕೆಂದು ವಿಶಿಷ್ಟ ದೃಷ್ಟಿಯಿಂದ ಆ ಅತಿಥಿಗಳನ್ನು ನೋಡಿದೊಡನೆ ಆ ಸತಿಯ ಪ್ರಭಾವದಿಂದ ಅವರೆಲ್ಲರೂ ಕೂಸುಗಳಾಗಲು ಅವರನ್ನು ತೃಪ್ತಿಪಡಿಸಿದಳು. ಆಗ ದೇವತೆಗಳು ನಿನ್ನಿಷ್ಟವೇನೆಂದು ಆ ಲಲನಾಮಣಿಯನ್ನು ಕೇಳಿದರು. ಋಷಿಪತ್ನಿಯು ನೀವು ನನ್ನ ಮಕ್ಕಳಾಗಿರಿ ಎಂದು ಬಿನ್ನವಿಸಲು ಭವಾನೀಪತಿಯು ನನಗೆ ಇದಾಗದು ಎಂದನು ; ಆಗ ಅನುಸೂಯೆಯು ನಿಮ್ಮ ಇಚ್ಛೆ ಇದ್ದಂತಾಗಲೆನ್ನಲು ವನಿತಾಶಿರೋಮಣಿಯೇ ನೀನು ಶಿವಾರ್ಚನೆಗೆ ತರುವ ದೂರ್ವೆಯೊಳು (ಅಂದರೆ ಕರಿಕೆಯಲ್ಲಿ) ನಾನು ಹುಟ್ಟುವೆನೆಂದನು ; ಬಳಿಕ ಸರಸಿಜಾತನು ವಿಧುವಾದನು ; ಮುರಾರಿಯು ದತ್ತಾತ್ರೇಯನಾದನು.

* **ದೂ**ರ್ವಾಸಮುನಿಯು ಕೈಲಾಸದಲ್ಲಿ ಪರಂಜ್ಯೋತಿಸ್ವರೂಪನಾದ ಪ್ರಭುವಿನನ್ನು ಸ್ತುತಿಸಿಬರುವಾಗ ಪ್ರಸನ್ನನಾದ ಮಹಾದೇವನು ಆತನಿಗೆ ಮಂದಾರಮಾಲೆಯನ್ನನುಗ್ರಹಿಸಿದನು. ಆ ಮುನಿಯು, ಇಂದ್ರನು ತನಗೆ ಸತ್ಕರಿಸಲು ಶಚೀಪತಿಗೆ ಆ ಆಶೀರ್ವಾದ ಮಾಲೆಯನ್ನು ಕೊಟ್ಟುಹೋದನು. ಮದಾಂಧನಾದ ಶಕ್ರನು ಐರಾವತದ ಕುಂಭದಲ್ಲಿ ಆ ಮಾಲೆಯನ್ನು ಹಾಕಿದನು. ಮಕರಂದಕ್ಕೆ ಮನಸೋತ ಭ್ರಮರಗಳು ಆನೆಯ ಮಸ್ತಕವನ್ನು ಅಂಟಿದವು. ಆ ಕರಿಯು ಆ ಪುಷ್ಪಮಾಲೆಯನ್ನು ಪಾದತಲದಲ್ಲಿ ಹಾಕಿ ತುಳಿದುಬಿಟ್ಟಿತು. ಇದನ್ನು ತಿಳಿದ ಆ ಉಗ್ರಯತಿಯು ಸುರಪತಿಯೇ ನಿನ್ನ ಐಶ್ವರ್ಯವು ಸಮುದ್ರಪಾಲಾಗಲೆಂದು

* ಮೇಲೆ ವರ್ಣಿಸಿದಂತೆ ಈತನು ಕರಿಕೆಯಲ್ಲಿ ಪುಟ್ಟಿದನು.

ಶಪಿಸಲು ಆತನು ಮುನಿಯನ್ನು ಬಹು ಪ್ರಕಾರ ದೈನ್ಯದಿಂದ ಬೇಡಿಕೊಂಡು ವಿಶಾಪವನ್ನು ಕರುಣಿಸೆಂದೆನ್ನಲು ಆಗ ದೂರ್ವಾಸನು ಮದುಕುಗೊಂಡು ದೇವಾಸುರರು ಕೂಡಿ ಶರಧಿಮಥನಮಾಡಿದರೆ ನಿಮ್ಮ ಸಂಪತ್ತು ಮರಳಿ ಈಶ್ವರಕಟಾಕ್ಷದಿಂದ ಕೈವಶವಾಗುವದೆಂದು ಹೇಳಿ ಹೋದನು.

**ಮೇ**ರುಪರ್ವತವನ್ನೇ ಕಡಗೋಲನ್ನಾಗಿ ಮಾಡಿ ಆದಿಶೇಷನನ್ನು ಹಗ್ಗವನ್ನಾಗಿಮಾಡಿ ದೇವಾಸುರರು ಸಮುದ್ರಮಥನಮಾಡುವಾಗ ಅಮೃತ-ಲಕ್ಷ್ಮಿ-ಐರಾವತ-ಕೌಸ್ತುಭ-ಉಚ್ಛೈಃಶ್ರವಸ್ಸು ಮುಂತಾದ ವಸ್ತುಗಳು ಲಭಿಸಲು ಇಷ್ಟಕ್ಕೆತೃಪ್ತರಾಗದೆ ಪುನಃ ಕಡೆಯಲು ಬಹಳ ಬಳಲಿದ ಶೇಷನ ಮುಖದಿಂದ ಭೀಕರವಾದ ವಿಷವು ಹೊರಟು ಲೋಕವನ್ನೆಲ್ಲ ದಹಿಸುತ್ತಿರಲು ಹರಿಯಜರು ಮೊದಲ್ಗೊಂಡು ಸಕಲರು ಅವಿನಾಶಿಯಾದ ನಿತ್ಯನಾದ ಶಿವನನ್ನು ಮೊರೆಹೊಗಲು ಜಗದ್ಧಿತಾರ್ಥವಾಗಿ ಆತನು ಲೀಲೆಯಿಂದ ಆ ಗರಳವನ್ನು ಕೈಯಲ್ಲಿ ತೆಗೆದುಕೊಂಡು ಬಾಯಿಯಲ್ಲಿ ಹಾಕಿಕೊಂಡನು; ಅದನ್ನು ನುಂಗಿದರೆ ಕುಕ್ಷಿಯಲ್ಲಿರುವ ಬ್ರಹ್ಮಾಂಡವು ಲಯವಾಗುವದೆಂದು ಭಾವಿಸಿ ಕುತ್ತಿಗೆಯಲ್ಲಿ ನಿಲ್ಲಿಸಿಕೊಂಡು ವಿಷಕಂಠನೆಂದು ನೀಲಕಂಠನೆಂದು ಅಭವನು ಪ್ರಸಿದ್ಧನಾದ ಸಂಗತಿಯು ಸರ್ವರಿಗೂ ವೇದ್ಯವು.

**ಆ** ಮಹಾವಿಷವನ್ನು ಅಂಗೈಯಲ್ಲಿ ತೆಗೆದುಕೊಳ್ಳುವಾಗ ಅದರಲ್ಲಿ ತನ್ನ ಸುಂದರರೂಪವನ್ನು ಕಂಡು ಹೊರಗೆ ಕರೆದೊಡನೆ ಜೀವಕಳೆದುಂಬಿ ಸುಂದರ ವ್ಯಕ್ತಿಯು ಬರಲು ಅವನಿಗೆ ಪುಷ್ಪದತ್ತನೆಂಬ ಸಾರ್ಥಕನಾಮವನ್ನು ಕೊಟ್ಟು ಸಂತಾನ-ಮಂದಾರ-ಪಾರಿಜಾತ-ಹರಿಚಂದನ ಮುಂತಾದ ಪೂಮಾಲೆಗಳನ್ನು ತರಲಿಕ್ಕೆ ನಿಯಮಿಸಿದನು. ಲಾವಣ್ಯವತಿಯರಾದ ಕನಕಲತೆ-ಕಾಂತಿಮತಿಯರೆಂಬ ರುದ್ರಕನ್ನಿಕೆಯರು ಸಹಾ ಹೂವಿನ ಕಾಯಕದ ಮೇಲೆ ನಿಯಮಿಸಲ್ಪಟ್ಟವರು ಪುಷ್ಪೋದ್ಯಾನಕ್ಕೆ ಹೋದಾಗ ಪುಷ್ಪದತ್ತನಿಗೆ ಮೋಹಿಸಿದರು. ಆ ಪುಷ್ಪದತ್ತನಾದರೂ ಈ ಚಲುವೆಯರಿಗೆ ಸೋತನು. ಸರ್ವಸಾಕ್ಷಿಭೂತನಾದ ನೀಲಕಂಠನಿಗೆ ಇದೆಲ್ಲ ತಿಳಿಯದೆ ಉಳಿಯಬಹುದೇ ? ಪರಶಿವಮೂರ್ತಿಯ ಒಡ್ಡೋಲಗಕ್ಕೆ ಆ ಮೂವರು ಹೂವಿನದಂಡೆ ಮತ್ತು ಸರಗಳೊಡನೆ ಬರಲು ಅವರವರ ಲಕ್ಷಣಗಳನ್ನು ನೋಡಿ **ಸೌಂದರಾ** ನಿನ್ನ ವಾಂಛಿತವನ್ನು ಪೂರೈಸು ಭೂಲೋಕದಲ್ಲಿ ಜನ್ಮವೆತ್ತು ಈ ಯುವತಿಯರು ಭೂಮಿಯಲ್ಲಿ ಜನಿಸಲಿ. ನೀನು ಅವರೊಡನೆ ರಮಿಸು. ಇದು ಕೈಲಾಸವು ಸತ್ಯವಂತರ ಸದ್ಧರ್ಮನಿರತರ ಪ್ರಭುಸಾಂಪ್ರದಾಯಕರ ಮಹಾಸ್ಥಾನವಿದು. ಆಗ **ಸೌಂದರನು** ಕಣ್ಣಿಗೆ ನೀರುತಂದನು. ದೀನಬಂಧುವೇ ಅಪರಾಧವನ್ನು ಕ್ಷಮಿಸು; ಭವಮಾಲೆಗೆ ನಾನು ಒಳಗಾದರೆ ನಾನು ನಿನ್ನ ಪಾದವನ್ನು ಕಾಣುವದೆಂತು ? ಆದುದರಿಂದ ನನ್ನನ್ನು ಮನ್ನಿಸಿಬಿಡು ಎಂದು ಅತಿದೈನ್ಯದಿಂದ ಪರಿಪರಿಯಿಂದ ಭಯಲಜ್ಜಿತನಾಗಿ ವ್ಯಸನಪಡುತ್ತ ಬೇಡಿ

ಕೊಂಡನು. ಸದಾಶಿವನು ದಯೆಗೊಂಡು ಪುಷ್ಪದತ್ತನೇ ಕನಕಲತೆಯು ಶಿವಭಕ್ತಿಧುರಂಧರಳಾದ ಪಾತರದವಳಲ್ಲಿ ಪರವೆಯೆಂಬ ಹೆಸರಿನಿಂದ ಬೆಳೆಯುವಳು ; ಕಾಂತಿಮತಿಯು ಈಶಾನಶೆಟ್ಟಿ-ಶಿವದೇವಿ ಎಂಬ ಪುಣ್ಯದಂಪತಿಗಳ ಉದರದಲ್ಲಿ ಜನಿಸುವಳು ; ಆಕೆಗೆ ಸಂಕಿಲೆ ಎಂದು ಕರೆಯುವರು. ಆವರೊಡನೆ (ಅಂದರೆ ಆ ಉಭಯ ಕಾಮಿನಿಯರೊಡನೆ) ನಿನಗೆ ಸ್ನೇಹವನ್ನುಂಟು ಮಾಡುವೆನು. ನಿನ್ನ ಮನೋಭೀಷ್ಟವನ್ನು ತೀರಿಸಿಕೊ ; ಭೂಮಿಗೆ ಅವತರಿಸು **ಜಡೆಯನಯನಾರು** ಮತ್ತು **ಯಸ್ಯಜ್ಞಾನಿದೇವಿಯ**ರೆಂಬ ಸದ್ಧರ್ಮ ಜಾಯಾಪತಿಗಳ ಪವಿತ್ರವಾದ ಗರ್ಭದಿಂದುದಯಿಸಿ ಶಿವದ್ವಿಜರಿಂದ ಆಶೀರ್ವದಿಸಲ್ಪಟ್ಟು ಈ ಚೋಳನಾಡಿನಲ್ಲಿ ಪ್ರಚಂಡವಾದ ಈಶ್ವರಭಕ್ತಿಯಿಂದ ಭೂಷಿಸುವ [ನಿನ್ನನ್ನು ಮೊದಲು ಮಾಡಿ (ಅಂದರೆ ನೀನು ಶಿವಾಂಶಸಂಭೂತನಾದುದರಿಂದ ನೀನೂ ಸಹ ಸೇರಿ ಎಂದು ಇದರ ಭಾವವು)] ಅರವತ್ತುಮೂರು ಪುರಾತನಪುಂಗವರನ್ನು ಪಠಿಸು. ಆಗ ಹರಕುಮಾರನು (ಅಂದರೆ ಪುಷ್ಪದತ್ತನು) ಇಹಲೋಕದ ಭ್ರಾಮಕವಾದ ಸುಖಕ್ಕಾಗಿ ನಿತ್ಯಸುಖವನ್ನು ಹ್ಯಾಗೆ ತೊರೆಯಲಿ ಎಂದು ಗಿರಿಜಾಧವನನ್ನು ದೈನ್ಯದಿಂದ ಪ್ರಾರ್ಥಿಸಿದನು. ಆಗ ಶರ್ವನು ಅಣುಗನೇ ಅರಳಿಯು ಅಗ್ನಿಯನ್ನು ಏನು ಮಾಡಬಹುದು ; ಶಿವಭಕ್ತಿಯ ಮರ್ಮವನ್ನರಿತ ಶಿವನಿಷ್ಠರಿಗೆ ಸಂಸಾರದತೊಡರು ಎಡುರುಗಳು-ವಿಷಯಾದಿಗಳು ಏನು ತಾನೆ ಮಾಡಲಿಕ್ಕೆ ಸಮರ್ಥವಾಗಬಹುದು. ಭೂಲೋಕದಲ್ಲಿ ನಿನಗಾವ ದೋಷವೂ ತಟ್ಟದಂತೆ ನಿನ್ನ ಬೆನ್ನಹಿಂದೆಯೇ ನಾನಿರುವೆನು ; ನೀನು ನನ್ನನ್ನು ಬಯಸಿದಲ್ಲಿಯೇ ನಿನ್ನೊಡನೆ ನಾನು ಮಾತಾಡುವೆನು ; ನೀನು ಆವಾವ ಠಾವಿಗೆ ಹೋಗುವಿಯೋ ಅಲ್ಲಲ್ಲಿಗೆ ನಾನು ತಪ್ಪದೆ ಬರುವೆನು ; ನೀನು ಬೇಡಿದುದನ್ನೆಲ್ಲ ನಿಜವಾಗಿಯೂ ಕೊಡುವೆನು. ಹೀಗೆಂದು ಚಂದ್ರಮೌಳಿಯು ತನ್ನಣುಗನನ್ನು ಸಂತೈಸಲು ಪುಷ್ಪದತ್ತನು ಗಣಾಧಿಪನೇ ನಾನು ನಿನ್ನ ಬಳಿಗೆ ಬರುವದಕ್ಕೆ ಕುರುಹು ಯಾವದೆಂದು ಪ್ರಾರ್ಥಿಸಲು **ಸೌಂದರನೇ** ನೀನು ಚಾರಮನ ಪುರದಲ್ಲಿರುವ **ತಿರುವಂಜಕಳೇಶ್ವರಾ**ಲಯಕ್ಕೆ ಬಂದೊಡನೆ ನಿನ್ನನ್ನು ಬರಮಾಡಿಕೊಂಡು ನಿನ್ನ ಸ್ಥಾನವನ್ನೀಯುವೆನು. ಈ ರೀತಿಯಾಗಿ ಉಮಾಪತಿಯಿಂದ ಸಂತೈಸಲ್ಪಟ್ಟ ಶಿವಸುತನು ತಂದೆಯೇ ನಿನ್ನನ್ನು ನಂಬಿದೆನು ; ನಿನ್ನನ್ನು ನೆರೆನಂಬಿದೆನು ಎಂದು ಪಂಚವಕ್ತ್ರನಿಗೆ ಬಾರಿಬಾರಿಗೂ ಮಣಿದು ಮರ್ತ್ಯಲೋಕಕ್ಕೆ ಹೊರಡಲನುವಾದನು.

**ಸೌ**ಭಾಗ್ಯದಾಗರವಾಗಿ ನೀರಿನ ವಿಪುಲತೆಯಿಂದಲೂ ತರುಲತಾದಿ ಸರ್ವಬೆಳಸಿನಿಂದಲೂ, ಧರ್ಮಛತ್ರ, ಅರವಟ್ಟಿಗೆಗಳಿಂದಲೂ, ವಿದ್ಯಾಮಂದಿರಗಳಿಂದಲೂ, ಈಶ್ವರಭವನಗಳಿಂದಲೂ, ಸಬಲರಾದ ಕೃಷಿಕರಿಂದಲೂ, ಜಾಣರಾದ ಶಿಲ್ಪಿಗಳಿಂದಲೂ, ವಾಣಿಜ್ಯವಿಶಾರದರಿಂದಲೂ, ಚೋಳೋರ್ವಿಯು ಕಡುಪೆಂಪಿ

ನಿಂದ ಕ್ಷೋಭಿಸುತ್ತಿತ್ತು. ಇಂತೆಸೆವ ಆ ಧರೆಯಲ್ಲಿ ಪ್ರಜಾರಂಜಕನಾದ **ನರಸಿಂಗಮೊನೆಯರೆಂ**ಬ ಉಪನಾಮವುಳ್ಳ **ಉತ್ತುಂಗಚೋಳನ** ಆಳಿಕೆಗೊಳಪಟ್ಟ **ತಿರುನಾವಲೂರ** ಪಟ್ಟಣವು ಅಗ್ರಹಾರಗಳಿಂದಲೂ, ಶಿವಾಲಯಗಳಿಂದಲೂ ನಾನಾತರದ ಕಸಬುಗಳನ್ನವಲಂಬಿಸಿದ ಪ್ರಜಾಸಮೂಹದಿಂದಲೂ ಅಲಂಕೃತವಾಗಿತ್ತು. ಪತಿಭಕ್ತಿಯುತರಾದ ನಾರಿಯರಿಂದಲೂ, ಮಾತಾಪಿತೃಭಕ್ತರಾದ ಮಕ್ಕಳಿಂದಲೂ, ಶೌರ್ಯಸಾಹಸಯುಕ್ತರಾದ ಬಂಟರಿಂದಲೂ, ಇಂದ್ರಿಯನಿಗ್ರಹಪರಿಣತರಾದ ಪುರುಷರಿಂದಲೂ ಆ ಊರು ಕಂಗೊಳಿಸುತ್ತಿತ್ತು. ಶಿವಜ್ಞಾನಿಗಳು, ಶಿವವಿದ್ಯಾವಿಭೂಷಿತರು. ಶಿವಸೇವಾನಿರತರು, ಶೈವದಂಪತಿಗಳು ಆದ **ಜಡೆಯುನಯನಾರು, ಯಸ್ಯಜ್ಞಾನಿದೇವಿಯರು** ಪುತ್ರಕಾಂಕ್ಷಿಗಳಾಗಿ ಆ ಊರಲ್ಲಿರುವ **ವಲ್ಮೀಕಿನಾಥ**ನನ್ನು ಪೂಜಿಸುವಾಗ ಆ ತರುಣಿಗೆ ಶಿವಪ್ರಸಾದರೂಪವಾಗಿ ಒಂದು ಹೂವಿನ ಸರವು ದೊರೆಯಿತು. ಅದರಿಂದ ಹರ್ಷಪಟ್ಟು ವಿಭೂತಿರುದ್ರಾಕ್ಷವೊದಲ್ಗೊಂಡು ಸರ್ವಶಿವಲಾಂಛನ, ಶಿವಧ್ಯಾನ, ಶಿವಕಥನಗಳಲ್ಲಿ ಭಕ್ತಿಯು ದ್ವಿಗುಣಿತವಾಯಿತು. ಒಂದು ದಿನ ಯಸ್ಯಜ್ಞಾನಿದೇವಿಗೆ ಕನಸಿನಲ್ಲಿ ಓರ್ವ ಶಿವಯೋಗಿಯು ಬಂದು ಒಂದು ಮುಖದ ರುದ್ರಾಕ್ಷವನ್ನು ಆ ಸ್ತ್ರೀಯಳಿಗೆ ಕೊಟ್ಟು ನಿನ್ನ ಸಂಕಲ್ಪವು ಫಲಿಸುವದೆಂದು ಹೇಳಿಹೋದನು. ಈ ಸಂಗತಿಯನ್ನು ದೇವಿಯು ತನ್ನ ಪತಿಗೆ ನಿವೇದಿಸಿದಳು. ಆತನು ಮಡದಿಯೇ ಸತ್ಪುರುಷನೋರ್ವನು ನಿಶ್ಚಯವಾಗಿ ನಿನ್ನ ಉದರದಲ್ಲಿ ಜನಿಸುವನೆಂದು ಸಂತೋಷದಿಂದ ಹೇಳಿದನು. ಶಿವಾರ್ಚನಾಪರಳಾದ ಆ ಸತಿಗೆ ಗರ್ಭಧಾರಣೆಯಾಗಿ ಕ್ರಮವಾಗಿ ಒಂಬತ್ತು ತಿಂಗಳು ತುಂಬಿ ಸುಮುಹೂರ್ತದಲ್ಲಿ ಪ್ರಕಾಶಮಾನವಾದ ಪುತ್ರರತ್ನವನ್ನು ಹಡೆದಳು. ಪುಷ್ಪದತ್ತನಾದ ಗಣನಾಥನೇ ಈಗ ಪ್ರಸವವಾದ ಮಗುವು. ಪುತ್ರಲಾಭದ ಸಂತೋಷದಲ್ಲಿ ಶಿವಭಕ್ತರಿಗೂ ಅಂಗವಿಕಲರಿಗೂ ಉಚಿತದ್ರವ್ಯವನ್ನು ಕೊಟ್ಟು ಶಿವಾಲಯಗಳಲ್ಲೆಲ್ಲ ದೀಪಾರಾಧನೆಯನ್ನು ಮಾಡಿ ನಮ್ಮ ಚರಿತ್ರನಾಯಕನ ತಂದೆಯು ವಂಶೋದ್ಧಾರಕನಾದ ಕಂದನು ಇವನಾಗಲೆಂದು ದೇವರನ್ನು ಆಗಾಗ್ಗೆ ಬೇಡಿಕೊಳ್ಳುತ್ತ ಹುಟ್ಟಿದ ಮಗುವಿಗೆ ಜಾತಕರ್ಮವನ್ನು ಮಾಡಿ ತನ್ನ ಶಿವಜ್ಞಾನ ದೃಷ್ಟಿಯಿಂದ ಈ ಶಿಶುವಿನ ಬಗೆಯನ್ನರಿತು **ನಂಬಿಯಣ್ಣ**ನೆಂಬಭಿದಾನವನ್ನಿತ್ತು ಬಾಲಸೂರ್ಯನಂತೆ ವರ್ಧಿಸುವ ಕುಮಾರನ ಬಾಲವಿನೋದವನ್ನು ನೋಡಿ ಹಿಗ್ಗುತ್ತ ಮುಂದೆ ಪರಮಾತ್ಮನನ್ನೆ ಕುಂಟಣಿಗನನ್ನು ಮಾಡುವನು ಎಂಬಂತೆ ನಡೆಗಲೆಯುತ್ತಲೂ, ಮತ್ತು ಪರಿವೆನಾಚಿ-ಸಂಕಿಲೆ-ನಾಚಿಯರನ್ನಪ್ಪುವ ಬಾಹುಗಳಿವೇ ಎಂದು ತೋರಿಸುವಂತೆ ತೋಳುಗಳನ್ನಾಡಿಸುತ್ತಲೂ ಮುಂದೆ ಶಿವನನ್ನು ಕರೆದು ಓ ಎನ್ನಿಸುವನೋ ಎಂಬಂತೆ ನುಡಿಗಲಿಯುತ್ತಲೂ ಇರುವ ಬಾಲಲೀಲೆಯನ್ನು ನೋಡಿ ಆನಂದಪಡುತ್ತಿದ್ದನು.

**ನಂ**ಬಿಯು ಚಿಕ್ಕಮಕ್ಕಳೊಂದಿಗೆ ಬೀದಿಯಲ್ಲಾಡುವಾಗ ರಾಜನ ಮದವೇರಿದ ಪಟ್ಟದಾನೆಯು ಮಾವುತನನ್ನು ಘಾತಿಸಿ ಕಟ್ಟಿದ ಸರಪಳಿಯನ್ನು ಹರಿದೊಗೆದು ಹಾವಳಿಯನ್ನು ಮಾಡುತ್ತ ಭಯಂಕರವಾಗಿ ಧ್ವನಿಗೈಯ್ಯುತ್ತ ಬರಲು ಹಾದಿಯಲ್ಲಿ ನೆರೆದವರೆಲ್ಲ ಪಲಾಯನವನ್ನು ಹೇಳಿದರು ; ಬಾಲಕರೆಲ್ಲರೂ ಭೀತಿಯಿಂದ ಓಡಿಹೋದರು ಆದರೆ ನಮ್ಮ ನಂಬಿಯು ಮಾತ್ರ ಪರ್ವತಪ್ರಾಯನಾಗಿ ನಿಂತು ಬಳುಕದೆ ಒಂದಾದರೂ ಹೆಜ್ಜೆಯನ್ನು ಕಿತ್ತಿಡದೆ ತಾನು ನಿಂತಸ್ಥಾನದಿಂದ ಕದಲದೆ ಮೀರಿದ ಧೈರ್ಯದಿಂದ, ತನ್ನ ಹತ್ತಿರವೇ ಬರುವ ಮತ್ತಗಜವನ್ನು ನೋಡುತ್ತ ಸ್ಥಿರವಾಗಿ ನಿಂತುಬಿಟ್ಟನು. ಆ ಕರಿಯ ಆರ್ಭಟಕ್ಕೆ ಊರಲ್ಲಿ ಹಾಹಾಕಾರ ಉಂಟಾಗಲು ಚರಿತ್ರನಾಯಕನ ತಾಯ್ತಂದೆಗಳು ತಮ್ಮ ಮಗನು ಆನೆಯ ಕೈಗೆ ಸಿಕ್ಕಿದನೆಂದು ಶಿವಧೋ ಎಂದು ಕೂಗುತ್ತ ಕಸಿವಿಸಿಯಿಂದ ಗೋಳಾಡಿದರು. ಅಷ್ಟರಲ್ಲಿ ಆ ದ್ವಿರದವು ನಂಬಿಯನ್ನು ಕಂಡಾಕ್ಷಣವೇ ಅದರ ಮದವೆಲ್ಲ ಇಳಿದು ಶಾಂತವಾಗಿ ಪ್ರೀತಿಯಿಂದ ಆ ದೇವಕುಮಾರನನ್ನು ನೋಡುತ್ತ ಭಕ್ತಿಯನ್ನು ತೋರ್ಪಡಿಸುತ್ತ ಬಹುಮೆಲ್ಲನೆ ಮಗುವಿಗೆ ನೋವಾಗದಂತೆ ಮುಂದೆ ಈ ತರಳನು ಐರಾವತವನ್ನಡರಿ ಶಿವಲೋಕನನ್ನೈದುವನು ಎಂದು ತೋರಿಸುವದೋ ಎಂಬಂತೆ ತನ್ನ ತಲೆಯಲ್ಲಿರಿಸಿಕೊಂಡು ತನ್ನಷ್ಟಕ್ಕೆತಾನೆ ರಾಜಬೀದಿಯಲ್ಲಿ ಬರುತ್ತಿರಲು **ಉತ್ತುಂಗಚೋಳರಾಜನು** ಆಶ್ಚರ್ಯಗೊಂಡು ತನಗೆ ಮಗನಿಲ್ಲದ್ದರಿಂದ ತನ್ನ ಪಟ್ಟಕ್ಕೆ ಈತನೇ ಯೋಗ್ಯನೆಂದು ಬಗೆದು ಆತನ ಮಾತಾಪಿತರನ್ನು ಕರೆಯಿಸಿ ನಿಮ್ಮ ಹಸುಳನನ್ನು ನನಗೆ ಕೊಡಿರೆಂದು ಬಹುಪರಿಯಿಂದ ಬೇಡಿಕೊಂಡು ಅವರಿಗೆ ಯಥೇಚ್ಛಧನಕನಕಾದಿಗಳಿಂದ ಸನ್ಮಾನಿಸಲು ಹಡೆದವರು ತಮ್ಮ ಸುತನು ಯಾವ ಪರಿಯಿಂದಲಾದರೂ ಸುಖದಿಂದಿದ್ದರೆ ಸಾಕೆಂದು ಒಪ್ಪಿದರು. **ನರಸಿಂಗಮೊನೆಯರ** ಅಪ್ಪಣೆಯ ಮೇರೆಗೆ ಪ್ರಜೆಗಳೆಲ್ಲರೂ ನಂದಿಧ್ವಜಗಳಿಂದಲೂ, ತೋರಣಗಳಿಂದಲೂ, ರಂಭಾಸ್ತಂಭಗಳಿಂದಲೂ, ಶೋಭನವಾದ ಕಲಶಗಳಿಂದಲೂ ಊರನ್ನು ಶೃಂಗರಿಸಿದರು. ಪುತ್ರೋತ್ಸವವು ವಿಜೃಂಭಣೆಯಿಂದ ನಡೆಯಿತು. ಭೂಪಾಲಕನು ಮಹಿಷಿಯನ್ನು ಕರೆದು ತೇಜೋಮಯನಾದ ಅರ್ಭಕನನ್ನು ಅವಳ ಉತ್ಸಂಗದಮೇಲೆ ಕುಳ್ಳಿರಿಸಿ ದೇವರು ತನಗೆ ಮಗುವನ್ನು ಕರುಣಿಸಿದನೆಂದು ವಿವರಿಸುವಾಗ ರಾಜದಂಪತಿಗಳಿಗೆ ಆದ ಆನಂದವನ್ನು ವರ್ಣಿಸುವದು ಸುಲಭವಲ್ಲ. ಚೆಲುವಾದ ಮಗನ ಅಂದವಾದ ಮೈಕಾಂತಿಯನ್ನು ಕಂಡು **, ಸೌಂದರ**ನೆಂದು ಕರೆಯುತ್ತ ದಿನಕ್ರಮೇಣ ಬಾಲಕನು ವಿದ್ಯಾವಿಭೂಷಿತನಾಗಿ, ಕರಿತುರಗ ಶಿಕ್ಷಣದಲ್ಲಿ ನಿಪುಣನಾಗಿ ಪ್ರಾಯವು ತಲೆದೋರಲು ಯುವರಾಜಪಟ್ಟವನ್ನು ಕಟ್ಟಿ ತನ್ನ ಬುದ್ಧಿವಂತನಾದ ತುಂಬುರಾಮಾತ್ಯನಿಗೆ ರೂಪದಲ್ಲಿಯೂ, ವಯಸ್ಸಿನಲ್ಲಿಯೂ, ಲಲಿತಕಲೆಯಲ್ಲಿಯೂ, ತಕ್ಕವಧುವಾಗಿ

ರುವ ಸತ್ಕುಳಜಾತಳಾಗಿರುವ ಸುಶೀಲ ಕನ್ನಿಕೆಯನ್ನು ಗೊತ್ತು ಹಚ್ಚಲಿಕ್ಕೆ ಆಜ್ಞೆಯನ್ನಿತ್ತನು. ಆಗ ತಕ್ಕ ಕನ್ಯೆಯನ್ನು ಹುಡುಕುತ್ತ ಹುಡುಕುತ್ತ ಕಡೆಗೆ ಸತ್ಕುಲೋತ್ಪನ್ನಳಾದ **ತಿರಿಮುಂದನಪುರದ** ರಾಜಕನ್ನಿಕೆಯಾದ ಸಕಲ ಶುಭಲಕ್ಷಣಾನ್ವಿತಳಾದ **ಸುರರತ್ನಮಾಲೆ** ಯೆಂಬವಳನ್ನು ಕಂಡು ಈ ವಧುವೇ ನಮ್ಮ **ಸೌಂದರ** ರಾಜಕುಮಾರನಿಗೆ ಸಕಲ ವಿಧದಿಂದಲೂ ಯೋಗ್ಯಳೆಂದು ನಿರ್ಧರಿಸಿ. ತಮ್ಮ ಅರಸುಕುಮಾರನ ಯೋಗ್ಯತೆಯನ್ನೆಲ್ಲ ಅಲ್ಲಿಯ ದೊರೆಗೆ ತಿಳುಹಿಸಿ ಅವರನ್ನೊಡಂಬಡಿಸಿ ತಿರುಗಿ, ಚೋಳಭೂಪತಿಗೆ ಅದನ್ನೆಲ್ಲ ವಿವರಿಸಿ ನಿಪುಣರಾದ ಜ್ಯೋತಿಷ್ಕರನ್ನು ಕರಿಸಿ ಅಕ್ಷತಾರೋಪಣದ ಶಿವಲಗ್ನವುಳ್ಳ (?) ಶುಭಮುಹೂರ್ತವನ್ನು ನಿಶ್ಚೈಸಿ ವಿವಾಹಪತ್ರವನ್ನು ಬರೆದು **ತಿರಿಮುಂದನಕ್ಕೆ** ಚಾರರಿಂದ ಕಳುಹಲು ಅಲ್ಲಿ ಲಗ್ನಮಂಟಪವನ್ನು ರಾಜನಘನತೆಗೆ ತಕ್ಕಂತೆ ವೈಭವದಿಂದ ಬಹು ಅಂದವಾಗಿ ಮಾಡಿದರು.

**ಇ**ತ್ತ ಕೈಲಾಸದಲ್ಲಿ ಸಹಸ್ರಾಕ್ಷನಾದ ಶಂಕರನು ತನ್ನರಸಿಯೊಡನೆ ದಾಕ್ಷಾಯಣಿಯೇ ನನ್ನ ಕುವರನಾದ ಪುಷ್ಪದತ್ತನು ತಿರುವಾವಲೂರಲ್ಲಿ **ಜಡೆಯುನಯುನಾರು-ಯಸ್ಯಜ್ಞಾನಿದೇವಿ** ಎಂಬ ಶಿವದ್ವಿಜರಲ್ಲಿ ಜನಿಸಿ ಈಗ **ನರಸಿಂಗಮೊನೆಯ** ರಾಜನಪುತ್ರನಾಗಿ ಆತನ ಲಗ್ನಸಿದ್ಧತೆಯು ಈಗ ನಡೆದಿರುವದು. ರುದ್ರಕನ್ನಿಕೆಯರಾದ ಕನಕಲತೆ-ಕನಕಮತಿಯರು ಭೂಮಿಯಲ್ಲಿ ಅವತರಿಸಿ ಪರವೆನಾಚಿ ಮತ್ತು ಸಂಕಿಲೆನಾಚಿ ಎಂಬ ಹೆಸರನ್ನು ತಳೆದಿರುವರು. **ತಿರಿಮುಂದನಪುರ**ದಲ್ಲಿ ಮಾಂಗಲ್ಯಧಾರಣೆಯು ನಡೆಯದಂತೆ ಮಾಡಿ ನನ್ನ ಅಣುಗನು ಆ ರುದ್ರಕನ್ಯೆಯರೊಡನೆ ಕಲೆಯುವಂತೆ ಮಾಡಿ ಆ ಕುಮಾರನಲ್ಲಿ ಶಿವಭಕ್ತಿಯು ಪ್ರದೀಪ್ತವಾಗುವಂತೆ ಮಾಡುವೆನು.

**ಪು**ಣ್ಯಮೂರ್ತಿಯಾದ ಶಂಕರನು ಅತಿವೃದ್ಧಮುನಿಯಾಗಿ ಲಲಾಟದಲ್ಲಿ ಪ್ರಕಾಶಮಯವಾದ ಭಸಿತವುಳ್ಳವನಾಗಿ ಆಗಾಗ್ಗೆ ಮೈನಡಗಿಸುತ್ತಾ ಪಾದದಲ್ಲಿ ಒಡಕ ಹಾವುಗೆಗಳನ್ನು ಧರಿಸಿ ಶಿವನಾಮವನ್ನು (ಕೇಳಿದವರಿಗೆಲ್ಲ ಮಂಗಲವೇ ಭಾಸವಾಗುವಂತೆ) ಉಚ್ಚರಿಸುತ್ತಾ ಲಗ್ನದ ಹಂದರದಲ್ಲಿ ಬಂದು ಏನಿದು? ನನ್ನ ದಾಸಿಯ ಮಗನ ಪರಿಣಯವೋ? ಎನ್ನಲು ಅಲ್ಲಿಯ ಪುರೋಹಿತರು ಸಿಟ್ಟಿಗೆದ್ದು ಆ ತಪಸ್ವಿಯನ್ನು ಹೊರಗಟ್ಟುತ್ತಿರುವಾಗ ಆತನು ಅಲ್ಲಿಯ ಮಂಗಲ ಕಲಶಗಳನ್ನು ಒದೆದು ಅಲ್ಲಿಯ ಆರತಿಗಳನ್ನಾರಿಸಿ ದಾಸಿಯಮಗನ ಲಗ್ನವಂತೆ ಎಂದು ಅನ್ನುತ್ತಾ ಅಲ್ಲಿಯ ಜೋಯಿಸರಿಂದ ಪ್ರಹರಿಸಲ್ಪಟ್ಟು ನಿಮ್ಮ ಮದುಮಗನು **ತಿರುವಾರೂರ**ಲ್ಲಿರುವ ನಮ್ಮ ದಾಸಿಯ ಮಗನು ಈ ಬಗೆಗೆ ನನ್ನ ಹತ್ತಿರ ಪ್ರಮಾಣಪತ್ರವಿದೆ ಎಂದು ನಿರ್ಭೀತಿಯಿಂದ ಹೇಳಲು ಆಗ ಅಲ್ಲಿಯ ಪ್ರಮುಖರು ಮೊದಲು ಮಾಡಿ ಯೋಗಿವರನನ್ನು ಹೀಯಾಳಿಸಿ ಬಲುಮೆಯಿಂದ ಹೊರಗೆ

ತಳ್ಳಿದರು. **ತಿರುವಾವ**ಲೂರಿಂದಾ (ಪಾಠಾಂತರವು ತಿರುವಾರೂರು) ಹೊರಟು **ತಿರಿಮುಂದನ**ಪುರದ ಮಧ್ಯಮಾರ್ಗದಲ್ಲಿ ಅತಿ ಸಂಭ್ರಮದಿಂದ ಹೋಗುವ ವಿವಾಹೋತ್ಸುಕವಾದ ಸಮೂಹವನ್ನು ನೋಡಿದೊಡನೆ ನಮ್ಮ ಕೃತಕಯತಿಯು ಎಲವೋ ನೀವೆಲ್ಲಿಗೆ ಹೊರಟಿರುವಿರಿ ? ನಮ್ಮ ತೊತ್ತಿನ ಮಗನಾದ ನಂಬಿಯು ಲಗ್ನಕ್ಕೋ ನಮ್ಮ ದಾಸೀಪುತ್ರನ ಪರಿಣಯವನ್ನು ಈಗಲೇ ನೆರವೇರಿಸ ಬೇಕೋ ? ಸರಿ ಒಳ್ಳೇ ಸಾಹಸದ ಕಾರ್ಯ ಹೀಗೆನ್ನಲು ನೆರೆದವರೆಲ್ಲರು ಅಚ್ಚರಿ ಪಡುತ್ತ ದಿಗ್ಭ್ರಾಂತರಾದರು ; ಇದೆಲ್ಲಿಯ ಮುಪ್ಪಿನಮುದುಕ ? ಬಲು ಹಣ್ಣಾಗಿ ರುವನು, ರುದ್ರಾಕ್ಷಗಳನ್ನು ಧರಿಸಿರುವನು, ಛಿದ್ರವಾದ ವಸ್ತ್ರಗಳನ್ನು ಹಾಕಿ ಕೊಂಡು ಅಟ್ಟಹಾಸದಿಂದ ಬರುತ್ತ ಅಮಂಗಲವನ್ನು ನುಡಿಯುತ್ತಿರುವನು. (ಆದರೆ ಮೇಲಿಂದಮೇಲೆ ಶುಭವಾದ ಶಿವಾಕ್ಷರಗಳನ್ನು ಮಾತ್ರ ಧ್ಯಾನಿಸುತ್ತಿರು ವನು.) ಚನ್ನಾಗಿ ವಿಚಾರಿಸಬೇಕಾಯಿತೆಂದು ಕೆಲವರು ; ಉಳಿದವರು ಇವ ನೇನೋ ಕುಹಕನು ಕಾಣಿಸುವನು ; ಇವನ ಗೊಡವೆಗೆ ಹೋಗದಿದ್ದರಾಯಿ ತೆಂದು ಉಪೇಕ್ಷೆ ಮಾಡಲು ಅವರನ್ನು ಆ ಯತಿಯು ಅಡ್ಡಗಟ್ಟಿ ನನ್ನ ದಾಕ್ಷಿಣ್ಯವಿ ಲ್ಲದೆ ಎಲ್ಲಿಗೆ ಹೊರಟಿರಿ ನಿಲ್ಲಿರಿ ನಮ್ಮ ನಂಬಿಯನ್ನು ಕಳಿಸಿಕೊಡಿರಿ ಎಂದು ಮೇಲಿಂದಮೇಲೆ ಅರಚುತ್ತಿರಲು ನಂಬಿಯ ಬಳಿಯಲ್ಲಿದ್ದ **ತುಂಬರನು** (ಪಾಠಾಂ ತರವು ತುಂಬುರನು-ಈತನು ಆತನ ಮಂತ್ರಿಯು) ಆ ಮುದಿತಪಸ್ವಿಯ ಪತ್ರ ವನ್ನು ಓದಬೇಕೆಂದು ಲವಲವಿಕೆಯಿಂದ ಅದನ್ನು ತಕ್ಕೊಂಡು ನೋಡುವಷ್ಟರಲ್ಲಿ **ತಿರಿಮುಂದನದ** ಚಾರರು ಓಡುತ್ತ ಬಂದು ವಿವಾಹಮಂಟಪದಲ್ಲಿ ತಾಪಸಿಯು ಮಾಡಿದ ವಿಚಿತ್ರ ಸಂಗತಿಗಳನ್ನು ತಿಳುಹಲು ಸಕಲರು ಕೋಪವನ್ನು ತಾಳಿದರು. ಬಹಳ ಸಿಟ್ಟಗೆದ್ದ **ಸೌಂದರನು** ಆ ಪ್ರಮಾಣಪತ್ರವನ್ನು ಭರ್ರನೆ ತಕ್ಕೊಂಡು ಹರಿದು ಹಾಕಿ ಮುಪ್ಪಿನ ತಪಸ್ವಿಯನ್ನು ನೂಕಿದನು. ಆಗ ಮುನಿಯು ಕೃದ್ಧ ನಂತೆ ನಟಿಸುತ್ತ ಎಲವೋ ನೀವು ಆ ಪತ್ರವನ್ನು ಹರಿದೊಗೆದರೆ ನನ್ನ ಹತ್ತಿರ ಮೂಲ ಪತ್ರವಿದೆ ಇಕೋ ಈ ನಂಬಿಯು ನಮ್ಮ ತೊತ್ತಿನಮಗನು ಎಂದು ಆಗ್ರಹಮಾಡುತ್ತಿರಲು ತುಂಬರನು ಆ ಮೂಲಪತ್ರವನ್ನು ನೋಡುತ್ತಾನೆ ? ಅದರಲ್ಲಿ ಹೀಗೆ ಬರೆದಿತ್ತು :—ಗಂಗೆಗೊಂಡ ಚೋಳನು ಪೊನ್ನಾಂಬಲವ ಮಾಡಿ ಸಿದ ಈಶ್ವರ ಸಂವತ್ಸರದ ಮಾಘ ಬಹುಳ ಚತುರ್ದಶಿ ಸೋಮವಾರ ದಿವಸ ಶೈವ ಕುಲತಿಲಕ ವಿಶ್ವೇಶ್ವರನಿಗೆ ನಮ್ಮ ವಂಶಾವಳಿಯವನಾದುದರಿಂದ ನಮ್ಮ ಮನ ವೊಪ್ಪಿ ನಾವು **ಜಡೆಯನಯನಾರು-ಯಸ್ಸಜ್ಞಾನಿದೇವಿ** ನಮ್ಮ ಮಗನಾದ ನಂಬಿಯನ್ನು ನಿಮಗೆ ತೊತ್ತಾಗಿ ಕೊಟ್ಟಿರುತ್ತೇವೆ. ಇದಕ್ಕೆ ಸಾಕ್ಷಿಗಳು :— **ತಿರುವೆಣ್ಣುನಲ್ಲೂರ** ವೇದಮೂರ್ತಿ ಈಶಾನ್ಯಭಟ್ಟರು ಮೊದಲಾದ ಮಹಾಜ ನರು ; ಮೂಲಸ್ವಾಮಿಗಳ ಕೈಬರಹ. ಇದೆಲ್ಲವನ್ನು ಕಂಡು ಚೋಳಮಹೀ

ಶನು ಆಲೋಚನೆಗೊಳಗಾಗಿ ದೈವಸಂಕಲ್ಪಕ್ಕೆ ಪ್ರತ್ಯವಾಯವಿಲ್ಲೆಂದು ತುಂಬರ ಮಂತ್ರಿಯ ಅಭಿಪ್ರಾಯದಂತೆ ಓಲೆಯಲ್ಲಿರುವ ವಿಷಯವನ್ನು **ತಿರುವೆಣ್ಣುನಲ್ಲೂರಿ**ನಲ್ಲಿ ವಿಚಾರಿಸಬೇಕೆಂದು ಅಲ್ಲಿಗೆ ತನ್ನ ಪ್ರಧಾನನನ್ನು ಕಳಿಸಿದನು. ಚಕಿತನಾಡ **ಸೌಂದರನು** ಅವನೊಡನೆ ಹಿಂಬಾಲಿಸಿದನು. ಅಲ್ಲಿ ನೆರೆದ ಸಭೆಯವರನ್ನು ಕುರಿತು ಈ ಋಷಿಯು ನಮ್ಮ ಮದುವೆಗೆ ಅಡ್ಡಬಂದಿರುವನು; ನೀವು ಈತನನ್ನು ಬಲ್ಲಿರಾ ? ಎಂದು ದೇವಕುಮಾರನು ಕೇಳಲು ಅವರು ನಾವರಿಯವೆಂದರು. ಆಗಲಾ ಶಿವಸುತನು ಸಿಟ್ಟಿಗೆದ್ದುದನ್ನು ತುಂಬರನು ನೋಡಿ ಆ ಪತ್ರವನ್ನು ಸಭೆಯಲ್ಲಿ ಓದಿದನು. ಆಗ ಸಭೆಯವರು ಈ ಸಂಗತಿಯು ನಮಗೆ ತಿಳಿಯದೆನ್ನಲು ಆಗ ಯತಿಶ್ರೇಷ್ಠನು ಆ ಸಭೆಯಲ್ಲಿರುವವರನ್ನು ಲಕ್ಷಿಸಿ, ರುದ್ರಭಟ್ಟರೇ, ಮಹೇಶ್ವರಭಟ್ಟರೇ ಒಳಿತಾಗಿರುವಿರಾ ? ಸಹಸ್ರವೇದಿಗಳೇ, ಶಂಕರಭಟ್ಟರೇ, ಇಂದು ಶೇಖರದೀಕ್ಷಿತರೇ ನೆಟ್ಟಗಿರುವಿರಾ ? ಈಶಾನ್ಯಭಟ್ಟರೇ ಕುಶಲವೇ ? ಪಶುಪತಿಗಳೇ ಸುಖವಾಗಿರುವಿರಾ ? ವಾಮದೇವರೇ ಕ್ಷೇಮವಾಗಿರುವಿರಾ ? ಎಂದು ಅವರ ಗೋತ್ರ ಸೂತ್ರ ಪ್ರವರ, ಪಿತಾಮಹರ ಪರಿವಿಡಿಗಳನ್ನು ಹೇಳಲು ಇದೆಲ್ಲವೂ ಸತ್ಯವೆಂದು ಅವರೊಡಂಬಟ್ಟು ತಪಸ್ವಿಗಳೇ ನಿಮ್ಮ ನೆಲೆಯಾವುದೆಂದು ಕೇಳಿದರು. ಅದಕ್ಕೆ ಆ ಮುಪ್ಪಿನವರು ನಾವು ಇಲ್ಲಿ ಚಿರಕಾಲವಿದ್ದೆವು ; ನಮ್ಮ ಜನನವು ಈ ಸುಕ್ಷೇತ್ರದಲ್ಲಿಯೇ ಆಯಿತು ; ೧೬ ವರ್ಷಪ್ರಾಯದಲ್ಲಿ ಕಾಶೀಕ್ಷೇತ್ರಕ್ಕೆ ದಯಮಾಡಿಸಿದೆವು; ನಮ್ಮ ಹೆಸರು ವಿಶ್ವೇಶ್ವರಪ್ರಭುಗಳು.

ತಾಪಸಿಯು ತನ್ನ ಹಳೇ ಸಂಬಂಧವನ್ನು ಪ್ರಕಾಶಪಡಿಸುತ್ತ ಅಲ್ಲಿರುವವರ ಬಾಂಧವ್ಯವನ್ನು ವಿವರಿಸುತ್ತ ಕೇವಿಯಿಂದಿರಲು ನೆರೆದವರಲ್ಲಿ ಒಬ್ಬನು ಇದು ನಮ್ಮ ತಂದೆಯ ಸಾಕ್ಷಿಯು ಅಹುದೆಂದು ಒಪ್ಪಿದನು. ಅಷ್ಟರಲ್ಲಿ ಮತ್ತೊಬ್ಬನು ಇದು ನಮ್ಮ ಯಜಮಾನರ ಕೈಬರಹವೆಂದು ಹೇಳಿದನು. ಆಗ **ಸೌಂದರನು** ಬರೆದವರು ಮತ್ತು ಸಾಕ್ಷಿಹಾಕಿದವರು ಪರಲೋಕವಾಸಿಗಳಾಗಿರುವರು. ಆದುದರಿಂದ ಸತ್ಪುರುಷರಾದ ನೀವು ಈ ರೀತಿ ನುಡಿಯಬಹುದೇ ? ಎಂದು ಬೆದರಿಸಿ ಆ ಪತ್ರವನ್ನು ಕಸಿದುಕೊಂಡು ಪುನಃ ಹರಿದುಹಾಕಿ ಎಲೈ ಪಿತ್ತನೇ ಎಷ್ಟೊಂದು ನಿನ್ನ ಅಲೌಕಿಕವಾದ ವಿಲಕ್ಷಣ ಕೃತಕಪತ್ರವಿದು ಎಂದು ಅಬ್ಬರಿಸಲು ಎಲೋ ಮಗನೇ ನೀನು ಆ ಮೂಲಪತ್ರವನ್ನು ಸಹಾ ಹರಿದುಹಾಕಿದರೆ ನನ್ನಲ್ಲಿ ಪಡಿಪತ್ರವಿದೆ ನೋಡೆಂದು ತೋರಿಸಲು ಅದನ್ನು ನೋಡಿ ರೋಷಾಕುಲನಾಗುತ್ತ ಜಪ್ಪಿಸಿ ಅದನ್ನು ಸಹಾಕಸಿದೊಗೆಯಲು ನಿನ್ನ ಈ ಪರಿಯ ಪರಿಮಿತ (?) ಸಾಹಸಕ್ಕೆ ಬಳಕುವೆನೇನು ? ಅಗೋ ಅಲ್ಲಿ ಶಿವಾಲಯದಲ್ಲಿ ಇನ್ನೂ ಮೂರು ಪತ್ರಗಳನ್ನಿಟ್ಟಿರುವೆನು, ನಡೆ ಎಂದನ್ನುತ್ತಾ ಆ ಶಿವಾಲಯದಲ್ಲಿ ಪಾದರಕ್ಷೆಗಳನ್ನು ತೆಗೆ

ಯದೆ ಪ್ರವೇಶಮಾಡಲು ಈ ಮರುಳ ಅವಿಚಾರಿಯಾದ ಮುದುಕನನ್ನು ತರಿದಿಕ್ಕಬೇಕೆಂದು **ಸೌಂದರನು** ಬೆನ್ನಟ್ಟಲು ಆ ಯತಿವರನು ಆ ಮಹಾಲಿಂಗದಲ್ಲಿಯೇ ಅಡಗಿದನು.

ಆಗ **ನಂಬಿಗೆ** ಆನಂದಾಶ್ಚರ್ಯಭಯದುಃಖವಾಗಿ ಪೂರ್ವವಾಸನೆಯು ಮೆಲ್ಲನೆ ತಲೆದೋರಿ ರೋಮಾಂಚನವಾಗಿ ನಿಷ್ಕಲನಾದ ಶಂಕರನನ್ನು ನುತಿಸಲು ನಿರಂಜನಸಾರ್ವಭೌಮನಾದ ಲಿಂಗದೇವನು ಸಾಕಾರವನ್ನು ತಾಳಲು ನಂಬಿಯು ಮಹಿಮನಡಿಗಳಿಗೆರಗಿ ಪರಮನೇ ಈಪರಿ ನನ್ನನ್ನು ಕಾಡುವದೇ ನನ್ನನ್ನು ಭೂಮಿಯಲ್ಲಿ ನಿರ್ಗತಿಕನನ್ನಾಗಿ ಮಾಡಿಬಿಡುವದುಚಿತವೇ ? ಎಂದು ಕಂಬನಿಗರೆಯಲು ಆಗ ದೇವೋತ್ತಮನು ನಿಜಸುತನನ್ನು ವೈದಡವಿ ಸಂತೈಸಿ ಮಗನೇ ನೀನಂಜದಿರು ಈ ಸುವರ್ಣ ತಾಳಗಳನ್ನು ತಗೆದುಕೋ ನನ್ನನ್ನು ಪಾಡು ಎನ್ನಲು ನಂಬಿಯು ನನಗೆ ಅದು ಬಾರದೆನ್ನಲು ನೀನು ನನಗೆ ಪಿತ್ತನೇ ಎಂದು ಬೈದಿಯಲ್ಲ ಅದರಂತೆ ಪಿತ್ತನೇ ಎಂದು ಮೊದಲಗೊಂಡು ಪಾಡು ನಿನಗೆ ಕಿನ್ನರ ಸ್ವರವನ್ನು ಮತ್ತು ವಾಚಾಸಿದ್ಧಿಯನ್ನು ಈಯುವೆನೆಂದನು. ಆಗ ಪ್ರಭುವಿನ ನಿರೂಪಣೆಯಂತೆಯೇ ಶಿವಸುತನು ಭಕ್ತಿರಸದಿಂದ ತಿರುಪಾಡುಗಳನ್ನು ಪಾಡಲು ಸದಾಶಿವನು ಪ್ರೀತನಾಗಿ ನಂಬಿಯನ್ನು ಕಾರುಣ್ಯದೃಷ್ಟಿಯಿಂದ ನೋಡಿ ಮೊದಲನೇ ಸಲದ (ನಂದಿಮುದ್ರೆಯ) ಪಡಿಹೊನ್ನುಗಳಿವು ತೆಗೆದುಕೊ ; ಇನ್ನು ಮೇಲೆ ಶಿವಾಲಯಗಳಿದ್ದಲ್ಲಿ ಹೋಗಿ ತಿರುಪಾಡುಗಳನ್ನು ಪಾಡು ನಿನಗೆ ಪ್ರತಿದಿವಸವೂ ಪಡಿಹೊನ್ನುಗಳನ್ನು ಕೊಡುವೆನು ಎಂದು ಆತನ ಶಿರಸ್ಸಿನ ಮೇಲೆ ತನ್ನವರದ ಹಸ್ತವನ್ನಿಟ್ಟು ತಿರುವೆಣ್ಣುನಲ್ಲೂರಲಿಂಗದಲ್ಲಿಯೇ ಮಾಯವಾದನು. ಇದೆಲ್ಲವನ್ನು ಮಗ್ಗಲಲ್ಲಿದ್ದ ತುಂಬುರ ಮಂತ್ರಿಯು ನೋಡಿ ಸಾನಂದವಿಸ್ಮಿತನಾಗಿ ದಿವ್ಯಕುಮಾರನೇ ನೀನು ದೇವಕುಮಾರನು ಅಹುದು ನೀನು ನನ್ನನ್ನು ಪೊರೆಯುವದೆಂದು ಬೇಡಿಕೊಳ್ಳಲು ಆಗ **ನಂಬಿಯಣ್ಣನು** ಅಭಯವೆಂದು ಆತನ ಮಸ್ತಕದ ಮೇಲೆ ಕೈಯಿರಿಸಿ ಸಂತೈಸಿ ಶಿವಭಕ್ತರಿಗೆ ಭೂರಿಧನದಿಂದ ತೃಪ್ತಿಪಡಿಸಿದನು. ತರುವಾಯ ಪುತ್ರವತ್ಸಲನಾದ ಲಿಂಗದೇವನು **ಸೌಂದರ**ನಿಗೆ ಕರಿತುರಗ ಪದಾತಿಗಳನ್ನೂ ಮಹಾರ್ಘಪಾದ ಒಡವೆಗಳನ್ನೂ ಪ್ರಕಾಶಮಯವಾದ ದಂಡಿಗೆಯನ್ನು (ಅಂದರೆ ಅಂದೋಲನವನ್ನು) ರಾಜಕುಮಾರನಿಗೆ ಸಲ್ಲುವ ವಿವಿಧವಸ್ತುಗಳನ್ನು ಸಹಾ ಕೊಟ್ಟನು. ಆಗ ನವೀನವಾಗಿ ದೊರೆತ ರಾಜವೈಭವದಿಂದ **ತಿರುವಾವಲೂರಿಗೆ** ಹೊರಟು ಆ ಊರ **ಸ**ಮೀಪದಲ್ಲಿ ಬರುವ ವರ್ತಮಾನವನ್ನು **ನರಸಿಂಗಮೊನೆಯರು** ಕೇಳಿ ಪುರವನ್ನೆಲ್ಲ ಪರಿಪರಿಯಿಂದ ಶೋಭೆಗೊಳ್ಳುವಂತೆ ಮಾಡಿ **ಸೌಂದರ** ಕುಮಾರನನ್ನು ಇದಿರ್ಗೊಂಡು ಬಹು ಸಂತೋಷವನ್ನು ಹೊಂದಿ ಅರಮನೆಗೆ ಕರೆದುಕೊಂಡು ಬಂದು ಸಿಂಹಪೀಠದಲ್ಲಿ ಕುಳ್ಳಿರಿಸಿ ಮಜ್ಜನವನ್ನು ಮಾಡಿ

ಶಿವಕುಮಾರನಾದುದರಿಂದ ಪಾದತೀರ್ಥವನ್ನು ಶಿರಸ್ಸಿನಲ್ಲಿ ತಳಿದು ಆತನಿಗೆ ವಿನಯವಾಗಿ ವಂದಿಸಿ ಶಿವನ ಸೌಭಾಗ್ಯವೇ, ಶಿವನಹರ್ಷದಾಗರವೇ, ಶಿವಸುಖದ ಖಣಿಯೇ, ಶಿವೋತ್ಕರ್ಷಭಾನುವೇ, ಶಿವನಮಾಂಗಲ್ಯದ ನಿಧಿಯೇ ಎಂದು ಮೊದಲಾಗಿ ಪರಿಪರಿಯಿಂದ ಕೊಂಡಾಡಿ ಆನಂದದ ಕಡಲಿನಲ್ಲಿ ಮೇರೆದಪ್ಪಿ ಈಜಾಡಿದನು. ಜನ್ಮಕೊಟ್ಟ ತಂದೆತಾಯಿಗಳಾದ **ಜಡೆಯನಯನಾರು-ಯಸೈಜ್ಞಾನಿದೇವಿಯರು** ಪ್ರೀತಿಯಿಂದ ಮಗನ ವಿಭವವನ್ನು ಕಂಡು ಹಿಗ್ಗಿ ಮಗನೆಂಬ ಭಾವದಿಂದಪ್ಪಿ ಆನಂದಾಶ್ರುಗಳನ್ನು ಸೂಸಿದರು. ಆಗ ಸಿಂಹಾಸನದಲ್ಲಿ ವಿರಾಜಮಾನನಾದ **ಸೌಂದರೇಶನು** ಈ ದಿನ ಮೊದಲ್ಗೊಂಡು ನೀಲಗ್ರೀವನೇ ನನಗೆ ತಂದೆಯು, ರುದ್ರಾಣಿಯೇ ನನಗೆ ತಾಯಿಯು, ಶಿವಭಕ್ತರೇ ನನ್ನ ಬಂಧುಗಳು, ವಿನಾಯಕ, ಕಾರ್ತಿಕೇಯರೇ ನನ್ನ ಅಣ್ಣಂದಿರು ಎಂದು ಅವರೆಲ್ಲರಿಗೂ ಬಿಂಬಿಸಿ ಆ ಮೂವರಿಗೂ (ಅಂದರೆ ಪೂರ್ವದ ಸಾ—ಸಿತರಿಗೆ) ಶಿವನೊಲುಮೆಯಾಗುವದು ನಿಶ್ಚಯವೆಂದು ಸಂತೈಸಿದನು.

**ಉ**ತ್ತುಂಗಚೋಳದೊರೆಯ ಅನುಮತಿಯಿಂದ ಮಿತಪರಿವಾರದೊಡನೆ ಶಿವಾಜ್ಞೆಯ ಮೇರೆಗೆ ಚೋಳಮಂಡಲದಲ್ಲಿ ಶಿವಾಲಯಗಳನ್ನೆಲ್ಲ ಸುತ್ತುತ್ತ ಶಿವಾರ್ಚನೆಗೈದಾಗೆಲ್ಲ ನಿತ್ಯವೂ ಭಕ್ತವತ್ಸಲನಾದ ಗೌರೀಪತಿಯಿಂದ ಪಡಿಹೊನ್ನುಗಳನ್ನು ಪಡೆಯುತ್ತ ಕೆಣಕಿಬಂದ ಪರವಾದಿಗಳನ್ನು ಜಯಿಸುತ್ತ **ತಿರುವಾವಲೂರ** ಸಮೀಪದಲ್ಲಿ ಬರುತ್ತಿರಲು **ಪಿರುಮಳಲೆಯ** ಅಧಿಪನಾದ **ಕುರುಂಬ**ನೆಂಬ ಭೂತಿಲಕನು **ಸೌಂದರೇಶನ** ಆಶ್ಚರ್ಯಕರವಾದ ಸಂಗತಿಗಳನ್ನೆಲ್ಲ ಕೇಳಿ ತನ್ನ ಸೀಮೆ, ಪರಿವಾರ, ಐಶ್ವರ್ಯಾದಿಗಳನ್ನೆಲ್ಲ ಹುಲ್ಲಿಗೆ ಸಮಾನವಾಗಿ ಕಂಡು, ಚಿತ್ತವು ತಿಳಿಯಾಗಿ ಆ ಶಿವಕುಮಾರನಡಿವಿಡಿದು ಬದುಕುವೆನೆಂದು ಬಗೆದು ಯಾವ ಸೇವೆಯನ್ನು ಮಾಡಲೆಂದು ತನ್ನೊಳು ತಾನೇ ವಿಚಾರಿಸಿ, **ನಂಬಿಯಣ್ಣ**ನು ದಿವ್ಯಕುಮಾರನೂ ಅಹುದು ಭೂವಧುರಮಣನೂ ಅಹುದು ಈತನಲ್ಲಿ ಕೈಂಕರ್ಯವನ್ನು ವಹಿಸುತ್ತಲೆ ಶಿವಕಾರುಣ್ಯವು ತನಗೆ ಪ್ರಾಪ್ತವಾಗಬೇಕಾದರೆ ಅನುಪಮಮಹಿಮನಾದ ಭಕ್ತಿಯ ಖಣಿಯಾದ ವೃಷಭೇಶ್ವರನ ಮೂರ್ತಿಯಿಂದ ಶೋಭಿಸುವ ನಿಶಾನೆಯನ್ನು ಹಿಡಿದು ಹರಸುತನ ಮೈನೆಳಲಿನಂತೆ ಇರುವದೇ ಲೇಸೆಂದು ಭಾವಿಸಿ **ನಂಬಿಯಣ್ಣ**ನಿದ್ದಲ್ಲಿಗೆ ಬಂದು ಪೊಡಮಟ್ಟು ಆತನಿಗೆ ತನ್ನಿಷ್ಟವನ್ನೆಲ್ಲ ಬಿನ್ನವಿಸಲು ಆ ದಯಾಳುವು ಸಮ್ಮತಿಸಿದನು. ಅಂದಿನಿಂದ **ಕುರುಂಬನು** ನಂದಿಧ್ವಜದ ಕಾಯಕವನ್ನು ಪ್ರೇಮದಿಂದ ಕೈಕೊಂಡನು.

**ಕು**ರುಂಬ-ತುಂಬುರೊಡಗೂಡಿ **ಸೌಂದರರು** ಬರುವಾಗ ದಾರಿಯಲ್ಲಿ ಗ್ರಾಮವೆಂಬ ಶಿವಪುರವು ಹತ್ತಿತು. ಆ ಊರಲ್ಲಿ **ಸೌಂದರೇಶನು** ಸ್ವಲ್ಪ ಹೊತ್ತಿಗೆ ಇಲ್ಲಿಗೆ ಬರುವನು ಊರನ್ನೆಲ್ಲ ತಳಿರುತೋರಣಾದಿಗಳಿಂದಲಂಕರಿಸಿ ಆ ಗಣಾಧೀ

ಶನನ್ನು ಇದಿರುಗೊಂಡು ಸನ್ಮಾನಿಸಿರಿ ಎಂಬದಾಗಿ ಅಶರೀರವಾಣಿಯಾಗಲು ಭಕ್ತ ಸಮೂಹವು ಬೆರಗಾಗಿ ಅದರಂತೆ ಮಾಡಿ **ಸೌಂದರ** ಕುಮಾರನನ್ನು ಸಕಲ ಮಂಗಲ ಸಲಕರಣೆಗಳಿಂದ ಆದರಿಸಿದರು. ಆಗ ಕಥಾನಾಯಕನು ಅಲ್ಲಿಯ ಈಶ್ವರಮಂದಿರಕ್ಕೆ ಬಂದು ತನ್ನ ನಿಯಮದಂತೆ ಹತ್ತು ತಿರುಪಾಡುಗಳನ್ನು ತಾಳ ಯುಕ್ತನಾಗಿ ಸಪ್ತಸ್ವರದಿಂದ ಇಂಪಾಗಿ ಹಾಡಿ ಗಿರೀಶನೇ, ಗಣಸಾರ್ವಭೌಮನೇ, ಗಂಗಾಧರನೇ, ಗಾಯತ್ರಿವಲ್ಲಭನೇ, ಗುಣಾತೀತನೇ, ನಿತ್ಯತೃಪ್ತನೇ ಎಂದು ಮೊದಲಾಗಿ ಆ ದೇವಶ್ರೇಷ್ಠನನ್ನು ಪರಮಾನುರಾಗದಿಂದ (ಶಿವಶರಣರು ಅಹುದು ಅಹುದು ಎಂದು ಶಿವಮಹಾತ್ಮೆಯನ್ನು ಒಪ್ಪುತ್ತಿರುವಾಗ) ಕೊಂಡಾಡಿ ನೀನು ನನಗೆ ಮೊದಲು ತೋರಿದ ರೂಪದಿಂದ ಕೃಪೆಮಾಡೆಂದು ಪವಿತ್ರಾತ್ಮನನ್ನು ಬೇಡಿದನು. ಆಗ ಆತನ ನಿಜಭಕ್ತಿಗೆ ಗುಹಪಿತನು ಬಂದು ಅವನು ಇಚ್ಛಿಸಿದ ರೂಪದಿಂದಲೇ ಪ್ರಕಟನಾಗಿ ಅಣಿಮಾದಿ ಸಿದ್ಧಿಗಳನ್ನಿತ್ತು ಘೋರವಾದ ಭವವನ್ನು ದಾಂಟಿಸುವ ತನ್ನ ಮೈ ಬೆಳಗಾದ ವಿಭೂತಿಯನ್ನು ಹಣೆಯಲ್ಲಿ ಲೇಪಿಸಿ, ಶರೀರದಲ್ಲಿ ಆಯಾಸ್ಥಾನದಲ್ಲಿ ಧರಿಸುವ ಕ್ರಮವನ್ನು ಸಾಂಗವಾಗಿ ತಿಳಿಸಿ ಅದರ ಮಹಿಮೆಯನ್ನು ಚನ್ನಾಗಿ ಬಣ್ಣಿಸಿದನು. **ಸೌಂದರನು** ಶಿವನು ಕರುಣಿಸಿದ ನಂದಿಮುದ್ರೆಯ ವರಗಳನ್ನು ಶಿವಭಕ್ತರಿಗಿತ್ತನು.

**ಮ**ಹಾದೇವನ ಸದ್ಯೋಜಾತ - ವಾಮದೇವ - ಅಘೋರ - ತತ್ಪುರುಷ - ಈಶಾನ್ಯ ಎಂಬ ಐದು ಮುಖಗಳಿಂದ ನಂದೆ - ಭದ್ರೆ - ಸುರಭಿ-ಸುಶೀಲೆ - ಸುಮನೆ ಎಂಬ ಗೋವುಗಳು ಉದಯಿಸಿದವು. ಆ ಪಾವನವಾದ ಗೋಮಯದಿಂದ ಭಸಿತ-ವಿಭೂತಿ-ಭಸ್ಮ-ಕ್ಷಾರ-ರಕ್ಷೆಗಳನ್ನು ಕ್ರಮವಾಗಿ ಸಿದ್ಧಪಡಿಸಿ ಅನುದಿನವು ಶಿವಭಕ್ತರು ಧರಿಸತಕ್ಕದ್ದು **ಬೊಮ್ಮರಸ** ಕವಿಯು ಈ ಧೇನುಗಳ ಹೊರ್ತಾಗಿ ಬಸವನ ಶಗಣಿಯಿಂದ ಮಾಡಲ್ಪಡುವ "ಸಿತ" ಭಸಿತವನ್ನು ಈ ಮೊದಲು ತಿಳಿಸಿದ ವಿಭೂತಿಯನ್ನು ಧರಿಸಿದಂತೆಯೇ ಬಳಿಸಬೇಕೆಂದು ಸೂಚಿಸಿರುವನು. ಶಿವಚಿನ್ಹಾಂಕಿತವಾದ ಸಧೃಢಕಾಯದಿಂದೆಸೆವ ಸಲಕ್ಷಣವಾಗಿರುವ ಗೋವೃಷಭಗಳ ಶಗಣಿಯನ್ನೇ ಶಾಸ್ತ್ರೋಕ್ತವಾಗಿ ತೆಗೆದುಕೊಂಡು ಯಥಾವಿಧಿಯಾಗಿ ವಿಭೂತಿಘಟ್ಟಿಗಳನ್ನು ವಿಧ್ಯುಕ್ತವಾಗಿ ಮಾಡುವದೇ ಶುಭಕರವು.

**ನಂಬಿ** ಕುಮಾರನು ಸಪರಿವಾರನಾಗಿ **ತಿರುವಾರೂರಿಗೆ** (ಪಾಠಾಂತರವು ತಿರುವಾವಲೂರು) ಬರುತ್ತಲೆ ಸ್ವಲ್ಪುದೂರವಿರುವಾಗಲೆ ಕೈಮುಗಿಯಲು **ತುಂಬುರನು** ಈ ಊರಿಗೆ ಈ ಹೆಸರು ಬರಲು ಕಾರಣವೇನೆಂದು ಕೇಳಿದನು. ಆಗ ನೃಪಕುಮಾರನು ಈ ಊರಿಗೆ ವಲ್ಮೀಕಿಪುರವೆಂಬ ನಾಮವಿತ್ತು. ಇಲ್ಲಿ **ವಲ್ಮೀಕಿನಾಥ** ಎಂಬ ಲಿಂಗವು ನೆಲಸಿರುವದು. ಸಮುದ್ರವು ಒಂದು ಸಾರೆ ಉಕ್ಕೇರಿ ಭೋರ್ಗರೆದು ಭೂವಲಯವನ್ನು ಮುಸುಕಿತು ; ಕುಲಪರ್ವತಗಳು ಒಡೆದವು,

ಅಂಬರ ವಾಯು ಪಾವಕರೆನಿಪ ಆಳವುಳ್ಳ ಭೂತಗಳು ಜಲಮಯವಾಗಲು ಸಕಲ **ದೇವಾಸುರರು** ಸಂಚಲಚಿತ್ತರಾಗಿ ರಜತಾದ್ರಿಯನ್ನು ಹತ್ತಿದರು. ಆಗ ಅಬ್ಧಿಯಲ್ಲಿ ಭೂಮಿಯು ಮುಳುಗಿ **ವಲ್ಮೀಕಿಪುರವು** ಮಾತ್ರ ತೆಪ್ಪದಂತೆ ತೇಲಾಡುತ್ತಿರಲು ಆಗ ಸುರರು ಇದು ಆರೂರೆಂದು ಅಭವನಿಗೆ ಕೇಳಿದರು. ಆಗ ಈಶ್ವರನು ಅದಕ್ಕೆ ಅದೇ ಹೆಸರೆಂದು ಹೇಳಿದನು. ಅಂದಿನಿಂದ ಈ ನಗರಕ್ಕೆ **ತಿರುವಾರೂರೆಂದು** ನಾಮವು ಪ್ರಸಿದ್ಧವಾಯಿತು. ಬರಬರುತ್ತ **ವಲ್ಮೀಕಿನಾಥನ** ಗೋಪುರವು ಕಾಣಿಸಲು ಅದನ್ನು ಆದರದಿಂದ **ಸೌಂದರನು** ನೋಡಿ ಶರಣೆಂದು ವಂದನೆಗೈದನು. ಕಥಾಪುರುಷನು ಬರುವದನ್ನು ತಿಳಿದು ಪುರಜನರೆಲ್ಲರು ಮಂಗಲಮಯವಾಗಿ ಊರಲ್ಲೆಲ್ಲ ಸಾರಣೆಕಾರಣೆ ಪೂಮಾಲೆಗಳಿಂದ ಸುಶೋಭಿತಗೊಳಿಸಿ ಪುರಪಾರ್ಶ್ವದಲ್ಲಿ ಬಂದು ಸತ್ಕರಿಸಿ ವಂದಿಸಿದರು. ಆ ಊರನ್ನು ವರ್ಣಿಸಲು ದುಸ್ತರವಾದರೂ ಆನಂದದಾಯಕವೇ ಸರಿ. ಅಲ್ಲಿ ಶಿವಾಗಮಶಾಸ್ತ್ರಗಳ ಅವಲೋಕನವೂ, ಶಿವಪೂಜಾನಿರತರ ಸಮೂಹವೂ, ಶಿವಸೇವಾಕಾಲದಲ್ಲಿ ಧ್ವನಿಯಾಗುವ ಮಂಜುಳವಾದ ಘಂಟಾನಾದವೂ, ನೋಡಿದಲ್ಲೆಲ್ಲ ಶಿವಾನುಭವ ಗೋಷ್ಠಿಗಳು, ಶಿವಲಾಂಛನಗಳಿಂದ ವಿಜೃಂಭಿಸುವ ಶಿವಾನುರಕ್ತರ ಗಡಣವು ಕಣ್ಗೆಸೆಯಲು ಚರಿತ್ರನಾಯಕನು ಪರಮಾನಂದ ಭರಿತನಾಗಿ ತಿರುವಾರೂರಿನಲ್ಲಿ ಶಿವಭೃತ್ಯನಾಗಿ ವಿಹರಿಸುತ್ತಿದ್ದನು.

**ಕ**ಥಾಪುರುಷನು ಒಂದು ದಿನ ಪರಮಾನುರಾಗದಿಂದ **ವಲ್ಮೀಕಿನಾಥ**ನನ್ನು ಅರ್ಚಿಸಿ (ಎದೆ, ತಲೆ, ಕಣ್ಣು, ಮನಸ್ಸು, ವಾಣಿ, ಪಾದಗಳೆರಡು, ಕೈಗಳೆರಡು, ತೊಡೆಗಳೆರಡು ಎಂಬ) ಅಷ್ಟಾಂಗಗಳಿಂದ ಮಣಿದು ತಿರುಪಾಡುಗಳನ್ನು ಪಾಡಲು (ಸಮಗ್ರೈಶ್ವರ್ಯ-ವೀರ್ಯ-ಕೀರ್ತಿ-ಶ್ರೀ-ಜ್ಞಾನ-ವೈರಾಗ್ಯ ಎಂಬ ಷಡ್ಗುಣ ಶೋಭಿತನಾದ) ಭಗವಂತನು ಸಾಕಾರನಾಗಿ ಬಂದು (ತ್ರಿಪುರದಹನ ಕಾಲದಲ್ಲಿ ತನ್ನ ಕಣ್ಣೀರಿನಿಂದ ಹುಟ್ಟಿದ) ರುದ್ರಾಕ್ಷಗಳನ್ನು ಕ್ರಮವರಿತು ಧರಿಸುವಂತೆ ತಿಳಿಸಿ, ಸಕಲ ಮಂತ್ರಗಳಲ್ಲಿ ಶ್ರೇಷ್ಠವಾದ ಓಂಕಾರದಿಂದ ಕೂಡಿದ ಶಿವಮಂತ್ರವನ್ನು ಪಠಿಸುವದಾಗಿ ವಿವರಿಸಿ, "ಯೋಗಾಂಗ-ಭೋಗಾಂಗ-ತ್ಯಾಗಾಂಗವೆಂದು ಶಿವಯೋಗ ಶಿವಸಹಭೋಗ ಸಂಪ್ರೀತಿಭ್ರಾಂತಿ ಮಿನಿತಕ್ಕೆ ಭಾವಲಿಂಗ-ಪ್ರಾಣಲಿಂಗ-ಇಷ್ಟಲಿಂಗ ಈ ಲಿಂಗತ್ರಯದಲ್ಲಿ ನೀನು ಭೋಗಾಂಗದಿಂದ ಪ್ರಾಣಲಿಂಗಾರ್ಚನೆಯನ್ನು" ಮಾಡೆಂದು ಹೇಳಿ ಭೂರಿಧನವನ್ನು ಕೊಟ್ಟು ಪುನಃ **ಸೌಂದರಾ** ನೀನು ನಿನ್ನ ಇಂದ್ರಿಯಗಳನ್ನು ನಿನ್ನ ಆಧೀನವಾಗಿಟ್ಟುಕೊಂಡು ಶಿವಭಕ್ತಿ ವಿಶ್ವಾಸ, ಚಿತ್ತೋಪ-ಶಾಂತಿ ದಯೆ ಮುಂತಾದ ಸುಜ್ಞಾನದಂಗಯುಕ್ತನಾಗಿ ಪ್ರಾಣಲಿಂಗಿಯಾಗಿ ಮನವೆಂಬ ಕೈಯಿಂದ ತನುವ ಸೋಂಕುವ ಸುಖವನ್ನು ಸಂತತವಾಗಿ ಪ್ರಾಣಲಿಂಗಕ್ಕೆ ಸಮರ್ಪಿಸು. ಶಿವಮಾರ್ಗಾವ

ಲಂಬನೆಯ ಅಲ್ಪಕ್ರಿಯೆಯಿಂದ ಬಹುಫಲವು ದೊರಕುವದೆಂದು ಬಿಂಬಿಸಿ ಮತ್ತು ನಿನ್ನ ಭಾವನೆಯಂತೆಯೆ ಸಿದ್ಧಿಯಾಗುವದು ; ನಿನ್ನ ಇಚ್ಛಾನುಸಾರವಾಗಿ ಸುಖವನ್ನು ಪಡೆ ಎಂದು ಹೇಳಿ ಆ ಮಹಾಲಿಂಗದಲ್ಲಿಯೇ ಮರೆಯಾದನು.

**ಒಂ**ದು ದಿನ ಮದನನ ಸೇನೆಯೋ ಎಂಬಂತೆ ನೋಡಿದವರ ಕಣ್ಮನಸ್ಸುಗಳನ್ನು ಸೆಳೆಯುವ ಪಾತರದವರ ತಂಡವೊಂದು **ವಲ್ಮೀಕಿನಾಥನ** ಸೇವೆಯನ್ನು (ಹಾವಭಾವಯುಕ್ತವಾದ ನರ್ತನೆಯ ಮೂಲಕವಾಗಿ) ಮಾಡುತ್ತಿತ್ತು. ಆ ಸಮೂಹದಲ್ಲಿ ಆಗತಾನೆ ಹರೆಯಕ್ಕೆ ಬಂದ ಮುಟ್ಟಿದರೆ ಮಾಸುವಂಥ, (ಆ ವಧುವಿನ ಅಂದವನ್ನು ಬಣ್ಣಿಸಬೇಕೆಂದರೆ ನಿಘಂಟುವಿನಲ್ಲಿ ಶಬ್ದಗಳು ಸಾಲದಷ್ಟು) ಸೌಂದರ್ಯಾತಿಶಯದ ಸೀಮೆಯನ್ನು ದಾಟಿದ ಪರವೆನಾಚಿಯೆಂಬವಳ ನಯನ ಮನೋಹರವಾದ ನೃತ್ಯವನ್ನು ನೋಡಿ ಚರಿತ್ರನಾಯಕನು ನೋಡಿ ನಿಬ್ಬೆರಗಾಗಿ ನಿಂತು ಬಿಟ್ಟು ಆಗಣಿಕೆಯರೆಲ್ಲರೂ ದೇವಾಲಯವನ್ನು ಬಿಟ್ಟು ಹೋದೊಡನೆ ಮನೆಗೆ ಬಂದು ವಿಚಾರಶೂನ್ಯನಾಗಿ ಆ ಶೋಭನಾಂಗಿಯನ್ನೇ ಹಂಬಲಿಸುತ್ತ ಸುಮ್ಮನೆ ಕುಳಿತುಬಿಟ್ಟನು.

**ವಿ**ಗತಕಾಯನಾದ ಕಾಮನು ಈಶ್ವರನನ್ನು ಭಜಿಸಿ ಪುನಃ ಶರೀರವನ್ನು ಧಾರಣೆಮಾಡಿದನೋ ಎಂಬಂತೆ ಇರುವ ಮನ್ಮಥನ ಸೊಬಗನ್ನು ಮೀರಿದ ಅತಿ ಸುಂದರನಾದ ಚರಿತ್ರಪುಂಗವನನ್ನು ಆ ದೇವಾಲಯದಲ್ಲಿ ಕಂಡೊಡನೆ (ದೇವ ವಧುವಿನ ಅವತಾರಿಯಾದ) ಆ ಪರವೆನಾಚಿಯು ಮನಸಿಜನ ಉಪಟಳಕ್ಕೆ ಗುರಿಯಾಗಿ ಚಿತ್ತದಲ್ಲಿ ಸ್ವಸ್ಥವಿಲ್ಲದೆ ಶಿವಶಿವಾ ಏನಿದು ಅಬಲೆಗೆ ಈ ಪಾಡೇ ಎಂದು ತನ್ನ ಸ್ಥಿತಿಗೆ ತಾನು ನಾಚುತ್ತಾ ಹೌಹಾರಿ ತಾನೊಬ್ಬಳೆ ಸೌಧಾಗ್ರಭಾಗದ ಶಿಖರದಲ್ಲಿ ನೆಲಕ್ಕೊರಗಿ ಬಿಟ್ಟಳು.

**ತುಂಬರ** ಮಂತ್ರಿಯು ರಾಜಪುತ್ರನ ನಿಜಸ್ಥಿತಿಯನ್ನು ಕಂಡು ಇದು ಏನು ನಿನ್ನ ಅವಿವೇಕತನವು ನಿನ್ನ ಕಾಮಿತ ಫಲವನ್ನು ಕೊಡುವ ಭಕ್ತರಕ್ಷಕನಾದ ಶಿವನಿಲ್ಲವೇ ? ನಡೆ ವಲ್ಮೀಕೇಶ್ವರಾಲಯಕ್ಕೆ ಸದ್ಭಕ್ತಿಯಿಂದ ಆತನನ್ನು ಪೂಜಿಸು ನಿನ್ನಿಷ್ಟವು ಸಿದ್ಧಿಸುವದು ಎಂದು ಸೂಚಿಸಿದನು.

**ಇ**ತ್ತ ಪರವೆನಾಚಿಯ ತಾಯಿಯು ಮಗಳ ಸಂಗತಿಯನ್ನು ಕಂಡು ಅನಂಗನ ಕೂರಲಗಿಗೆ ಪಾತ್ರಳಾದುದನ್ನು ತಿಳಿದು ದಾಸೀಸಮೂಹಕ್ಕೆ ಮಗಳಿಗೆ ಶಾಂತಿಯಾಗುವಂತೆ ಉಪಚರಿಸಿರಿ ಎಂದು ಆಜ್ಞೆ ಮಾಡಿದಳು.

**ನಂ**ಬಿಯಣ್ಣನು ಪುನಃ ಆ ಶಿವಾಲಯಕ್ಕೆ ಬಂದು ಬಹುಭಕ್ತಿಯಿಂದರ್ಚಿಸಿ ಹರನೇ ನೀನು ಮಾತ್ರ ಉಮಾಯುಕ್ತನಾಗಿ ನನ್ನನ್ನು ಹಾಗೆಯೇ ಬಿಡುವದುಚಿತವೇ ? ಚೆಲುವಿನ ನಿಧಿಯಾದ ಪರವೆಯನ್ನು ನನ್ನೊಡನೆ ಕೂಡಿಸಬಾರದೇ ಎಂದು ಗದ್ಗದ ಕಂಠದಿಂದ ಪ್ರಾರ್ಥಿಸಿ ಕಂಬನಿಗರೆಯಲು ಗಿರಿಜಾವರನು ಆಗಲೆ

ಬಂದು ಎಂದಿನಂತೆ ಹೊನ್ನಿನ ರಾಶಿಯನ್ನು ಕರುಣಿಸಿದನು. ಆಗ **ನಂಬಿಯಣ್ಣನು** ನಾನೀಗ ಧನವನ್ನು ಬಯಸಲಿಲ್ಲ ಸರ್ವಜ್ಞನಾದ ನಿನಗೆ ತಿಳಿಯದೇ ಪರವೆ ನಾಚಿಯೊಡನೆ ನಾನು ರಮಿಸುವಂತೆ ಮಾಡೆಂದು ಬೇಡಿಕೊಳ್ಳಲು ಸರ್ವಜ್ಞನು ಒಪ್ಪಿ ಆ ಲಿಂಗದಲ್ಲಿಯೇ ತನ್ನ ಶರೀರವನ್ನಡಗಿಸಿದನು.

ಭಕ್ತಾಧೀನನಾದ ಶಂಕರನು ವೃದ್ಧಯೋಗಿಯಾಗಿ ವಾರನಾರಿಯರ ಬೀದಿಯಲ್ಲಿ ಬಂದು ಆ ಪರವೆಯ ತಾಯಿಯಾದ ಮಂಗಳೆಯನ್ನು ಕಂಡು ಅವಳಿಗೆ ಯಥೇಚ್ಛವಾಗಿ ಧನವನ್ನಿತ್ತು ನಿನ್ನ ಮಗಳು ಅಪೇಕ್ಷಿಸುವ **ಸೌಂದರನೇ** ನನ್ನ ಮಗನೆಂದು ಹೇಳಿ ಅವಳನ್ನೊಡಂಬಡಿಸಿ ಪ್ರತಿದಿವಸವೂ ಸಾವಿರ ಹೊನ್ನು ಕೊಡಿಸುವೆನೆಂದು ತಿಳಿಸಿ **ಸೌಂದರನು** ಪರವೆಯೊಡನೆ ಸುಖಿಸುವಂತೆ ಮಾಡಿಬಿಟ್ಟನು.

ಪ್ರಾಣಲಿಂಗಿಯಾದ ನಂಬಿಯು ಯಾವ ನೋಟವನ್ನು ನೋಡಿದರೂ ಶಿವಮಯವನ್ನಾಗಿ ಕಾಣುತ್ತ, ಯಾವ ಆಟವಾಡಿದರೂ ಶಿವನಾಟವಾಗಿ ತಿಳಿಯುತ್ತ ಬೇಟ (ಅಂದರೆ ಲಕ್ಷ) ವೆಲ್ಲ ಈಶ್ವರಭಕ್ತಿಯುಕ್ತವಾಗುತ್ತ, ನುಣ್ಣಾಡಿದ ಕೂಟವೆಲ್ಲವನ್ನು ಶಿವನಾರಾಧನೆಯೆಂದು ಪರವೆನಾಚಿಯೊಡನೆ ರತಿಕೇಳಿಯನ್ನೆಸಗುತ್ತ ಅದರಿಂದಾಗುವ ವಿನೋದವನ್ನೆಲ್ಲ ಲಿಂಗರೂಪಿಯಾದ ಶಿವನಿಗೆ ನಿವೇದಿಸುತ್ತಿದ್ದನು. ಕಥಾನಾಯಕನು ಮನಸಿಜನ ಕಲಾಪ್ರವೀಣನಾದುದರಿಂದ ಆಯಾಯ ತಿಥಿಗಳಲ್ಲಿ ಆಯಾಯ ಶರೀರ ಭಾಗಗಳಲ್ಲಿರುವ ಅನಂಗನ ಪ್ರಭಾವವನ್ನರಿತು ಮನವಾರೆ ಸ್ಮರತಂತ್ರವನ್ನೆಸಗಿ ಈ ಪರಿಯಾದ ಕಜ್ಜದಿಂದ ದಣಿದು ಸ್ವಲ್ಪ ಮೂರ್ಛಿತಳಾದ ಪರವೆನಾಚಿಯ ಬಟ್ಟ ಮೊಲೆಯಮೇಲಿನ ಶೀರಿಯ ಶೆರಗು ತೆರೆದಿರಲು ಫಕ್ಕನೆ ಆತನು (ಅಂದರೆ ನಂಬಿಯು) ಕಣ್ದೆರೆದು ನೋಡಿ (ಲಿಂಗವೆಂದು ಭ್ರಮಿಸಿ ಆ ಮೇಲೆ ತಿಳಿದು) ಸ್ತನ ಶಂಕರಾಯನಮಃ ಎಂದು ಸಾಂಬನನ್ನು ಪರಿಪರಿಯಾಗಿ ಕೊಂಡಾಡುತ್ತಿರುವಾಗ ಆತನ ಪ್ರೀಯಳು ಮೂರ್ಛೆಯಿಂದ ಎಚ್ಚೆತ್ತು ನಿನ್ನ ಶಂಕರನು ಮೊಲೆಯಲ್ಲಿರುವನೋ ಎಂದು ಕೇಳಿದೊಡನೆ ಸರ್ವಸಾಕ್ಷಿಭೂತನಾದ ನೀಲಗ್ರೀವನು ಆಕೆಯ ಸ್ತನದಿಂದಲೇ **ಓ** ಎಂದು ನುಡಿದನು. ಆಗ ಪುನಃ ಆ ಪರವೆಯು ಬರಿ **ಓ** ಎಂದ ಮಾತ್ರಕ್ಕೆ ಏನು ಪ್ರಯೋಜನ ನನಗೆ ಧನವನ್ನು ಕೊಟ್ಟಂತಾಯಿತೇನೆನ್ನಲು ಭಕ್ತಪಕ್ಷಪಾತಿಯಾದ ವಿಷವಿಭೂಷಣನು ಆಕೆಯ ಮೊಲೆಯೊಳಗಿಂದಲೆ ತನ್ನ ದಿವ್ಯಹಸ್ತವನ್ನು ಚಾಚಿ ಬಸವನ ಮುದ್ರೆಯ ಸಾವಿರ ಹೊನ್ನುಗಳನ್ನು ಕೊಟ್ಟು ಆ ಕ್ಷಣವೇ ಅದೃಶ್ಯನಾಗಲು ಪರವೆನಾಚಿಯು ಬೆರಗಾಗಿ ಶಿವಭಕ್ತರ ಮಹಿಮೆಯು ಆಶ್ಚರ್ಯಕರವು, ಶಿವನ ಲೀಲಾ-ವಿನೋದವು ಅದ್ಭುತವೆಂದಳು. ಇವರೀರ್ವರು ಮನ್ಮಥನ ಸೂತ್ರಾಭ್ಯಾಸವನ್ನು ಪರಮಾನಂದದಿಂದ ಮಾಡುತ್ತಿರುವಾಗ ಸಂವತ್ಸರಗಳು ದಿವಸ ಪ್ರಾಯವಾಗುತ್ತ ಶಿವ

ಮೂರ್ತಿಯನ್ನು ಅನನ್ಯಭಾವದಿಂದ **ಸೌಂದರನು** ಸ್ತುತಿಸುವದನ್ನು ಪರವೆನಾಚಿಯು ಕಂಡು ಇವನು ಶಿವಕವಿಯು ಇವನ ನಾಲಗೆಯಲ್ಲಿ ಸುಧೆಯುಂಟು ನನ್ನ ತುಟಿಯ ಮುಂಭಾಗದಲ್ಲಿ ಕಾಮಿಗಳು ವರ್ಣಿಸುವ ರಸವಿಶೇಷವುಂಟು ; ಆದುದರಿಂದ ಒಂದನ್ನು ಅರ್ಪಿಸಿ ಪ್ರತಿಯಾಗಿ ಮತ್ತೊಂದನ್ನು ಸ್ವೀಕರಿಸುವೆನೆಂದು ಪರವೆನಾಚಿಯು **ಸೌಂದರನ** ಬಾಯಲ್ಲಿ ತನ್ನ ಬಾಯಿಯಿಟ್ಟು ಶಿವಶಿವ ಎಂದು ಸಂತಸವನ್ನು ಪಡೆಯುತ್ತಿದ್ದಳು.

**ಕ**ಥಾನಾಯಕನು ವಲ್ಮೀಕಿನಾಥನಾಲಯದ ಹೊರಬದಿಯಲ್ಲಿ ಶಿವಭಕ್ತರೊಡನೆ ಸುವರ್ಣಗಜಗಗಳಿಂದ ಜೂಜಾಡುತ್ತಿರುವಾಗ ಮಲೆಯಾಳ ಸೀಮೆಯ ದೊರೆಯಾದ **ಚಾರಮ** ನೃಪನು ತನ್ನ ರಾಜಧಾನಿಯಾದ **ಕುಡಂಗನೂರಿನಿಂದ** ಯೋಗಿವೇಷದಿಂದ ಬಂದು ಕೌತುಕದಿಂದ ನೋಡುತ್ತಿರಲು ಇತರರು ಸೋಲುತ್ತಿರುವಾಗ **ಸೌಂದರನು** ಮಾತ್ರ ಆಟವನ್ನು ಚನ್ನಾಗಿ ಆಡುತ್ತಿದ್ದನು. **ಚಾರಮನು** ತಿರುವಾವಲೂರಿಗೆ ಏಕೆ ಬಂದನೆಂದು ವಾಚಕರು ಉತ್ಸುಕರಾಗುವದು ಸಹಜವು. ಅದನ್ನು ತಿಳಿಸಿಬಿಡುವಾ, **ಚಾರಮನು** ನಿಷ್ಠಾಪರನಾಗಿ ಚಿತ್ತೈಕಾಗ್ರತೆಯಿಂದ ಶಿವಾಲಯದಲ್ಲಿ ಕುಳಿತು **ಶಿವ**ಮೂರ್ತಿಯನ್ನು ಪೂಜಿಸುತ್ತಿರುವಾಗ ಆತನ ಭಕ್ತಿಗೆ ಇಂದುಶೇಖರನು ತನ್ನ ಕಾಲ್ಗೆಜ್ಜೆಯ ಸಪ್ಪಳವನ್ನು ಧ್ವನಿಗೊಳಿಸುತ್ತಿದ್ದನು ಒಂದುದಿನ ಮಾತ್ರ ಆ ರೀತಿ ಸಪ್ಪಳವಾಗದಿರಲು **ಚಾರಮನು** ಬಹಳ ದುಃಖಿತನಾಗಲು ಮೃತ್ಯುಂಜಯನು **ತಿರುನಾವಲೂರಲ್ಲಿ** ತನ್ನ ತನಯನಾದ **ನಂಬಿಯಣ್ಣನ** ತಿರುಪಾಡುಗಳಿಗೆ ಮೆಚ್ಚಿ ತಲೆದೂಗುತ್ತಿರುವಾಗ ಹರನಿಗೆ ಸ್ವಲ್ಪ ಅಲಕ್ಷೆಯಾದುದರಿಂದ ಈ ದಿನ ಕಾಲ್ಗೆಜ್ಜೆಯ ಸಪ್ಪಳವಾಗಲಿಲ್ಲವೆಂಮ ಶಿವಾಲಯದಲ್ಲಿ ಧ್ವನಿಯಾಗಲು ಇದು ಪ್ರಭುವಿನ ಅಪ್ಪಣೆಯೆಂದು **ಚಾರಮನು** ಕೌತುಕಪಟ್ಟು ಆ **ನಂಬಿಯಣ್ಣ**ನನ್ನು ಕಾಣಬೇಕೆಂಬ ಹಂಬಲವಾಗಿ ಅಲ್ಲಿಗೆ ಆತನು ಬಂದಿರುವಾಗ ಗಜಗದಾಟವು ನಡೆದಿತ್ತು. ಆ ಆಟದ ಪರಿಣಾಮವನ್ನು ಕಂಡು ಆಶ್ಚರ್ಯಚಕಿತನಾಗಿ ತನ್ನ ನಿಜರೂಪವನ್ನು ತಾಳಿ **ಸೌಂದರ**ನಿಗೆರಗಿ ತಾನು **ಕೇರಳಾಧಿಪತಿಯಾದ ಚಾರಮ**ನೆಂದು ವಿನಯವಾಗಿ ಹೇಳಿ ಗಜಗದ ಆಟದಲ್ಲಿರುವ ವಿಶೇಷವನ್ನು ಕೇಳಿದನು. ಆಗ ಚರಿತ್ರಪುಂಗವನು **ಚಾರಮನೇ** ಮುಂದೊಡ್ಡಿದ ಗಜಗವನ್ನು ಲಿಂಗವೆಂದು ಭಾವಿಸಿ ಕೈಯಲ್ಲಿರುವ ಗಜಗವನ್ನು ಪುಷ್ಪವನ್ನಾಗಿ ಎಸೆಯುವದರಿಂದ ನನಗೆ ಜಯವಾಗುವದೆಂದು ಏಕಾಂತದಲ್ಲಿ ತಿಳಿಸಿದನು. **ಸೌಂದರನು** ಗಣಿಕೆಯೊಡನೆ ವಿಲಾಸಪಡುತ್ತಿದ್ದರೂ ಆತನ **ಚಿತ್ತ**ವು ಪರಮಾತ್ಮನಲ್ಲಿ ನೆಲಸಿರುವದರಿಂದ ಆತನು (ಅಂದರೆ **ನಂಬಿಯು**) **ಶಿವಾ**ರ್ಪಣ ಧುರಂಧರನೆಂದು ಭಾವಿಸಿ ಆತನ ಆದರಾತಿಥ್ಯದಲ್ಲಿ ಕೆಲವುಕಾಲ

ಕೆಲವುಕಾಲ ಕಳೆದು **ಸೌಂದರ ನಂಬಿಯಣ್ಣನೇ** ನೀನು ನನ್ನ ಪುರವಾದ **ಕುಡುಂಗನೂರಿಗೆ** ಬಂದು ನನ್ನ ಸತ್ಕಾರವನ್ನು ಕೈಕೊಳ್ಳಬೇಕೆಂದು ವಚನ ತಕ್ಕೊಳ್ಳಲು **ನಂಬಿಯು** ನಿನ್ನ ಅರಮನೆಗೆ ಬರದೆ ಬೇರೆಡೆಗೆ ಗತಿಸುವವನಲ್ಲ ವೆಂದು ಖಂಡಿತವಾದ ಭಾಷೆಯನ್ನೀಯಲು **ಚಾರನುನು** ಬಹಳ ಸಂತೋಷ ಪಟ್ಟು ರಾಜಧಾನಿಗೆ ತೆರಳಿದನು.

**ವ**ಸಂತಕಾಲವು ಪ್ರಾಪ್ತವಾಗಲು ಅಲ್ಲಿಯ ತೋಟಪಟ್ಟಿಗಳ ಚಲ್ವಿಕೆ ಯನ್ನು ನೋಡುವದಕ್ಕಾಗಿ **ಸೌಂದರೇಶ**ನನ್ನು ವನಪಾಲನು ಬಿನ್ನವಿಸಿದನು. ಆಗ **ನಂಬಿಯಣ್ಣನು** ಪರವೆಯೊಡಗೂಡಿ **ತುಂಬರ-ಕುರುಂಬ**ರೊಡನೆ ವನದ ಸೊಬಗನ್ನು ನೋಡಿ ತಲೆದೂಗುತ್ತ ಆ ಸುಖವನ್ನು ನಯನೇಂದ್ರಿಯದಿಂದ ಈಶ್ವರಾರ್ಪಣಮಾಡಿ ಆಹ್ಲಾದಪಡುತ್ತ ಮಲ್ಲಿಗೆಯ ಚಿತ್ತಾಕರ್ಷಕವಾದ ಮೊಗ್ಗಿ ಗಳನ್ನು ಕಂಡು ಚಿತ್ತಜಾರಿಯನ್ನು ನಿಸ್ಸೀಮವಾದ ಭಕ್ತಿಯಿಂದ ಸ್ಮರಿಸಲು ಆ ಮೊಗ್ಗೆಗಳೊಂದರಲ್ಲಿ ಬಹು ದೊಡ್ಡದಾದ ಮೊಲ್ಲಿಗೆಯ ಮೊಗ್ಗೆಯಲ್ಲಿ ಯೋಗಿ ಹೃತ್ಕಂಜವಾಸಿಯಾದ ಶಂಕರನು ಲಿಂಗರೂಪಿಯಾಗಿ ಕಾಣಿಸಲು ಪರವೆನಾಚಿಯು ಆಶ್ಚರ್ಯಾನಂದ ರಸೋದ್ವೇಗದಲ್ಲಿ ಹತ್ತಿರದಲ್ಲಿರುವ **ತುಂಬರ-ಕುರುಂಬರ** ಪರವೆಯಿಲ್ಲದೆ **ಸೌಂದರನಾಥ**ನನ್ನು ಚುಂಬಿಸುವವಕ್ಕೆ ಬರಲು ಆತನು ತಕ್ಕ ಸಮಯವಲ್ಲವೆಂದು ಅವಳ ಮುದ್ದಿಗೆ ಅನುವುಗೊಡಲಿಲ್ಲ. **ಸೌಂದರನು** ವಸಂ ತದ ಬನಸಿರಿಯನ್ನು ಕಂಡು ಹಿಗ್ಗುತ್ತ ವನವಿಹಾರಿಯಾಗಿರಲು **ವಲ್ಮೀಕಿ ನಾಥನು** ಇವನನ್ನು ಹೀಗೆಯೇ ಬಿಟ್ಟರೆ ನನ್ನ ಆಲಯಕ್ಕೆ ಬರುವದನ್ನು ಮರಯ ಬಹುದೆಂದೆಣಿಸಿ **ಜಡೆಯನಯನಾರಿದ್ದಲ್ಲಿ** ಮುನ್ನಿನ ವೃದ್ಧವೇಷದಿಂದ ಬ್ರಾಹ್ಮ ಣನಾಗಿ ಹೋಗಿ ನೀವು ಇನ್ನು ಎಳ್ಳಷ್ಟು ಧನವನ್ನು ಸೌಂದರನಿಗೆ ಕೊಡಬೇ ಡಿರಿ. ಬೇಕಾದರೆ ನನ್ನಿಂದಲೆ ಅವನು ತೆಗೆದುಕೊಳ್ಳಲೆಂದು ಕಟ್ಟುಮಾಡಿ ತಿರುಗಿ ಹೋದನು.

**ತಿರುವಾವಲೂರಲ್ಲಿ** ಜಾತ್ರೆಯು ಸಮೀಪಿಸಲು **ಮಂಗಲನಾಚಿಯು** ದೊಡ್ಡಹಬ್ಬವು ಬಂದಿತು ನಮ್ಮಮನೆಗೆ ಅನೇಕ ಅತಿಥಿ ಅಭ್ಯಾಗತರು ಬಂಧು ಬಾಂಧವರು ಬರುವರು; ಅವರೆಲ್ಲರನ್ನು ವಸ್ತ್ರಾಭರಣ-ಮೃಷ್ಟಾನ್ನದಿಂದ ತೃಪ್ತಿ ಪಡಿಸಬೇಕಾಗುವದು ಆದ್ದರಿಂದ ಭೂರಿ ಧನವು ಹಾಗೂ ಧಾನ್ಯವು ಬೇಕೆಂದು ತಿಳಿಸಿದಳು. ಆಗ **ಸೌಂದರನು** ಇದನ್ನು ಕೇಳಿ ತುಂಬರನೇ ನಮ್ಮ ಮನೆಗೆ ಹೋಗಿ ಪಾರ್ವತೀಪತಿ ಯಿತ್ತ ಅಕ್ಷಯನಿಧಿಯಲ್ಲಿ ಬೇಕಾದಷ್ಟು ಧನವನ್ನು ತಂದುಕೊಡೆಂದು ಹೇಳಲು ಆಗ ತುಂಬರ ಮಂತ್ರಿಯು ಶಿವನ ಅಪ್ಪಣೆಯಿಲ್ಲದೆ ಅದನ್ನು ತೆಗೆಯಬಾರದೆಂದು ಹೇಳಿದನು. ಆಗ ಸೌಂದರನು ಅದೇಕೆ ತಗೊಳ್ಳ ಬಾರದೆಂದು ಕೇಳಲು ತುಂಬರನು **ಜಡೆಯನಯನಾರು-ಯಸ್ಕಜ್ಞಾನಿದೇವಿ**

ಬಳಿಗೆ ಅಗಜೇಶನು ಬಂದು ನಂಬಿಗೆ ನಿಮ್ಮ ಅಕ್ಷಯನಿಧಾನದಿಂದ ಎಳ್ಳಷ್ಟು ಧನ ವನ್ನು ಕೊಡಬೇಡಿರಿ ಬೇಕಾದರೆ ನನ್ನೆಡೆಗೆ ಬಂದು ತಿರುಪಾಡುಗಳನ್ನು ಪಾಡಿ ಹೊನ್ನು ಪಡೆಯಲೆಂದು ಹೇಳಿರುವನು. ಆದ್ದರಿಂದ ಅವರು ಧನವನ್ನು ನನಗೆ ಕೊಡುವದಿಲ್ಲೆಂದು ಹೇಳಿದನು. ಆಗ **ನಂಬಿಯು** ನಾನು ತಿರುಪಾಡುಗಳನ್ನು ಪಾಡದಿರಲು ಶಂಕರನು ಮುನಿದನೇ ಎಂದು **ವಲ್ಮೀಕಿನಾಥನ** ಬಳಿಗೆ ಬಂದು ತಿರುಪಾಡುಗಳನ್ನು ಇಂಪಾಗಿ ಪಾಡಿ ಧನಧಾನ್ಯಬೇಕೆಂದು ಪ್ರಾರ್ಥಿಸಲು ನೀಲ ಕಂಠನು ಮುನ್ನಿನಂತೆ ಮುದಕನಾಗಿ ಬಂದು ಮಗನನ್ನು ಸಂತೈಸಿ ನಿಮ್ಮ ತಾಯಿ ತಂದೆಗಳ ಧನಕ್ಕೆ ಕೈ ಹಚ್ಚಬೇಡಾ ನಿನಗೆ ಬೇಕಾದರೆ **ತಿರುಕೊಂಡೆಯೂರಿಗೆ** ನಡೆ ಅಲ್ಲಿ ನಿನಗೆ ಬೇಕಾದ ವಸ್ತುಗಳನ್ನು ಕರುಣಿಸುವೆನೆಂದು ಪೇಳಿ ಅದೃಶ್ಯ ನಾದನು.

ಜಾನ್ಹವೀಪತಿಯ ಅಪ್ಪಣೆಯ ಮೇರೆಗೆ ಶಿವಸುತನು **ತುಂಬರ-ಕುರುಂಬ** ಮುಂತಾದ ಪರಿವಾರದೊಡನೆ ವೈಭವದಿಂದ **ತಿರುಕೊಂಡೆಯೂರಿಗೆ** ಬಂದು ಅಲ್ಲಿಯ ಶಿವಾಲಯಕ್ಕೆ ಹೋಗಿ ಅಲ್ಲಿದ್ದ ಶರಣರನ್ನೆಲ್ಲ ವಂದಿಸಿ ಗುಡಿಯನ್ನು ಪ್ರವೇಶಿಸಿ ತಿರುಪಾಡುಗಳನ್ನು ಪಾಡುತ್ತಿರಲು ಭವತಿಮಿರಾರ್ಕನಾದ ವಿರೂಪಾ ಕ್ಷನು ಎಂದಿನಂತೆ ಪ್ರಕಟನಾಗಿ ಧಾನ್ಯದ ರಾಶಿಯನ್ನು ಮತ್ತು ಹೊನ್ನಿನ ರಾಶಿ ಯನ್ನು ಹರವಿದನು. ಇನ್ನೂ ತಿರುಪಾಡುಗಳು ನಡೆದಿರಲು ಚಂದ್ರಶೇಖರನು ಅದೃಶ್ಯನಾಗಿ **ತಿರುಕೊಳಲಿ** ಎಂಬ ಊರಗದ್ದೆಗಳಲ್ಲಿ ಕೆಸರಲ್ಲಿ ಕಳೆಯನ್ನು ತೆಗೆ ಯುತ್ತಿರಲು ತಾಯಿಯು ಹೋದಲ್ಲಿ ಹೋಗುವ ಕರುವಿನಂತೆ ಸುಜ್ಞಾನದಿಂದ **ಸೌಂದರೇಶನು** ಅಲ್ಲಿಗೈತಂದು ಮಹಾದೇವನಿಗೆ ಕೈಮುಗಿಯಲು ಶಂಕರನು ನಾಚಿದವನಂತೆ ನಟಿಸುತ್ತ ನಿನಗೆ ವಿಪುಲ ಧಾನ್ಯವನ್ನು ಮತ್ತು ಹೇರಳ ದ್ರವ್ಯ ವನ್ನು ಕೊಟ್ಟಿರುವೆನು ಮತ್ತೇಕೆ ನನ್ನನ್ನು ಕಾಡುವಿ **ತಿರುವಾರೂರಿಗೆ** ನಿನ್ನ ಪರಿ ಜನರಿಂದ ಆ ರಾಶಿಗಳನ್ನು ಹೊರಿಸಿಕೊಂಡು ಹೋಗೆಂದನು. ಆಗ **ನಂಬಿಯು** ಹರನೇ ಅಷ್ಟೊಂದು ನೆಲ್ಲಿನ ಮಹಾರಾಶಿಯನ್ನು ನನ್ನ ಪಿತಜನರು ಹೊತ್ತೊ ಯ್ಯುವದೆಂದಿಗೆ ಎಂದನು. ಅದಕ್ಕೆ ಪರಮನು **ನಂಬಿಯೇ,** ನಂಬಿ ಎಂದು ಮೊದ ಲ್ಗೊಂಡು ನನ್ನನ್ನು ಸ್ತುತಿಸು ಎಂದು ಆಜ್ಞೆಮಾಡಿದನು. ಆಗ **ಸೌಂದರನು** ರಾಗರಸವಿಡಿದು ಬಹುಮಧುರಧ್ವನಿಯಿಂದ ನಂಬಿದ ಭಕ್ತೆಯಾದ ಪಿಟ್ಟಿವ್ವೆಗೆ (ಕೆರೆಯ ಕಟ್ಟೆಯನ್ನು ಕಟ್ಟುವಾಗ) ಬಿಟ್ಟಿಯಾಗಿ ಮಣ್ಣು ಹೊತ್ತ ಬಂಟನೇ, ನಂಬಿದ ಕೊಡಗೂಸಿಗೆ ಆ ಬಾಲೆಯಿತ್ತ ಕ್ಷೀರವನ್ನು ಕುಡಿದ ಭದ್ರಕಾಯನೇ, ನಂಬಿದ ಬಾಣಾಸುರನ ಮನೆಕಾಯ್ದ ಮೂಲೋಕದರಸೇ. ನೀನೇ ಗತಿಯೆಂದ ಹಂಬಲಿಸಿದ **ತಿರುನೀಲಕಂಠನಿಗೆ** ಒಲಿದ ಮಾರಾರಿಯೇ, ನಂಬಿದ ನಂದೀಶ್ವರ

ನನ್ನ* ಯುಗಯುಗಾಂತರದಲ್ಲಿ ಅನುನಯದಿಂದ ಪೊರೆಯುವ ಮಂಗಲಾತ್ಮನೇ, ನಂಬಿದ ಸಕಲ ಸದ್ಭಕ್ತರಿಗೆ ಸಾಲೋಕ್ಯಮೊದಲಾದ ಚತುರ್ವಿಧ ಪದಗಳನ್ನು ಅವರ ಯೋಗ್ಯತೆಯಂತೆ ಕರುಣಿಸುವ ಸದ್ಗುಣನಿಧಿಯಾದ ಚಿತ್ಪ್ರಕಾಶಮಯನೇ ಎಂದು ದೇವಶ್ರೇಷ್ಠನಾದ ಸದಾಶಿವನನ್ನು ನಂಬಿ ಸ್ತುತಿಸುತ್ತಿರಲು ಭವಾನೀರಮಣನು ತಲೆದೂಗಿ ನೀನು ತಿರುವಾವಲೂರಿಗೆ ನಡೆ ಅಲ್ಲಿಯ ಪುರಜನರ ಮನೆಗಳಲ್ಲಿ ನೆಲ್ಲಿನ ರಾಶಿ ಇಡುವಂತೆ ನನ್ನ ಭೂತಗಣಂಗಳಿಗೆ ನಿಯಮಿಸುವೆನೆಂದನು. ಆಗ ನಮ್ಮ **ನಂಬಿಯು** ಪರವೆನಾಚಿಗೆ ಜಾತ್ರೆಕಾಲದಲ್ಲಿ ವಿಪುಲಧನವು ಬೇಕು ಹಾಗೂ ಆಕೆಯ ತಾಯಿಯಾದ ಮಂಗಲನಾಚಿಯು ಸಂತೋಷಪಡುವಷ್ಟು ದ್ರವ್ಯವಾಗಬೇಕು ಹಾಗೂ ಯಲ್ಲ ಶಿವಶರಣರ ಸತ್ಕಾರವಾದರೂ ಆಗಬೇಕು ಅಷ್ಟು ಧನವನ್ನು ಕೊಡಬೇಕೆಂದು ಶಿವಸುತನು ಶಂಕರನಿಗೆ ನಿವೇದಿಸಲು ಆತನು ತಿರುಮುಡಿಗೊಂಡಪುರಕ್ಕೆಹೋಗೆನ್ನಲು **ನಂಬಿಯು** ಅಲ್ಲಿಗೆ ಬಂದು ಅಲ್ಲಿಯ ಶಿವಾಲಯವನ್ನು ಹೊಕ್ಕು ಜಗತ್ಪತಿಯನ್ನು ಕೊಂಡಾಡಲು ಈಶ್ವರನು ಪಡಿ ಹೊನ್ನುಗಳನ್ನು ಕೊಡಲು ಅದೆಲ್ಲವನ್ನು ತೆಗೆದುಕೊಂಡು **ತಿರುಕೊಂಡೆಯೂರಿಗೆ** ಬಂದು ಅಲ್ಲಿಯ ಧನರಾಶಿಯಲ್ಲಿ ಕೂಡಿಸಿ ಅದೆಲ್ಲವನ್ನು **ತಿರುವಾರೂರಿನ** ವಲ್ಮೀಕಿನಾಥನ ಪೌಳಿಯಲ್ಲಿರಿಸಬೇಕೆಂದು ಇಂದುಧರನಿಗೆ ವಿಜ್ಞಾಪಿಸಲು ಆ ಅಚ್ಯುತನು ಒಪ್ಪಿ ಅದೃಶ್ಯನಾದನು.

**ಸ**ಪರಿವಾರವಾಗಿ **ಸೌಂದರೇಶನು** ಕ್ರಮೇಣ **ತಿರುವಾರೂರಿಗೆ** ಬಂದು ಮಂಗಲನಾಚಿ ಮೊದಲ್ಗೊಂಡು ಯಲ್ಲರ ಮನೆಯಂಗಳದಲ್ಲಿ ನೆಲ್ಲಿನರಾಶಿಯು ಗಿರಿಯಂತೆ ಬಿದ್ದಿರಲು **ನಂಬಿಯು** ಬೆರಗಾಗಿ ಕೈಲಾಸಾಧಿಪತಿಯನ್ನು ಪಾಡಿ **ವಲ್ಮೀಕಿನಾಥ**ನಾಲಯಕ್ಕೆ ಬಂದು ಮರಳಿ ಆತನನ್ನು ನುತಿಸಿ ಪೌಳಿಯಲ್ಲಿ ಝುಗಝುಗಿಸುವ ಹೊನ್ನಿನ ರಾಶಿಯನ್ನು ಕಂಡು ಹಿಗ್ಗಿ ಮಂಗಲೆಯನ್ನು ಕರೆಸಿ ಭೂರಿಧನವಿದೆ ತೆಗೆದುಕೊಂಡು ಹೋಗೆನ್ನಲು ಅಂಬಿಕಾಪತಿಯ ಕುಮಾರನಿಗೆ ಶರಣೆಂದು ಆ ಧನವನ್ನೆಲ್ಲ ತನ್ನ ಮನೆಗೆ ಚರರಿಂದ ಹೊರಿಸಿಕೊಂಡು ಹೋದಳು; ಪರವೆಯು ಸಂತೋಷಪಟ್ಟಳು. ಪರವೆನಾಚಿಯ ಮನೆಗೆ ಬಂದು **ಸೌಂದರನು** ವಿಹರಿಸುತ್ತಿರಲು **ತುಂಬರ** ಮಂತ್ರಿಯು ಬಂದು ಶಿವಮಹಿಮೆಯಿಂದ ಇಲ್ಲಿಯ ಸರಸ್ಸಿನಲ್ಲಿ

---

* ನಂದೀಶ್ವರನನ್ನು ಮೊದಲನೇ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನನ್ನಾಗಿ ಮಾಡಿ, ೨ನೇ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನನ್ನಾಗಿ ಮಾಡಿ, ೩ನೇ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನನ್ನಾಗಿ ಮಾಡಿ, ೪ನೇ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನನ್ನಾಗಿ ಮಾಡಿ, ೫ನೇ ಭವಾಂತರದಲ್ಲಿ ಕಾಲಲೋಚನನೆಂಬ ಗಣೇಶ್ವರನನ್ನಾಗಿ ಮಾಡಿ, ೬ನೇ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನನ್ನಾಗಿ ಮಾಡಿ, ೭ನೇ ಭವಾಂತರದಲ್ಲಿ ಬಸವನೆಂಬ ಗಣೇಶ್ವರನನ್ನಾಗಿ ಮಾಡಿ ಸೇವೆಯನ್ನು ತೆಗೆದುಕೊಂಡು ಮಹಾಕಾಲಮೂರ್ತಿಯು ತೃಪ್ತನಾದದ್ದು ಲೋಕಪ್ರಸಿದ್ಧವು

ಪರ್ವತಪ್ರಾಯವಾಗಿ ಹೊನ್ನು ಥಳಥಳಿಸುವದೆಂದು ಬಿನ್ನವಿಸಿದನು. ಆಗ ನಂಬಿಯಣ್ಣನು ಪರವಿನಾಚಿಯೇ ನಿಮ್ಮ ತಾಯಿಯು ಬೇಕಾದಷ್ಟು ಧನವನ್ನು ತರಲಿ ಉಳಿದ ವರಹಗಳನ್ನು ಬೇಕಾದ ಸುಜನರನ್ನು ಕರಿಸಿಕೊಂಡು ಕೊಡುವಂತೆ ಆಕೆಗೆ ಹೇಳಿಂದನು. ಆಗ ಮಂಗಲನಾಚಿಯು ಡಂಗುರವನ್ನು ಹೊಡಿಸಿ ನಿಮ್ಮ ನಿಮ್ಮ ಮನೆಯ ಮುಂದೆ ಇರುವ ನೆಲ್ಲಿನ ರಾಶಿಯನ್ನೆಲ್ಲ ನೀವೆ ತೆಗೆದುಕೊಳ್ಳಿರಿ ಮತ್ತು ಇಲ್ಲಿಯ ಕೆರೆಗೆ ಬನ್ನಿರಿ ಬೇಕಾದಷ್ಟು ಸುವರ್ಣವನ್ನು ತೆಗೆದುಕೊಂಡು ಹೋಗಿರೆಂದು ಸಾರಿ, ಬಂದ ಪ್ರಜೆಗಳಿಗೆಲ್ಲ ಧನವನ್ನೀಡಿ ಕೃತಕೃತ್ಯಳಾದೆನೆಂದು ಭಾವಿಸಿ ಸಂತೋಷಪಟ್ಟಳು. ಆಗ **ಸೌಂದರನು** ತನ್ನ ಮಂತ್ರಿಯಾದ ತುಂಬರನನ್ನು ಕುರಿತು, ಅಮಾತ್ಯನೇ ಈಪರಿಯಾಗಿ ಪ್ರಜೆಗಳಿಗೆ ಬಹುಮಿಸುನಿಯನ್ನಿತ್ತವರು ಬೇರೆ ಯಾರುಂಟೆಂದು ಕೇಳಲು ಆತನು ದೇವಾ ಹಿಂದಕ್ಕೆ ಪರುಮಟ್ಟಪಲಿಯಾರಿನಲ್ಲಿ **ಕರಿಕಾಲಚೋಳ** ಭೂಪನಿಗಾಗಿ (ಅರ್ಥಾತ್ ಅವನ ಸಕಲ ಪ್ರಜೆಗಳಿಗಾಗಿಯೂ ಕೂಡ) **ನಿಂಬಿ** ಎಂಬ ಶರಣೆಯು ಏಳು ದಿವಸ ಹೊನ್ನಿನ ಮಳೆಯನ್ನು ಬರಮಾಡಿದಳು. ಶಿವನಿಷ್ಠನಾದ **ಕರಿಕಾಲಚೋಳ**ನೆಂಬ ಭೂರಮಣನು ಅಮೃತಾನ್ನವನ್ನು ಪೊನ್ನಾಂಬಲೇಶ್ವರನಿಗೆ ನಿವೇದಿಸಿ ಮುದದಿಂದಿರಲು ಅಲ್ಲಿಯ ಓಲಗದಲ್ಲಿರುವ ಸದ್ಗುಣವಿಲಾಸಿನಿಯಾದ **ನಿಂಬಿ** ಎಂಬ ಲಲನೆಯು ಶಿವಶರಣರಿಗೆ ಅವರಿಷ್ಟವನ್ನು ಪೂರೈಸುತ್ತಿದ್ದಳು. ಈ ಪರಿಯಾದ **ನಿಂಬಿಯ** ಭಕ್ತಿಯನ್ನು ಪ್ರಕಾಶಪಡಿಸಬೇಕೆಂದು ಮೃಡನು ಅವಳು ರಾತ್ರಿ ದೇವಾಲಯಕ್ಕೆ ಬಂದಾಗ ಜಂಗಮನಾಗಿ ಬಂದು ತನ್ನನ್ನು ತಣಿಸೆನ್ನಲು ಆತನ ತೇಜಸ್ಸನ್ನು ಆ ನಾರೀಕುಲತಿಲಕಳು ಕಂಡು ಈ ವ್ಯಕ್ತಿಯು ಯಾರೆಂದು ಗುರ್ತಿಸಿ ಆಗಲೆಂದು ಅವನನ್ನು ತೃಪ್ತಿಪಡಿಸಿ ನಿದ್ರಾಪರವಶಳಾದಳು. ಬೆಳಗಾಗಲು ಆ ಕಪಟಜಂಗಮನು ಮುಂಚಿನ ರೂಪವನ್ನಡಗಿಸಿ ಪಾಶುಪತವೇಷವನ್ನು ಧರಿಸಿ ಬಂದು **ನಿಂಬಿ**ಯೊಡನೆ ಎನೆಲೆ, ವಾರನಾರಿಯು ಇಲ್ಲಿ ಮಲಗಬಹುದೇ? ಎಂದು ಜರೆಯಲು ಆಕೆಯು ತಪೋಧನನೇ ಅಣುವಿಗಿಂತ ಅಣುವಾಗಿ ಮುನಿಧ್ಯೇಯನಾದ ಶಂಕರನು ಎಲ್ಲ ತಾಣದಲ್ಲಿರಲು ನಾನೆಲ್ಲಿದ್ದರೂ ಸರಿಯಷ್ಟೇ? ಎಂದೆನ್ನಲು ಗಣಿಕೆಯಾದ ನಿನಗೇಕೆ ಈಪರಿಯ ವಾಕ್ಯಗಳೆಂದು ಪುನಃ ಹರನು ಧಿಃಕರಿಸಲು ಆಗ ಆ ವರಭಕ್ತೆಯು ಅಯ್ಯಾ ತಪಸ್ವಿಯೇ ರುದ್ರಾಣೀಪತಿಯು ವಿಶ್ವಂಭರನಿರುವಾಗ ಈ ವಿಶ್ವಪ್ರಪಂಚವೆಲ್ಲವೂ ಆತನ ಮಂದಿರವಲ್ಲವೇ? ನನ್ನೇಕೆ ವೃಥಾಕಾಡುವೆ ಎಂದು ದೈನ್ಯೋಕ್ತಿಯಿಂದ ಬಿನ್ನವಿಸಲು ನಿಃಸಂಗಿಯಾದ ಶಂಕರನು ಬೇಗನೆ ನಿಜರೂಪವನ್ನು ತಾಳಿ ನಿನ್ನಿಷ್ಟವೇನೆಂದು ಕೇಳಿದನು. ಆಗ ಆ ಶರಣೆಯು ಆತನಿಗೆ ಕೈಮುಗಿದು **ಕರಿಕಾಳಚೋಳ**ನಿರುವ ಭೂಮಿಯಲ್ಲಿ ಏಳು ದಿನ ಹೊನ್ನಿನ ಮಳೆಗರೆ ಎಂದು ಪ್ರಾರ್ಥಿಸಿದಳು. ಮಹಿಮನು ಅದಕ್ಕೊಡಂಬಟ್ಟು ಪ್ರಕಾಶವಾ

ಯುವಾದ ಯಾನವನ್ನು ಬರಮಾಡಿ ಅದರಲ್ಲಿ ಅವಳನ್ನು ಕುಳ್ಳಿರಿಸಿ ಅವಳಿಗೆ ಸದ್ಗತಿ ಯನ್ನಿತ್ತು ರಕ್ಷಿಸಿದನು. ಹೀಗೆ ಮಂತ್ರಿಯು ಹೇಳಿದ್ದನ್ನು ಕೇಳಿ ದೇವಸುತನು ಹಾಗೂ ಪರವೆನಾಚಿಯು ಸಂತೋಷಪಟ್ಟರು. ಜಾತ್ರೆಯು ಬರಲು ಊರೆಲ್ಲ ಶೃಂಗಾರವಾಯಿತು. ಉತ್ಸವಕ್ಕೆ ನಾಡಿನ ಜನರೆಲ್ಲ ನೆರೆದರು. ಬಂದ ಶರಣರ ನ್ನೆಲ್ಲ **ಸೌಂದರೇಶನೂ, ಪರವೆನಾಚಿಯೂ** ತೃಪ್ತಿಪಡಿಸಿದರು. ಪುರದಲ್ಲೆಲ್ಲ ಸಂತೋಷವು ತುಂಬಿತುಳುಕಾಡುತ್ತಿತ್ತು.

**ಸು**ವರ್ಣಮಯವಾದ ತೇರನ್ನು ಪರಿಪರಿಯಾಗಿ ತುಂಬುರಾಮಾತ್ಯನು ಶೃಂಗರಿಸಿ ವಲ್ಮೀಕಿನಾಥನನ್ನು ಅದರಲ್ಲಿರಿಸಿ ಮಂಗಲರವವು ಭೋರ್ಗರೆಯು ತ್ತಿರಲು ಪ್ರಜಾಸಮೂಹವೆಲ್ಲವೂ ಹರ್ಷೋತ್ಸುಕರಾಗಿ ನಲಿದಾಡುತ್ತಿರುವಾಗ ರಥವು ಮೆಲ್ಲಮೆಲ್ಲನೆ ಸಾಗುತ್ತಿತ್ತು. ಜನಕಮಾತಾಪಿತರಾದ **ಜಡೆಯುನಯ ನಾರು-ಯುಸ್ಯಜ್ಞಾನಿದೇವಿಯರೊಡನೆ ಸೌಂದರೇಶನು** ಅಲ್ಲಿಗೆ ಬಂದು ವಲ್ಮೀ ಕಿನಾಥನನ್ನು ಚನ್ನಾಗಿ ಸ್ತುತಿಸಿ ಅವರಲ್ಲಿದ್ದ ಅಕ್ಷಯ ನಿಧಾನವನ್ನು ಬಳಿಸಲಿಕ್ಕೆ ಅನುಮತಿಯನ್ನು ಪಡೆದು ಹೆಜ್ಜೆಹೆಜ್ಜೆಗೆ ಬಂದ ಪರನೆಯ ಜನರಿಗೆಲ್ಲ ಯಥೇಷ್ಟಧ ನದಿಂದ ತೃಪ್ತಿಪಡಿಸುತ್ತಿರಲು ರಥೋತ್ಸವವನ್ನು ನೋಡಲಿಕ್ಕೆ ಬಂದ ಎರಡೂ ಪಾರ್ಶ್ವದಲ್ಲಿರುವ ಪಾಂಡ್ಯ ಮುಂತಾದ ನಾಡಿನ ಭೂಪರು ಜಯಜಯವೆಂದು ಮಂದಹಾಸದೊಡನೆ ಚಲಿಸುತ್ತಿದ್ದರು. ಮರಳಿ ರಥೋತ್ಸವವು ಮಂಗಲವಾ ದ್ಯಗಳು ಮೊಳಗುತ್ತಿರುವಾಗ ಗುಡಿಗೆ ಬರಲು ಶಿವಮೂರ್ತಿಯನ್ನು ದೇವಾಲಯದ ಲ್ಲಿರಿಸಿ ಬಂದ ಯಾವತ್ತು ನಾಡಿನ ಜನರೆಲ್ಲರನ್ನು ಸನ್ಮಾನಿಸಿ ಅವರಿಗೆ ಅಪ್ಪಣೆ ಯನ್ನು ಕೊಟ್ಟು ರಥೋತ್ಸವದಿಂದ ತನಗಾದ ಸುಖವನ್ನು ಅಡಿಗಡಿಗೆ ಶಿವಶಿವ ಎಂದು ಅನ್ನುತ್ತ ಶಿವಾರ್ಪಣ ಮಾಡುತ್ತ ಪರವೆನಾಚಿಯೊಡನೆ ಸುಖವಾಗಿ ಕಾಲ ಕಳೆಯುತ್ತಿದ್ದನು.

**ಇತ್ತ ತಿರುವತ್ತಿ** ಎಂಬ ಊರಲ್ಲಿ ರುದ್ರವಧುವಾದ **ಕಾಂತಿಮತಿಯು** ಶಿವ ನಿಷ್ಠರಾದ ಈಶಾನಶೆಟ್ಟಿ-ಶಿವದೇವಿ ಎಂಬ ದಂಪತಿಗಳಿಗೆ ಸರ್ವಾಂಗಸುಂದರಿ ಯಾದ ಮಗಳಾಗಿ **ಸಂಕಿಲೆನಾಚಿ** ಎಂಬಭಿಧಾನದಿಂದ ಒಪ್ಪುತ್ತಿದ್ದಳು. ಕುವ ರಿಯು ಪ್ರಾಯದವಳಾಗಲು ಅನುರೂಪನಾದ ವರನು ಯಾವನು ದೊರೆಯು ವನೋ ಎಂದು ತನ್ನ ಪತಿಯೊಡನೆ ಶಿವದೇವಿಯು ಆಲೋಚನೆಯನ್ನು ಮಾಡಲು ಈಶಾನಶೆಟ್ಟಿಯು ನಿನ್ನಸುತೆಗೆ ಶಿವಸಂಬಂಧಿಯಾದ ಪುರುಷನೊಡನೆ ಪಾಣಿಗ್ರಹ ಣವಾಗುವದೆನ್ನಲು ಅದನ್ನು ಕೇಳಿ ಅದು ನಿಮಗೆ ತಿಳಿದ ಬಗೆ ಹ್ಯಾಗೆ ಎಂದು ಶಿವದೇವಿಯು ಕೇಳಿದಳು. ಆಗ ಈಶಾನಶೆಟ್ಟಿಯು ಭಾರ್ಯಳೇ ನನಗೆ ಏಕಾಂತ ದಲ್ಲಿ ಒಬ್ಬ ದಿವ್ಯಪುರುಷನು ಬಂದು ನಿನ್ನ ಪುತ್ರಿಯು ಶಿವಸುತನಿಗೆ ಪತ್ನಿಯಾಗು ವಳೆಂದು ಹೇಳಿ ಆ ಕ್ಷಣವೇ ಅದೃಶ್ಯನಾದನು.

**ಇತ್ತ ತಿರುವಾರೂರಲ್ಲಿ** ಚರಿತ್ರನಾಯಕನು [illegible]ಥನನ್ನು ಪೂಜಿಸಿ ಎಂದಿನಂತೆ ಧನವನ್ನು ಕೇಳಲು ಕಾಂಚಿ ಮೊದಲಾದ ದೇವಸ್ಥಾನಗಳಿಗೆ ನಡೆ ನಿನಗೆ ಅಲ್ಲಲ್ಲಿ ದ್ರವ್ಯವನ್ನು ಯಥೇಚ್ಛವಾಗಿ ಕೊಡುವೆನೆಂದು ಲೀಲಾವಿಗ್ರಹಧಾರಿ ಯಾದ ಶಂಕರನು ಹೇಳಿದನು. ಆಗ ಆತನು ತನ್ನ ಮಂತ್ರಿ ತುಂಬರ ಹಾಗೂ **ಕುರುಂಬ**ರೊಡನೆ ಮಿತಪರಿವಾರ ಸಮೇತನಾಗಿ ಕಾಂಚಿಯ ಮಾರ್ಗದಲ್ಲಿ ಹತ್ತುವ ದೇವಾಲಯಗಳನ್ನು ಸುತ್ತುತ್ತ ಅಲ್ಲಲ್ಲಿ ಆ ಲಿಂಗಮೂರ್ತಿಗಳನ್ನು ಅಭಿ ಷೇಕಮಾಡಿ ಯಥಾವಿಧಿಯಾಗಿ ಪೂಜಿಸಿ ಈಶನಿಂದ ಪಡಿಹೊನ್ನುಗಳನ್ನು ಪಡೆ ಯುತ್ತ ಕಂಪಾನದಿಯ ಬಳಿಯಲ್ಲಿರುವ (ಪಾರ್ವತಿಯು ಕಾಮಾಕ್ಷಿ ಎಂಬ ಹೆಸರಿ ನಿಂದ ತಪಸ್ಸುಮಾಡಿದ) ಕಾಂಚಿ ಕ್ಷೇತ್ರದ ಗೋಪುರವನ್ನು ಕಂಡು ಸರ್ವರೂ ಮಹಾದೇವನೇ ಎಂದು ಕೈಮುಗಿದರು. [illegible]ಗೆ ಬಂದು ಅಲ್ಲಿಯ ಗುಡಿಯನ್ನು ಪ್ರವೇಶಮಾಡಿ **ಏಕಾಮ್ರನಾಥ**ನೆಂಬ ಶಿವಮೂರ್ತಿಯನ್ನು ಭಕ್ತಿಯಿಂದರ್ಚಿಸಿ ನಿತ್ಯದಪಡಿ ಹೊನ್ನುಗಳನ್ನು ಪಡೆದು ಅಲ್ಲಿಂದ ಉಪವನಗಳಿಂದಲೂ, ಧನಿಕ ರಾದ ಜನರಿಂದಲೂ ಮನೋಹರವಾಗಿ ಸೊಗಯಿಸುವ **ತಿರುವತ್ತಿಪುರಕ್ಕೆ** ಬಂದು ಅಲ್ಲಿಯ ಶಿವಾಲಯಕ್ಕೆ ಬರುವಾಗ ನಯನಮನೋಹರವಾದ ಸ್ತ್ರೀಯರ ಸಮೂಹವನ್ನು ಕಂಡನು ಆ ಸಖಿಯರು **ಸೌಂದರ**ನನ್ನು ನೋಡಿ ಈತನು ಮದನನ ಅವತಾರ ಇರಬಹುದು ಇಲ್ಲದಿದ್ದರೆ ಸಾಮಾನ್ಯಪುರುಷನಿಗೆ ಇಂಥ ಎಣೆ ಇಲ್ಲದ ಸೌಂದರ್ಯವೆಲ್ಲಿಂದ ಬಂದೀತು ? ನಿಜವಾಗಿಯೂ ಈತನು ಪುಷ್ಪಧನ್ವನಿ ಗಿಂತಲೂ ಮಿಗಿಲಾಗಿ ಚೆಲ್ವಿಕೆಯಲ್ಲಿ ಬೆಳಗುತ್ತಿರುವನು ; ಇಂಥ ಮನೋಹರನಿಗೆ ಅನುರೂಪಳಾದ ಯುವತಿಯೆಂದರೆ ನಮ್ಮ ಅರಸಿಯಾದ ಸಂಕಿಲೆಯೇ ಅಹುದು ಎಂದು ತಮ್ಮತಮ್ಮೊಳಗೆ ಮಾತಾಡುವದನ್ನು ಕೇಳಿ ಅವಳಾರೆಂದು ತುಂಬುರಾಮಾ ತ್ಯನು ಕೇಳಿದನು. ಆಗಲಾ ಮೃಗಾಕ್ಷಿಯರು ಆ ಸೀರೆಯು ಈಶಾನಶೆಟ್ಟಿ ಶಿವದೇವಿ ಯರ ಮಗಳು ಸದ್ಗತಿದಾಯಕನಾದ ಪರಮಪುರುಷನು ಪತಿಯಾಗಬೇಕೆಂದು ಈ ಶಿವಾಲಯದ ಪೌಳಿಯಲ್ಲಿ ಕುಳಿತು ಶಿವನನ್ನು ಸ್ತುತಿಸುತ್ತಿರುವಳೆನ್ನಲು ಅಲ್ಲಿಗೆ **ಸೌಂದರನು** ಬಂದು ಅವಳು ಮುಹೂರ್ತ ಮಾಡಿದ ಸ್ಥಳದ ಮುಂಭಾಗದಲ್ಲಿರುವ ಪರದೆಯನ್ನು ಓರೆಮಾಡಿ ಆ ಮನಮೋಹಿನಿಯಾದ ಸ್ತ್ರೀರತ್ನವನ್ನು ಕಂಡಾಕ್ಷ ಣವೇ ಮೈನಡುಗಿ ಬೆಮರೇರಿ ಪಂಚಶರನ ಪರಾಕ್ರಮಕ್ಕೆ ಬಲಿಯಾಗಿ ದಿಙ್ಮೂಢನಾ ದನು. **ಸೌಂದರನ** ಪ್ರಭೆಯು ಶಿವದೇವಿಯ ಮಗಳ ಮೇಲೆ ಬೀಳಲು ಆ ಸಂಕಿ ಲೆನಾಚಿಯು ಕೋಟಿಕಂದರ್ಪರ ಸೊಬಗನ್ನು ತುಚ್ಛೀಕರಿಸುವ ಪುರುಷನನ್ನು ನೋಡಿದೊಡನೆ ನಿಬ್ಬೆರಗಾಗಿ ಶಿವಸ್ತುತಿಯನ್ನು ಅಲ್ಲಿಗೆ(ನಿಲ್ಲಿಸಿ) ಮುಗಿಸಿ(ಬಿಟ್ಟು) ಹೌಹಾರಿ ನಿಂತಳು. ಪರಿಚಾರಕಿಯರು ಇದನ್ನು ತಿಳಿದು ಅವಳನ್ನು ಸುವರ್ಣದ ಪಲ್ಲಕ್ಕಿಯಲ್ಲಿ ಕೂಡ್ರಿಸಿ ಮನೆಗೆ ಕರಕೊಂಡು ಹೋದರು. **ನಂಬಿಯಣ್ಣನು**

ತನ್ನ ಬೀಡಾರಕ್ಕೆ ಬಂದು ಕಾಮುಪರವಶನಾಗಿ ತನ್ನನ್ನೆ ತಾನು ಮರೆಯುವಂತೆ ಭಾಸವಾಗಲು ಧೈರ್ಯವನ್ನು ತಂದುಕೊಂಡು ಬೇಗನೆ ಅಲ್ಲಿಯ ಶಿವಾಲಯಕ್ಕೆ ಬಂದು ಚನ್ನಾಗಿ ಈಶ್ವರನನ್ನು ಪೂಜಿಸಿ ದೀನರಕ್ಷಕನೇ, ದಯಾನಿಧಿಯೇ, ಭಕ್ತ ವತ್ಸಲನೇ ಎಂದು ಹಲವುಪರಿಯಿಂದ ಅಭವವನನ್ನು ಬೇಡುತ್ತಿದ್ದನು. ಆಗ ಮಹಾದೇವನು ಎಂದಿನಂತೆ ಪ್ರತ್ಯಕ್ಷನಾಗಿ ಕಂದನೇ ಏಕೆ ಹಂಬಲಿಸುವೆ ಎಂದು ಕೇಳಿದನು. ನಿನಗೆ ಗೋಚರವಾಗದ ವಸ್ತುವು ಈ ತ್ರಿಭುವನದಲ್ಲಿ ಏನುಂಟು ನನ್ನೇಕೆ ಪೇಚಾಡಿಸುವೆ ಈಶಾನಶೆಟ್ಟಿಯ ಕನ್ನಿಕೆಯನ್ನು ಮದುವೆಮಾಡೆನ್ನಲು ಅವರು ಸಾರ್ವಭೌಮನಾದ ಅವನೀತಿಲಕನಿಗೆ ಕೊಡಬೇಕೆಂದು ಹವಣಿಸುವರು ; ಮತ್ತು ಈ ಮುಂಚೆ ನೀನು ಪರವೆನಾಚಿಯೊಡನೆ ಸಂಬಂಧವಾಗಿರುವದರಿಂದ ನೀನು ಬಯಸುವ ಕನ್ಯೆಯನ್ನು ಅವರು ಕೊಡುವದು ದುರ್ಲಭವು ; ದುಸ್ಸಾಧ್ಯವೇ ಸರಿ ಎಂದು ಶರ್ವನು ಹೇಳಿದನು. ಆಗ ನಂಬಿಯು ಎಲೈ ಸರ್ವಭೋಗ ಸಮೃದ್ಧನಾದ ಶಂಕರನೇ ನಿನ್ನ ಇಚ್ಛಾಮಾತ್ರದಿಂದ ಏನುಬೇಕಾದ ಾಧ್ಯವಾಗುವದು. ಈಶಾನಶೆಟ್ಟಿ ಶಿವದೇವಿಯರು ಯಾವದನ್ನು ಬಯಸಿದರೂ ಅಡ್ಡಿ ಇಲ್ಲಾ ಯಾವ ನಂಬುಗೆಯನ್ನು ಬೇಡಿದರೂ ಅಡ್ಡಿ ಇಲ್ಲ ಅವಕ್ಕೊಪ್ಪಿ **ಸಂಕಿಲೆಯು** ಪರಿಣಯವನ್ನು ನನಗಾಗುವಂತೆ ಮಾಡು ಇಲ್ಲದಿದ್ದರೆ ನಾನು ನಿನ್ನ ತೊತ್ತಿನ ಮಗನು ಎಂಬ ಬಗೆಗೆ ನಿನ್ನಲ್ಲಿ ಪ್ರಮಾಣಪತ್ರವಿದೆಯಲ್ಲಾ ಅದನ್ನು ಬಿಸುಡು ಅಥವಾ ನನ್ನನ್ನು ಕರುಣಿಸೆಂದು ಕಂಬನಿಗರೆಯಲು ದೇವೋತ್ತಮನು ಸುತನನ್ನು ಬಿಗಿದಪ್ಪಿ ಅಂಜಬೇಡವೆಂದು ಅಭಯವಿತ್ತನು.

**ಆ**ಗ ತ್ರ್ಯಂಬಕನು ಜಂಗಮನಾಗಿ **ಈಶಾನ**ಶೆಟ್ಟಿಯ ಗೃಹಕ್ಕೆ ಬಂದನು. ಶಿವದೇವಿಯು ಈತನನ್ನು ಕಂಡು ಶಿವಪ್ರಭಾವಿರಾಜಿತನಾದ ಪುರುಷಶ್ರೇಷ್ಠನೇ ನೀನು ಎಲ್ಲಿಂದ ಬಂದೆ ; ಯಾಕೆ ಬಂದಿರುವಿ ಎಂದು ವಿಚಾರಿಸುತ್ತ ಪಾದಪ್ರಕ್ಷಾಲನೆಯನ್ನು ಮಾಡಿ ಮಣಿಮಯವಾದ ಮಂಚದ ಮೇಲೆ ಮುಹೂರ್ತಗೊಳಿಸಲು ಸಾಂಬನು ನಿಜರೂಪವನ್ನು ತೋರಲು ಅವಳು ಪುನಃ ಆ ಮಹಿಮನಿಗೆ ಪೊಡಮಟ್ಟು ಭದ್ರಕಾಯನೇ ನಿನ್ನ ಈ ರೂಪಕ್ಕಿಂತಲೂ ನನಗೆ ಜಂಗಮರೂಪವೇ ಮಿಗಿಲಾಗಿ ತೋರುವುದು ಆದುದರಿಂದ ಮುಂಚಿನಂತೆ ಜಂಗಮನಾಗು ಎಂದು ಪ್ರಾರ್ಥಿಸಲು ಒಡನೆಯೇ ಭಕ್ತಾಧೀನನಾದ ಶಂಕರನು ಪ್ರಜ್ವಲಿಸುವ ಶಾಂತನಾದ ವರಜಂಗಮನಾಗಿ ತನ್ನ ಸುತನ ವಿವರವನ್ನೆಲ್ಲರುಹಿ ನಿನ್ನ ಮಗಳಾದ ಸಂಕಿಲೆಯನ್ನು ಆತನಿಗೆ ಕೊಡು ಆದರೆ ಆತನು ಪರವೆನಾಚಿಯೆಂಬ ಗಣಿಕೆಯಲ್ಲಿ ಅನುರಕ್ತನಾಗಿರುವನು. ಆದುದರಿಂದ ಆತನು ಇಲ್ಲಿಯೇ ಇರುವಂತೆ ಶಥಪವನ್ನು ಮಾಡಿಸಿ ನಿನ್ನ ಮಗಳನ್ನು ಆತನಿಗೆ ಧಾರೆ ಎರೆಯುವದೆಂದು ಹೇಳಿದನು. ತರುವಾಯ **ನಂಬಿಯಣ್ಣ**ನಿದ್ದಲ್ಲಿ ಆವೃದ್ಧಜಂಗಮನು ಬಂದು ಮಗನೇ **ಈಶಾನ**

ಶೆಟ್ಟಿಯು ನಾನು ನಿನಗೆ ಮೊದಲೇ ತಿಳಿಸಿದಂತೆ ನೀನು ಪರವೆನಾಚಿಯ ಬಳಿಗೆ ಹೋಗದೆ ಇಲ್ಲಿಯೇ ಇರಬೇಕೆಂಬ ತಿಳುವಳಿಕೆಯಿಂದ ಸಮ್ಮತಿಸುವನು ; **ಸಂಕಿಲೆನಾಚಿಯ** ಮಾತಾಪಿತರು ಅವಳನ್ನು ನಿನಗೆ ಕೊಡುವರೆಂದು ಹೇಳಲು **ನಂಬಿಯು** ನಿರುಪಾಯನಾಗಿ ಒಪ್ಪಿದನು. ವಿವಾಹಕಾರ್ಯವು ವಿಜೃಂಭಣೆಯಿಂದ ಜರಗಿತು. **ಸಂಕಿಲೆನಾಚಿಯು** ಶಿವಸುತನನ್ನು ಹೊಂದಿದಳು. ಆಕೆಯ ತಾಯ್ತಂದೆಗಳು ಕೃತಕೃತ್ಯರಾದೆವೆಂದು ಬಗೆದು ಅಭವನನ್ನು ಕೊಂಡಾಡಿದರು- ನೂತನ ವಧುವಾದ ಸಂಕಿಲೆಯೊಡನೆ ಕಾಮಿಗಳು ಬಣ್ಣಿಸುವ ನಾನಾತರದ ಸ್ಮರನಕೇಳಿಗಳಿಂದ ತನಗೆ ಸಾಕೆನಿಸುವಂತೆ ವಿನೋದಪಟ್ಟು ಅದರಿಂದಾಗುವ ಸುಖವನ್ನೆಲ್ಲ ಶಿವಾರ್ಪಣಮಾಡುತ್ತ ಮೂರು ವರ್ಷಗಳನ್ನು ನಿಮಿಷಮಾತ್ರವಾಗಿ ಕಳೆದನು. ಆ ಬಳಿಕ ಅಲ್ಲಿರುವ ಉಪವನದಲ್ಲಿ **ತುಂಬುರ ಕುರುಂಬರೊಡನೆ ಸೌಂದರನು** ವಿಹರಿಸುವಾಗ ಒಬ್ಬ ದೂತನು ಬಂದು ದೇವಾ ನೀವಿಲ್ಲಿಗೆ ಬರಲು **ಸಂಕಿಲೆನಾಚಿಯು** ವಿದ್ಯುದ್ವೇಗದಿಂದ ಆಕಾಶಕ್ಕೆ ಹಾರಿ ಅದೃಶ್ಯಳಾಗಿ ಹೋಗುತ್ತಿರುವಳೆಂದು ಹೇಳಿದ್ದುದಾಗಿ **ಸುರಂಗ** ಮಹಾಕವಿಯು ವಿವರಿಸುವನು. (ಆದರೆ ಶಿವಕವಿ **ಬೊಮ್ಮರಸನು** ಕಾಲಕ್ರಮೇಣ **ಸೌಂದರನು** ಸಂಕಿಲೆಯೊಡನೆ ಕೈಲಾಸಕ್ಕೆ ಹೋದ ಸಂಗತಿಯನ್ನು ಬಣ್ಣಿಸುವನು).

**ತಿರುವತ್ತಿಯೂ**ರಲ್ಲಿ **ಸಂಕಿಲೆಯ**ನುರಾಗದಲ್ಲಿ ಮೂರು ವರ್ಷ **ಸೌಂದರನು** ಇರುತ್ತಿರಲು ಅತ್ತ **ತಿರುವಾರೂರಲ್ಲಿ** ಪರವೆನಾಚಿಗಾದ ವಿರಹವ್ಯಥೆಯನ್ನು ವರ್ಣಿಸಲಳವಲ್ಲ. ಭಕ್ತವತ್ಸಲನಾದ ಶಂಕರನಿಗೆ ಪರವೆಯ ವ್ಯಥೆಯು ವೇದ್ಯವಾಗಿ ಮಂದಮಾರುತನಿಗೆ ಪರವೆನಾಚಿಯ ಮೈಗಂಪನ್ನು ತಂದು **ಸೌಂದರನ** ಮೇಲೆ ಎರಚುವಂತೆ ಕಾಮಾರಿಯು ಆಜ್ಞಾಪಿಸಲು ಅವನು (ಅಂದರೆ ಆ ಮಂದಮಾರುತನು) ಆ ರೀತಿ ಮಾಡಲು **ಸೌಂದರನಿಗೆ** ಪರವೆಯ ನೆನಪಾಗಿ ಬಹುವ್ಯಸನಾಕ್ರಾಂತನಾಗಿ **ಸಂಕಿಲೆ**ಯನ್ನು ಮರೆದು ಈಶ್ವರನನ್ನು ಕೂಡ ನೆನೆಯದೆ ಯಾರಿಗೂ ತಿಳಿಸದೆ **ಕುರುಂಬ ತುಂಬರ**ರೊಡನೆ **ತಿರುವಾರೂರಿಗೆ** ಹೊರಟು **ಕಂಚಿ**ಯನ್ನು ದಾಟಿ ಬಂದೊಡನೆ ಮಾರ್ಗದಲ್ಲಿ ಫಕ್ಕನೆ ಎರಡೂ ಕಣ್ಣುಗಳು ಹೋದವು. ಆಗ **ಸೌಂದರನು** ಬಹು ದುಃಖಿತನಾಗಿ ಮರಳಿ **ಕಂಚಿಗೆ** ಬಂದು **ಏಕಾಮ್ರನಾಥ**ನನ್ನು ಪೂಜಿಸಿ ಶಿವನೇ ನನ್ನ ಕಣ್ಣುಗಳನ್ನು ಕಳೆಯಬಹುದೇ ಎಂದು ಶೋಕಮಾಡಿದನು. ಆದರೂ ಶಂಕರನು ಸುಮ್ಮನೆ ಇದ್ದನು ; ಎಂದಿನಂತೆ ಪ್ರತ್ಯಕ್ಷನಾಗಲಿಲ್ಲ. ಬಳಿಕ **ನಂಬಿಯಣ್ಣನು** ಬಹು ಚಿಂತಾಕ್ರಾಂತನಾಗಿ ಕಾಮಾಕ್ಷಿಯ ಗುಡಿಗೆ ಬಂದು ಅಪರ್ಣೆಯನ್ನು ಅತಿಭಕ್ತಿಯಿಂದ ಬಹುನಿಷ್ಠಾಪರನಾಗಿ ಪೂಜಿಸಲು ಪಾರ್ವತಿಯು ಹರನಪ್ಪಣೆಯಿಂದ ಆತನಿಗೊಂದು ಅಕ್ಷಿಯನ್ನು ಕೊಟ್ಟು ಇನ್ನೊಂದು ನಯನವನ್ನು ವಾಮದೇವನು ನಿನಗೆ **ತಿರುವಾರೂರಲ್ಲಿ**

ಅನುಗ್ರಹಿಸುವನೆಂದು ಹೇಳಿದಳು. ಆಗ ಒಕ್ಕಣ್ಣನಾದ **ನಂಬಿಯು** ತಿರುವಾರೂರಿಗೆ ಬಂದು **ವಲ್ಮೀಕಿನಾಥನನ್ನು** ಭಯಭಕ್ತಿಯಿಂದ ಪೂಜಿಸಿ ಮೃಡನೇ ನೀನು ತ್ರಿನೇತ್ರನಾಗಿ ನನಗೆ ಮಾತ್ರ ಒಂದು ಕಣ್ಣು ಇರಬೇಕೇ ನನ್ನನ್ನು ಅನುಗ್ರಹಿಸು ಇಲ್ಲವೆ ನನ್ನ ವಿಷಯವಾಗಿರುವ ಪ್ರಮಾಣಪತ್ರವನ್ನು ಇತ್ತಕಡೆಗೆ ಚೆಲ್ಲಿಬಿಡು ನಿನಗೆ ಶಂಕರನೆಂಬ ಮಂಗಲನಾಮವು ಸಲ್ಲುವದೋ? ಎಂದು ಆರ್ತಧ್ವನಿಯಿಂದ ನಿರ್ಜರರ ಸಾರ್ವಭೌಮನಾದ ಚಂದ್ರಚೂಡನನ್ನು ಪ್ರಾರ್ಥಿಸುತ್ತ ಕೊರಗುತ್ತಿರುವದನ್ನು ಆ ಪರಮದಯಾಳುವು ಕಂಡು ಮಗನೇ ನೀನು **ಶಿವದೇವಿಯೊಡನೆ** ಅವಳ ಮಗಳನ್ನು ಬಿಟ್ಟು ಬೇರೆಡೆಯಲ್ಲಿ ತೆರಳುವದಿಲ್ಲವೆಂದು ಪ್ರಮಾಣಮಾಡಿ ನನಗೆ ಸಹಾ ಬಿನ್ನವಿಸದೆ ಇಲ್ಲಿಗೆ ಹೊರಡಬಹುದೇ? ಉಚಿತಕಾರ್ಯವೇ ಇದು? ಸಜ್ಜನರೊಪ್ಪುವ ನಡೆಯೋ ಇದು? ಪರಿಭಾವಿಸು ಎಂದು ತಿಳಿಹೇಳಿ ಕಳೆದು ಹೋದ ಎರಡನೇ ಕಣ್ಣನ್ನು ದಯಪಾಲಿಸಿದನು. ಆಗ **ನಂಬಿಯು** ಉಮಾಕಾಂತನೇ ನನಗೆ ಪರವೆಯೊಡನೆ ಸುಖಪಡುವಂತೆ ಮಾಡೆಂದು ವಿಜ್ಞಾಪಿಸಿದನು. ಆಗ ಭಕ್ತದೀಪಿಕನಾದ ಶಂಭುವು ಕುಂಟಣಿಗನಾಗುವದಕ್ಕೊಪ್ಪಿ ಮುನ್ನಿನ ವೃದ್ಧಯೋಗಿಯ ವೇಷವನ್ನು ಹೊಂದಿ **ಮಂಗಲೆ**ಯ ಮನೆಗೆ ಬರಲು ಅವಳು ಆ ಯತಿಗೆ ಪೊಡಮಟ್ಟು ನಿಮ್ಮ ಸ್ನೇಹವು ಇನ್ನು ಸಾಕು; ನಿಮ್ಮ ಮಗನಾದ **ಸೌಂದರನಂಬಿಯ** ಸಂಧಿಯು ನಮಗೆ ಬೇಡಾ; ನನ್ನ ಮುದ್ದು ಮಗಳಾದ ಪರವೆಯು ವಿರಹವ್ಯಥೆಯಿಂದ ಈಗೀಗ ದಶಮಾವಸ್ಥೆಯಲ್ಲಿ ಹೆಜ್ಜೆ ಇಡುವವಳಾಗಿರುವಳು; ಇಷ್ಟರಲ್ಲೇ ಪುತ್ಥಳಿಯಂತಿರುವ ನನ್ನ ಪ್ರೀತಿಯ ಮಗಳು ಅಸುವನ್ನೀಗುವಳು; ನಿಮ್ಮ ಕೃಪೆಯು ಇನ್ನು ಸಾಕು ಹೊರಡಿರಿ; ನೀವು ತಪಸ್ವಿಗಳು ಸಂಸಾರಿಗಳ ಸಹವಾಸವು ನಿಮಗೆ ಸರಿಯಲ್ಲವೆಂದು ಆರ್ಭಟಿಸಿದಳು. ಆಗ ನಮ್ಮ ಕಪಟ ಸಂನ್ಯಾಸಿಯು ಮೃದುವಚನಗಳಿಂದ ಆ ಪಾತರದ ಮುದುಕಿಯನ್ನು ಸಂತೈಸಿ ಮೂರು ವರ್ಷ ನಡೆದ ಸಂಗತಿಗಳನ್ನೆಲ್ಲ ಸಂಕ್ಷೇಪವಾಗಿ ವಿವರಿಸಿ ಇನ್ನು **ತಿರುವಾರೂರಿನ**ಲ್ಲಿಯೇ ನನ್ನ ಮಗನು ನೆಲಸುವನು ಸಂದೇಹ ಬೇಡಾ; ಇನ್ನು ಮುಂದೆ **ನಂಬಿಯಿಂದ** ನಿನಗೆ ಅಧಿಕವಾಗಿ ಧನವನ್ನು ಕೊಡಿಸುವೆನೆಂದು ಹೇಳಿ ಅವಳನ್ನು ಒಡಂಬಡಿಸಿ ಮತ್ತೆ ಕೆಲವು ಮಾತುಗಳನ್ನು (?) ರಹಸ್ಯದಲ್ಲಿ ತಿಳಿಸಿ **ಸೌಂದರ** ನಿದ್ದಲ್ಲಿಗೆ ಬಂದು **ಮಂಗಲೆ**ಯೊಡನೆ ಆದ ಸಂವಾದವನ್ನು ತಿಳಿಸಿ ಯೋಗಿವರನು ಲಿಂಗದಲ್ಲಿ ಬಯಲಾದನು.

**ಸೌಂದರ**ನು ತುಂಬರನೊಡನೆ ಪರವೆನಾಚಿಯ ಮನೆಗೆ ಬರಲು ಆಗ ಅವಳು ಅಲ್ಲಿರದೆ ಶೈತ್ಯೋಪಚಾರಕ್ಕಾಗಿ ಪುಷ್ಪವಾಟಿಯಿಂದ ವಿರಾಜಿಸುವ ಕದಳೀವನದಲ್ಲಿದ್ದಳು. **ಮಂಗಲನಾಚಿಯು** ಆ ಯೋಗಿಯು ಕಿವಿಯಲ್ಲಿ ಹೇಳಿದ ಪ್ರಕಾರ ಆ **ನಂಬಿಗೆ** ಮೂದಲಿಸಿ ನುಡಿದು ಜರಿದು ಬಾಗಿಲವನ್ನು ತೆರೆಯದೆ

ದಾಸಿಯರಿಂದ ನೂಕಿಸಿಬಿಟ್ಟಳು. ಆಗ ಈ ಪರಿಯಾದ ಗೌರವ ವಿಶೇಷದಿಂದ **ಸೌಂದರನು** ಬಹಳ ನೊಂದು ವಿರಹವನ್ನು ತಾಳಲಾರದೆ ಕಂಗೆಟ್ಟು ವಲ್ಮೀಕಿನಾಥನಲ್ಲಿಗೆ ಬಂದು ತಿರುಪಾಡುಗಳನ್ನು ಪಾಡಿ ಎಲೆ ದೇವಾ ಗಂಗೆಯನ್ನು ತಲೆಯಲ್ಲಿಟ್ಟುಕೊಂಡು, ಉಮೆಗೆ ಅರ್ಧಶರೀರವನ್ನೊಪ್ಪಿಸಿ ನನ್ನನ್ನು ಮಾತ್ರ ಮಂಗಳೆಯ ಮನೆಯಲ್ಲಿ ತಿರಸ್ಕಾರಕ್ಕೆ ಗುರಿಮಾಡಿ ಏನೂ ಅರಿಯದಂತೆ ನಟಿಸುವೆಯಾ ? ಭಕ್ತವತ್ಸಲನು ನೀನೆಯೋ ಎಂದು ಅಶ್ರುಗಳನ್ನು ಕರೆದನು. ಆಗ ಭಕ್ತಾಧೀನನಾದ ಅಹಿಕುಂಡಲನು ಮೊದಲಿನಂತೆ ಮುದಿ ತಪಸ್ವಿಯಾಗಿ **ನಂಬಿಯೊಡನೆ** ಪರವೆಯ ಮನೆಗೆ ಬಂದು ಮಂಗಲನಾಚಿಗೆ ಬಾಗಿಲಲ್ಲಿ ನಿಂತು ಕದವನ್ನು ತೆರೆ ಎಂದು ಹೇಳಿದನು. ಪರವೆಯ ತಾಯಿಯು ಯೋಗಿವರನ ಧ್ವನಿಯನ್ನು ಗುರ್ತಿಸಿ ಬಾಗಿಲವನ್ನು ತೆಗೆದು ಉಚಿತಾಸನವನ್ನು ಕೊಟ್ಟು ಆನತಳಾಗಿ ಪರವೆನಾಚಿಯನ್ನು ಕರಿಸಿ **ಸೌಂದರನನ್ನು** ಸನ್ಮಾನಿಸೆಂದು ಹೇಳಿ ನಜ್ಜೆಮನೆಗೆ ಹೋಗೆಂದು ಕಣ್ಸನ್ನೆಯನ್ನು ಮಾಡಿ ಬೇರೊಂದೆಡೆಯಲ್ಲಿ ಮಂಗಲೆಯು ಹೋಗಲು **ನಂಬಿಯು** ಪರವೆಯೊಡನೆ ಸುಖಿಸಲೆಂದು ಯತಿಯು ಶಿವಾಲಯಕ್ಕೆ ತೆರಳಿ ಆ ಲಿಂಗದಲ್ಲಿ ವಿಶ್ರಾಂತಿಯನ್ನು ಹೊಂದಿದನು. ಕೆಲವು ತಿಂಗಳು ಶಿವಸುತನು ಆ ಗಣಿಕೆಯೊಡನೆ ಕಾಮಶಾಸ್ತ್ರದಲ್ಲಿ ಪ್ರವೀಣತೆಯನ್ನು ಹೆಚ್ಚೆಚ್ಚಾಗಿ ಪಡೆಯುತ್ತ ಆಗಾಗ ತನಗಾಗುವ ಸುಖಾನುಭವವನ್ನು ಪರಮಾತ್ಮನಿಗೆ ಅರ್ಪಿಸುತ್ತ ಪ್ರಾಣಲಿಂಗಿಯಾಗಿ ಕಾಲಯಾಪನೆ ಮಾಡಿದನು.

ಆ ವೃದ್ಧತಾಪಸಿಯು ಪರವೆನಾಚಿಯ ಮನೆಗೆ ಬಂದು **ತಿರುವತ್ತಿಯೂರ**ಲ್ಲಿರುವ ಶಿವದೇವಿ ಈಶಾನಶೆಟ್ಟಿಯ ಮಗಳಾದ **ಸಂಕಿಲೆನಾಚಿ**ಯನ್ನು ಇಲ್ಲಿಗೆ ಕರಿಸಿ ಸುಖವಾಗಿ ಬಾಳುವದೆಂದು ಚನ್ನಾಗಿ ಬುದ್ಧಿಕಲಿಸಿ ಗುರು-ಲಿಂಗ-ಜಂಗಮ ದಾಸೋಹತತ್ಪರರಾಗಿರುವದೆಂದು ತಿಳಿಸಿ ಸರ್ವಾತ್ಮನು ತನ್ನ ಆಲಯಕ್ಕೆ ತೆರಳಿದನು

**ಸೌಂದರನು** ಸಂಕಿಲೆಯನ್ನು ತವರ್ಮನೆಯಿಂದ ಕರೆಯಿಸಿಕೊಂಡು ಉಭಯ ನ ್ಲಿಯರೊಡನೆ ವಿಷಯಸುಖದಲ್ಲಿ ಮುಳುಗುತ್ತ ಆ ರತಿಯಿಂದಾಗುವ ಆನಂದವನ್ನೆಲ್ಲ ಈಶನಿಗೆ ನಿವೇದಿಸುತ್ತ ದಿವಸಗಳು ನಿಮಿಷಗಳಾಗಿ ಹೋಗುತ್ತಿರುವಾಗ ಒಂದು ದಿನ **ಸೋಮಾಸಿಮಾರರು** ಎಂಬ ತೇಜಸ್ವಿಯಾದ ಶೈವನು ರುದ್ರಾಕ್ಷ ಮಾಲಾಯುಕ್ತನಾಗಿ ಹಣೆಯಲ್ಲಿ ತ್ರಿಪುಂಡ್ರಭೂಷಿತನಾಗಿ ಪರವೆನಾಚಿಯ ಮನೆಗೆ ಬರಲು ಈತನಾರೆಂದು **ಸೌಂದರನು** ತನ್ನ ಪ್ರಿಯಳನ್ನು ಕೇಳಿದನು. ಆಗ **ಪರವೆನಾಚಿಯು** ದೇವಾ ಈ ಭೂಸುರೋತ್ತಮನು ನೀವು ಮೂರು ವರ್ಷಕಾಲ ಇಲ್ಲಿ ಇಲ್ಲದಾಗ ನನಗೆ ದಿನಾಲು ತರತರದ ಪರಿಮಳಿಸುವ ಪುಷ್ಪಗಳನ್ನು ತಂದು ಕೊಡುತ್ತಿದ್ದನು. ಹೀಗೆನ್ನಲು **ಸೌಂದರನು** ಈ ಬ್ರಾಹ್ಮಣನಿಗೆ ಹತ್ತು ಸಾವಿರ

ಹೊನ್ನನ್ನು ಕೊಡುವದೆಂದು ಹೇಳಲು ಆ ಶೈವಪುಂಗವನು ದೇವಾ ನನಗೆ ಧನವು ಬೇಡಾ ನಾನು ಮಾಡುವ ಯಾಗಕ್ಕೆ ಶಿವನನ್ನು ಕಳುಹಿಸಿಕೊಟ್ಟರೆ ಅಷ್ಟೇ ಸಾಕು ಬೇರೆ ಏನೂ ಬೇಡಾ ಹೀಗೆ ವಿನಯವಾಗಿ ಹೇಳಿದನು. ಅದಕ್ಕೆ ಶಿವಸುತನು ಒಪ್ಪಿದನು. ಕೂಡಲೇ ಆ ಶಿವದ್ವಿಜನು ತನ್ನ ಗ್ರಾಮವಾದ **ತಿರುವಂಬಲೂರಿಗೆ** (ಪಾಠಾಂತರವು ಆವಲೂರು) ಬಂದು ಸಕಲಸನ್ನಾಹವನ್ನು ಮಾಡಿ ಯಜ್ಞಶಾಲೆಯನ್ನು ರಚಿಸಿ ದೇವಚೂಡಾಮಣಿಯ ಆಗಮನವನ್ನೇ ಕಣ್ಣಿವೆ ಇಕ್ಕದೆ ಅಕ್ಷಯನಾದ ಅಸಮನಯನನು ಯಾವಾಗ ಬರುವನೆಂದು ಶಿವನಾಮುಗಳನ್ನು ನೆನೆಯುತ್ತ ಆತನನ್ನೇ ಸ್ಮರಿಸುತ್ತ ತದೇಕಧ್ಯಾನಪರನಾಗಿ ಬ್ರಹ್ಮಣ ಸಮೂಹದೊಡನೆ ಮುಖಮುಂಟಪದಲ್ಲಿ ಕುಳಿತಿದ್ದನು.

**ಪ**ರವೆನಾಚಿಯ ಮನೆಯಿಂದ ಆ ಪಾರ್ವನು ಹೋದ ಬಳಿಕ **ಸೌಂದರನಂಬಿಯು** ವಲ್ಮೀಕಿನಾಥನಲ್ಲಿಗೆ ಬಂದು ಇಂಪಾಗಿ ತಿರುಪಾಡುಗಳನ್ನು ಹಾಡಿ ಶಿವದ್ವಿಜನಿಗೆ ತಾನು ವಚನಕೊಟ್ಟ ಸಂಗತಿಯನ್ನು ನಿವೇದಿಸಿದನು. ಭಕ್ತರಕ್ಷಕನಾದ ನೀಲಕಂಠನು ಆ ವಿಜ್ಞಾಪನೆಗೆ ಸಮ್ಮತಿಸಿದನು.

**ಚಂ**ದ್ರಧರನು ಆವಲೂರಲ್ಲಿ ನಡೆಯುವ ಅಧ್ವರಕ್ಕೆ ಹೊರಡಲನುವಾಗಿ ತನ್ನ ನಿಜರೂಪವನ್ನು ಮಾಜಿ ಕೈಯಲ್ಲಿ ಕೋಲನ್ನು ಹಿಡಿದು ತಲೆಗೆ ಮಿಣಿಯನ್ನು ಸುತ್ತಿಕೊಂಡು ಮಲಿನವಾದ ಬಟ್ಟೆಯನ್ನು ಧರಿಸಿ ಶಂಭೋ ಎಂಬ ನಾಮವನ್ನೇ ಗ್ರಾಮ್ಯವಾಗಿ ಹೇಗೇಗೋ ನುಡಿಯುತ್ತ ಆ ಯಜ್ಞಶಾಲೆಗೆ ಬಂದನು. ಆ ಧ್ವನಿಯನ್ನು ಕೇಳಿ ಬರುತ್ತಲಿರುವ ಕುಹಕವೇಷಧಾರಿಯನ್ನು ಶೈವಶ್ರೇಷ್ಠನು ಕಂಡು ತಟ್ಟನೆ ಆತನೆಡೆಗೆ ಬರುವದನ್ನು ಕಂಡು ಕಪಟವೇಷಧರನು ಎಲವೋ ಮುಟ್ಟಬೇಡಾ ನಾನು ಹೊಲೆಯನು, ಹೊಲೆಯನು, ದೂರ ಸರಿಯೆನಲು ಆತನಲ್ಲಿರುವ ಶಿವತೇಜವನ್ನು ಕಂಡು ಈತನೇ ನೀಲಲೋಹಿತನೆಂದು ನಿರ್ಧರಿಸಿ ಆತನ ಚರಣಗಳನ್ನು ಬಲಾತ್ಕಾರದಿಂದ ಹಿಡಿಯಲು ಶಂಕರನು ಎಲವೋ ಮುಟ್ಟಬೇಡಾ ನನ್ನನ್ನು ಮುಟ್ಟುವಿಯಾ (?) ಎಂದೆನ್ನಲು ಶಿವದ್ವಿಜನು ಕುಲವಿಲ್ಲದ ಶರೀರವಿಲ್ಲದ (ಅಂದರೆ ಇಚ್ಛಾಶರೀರಿಯೆಂದು ವಿಶ್ವಶರೀರಿಯೆಂದು ಭಾವಿಸುವದು) ನಿರ್ಮಲನಾದ ಶಿವನೇ ನಿಮ್ಮನ್ನು ನಾನು ಗುರ್ತಿಸಬಲ್ಲೆನೆಂದು ಬಲಾತ್ಕಾರದಿಂದ ಯಾಗಶಾಲೆಗೆ ತಂದು ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಸಿಂಹಪೀಠದಲ್ಲಿ ಕುಳ್ಳಿರಿಸಲು ಇದೆಲ್ಲವನ್ನು ಅಲ್ಲಿಗೆ ಬಂದ ವಿಪ್ರರೆಲ್ಲ ಯಾಗಶಾಲೆಯು ಹೊಲೆಗಲಿಸಿತೆಂದು ಹೊರಟುಹೋದರು. **ಸೋಮಾಸಿಮಾರರು** ಮಾತ್ರ ಆ ವಿಪ್ರಸಮೂಹವನ್ನು ಗಣನೆಗೆ ತಾರದೆ ಮಹಾಪಾದಕ್ಕೆ ಅಭಿಷೇಕವನ್ನು ಮಾಡಿ ಪಾದತೀರ್ಥವನ್ನು ಸ್ವೀಕರಿಸಿ ಯಜ್ಞಸಾಮಗ್ರಿಗಳನ್ನು ಅರ್ಪಿಸಿ ಕೈಮುಗಿಯುತ್ತ ಮತ್ತೊಮ್ಮೆ

ಮಣಿದು ಹರ್ಷಪಡುತ್ತಿರುವಾಗ ಶಂಕರನು ನಿಜರೂಪವನ್ನು ತೋರಿ ಆ ಶೈವನಿಗೆ ಗಣಪದವಿಯನ್ನು ಕರುಣಿಸಿದನು.

ತಿರುವಾವಲೂರಲ್ಲಿ ಉತ್ತುಂಗ ಚೋಳನೃಪತಿಯ ಮಹಿಷಿಯು ಮೃತಪಡಲು ಆವಳನ್ನು ಸಂಸ್ಕರಿಸಿದ ಅಸ್ಥಿಗಳನ್ನು **ಗಯಾ** ಕ್ಷೇತ್ರಕ್ಕೆ ಕಳಿಸುವಷ್ಟರಲ್ಲಿ ಅವರ ಗುರುಗಳು ಬಂದು **ಗಯಾ** ಕ್ಷೇತ್ರಕ್ಕಿಂತಲೂ ಮಿಗಿಲಾದುದು ಪರವೆನಾಚಿಯ ಅಂಗಳವು ಶಿವನು **ನಂಬಿಯ** ಸಂಗಡಿಗನಾಗಿ ಹೆಚ್ಚಾಗಿ ಅಲ್ಲಿ ಸಂಚರಿಸುತ್ತಿರುವನೆಂದು ಹೇಳಿ ಅಲ್ಲಿಯೇ ಪಿಂಡಪ್ರದಾನ ಮಾಡಿಸಲು ನಿಜಪಿತೃಗಳು ರುದ್ರಲೋಕಕ್ಕೆ ತೆರಳಿದರು. ಇದನ್ನು ಕಂಡು **ನಂಬಿಯೇ** ಧನ್ಯನೆಂದು ಆ ನೃಪವರನು ಬಗೆದು ನಂಬಿಕುಮಾರನಿಗೆ ತಲೆಬಾಗಿ ನಮಿಸಿ ಕೊಂಡಾಡಿದನು. ಆಗ **ನಂಬಿಯು** ರಾಜಪಿತನಿಗೂ ಪೂರ್ವದ ಜನನೀಜನಕರಾದ ಯಸ್ಯಜ್ಞಾನಿದೇವಿ ಜಡೆಯನಯನಾರರಿಗೂ ಶಿವಭಕ್ತಿರಹಸ್ಯವನ್ನು ಲಿಂಗಾರ್ಪಿತದ ಗುಟ್ಟನ್ನು ಸಹ ವಿವರಿಸಿ, (ಅವಿದ್ಯೆ-ಅಸ್ಮಿತೆ-ರಾಗ-ದ್ವೇಷ-ಅಭಿನಿವೇಶ ಎಂಬ) ಪಂಚಕ್ಲೇಶಗಳಿಂದ ದೂರಾಗಿರಬೇಕೆಂದು ಬಿಂಬಿಸಿದನು. (ಹಸಿವು-ತೃಷೆ-ಶೋಕ-ಮೋಹ-ಮುಪ್ಪು-ಸಾವು ಎಂಬ) ಷಡೂರ್ಮಿಗಳಿಂದ, ನಾವೆಂದು ನೀಗುವೆವೆಂದು ಕಥಾನಾಯಕನ ಜನನೀಜನಕರು ಶಿವಾವಲಂಬಿಗಳಾಗಿ, ಶಿವಾನುರಾಗಿಗಳಾಗಿ ಕಾಲಕಳೆಯುತ್ತ ಕೆಲವು ಸಂವತ್ಸರಗಳು ಕಳೆಯಲು ಅನಂತನು **ಯಸ್ಯಜ್ಞಾನಿದೇವಿಗೂ, ಜಡೆಯನಯನಾರರಿಗೂ** ಅನುಗ್ರಹಿಸಬೇಕೆಂದು ಆ ಪುರದಲ್ಲಿಯ ಶಿವೈಕ್ಯರನ್ನು ಸಹಾ ರಜತಾದ್ರಿಗೊಯ್ದು ಆ ಶೈವದಂಪತಿಗಳಿಗೆ ಗಣಪದವಿಯನ್ನು ಕರುಣಿಸಿದನು.

**ಸನ್ಮಾರ್ಗ**ರತನಾದ **ನರಸಿಂಗಮೊನೆ** (ಪೂರ್ವದ ಹೆಸರು **ಉತ್ತುಂಗ ಚೋಳ**) ದೊರೆಯು ಶಿವಭಕ್ತಿಪರನಾಗಿ ಜಂಗಮರು ಬೇಡಿದುದನ್ನು ನಿರ್ವಂಚನೆಯಿಂದ ಕೊಡುತ್ತಿರಲು ಆತನ ಶಿವಪರವಾದ ಪ್ರೇಮವು ಸಾಂಬನಿಗೆ ವೇದ್ಯವಾಗಿ ಒಳ್ಳೇ ರಸಿಕ ವಿಟವೇಷಯುಕ್ತ ಜಂಗಮನಾಗಿ ಸದ್ಗೀತೆಯನ್ನು ಪಾಡುತ್ತ ಕೈಯಲ್ಲಿರುವ ವೀಣೆಯನ್ನು ನುಡಿಸುತ್ತ ಮನೋಹರನಾಗಿ **ತಿರುವಾವಲೂರಿಗೆ** ಬಂದು ಆ ರಾಯನ ಮನೆಗೆ ಬರಲು ಆತನು ಭಯಭಕ್ತಿಯಿಂದ ಇದಿರೆದ್ದು ಹೋಗಿ ಬಹು ವಿನಯದಿಂದ ಒಳಗೆ ಕರೆದುಕೊಂಡು ಬಂದು (ಆತನ ದಿವ್ಯಪ್ರಭೆಯ ಮೇಲಿಂದ ದೇವೋತ್ತಮನೇ ಅಹುದೆಂದು ಬಗೆದು) ಸಾಷ್ಟಾಂಗವಾಗೆರಗಿ ನಿಮ್ಮ ಇಚ್ಛಿತವೇನೆಂದು ವಿನಯವಾಗಿ ಕೇಳಿದನು. ಆತನ ಸೇವೆಯಿಂದ ತುಷ್ಟನಾದ ಶಂಕರನು ವಿಟರಿಗೆ ಬೇಕಾದುದೇನು ವಿಪುಲಧನವಲ್ಲವೇ ನನಗೆ ಭೂರಿ ಮಿಸುನಿಯನ್ನು ಕೊಡುವದೆಂದನಲು ಆಗಲೇ ತನ್ನ ಅಮಾತ್ಯರಿಂದ ಹೇರಳವಾಗಿ ಸುವರ್ಣರಾಶಿಯನ್ನು ಒಟ್ಟಿಸಿ ಅರ್ಪಿತವಾಗಲೆಂದು ಬೇಡಿಕೊಂಡನು. ಪ್ರೀತನಾದ

ಶಿವಾವಲ್ಲಭನು ಆಗಲೇ **ನರಸಿಂಗಮೊನೆಯರಿಗೆ** ನಿಜರೂಪವನ್ನು ತೋರಿ ಗಣಪದವಿಯನ್ನಿತ್ತು ರಕ್ಷಿಸಿದನು.

**ಚೋಳ** ಧರಿತ್ರಿಯಲ್ಲಿ ಮೆರೆಯುವ **ತಿರುನಲ್ಲೂರೆಂಬ** ಪುರದಲ್ಲಿ ಮನ್ನೆಯ ಕುಲೋದ್ಭವನಾದ **ಕಲಿಕಾಮ**ನೆಂಬ ಭೂಪನು ಉಗ್ರಗಣಾಚಾರವ್ರತದ ಶಿವಭಕ್ತನಾಗಿ ಅನೀತಿಯುತರನ್ನು ದುಷ್ಟರನ್ನು ಶಿವದ್ರೋಹಿಗಳನ್ನು ಸೈರಿಸದ ಛಲದವನಾಗಿ **ತಿರುವಾವಲೂರಲ್ಲಿ ನಂಬಿ** ಎಂಬಾತನು ದೇವೋತ್ತಮನನ್ನು ಕುಂಟಣಿಗತನಕ್ಕೆ ಹಚ್ಚಿರುವನೆಂಬ ಸಂಗತಿಯನ್ನರಿತು ಹಲ್ಲುಗಳನ್ನು ಕಚ್ಚುತ್ತ ಮೃದುವಾದ ಶಿವನ ಪಾದಪಲ್ಲವಗಳು ನೋಯುವೇ ಶಂಕರನನ್ನು ಕೀಳಕಜ್ಜಕ್ಕೆ ಈಡು ಮಾಡುವದುಚಿತವೇ ? ಎಂದು ರೋಷಗೊಂಡು **ತಿರುವಾವಲೂರಿಂದ** ತನ್ನ ಗ್ರಾಮಕ್ಕೆ ಯಾರಾದರೂ ಬಂದರೆ ಪಾಪಿಯಪುರದಿಂದ ಬಂದವರೆಂದು ದಂಡಿಸುತ್ತಿದ್ದನು. ಇದನ್ನು **ನಂಬಿಯು** ಕೇಳಿ **ಕಲಿಕಾಮನ** ಮೇಲೆ ದಂಡೆತ್ತಿ ಬಂದು ಸೋತು ಓಡಿಹೋಗಿ **ವಲ್ಮೀಕಿನಾಥನಿಗೆ** ನನಗೆ ಅಪಜಯವಾದುದು ನಿನಗೆ ಸಮ್ಮತವೇ ಎಂದು ತಿರುಪಾಡುಗಳನ್ನು ಪಾಡಿ ಬೇಡಿಕೊಂಡನು. ಅಕ್ಷರನು **ಕಲಿಕಾಮನ** ಭಕ್ತಿಯನ್ನು ತಿಳಿಯುವೆನೆಂದು ಜಂಗಮನಾಗಿ ಆತನಲ್ಲಿಗೆ ಬರಲು ಅತಿಥಿಗೆ ಸನ್ಮಾನವನ್ನು ಮಾಡಿ ಉಚಿತಾಸನವನ್ನು ಕೊಟ್ಟು ಕುಶಲ ಪ್ರಶ್ನೆಯನ್ನು ಗೈಯುತ್ತ ತಾವೆಲ್ಲಿಂದ ಬಂದರೆಂದು ಕೇಳಲು ಶಿವನನ್ನು, ಶಿವಭಕ್ತರನ್ನು, ಶಿವಧರ್ಮವನ್ನು, ಶಿವರತಿಯುತರನ್ನು ನೆರೆನಂಬಿದ **ನಂಬೆಂಣ್ಣನಲ್ಲಿಂದ** ಬಂದೆನೆನುತ ಕೋಲೂರುತ್ತ ಅತಿಥಿಪುಂಗವನು ಪಲಾಯನವನ್ನು ಮಾಡಲು ಆತನನ್ನು ನಿವಾರಿಸಬೇಕೆಂದು ಖಡ್ಗಪಾಣಿಯಾಗಿ **ಕಲಿಕಾಮನು** ಬೆನ್ನಟ್ಟಲು ಆತನು **ತಿರುವಾರೂರು** ಸೀಮೆಯಲ್ಲಿ ಅಡಿಇಡಲು ಪಾಪಿಯ ಭೂಮಿಯಲ್ಲಿ ಹೊಕ್ಕಿರುವದರಿಂದ ನಾನು ಅಲ್ಲಿಗೆ ಹೋಗಿ ಕೊಲ್ಲುವದಿಲ್ಲವೆಂದು ಮರಳಿ ತನ್ನ ನಗರಕ್ಕೆ ಬಂದನು. ಅಭವನು **ಸೌಂದ**ರನಿಗೆ ನಿನಗೆ **ಕಲಿಕಾಮನ** ಮುನಿಸನ್ನು ಮತ್ತು ಆತನ ಛಲವನ್ನು ತೋರಿಸುವೆನೆಂದು ಹೇಳಿ **ಕಲಿಕಾಮನ** ಹೊಟ್ಟೆಯಲ್ಲಿ ಶೂಲಿಯನ್ನುಂಟು ಮಾಡಿದನು. ಆ ಬಾಧೆಯಿಂದ **ಕಲಿಕಾಮನು** ನರಳುತ್ತಿರುವಾಗ **ನಂಬಿಯನ್ನು** ರೂಪಾಂತರಗೊಳಿಸಿ ಆತನೊಡನೆ ತಾನು ಜಂಗಮನಾಗಿ ಬರಲು ಅತಿಕಷ್ಟದಿಂದ ಬಳಲುತ್ತಿದ್ದರೂ ತಟ್ಟನೆ ಎದ್ದು ಜಂಗಮನಿಗೆರಗಿ ಸಿಂಹಾಸನದಲ್ಲಿ ಮುಹೂರ್ತಗೊಳಿಸಿ ದೇವಾ ನೀವೆಲ್ಲಿಂದ ಬಂದಿರೆಂದು ಕೇಳಲು **ತಿರುವಾವಲೂರಿಂದ** ಬಂದೆವು ಇಗೋ ಈತನೇ **ನಂಬಿಯು** ಎಂದೆನಲು **ಕಲಿಕಾಮನು** ಸುರಗಿಯನ್ನೆತ್ತಲು ತಟ್ಟನೆ ಆತನ ಕೈಯನ್ನು ಹಿಡಿದು ನಿಜರೂಪವನ್ನು ತೋರಿ **ನಂಬಿ–ಕಲಿಕಾಮರಿಗೆ** ಶಿವಭಕ್ತಿಯ ಪರಿಯನ್ನು ಚನ್ನಾಗಿ ಬಿಂಬಿಸಿ **ಕಲಿಕಾಮನಿಗೆ** ಗಣಪದವಿಯನ್ನು ಕರುಣಿಸಿದನು.

**ಪಾಠಾಂತರವು:**— ಶ್ರೀಕುಡಿ ಎಂಬ ಪುರದಲ್ಲಿ **ಕಲಿಕಾಮ**ನೆಂಬ ಶಿವಾಗ ಮಪ್ರೇಮಿಯು ಶಿವಾಚಾರನಿಧಿಯಾದ ಭೂಪನಾಗಿದ್ದನು. ಆತನು **ನಂಬಿಯು** ತಿರುಪಾಡುಗಳನ್ನು ಪಾಡಿ ಸಾವಿರ ಹೊನ್ನುಗಳನ್ನು ಪಡೆಯಲಿ ಚಿಂತೆಇಲ್ಲಾ ಆದರೆ ತಾನು ಪರವೆಯ ಮನೆಗೆ ದೂತನನ್ನಾಗಿ ಶಿವನನ್ನಟ್ಟುವದು ವಿಹಿತವೇ ಎಂದು ಗರ್ಜಿಸುತ್ತ ನಾನು **ತಿರುವಾರೂರ** ಸೀಮೆಯಲ್ಲಿ ಹೆಜ್ಜೆಯನ್ನಿಡಲಾರೆ ನೆಂದು ಹೇಳಿ ಆ ನಂಬಿಯನ್ನು ಕೊಲ್ಲುವೆನೆಂದು ಭಾಷೆತೊಟ್ಟನು. ಇದನ್ನು **ನಂಬಿಯು** ಕೇಳಿ **ವಲ್ಮೀಕಿನಾಥನಿಗೆ** ಆ **ಕಲಿಕಾಮನ** ಸ್ನೇಹವನ್ನು ಮಾಡಿಸ ಬೇಕಾಗಿ ಬೇಡಿಕೊಂಡನು. (ಮೇಲೆ ವಿವರಿಸಿದಂತೆ) ರಣದಲ್ಲಿ **ನಂಬಿಯು** ಸೋಲಲು ತನಗೆ ವಿಜಯವಾಗುವಂತೆ **ವಲ್ಮೀಕಿನಾಥನಿಗೆ** ಪ್ರಾರ್ಥಿಸಿದನು. ಸದಾಶಿವನು ಕಲಿಕಾಮನ ಉದರದಲ್ಲಿ ಶೂಲಿಯನ್ನುಂಟು ಮಾಡಲು ಆತನು ಆದರ ನೋವನ್ನು ಸಹಿಸದೆ ಸುರಗಿಯಿಂದ ಇರಿದುಕೊಳ್ಳಲು ಇದೆಲ್ಲವು ಶಿವನಾ ಟವು ಲೀಲಾವಿಗ್ರಹಧಾರಿಯಾದ ಕಂತುಹರನ ಮಾಯೆಯೆಂದು ಬಗೆದು ನನ್ನ ಪತಿಯು ಸದ್ಗತಿಗೆ ಸಂದಿದನೆಂದು **ಕಲಿಕಾಮನ** ಪತ್ನಿಯು ಭಾವಿಸಿ ಆತನ ದೇಹವನ್ನು ಕೋಣೆಯಲ್ಲಿ ಬಚ್ಚಿಟ್ಟು ಮನೆಯನ್ನು ಸಾರಿಸಿ ಜಂಗಮಾರ್ಚನೆ ಯಲ್ಲಿ ಆಸಕ್ತಳಾಗಿ ಶಿವಧ್ಯಾನಪರಳಾಗಿದ್ದಳು. ಆಗ ಸರ್ವಸಾಕ್ಷಿಭೂತನಾದ ಶಂಕರನು **ಸೌಂದರ**ನೊಡನೆ **ಕಲಿಕಾಮನ** ಮನೆಗೆ ಬಂದು ನಿನ್ನ ಪತಿಯು ಎಲ್ಲಿ ರುವನೆಂದು ಆತನ ಪತ್ನಿಯನ್ನು ಕೇಳಲು ಆ ಶಿವಭಕ್ತೆಯು ಈ ಅಪೂರ್ವ ಕಾಂತಿ ಯುತನಾದ ಜಂಗಮನೇ ಶಿವನೆಂದು ಭಾವಿಸಿ ಆ ಅತಿಥಿವರನನ್ನು ಉತ್ತಮಾಸ ನದಲ್ಲಿ ಚನ್ನಾಗಿ ಕುಳ್ಳಿರಿಸಿ ಪಾದಪ್ರಕ್ಷಾಲನೆಯನ್ನು ಮಾಡಿ ಪಾದತೀರ್ಥವನ್ನು ಉತ್ತಮಾಂಗದಲ್ಲಿ ಧರಿಸಿ ನನ್ನ ವಲ್ಲಭನು ನಿದ್ರಾಪರವಶನಾಗಿರುವನೆಂದು ಮೆಲ್ಲನೆ ನುಡಿದಳು. ಆಗ **ಕಲಿಕಾಮನ** ದೇಹವನ್ನು ಬಚ್ಚಿಟ್ಟ ಕೋಣೆಯನ್ನು ಪೊಕ್ಕು ಆ ವರಜಂಗಮನು ಇಲ್ಲಿ **ಕಲಿಕಾಮನಿಲ್ಲ.** ಆತನ ನಿಷ್ಠೆಯು, ಛಲವು, ಉಗ್ರಗಣಾಚಾರವ್ರತವು ಉಂಟೆಂದು ಹೇಳಿ ನಿನ್ನ ನಿದ್ರೆಯು ತೀರಲಿಲ್ಲವೋ ? ಕಂದನೇ ಏಳು ಎಂದು ನಂದಿವಾಹನನು ಹೇಳಲು ಆ ಕಳೇವರದಲ್ಲಿ ಜೀವಕಳೆ ತುಂಬಿ ಶಿವನನ್ನು ನೋಡಿ ಶರಣಾರ್ಥಿ ಎಂದು **ನಂಬಿಯನ್ನು** ಕಂಡು ಕಣ್ಮುಚ್ಚಿ ದನು. ಆಗ ಜಂಗಮನು **ಕಲಿಕಾಮನಿಗೆ** ಇಗೋ ಇದು ನಿನ್ನ ಪುನರ್ಜನ್ಮ ವೆಂದು ಹೇಳಿ ಶಿವಭಕ್ತಿಯ ಗುಟ್ಟನ್ನು ತಿಳುವಳಿಕೆಯ ಪರಿಯನ್ನು ಇಬ್ಬರಿಗೂ ಚನ್ನಾಗಿ ಬೋಧಿಸಿ ನಿಜರೂಪವನ್ನು ತೋರಿ **ಕಲಿಕಾಮನಿಗೂ,** ಆತನ ಪತಿವ್ರತೆ ಯಾದ ಸಹಧರ್ಮಚಾರಿಣಿಗೂ ಗಣಪದವಿಯನ್ನು ಕರುಣಿಸಿದನು.

ತಿರುವಾವಲೂರಲ್ಲಿ ಜಾತ್ರೆಯು ಸಮಿಾಪಿಸಲು ಅಲ್ಲಿಯ **ವಲ್ಮೀಕಿನಾಥ**ನಾ ಲಯದಲ್ಲಿ ಶಿವಭಕ್ತರು ನೆರೆದು ನೀಲಕಂಠನ ತೇರುಮಾಡಿಸುತ್ತ ಅದರ ಶೃಂಗಾರ

ವನ್ನು ಹೆಚ್ಚಿಸುತ್ತಿರುವಾಗ ಅಲ್ಲಿಗೆ **ಚೆಂಗೊಂಡೆ** ಎಂಬ ಪುರದಿಂದ **ಮೆರಿಮಿಂಡ**ನೆಂಬ ಉಗ್ರಗಣಾಚಾರದ ಭಕ್ತನು ಬಂದು ಶಿವಗೋಷ್ಟಿಯಲ್ಲಿ ಮಗ್ನನಾಗಿ ಶಿವಶರಣರೊಡನೆ ಶಿವಾನುಭವವನ್ನು ಮಾಡುತ್ತಿರಲು ಸಂಭ್ರಮದಿಂದ ಎಂದಿನಂತೆ **ನಂಬಿಯು** ಬಂದು ಕಲೆತಿರುವ ಶರಣರಿಗೆರಗದೆ ಅವರನ್ನು ಲಕ್ಷಿಸದೆ ದೇವಾಲಯದಲ್ಲಿ ಹೋಗುತ್ತಿರುವಾಗ ಇಷ್ಟು ಅಲಕ್ಷೆಯಿಂದ ಹೋಗುವ ದುರುಳನು ಇವನಾರೆಂದು **ಮೆರಿಮಿಂಡನು** ಕೇಳಲು ಆ ಶರಣಸ್ತೋಮವು ಈತನು ಶಿವಸುತನು ದಿನಾಲು **ವಲ್ಮೀಕಿನಾಥ**ನಿಂದ ಪಡಿಹೊನ್ನುಗಳನ್ನು ಪಡೆಯುವನೆಂದು ಹೇಳಿದರು. ಆಗ **ಮೆರಮಿಂಡನು** ಬಹಳ ಸಿಟ್ಟಿನಿಂದ ಶಿವಭಕ್ತರನ್ನು ತೃಣೀಕರಿಸಿ ಸನ್ಮಾನಿಸದಿರುವ ಇಂಥ ಮೂಢನಿಗೆ ಶಿವನೊಲುಮೆಯೇ ಈತನನ್ನು (ಅಂದರೆ ಕಥಾನಾಯಕನಾದ **ನಂಬಿಯನ್ನು**) ಜಡೆಯಿರಿ, ಘಾತಿಸರಿ ಎಂದು ರೌದ್ರಾವತಾರಿಯಾಗಲು **ನಂಬಿಯು** ಅಂಜಿ ದೇವಾಲಯದ ಬಾಗಿಲಗಳನ್ನು ಹಾಕಿಕೊಂಡು ನಡೆದ ಸಂಗತಿಯನ್ನು ಮಹಾದೇವನಿಗೆ ಭಯಾರ್ತನಾಗಿ ನಿವೇದಿಸಲು ಶಂಕರನು ಮಗನೇ ನೀನು ಶಿವಭಕ್ತರನ್ನು ಈ ಪರಿಯಾಗಿ ಉಪೇಕ್ಷಿಸಬಹುದೇ ಅವರಿಗೆ ವಂದಿಸದೆ ನೀನಿಲ್ಲಿ ಬರಬಹುದೇ ಅಗೋ ನೋಡು **ಮೆರಿಮಿಂಡನು ನಂಬಿಯು** ಹಾಗೂ ಆತನಿಗೊಲಿದಿರುವ ಶಿವನು ಶಿವಭಕ್ತರ ಹೊರಗೆಂದು ಡಂಗುರವನ್ನು ಸಾರುತ್ತಿರುವನೆಂದು ಕಂಪಿಸುತ್ತ ಹೇಳುವದನ್ನು **ನಂಬಿಯು** ಕಂಡು ಎಲೆ ದೇವಾ ನೀವಿಷ್ಟು ಅಂಜುತ್ತಿರುವಾಗ ನನ್ನ ಪಾಡೇನೆಂದು ಕಣ್ಣೀರು ತುಂಬಿ ಗದಗದನೆ ನಡುಗುತ್ತಿರಲು ಈಶ್ವರನು ಈಗ ನಾವಿಲ್ಲದಿರುವದು ತರವಲ್ಲವೆಂದು ನಂಬಿಗೆ ಹೇಳಿ ಸೂಕ್ಷ್ಮರೂಪವನ್ನು ಧರಿಸಿ ಆತನೊಡನೆ ಗವಾಕ್ಷಮಾರ್ಗದಿಂದ ಆ ಊರ ನೆರೆಯಲ್ಲಿರುವ ಪುಷ್ಪೋದ್ಯಾನಕ್ಕೆ ಬಂದು ಶಿವಭಕ್ತರು ಸರ್ವಸ್ವತಂತ್ರರು, ಆ ನನ್ನ ನಿಜಭಕ್ತರು ನಡೆದುದೇ ವಿಶುದ್ಧವಾದ ನಡೆ, ಅವರು ನುಡಿದುದೇ ಮಂತ್ರ, ಅವರಿಗೂ ನನಗೂ ಅಣುಮಾತ್ರ ಭೇದವಿಲ್ಲ ಅವರು ಮಹಾಮಹಿಮರು ಹೀಗಿರಲು ನೀನು ಅವರಿಗೆರಗದೆ ದೇವಾಲಯವನ್ನು ಪ್ರವೇಶಿಸುವದರಿಂದ ಅವರಿಗೆ ವಿರೋಧ ಮಾಡಿದಂತಾಯಿತು ಆದುದರಿಂದ ಈಗ ನೀನು ಈ ಪವಿತ್ರವಾದ **ಚೋಳ** ಭೂಮಿಯಲ್ಲಿರುವ (ನಿನ್ನನ್ನು ಮೊದಲ್ಗೊಂಡು) ಅರವತ್ತುಮೂರು ಪುರಾತನರನ್ನು ಅವರ ಗುಣಗಾನಮಾಡುತ್ತ **ವಲ್ಮೀಕಿನಾಥ**ನಾಲಯಕ್ಕೆ ನಡೆ ಎಂದು ಬುದ್ಧಿಗಲಿಸಿ ಮರಳಿ ಆ ಲಿಂಗದಲ್ಲಿ ಅಡಗಿದನು. ದೇವಾಲಯದ ದ್ವಾರವು ತನ್ನಿಷ್ಟಕ್ಕೆ ತಾನೆ ತೆರೆಯಿತು. ಇತ್ತ ಪುರಾತನರನ್ನು ಮನೋಹರವಾಗಿ ಸ್ತುತಿಸುತ್ತ ಶರಣಾಗತನಾಗಿ ಬರುತ್ತಿರುವ **ನಂಬಿಯನ್ನು** ಆ ಗುಡಿಯಲ್ಲಿರುವ **ಮೆರಿಮಿಂಡನು** ಕಂಡು ಆತನ ಕೋಪವಡಿಗಿ ಶಿವಸುತನೆಂದು ತಿಳಿದು ಶಿವಪ್ರೇಮಿಯಾದ ಭಕ್ತನ ಮೇಲೆ ನಾನು ಕೈ ಎತ್ತಿದೆನೆಂದು ಖತಿಗೊಂಡು ಖಡ್ಗವನ್ನು ತಕ್ಕೊಂಡು

ತಾನು ಇನ್ನಿರಕೂಡದೆಂದು ಶಿರವನ್ನು ಕತ್ತರಿಸಿಕೊಳ್ಳಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ಗಿರಿಜಾಮನೋಹರನು ನಿಜರೂಪವನ್ನು ದೋರಿ ಆತನ ಸಾಹಸವನ್ನು ತಡೆದು ಪರಿಪರಿಯಾಗಿ ಸ್ತುತಿಸುತ್ತಿರುವ **ಮೊರಿಮಿಂಡನಿಗೆ** ಗಣಪದವಿಯನ್ನು ಆಶೀರ್ವದಿಸಿದನು.

**ಪ**ರಮಪುರಾತನರ ತಿರುಪಾಡುಗಳನ್ನು ಸಾನಂದನಾಗಿ ಪಾಡುತ್ತ ಶಿವಕಾರ್ಯನಿರತನಾಗಿ ಸುಖದಿಂದಿರುತಲೊಂದು ದಿನ ದೈವಗತಿಗನುಸಾರವಾಗಿ **ಚಾರಮ**ರಾಜನ ಪುರಕ್ಕೆ ಹೋಗುವಭಿಲಾಷೆಯಾಗಲು **ತುಂಬರ ಕುರುಂಬ**ರೊಡಗೊಂಡು ಮಿತಪರಿವಾರದೊಡನೆ **ತಿರುವಾರೂರಿಂದ** ಹೊರಟು **ತಿರುನಾಗ**ಪಟ್ಟಣಕ್ಕೆ ಬಂದು ಅಲ್ಲಿಯ ಶಿವಾಲಯಕ್ಕೆ ಬಂದು ಈಶ್ವರ ಪೂಜೆಯನ್ನು ಕ್ರಮಯುಕ್ತವಾಗಿ ಮಾಡಿ ಪವಿತ್ರವಾದ * ಬಿಲ್ವಗಳನ್ನು ಧರಿಸಿ ಸಂತೋಷದಿಂದ ತಿರುಪಾಡುಗಳನ್ನು ಪಾಡಿ ಎಲೆ ದೇವಾ ನಾವೀಗ **ಚಾರಮನ** ಪುರಕ್ಕೆ ಹೊರಟಿರುವೆವು- ಆದುದರಿಂದ ನನಗೊಂದು ಬೆಳ್ಗೊಡೆಯನ್ನು ಹಾಗೂ ಒಂದು ಠೆಕ್ಕೆಯ ಕುದುರೆಯನ್ನು ಕೃಪೆಮಾಡುವದೆಂದು ಪ್ರಾರ್ಥಿಸಲು ಜಗದೀಶನು ಶ್ವೇತಛತ್ರವನ್ನು ಮತ್ತು ಗಾಳಿಯ ಗಮನಕ್ಕಿಂತಲೂ ತೀವ್ರವಿರುವ ಗರುಡನ ಬಲಕ್ಕಿಂತ ಮಿಗಿಲಾದ ದಿವ್ಯಾಶ್ವವನ್ನು ಪ್ರೀತಿಯಿಂದ **ನಂಬಿಗೆ** ಕೊಟ್ಟನು. ವಿರೂಪಾಕ್ಷನು ಕೊಟ್ಟ ನೂತನ ವಾಜಿಯೊಡನೆ ಬೆಳ್ಗೊಡೆಯುಕ್ತನಾಗಿ **ನಂಬಿಯು** ಕೆಲವು ಯೋಜನ ದಾಟಿ ಬರುತ್ತಿರಲು ಒಬ್ಬ ದೂತನು ಬಂದು ದುಃಖದಿಂದ

---

* ಪೂರ್ವದಲ್ಲಿ ಲಕ್ಷ್ಮಿಯು ಶಂಕರನನ್ನು ಸಹಸ್ರಕಮಲಗಳಿಂಡ **ಪೂಜಿಸಬೇಕೆಂದು** ೧೦೦೦ ಪದ್ಮಗಳನ್ನು ಎಣಿಸಿಟ್ಟು ಪೂಜಿಸುತ್ತಿರುವಾಗ **ಉ**ರಗಾಭರಣನು ಅವಳ ಭಕ್ತಿಯನ್ನು ಪರೀಕ್ಷಿಸಬೇಕೆಂದು ಒಂದು ಕಮಲವನ್ನು ಮರೆಮಾಡಲು. ಅವಳು ತನ್ನ ವ್ರತಭಂಗವಾಗಬಾರದೆಂದು ತನ್ನ ಸ್ತನವನ್ನೆ ಕೊಯಿದು ಅರ್ಚಿಸಲು ಅಸಮಾಕ್ಷನು ಪ್ರೀತನಾಗಿ ಲಕ್ಷ್ಮಿಗೆ ಮೊಲೆಯನ್ನು ಅನುಗ್ರಹಿಸಿ ಆಕೆಯು ಲಿಂಗಮಸ್ತಕದ ಮೇಲೆ ಧರಿಸಿದ ಸ್ತನವನ್ನು ಶ್ರೀಶೈಲದಲ್ಲಿ ಊರಲು ಅದು ಶ್ರೀಫಲದ್ರುಮವಾಯಿತು. ಈ ಗಿಡಕ್ಕೆ ಬಿಲ್ವವೃಕ್ಷವೆಂತಲೂ ಹೆಸರು ಅದೆ. ಆ ಬಿಲ್ವದಳದ ಎಡಬಾಗದ ಎಸಳಿನಲ್ಲಿ ಬ್ರಹ್ಮನೂ, ಬಲಭಾಗದ ಎಸಳಿನಲ್ಲಿ ವಿಷ್ಣುವೂ, ಮಧ್ಯ ಎಸಳಿನಲ್ಲಿ ರುದ್ರನೂ ಎಸಳಿನ ತುದಿಯಲ್ಲಿ ಶಕ್ತಿಯೂ ನೆಲಸಿರುವರು. ಬಿಲ್ವದಳವು ಶಿವನಿಗೆ ಪ್ರಿಯಕರವು. ಪತ್ರಸಂಧಿಯಲ್ಲಿ ಸಕಲ ದೇವತೆಗಳು ವಾಸಿಸುವರು, ಪತ್ರಿಯ ಮೇಲ್ಮುಖವು ಲಿಂಗದ ಮುಖಕ್ಕೆ ಹತ್ತುವಂತೆ ಧರಿಸಬೇಕು ದೇವತಾಗಣಸಮೂಹವು ಬಿಲ್ವವೃಕ್ಷವನ್ನು ಆಶ್ರಯಿಸುವದು. ಕ್ಷೇತ್ರಗಳು ಸಕಲ ತೀರ್ಥಗಳು ಬಿಲ್ವಸನ್ನಿಧಿಯಲ್ಲಿ ಅಡಕವಾಗುವವು. ಬಿಲ್ವವನ್ನು ಧರಿಸುದರಿಂದ ಫಲಪುಷ್ಪ ಮಜ್ಜನ ನೈವೇದ್ಯ ಧೂಪ ದೀಪ ಮೊದಲಾದುದರಿಂದ ಸೇವಿಸಿದ ಫಲವು ದೊರೆಯುವದು. ಒಂದು ನೂರು ಕಣಗಿಲ ಹೂವುಗಳಿಂದಾಗಲಿ, ಅಥವಾ ಒಂದು ಸಾವಿರ ರಜತ ಪುಷ್ಪಗಳಿಂದಾಗಲಿ ಇಲ್ಲವೆ ಹತ್ತುಸಾವಿರ ಕಮಲಗಳಿಂದಾಗಲಿ, ಅಥವಾ ಲಕ್ಷ ತುಂಬಿಯ ಕುಸುಮಗಳಿಂದಾಗಲಿ ಪೂಜಿಸಿದಷ್ಟು ಫಲವು ಒಂದು ಬಿಲ್ವದಳದಿಂದ ಪೂಜಿಸಿದರೆ ಆ ಫಲವು ದೊರೆಯುವದು. ಬಿಲ್ವದಡಿಯಲ್ಲಿ ಮರಣವು ಆದರೆ ಶಿವಲೋಕಪ್ರಾಪ್ತಿಯಾಗುವದು.

ದೇವಾ ನೀವಿತ್ತ ಬರಲು ಪರವೆನಾಚಿಯು ಮಿಂಚಿನವೇಗದಿಂದ ಆಕಾಶಕ್ಕೆ ಜಿಗಿದು ಆಶ್ಚರ್ಯಕರವಾಗಿ ಮಾಯವಾಗಿ ಹೋದಳು ಹೀಗೆ ಹೇಳಿದನು ಎಂದು **ಸುರಂಗ** ಮಹಾಕವಿಯು ವಿವರಿಸುವನು ಆದರೆ ಶಿವಕವಿ **ಬೊಮ್ಮರಸನು** ಆಕೆಯು ಚರಿತ್ರಲಲಾಮನಾದ **ಸೌಂದರ**ನೊಡನೆ ಕೈಲಾಸಕ್ಕೆ ಹೋಗಿರುವದಾಗಿ ವರ್ಣಿಸಿರುತ್ತಾನೆ. ಪರವೆಯ ಸಂಗತಿಯನ್ನು ತಿಳಿದು ದುಃಖದಿಂದ ಕಥಾಪುರುಷನು ಶಿವನೇಬಲ್ಲನೆಂದೆನ್ನುತ್ತ ಕೊಂಗುದೇಶವನ್ನು ಹೊಕ್ಕು ಅವಿನಾಶಿ ಎಂಬ ಪುರಕ್ಕೆ ಬರುವಷ್ಟರಲ್ಲಿ ಆ ನಗರದ ಪಾರ್ಶ್ವದಲ್ಲಿ ವೇಗದಿಂದ ಹರಿಯುವ ಭೀಕರವಾದ ನದಿಯನ್ನು ದೂರದಿಂದ ಕಂಡನು.

**ಅ**ಷ್ಟರಲ್ಲಿ ಅತ್ತಕಡೆಯಿಂದ ಒಬ್ಬ ಹೆಣ್ಣು ಮಗಳ ಕರುಣಾಜನಕವಾದ ಆಕ್ರೋಶದ **ನಂಬಿಯೇ ನಂಬಿಯೇ** ಎಂಬ ಧ್ವನಿಯು ಕೇಳಬರಲು ಆಗ ಅದರ ವೃತ್ತಾಂತವನ್ನು ತಿಳಿಯಬೇಕೆಂದು ಚಾರರನ್ನು ಅಲ್ಲಿಗೆ ಕಳಿಸಿದನು. ಆಗ ಅವರು ಅಲ್ಲಿಗೆ ಬಂದು ತಾಯಿಯೇ ಏಕಾಕಿನಿಯಾಗಿ ಇಲ್ಲಿ ಪ್ರವಾಹದಡಿಯಲ್ಲಿ (ನಿಂತು) ಉಸುರ್ಗರೆಯುತ್ತ ಕುಳಿತು **ನಂಬೀ, ನಂಬಿಯಣ್ಣನೇ** ಎಂದು ಹಂಬಲಿಸುತ್ತಿರುವಿ; ಇದೇನು ಎಂದು ಆ ಬ್ರಾಹ್ಮಣ ಸ್ತ್ರೀಯಳನ್ನು ಕೇಳಿದರು. ಆಗ ದ್ವಿಜಸ್ತ್ರೀಯಳು:-ಕೇಳಿ ನೀವೇನು ಮಾಡುವಿರಿ? ನೀವು ಹೋದ ನನ್ನ ಮಗನನ್ನು ತಿರುಗಿ ಕೊಡಬಲ್ಲಿರಾ ನನ್ನ ಮೂರುವರ್ಷದ ಬಾಲಕನು ಈ ಹೊತ್ತಿಗೆ ಐದು ವರ್ಷದ ಮೊದಲು ಓರಿಗೆಯ ಬಾಲಕರೊಂದಿಗೆ ಹೊಳೆಗೆ ಹೋದಾಗ ಮೊಸಳೆಯು ಆ ನನ್ನ ಮಗನನ್ನು ನುಂಗಿ ಬಿಟ್ಟಿತು. ನನಗೆ ಮಕ್ಕಳಿಲ್ಲದಿರಲು ಶಿವಕ್ಷೇತ್ರದಿಂದ ಜಂಗಮರು ಹೋಗುವಾಗ ಅವರನ್ನು ಕಂಡು ಪ್ರೀತಿಯಿಂದ ನಮಸ್ಕರಿಸಲು ಆ ಮಾಹೇಶ್ವರರು ಅವ್ವಾ ಗರ್ಭವತಿಯಾಗುವಿ ; ನೀನು ಹುಟ್ಟಿದ ಮಗುವಿಗೆ ನಂಬಿಯಣ್ಣನೆಂಬ ಮಂಗಲಕರವಾದ ಶಿವಕುಮಾರನ ಹೆಸರನ್ನಿಡುವದೆಂದು ಕಟ್ಟು ಮಾಡಿದರು. ಆ ಮಹಾತ್ಮರ ಆಶೀರ್ವಾದದಿಂದ ಅರ್ಭಕನು ಉಂಟಾಗಲು ಆ ಶ್ರೇಷ್ಠವಾದ **ನಂಬಿ** ಎಂಬ ಹೆಸರಿಟ್ಟರೂ ಕೂಡ ನನ್ನ ಅದೃಷ್ಟವು ಹೀಗಾಯಿತೆಂದು ರೋದಿಸಿದಳು. ನನ್ನ ಮಗನ ಗೆಳೆಯನ ಮುಂಜೆಯು ಈ ದಿವಸ ಇರುವದರಿಂದ ನನ್ನ ಕುಮಾರನು ಬದುಕಿದ್ದರೆ ಆತನ ಉಪನಯನವು ಸಹಾ ಈ ದಿವಸವೇ ಆಗುತ್ತಿತ್ತು. ಅಯ್ಯೋ ನನ್ನ ಗತಿಯು ಹೀಗಾಯಿತೇ ಪ್ರಶಸ್ತವಾದ, ಶುಭಕರವೆಂದು ನಂಬಿದ, **ನಂಬಿ** ಎಂದು ಹೆಸರಿಟ್ಟರೂ ಈ ರೀತಿ ಪರಿಣಮಿಸಿತೇ ? ಎಲ್ಲೈ ಕಂದಾ, ಮುದ್ದು ಮಗನೇ ಎಂದು ಬಿಸುಸುಯ್ದು ಉಚ್ಚಸ್ವರದಿಂದ ಅಳಹತ್ತಿದಳು. ಈ ಸಂಗತಿಯನ್ನೆಲ್ಲ ತಿಳಿದುಕೊಂಡು ಬಂದು **ಸೌಂದರ** ನೃಪನಿಗೆ ಸವಿಸ್ತಾರವಾಗಿ ತಿಳುಹಿಸಲು ಆತನು ದಯೆಗೊಂಡು ಆ **ಅವಿನಾಶಿ** ಎಂಬ ಪುರದಲ್ಲಿರುವ ಈಶ್ವರ ಮಂದಿರಕ್ಕೆ ಬಂದು ಸಕ್ರಮವಾಗಿ ಮಹಾಲಿಂಗಕ್ಕೆ ಮಜ್ಜನಮಾಡಿ,

ಭಸಿತವನ್ನು ಧರಿಸಿ, ಗಂಧಾಕ್ಷತೆಗಳನ್ನು ತೊಡೆದು, ಕೋಮಲವಾದ ಬಿಲ್ವದಳಗಳನ್ನು, ಸುಗಂಧವಾದ ಪುಷ್ಪಗಳನ್ನು ಸಹಾ ಧರಿಸಿ ತಿರುಪಾಡುಗಳನ್ನು ಆದರದಿಂದ ಪಾಡಿ ಭಕ್ತಕಲ್ಪದ್ರುಮನೇ, ಭಕ್ತಬಂಧುವೇ, ಶರಣಾಗತ ಸಂರಕ್ಷಕನೇ **ನಂಬಿ** ಎಂಬ ನನ್ನ ಹೆಸರನ್ನು ತಳೆದ ಶಿವದ್ವಿಜಕುಮಾರನೋರ್ವನು ಮೊಸಳೆಗೆ ತುತ್ತಾಗಿರುವನು. ಆತನಿಗೆ ಜೀವದಾನವನ್ನು ಕರುಣಿಸುವದು; ಆತನ ಮಾತೆಯ ಕಷ್ಟವು ಅತಿಯಾಗಿರುವದು. ಕುವರನ ಭಕ್ತಿಪಾಶದಿಂದ ಬಿಗಿಯಲ್ಪಟ್ಟ ಸಕಲ ಕಲ್ಯಾಣಪ್ರದನಾದ ಶಂಕರನು ಆತನ ಪ್ರಾರ್ಥನೆಗೊಪ್ಪಿ ಯಮನನ್ನು ಕರೆದು ದ್ವಿಜವಟುವಿನ ಗತಿ ಏನಾಗಿದೆ ಎಂದು ಕೇಳಲು ಆತನು ಮಹಾಪ್ರಭುವೇ **ನಂಬಿ** ಎಂಬ ಶುಭನಾಮುವನ್ನು ಆ ಹಸುಳನು ಧರಿಸಿದ್ದುದರಿಂದ ಆತನಿಗೆ ಸಾಯುಜ್ಯಪದವಿಯು ಪ್ರಾಪ್ತವಾಗಿದೆ ಎಂದು ಹೇಳಿದನು. ಆಗ ಶಶಿಧರನು ಯಮನಿಗೆ ಆ ಶಿಸುವನ್ನು ಮರಳಿ ಆ ಮೊಸಳೆಯ ದವಡಿಯಲ್ಲಿರಿಸಿ ಕಕ್ಕುವಂತೆ ಮಾಡೆಂದು ಆಜ್ಞಾಪಿಸಿದನು.

ಇತ್ತ ಪುರಜನರೊಂದಿಗೆ ಆ ತರುಳನ ಮಾತೆಯೊಡನೆ ಚರಿತ್ರನಾಯಕನು ಆ ಪ್ರವಾಹದ ಕಡೆಗೆ ಹೋಗಿ ಮಂಗಲವಾದ್ಯಗಳು ಮೊಳಗುತ್ತಿರುವಾಗ ಶಿವಸ್ತುತಿಯನ್ನು ಭಕ್ತಿಪುರಸ್ಸರವಾಗಿ ಮಾಡುತ್ತಿರಲು ಆ ಘೋರವಾದ ಮೊಸಳೆಯು ಜಲದೊಳಗಿಂದ ಆರ್ಭಟಿಸುತ್ತ ದಂಡೆಗೆ ಬಂದು ಆ ಬ್ರಾಹ್ಮಣ ಮಗುವನ್ನು ಕಾರಿಬಿಟ್ಟಿತು. ಸರಿಯಾದ ವಯಸ್ಸಿನ ದ್ವಿಜಕುಮಾರನು ಪ್ರವಾಹದ ಹೊರಗೆ ಬಂದು ತನ್ನ ಮಾತಾಪಿತರಿಗೂ ಹಿರಿಯ **ನಂಬಿಯಣ್ಣನಿಗೂ** ನಮಸ್ಕರಿಸಿದನು. ಆಗ ಆ ಸಾಧ್ವಿಯ ಸ್ತನದಲ್ಲಿ ಕ್ಷೀರವು ಚಿಮ್ಮಿತು. (ಇದಲ್ಲವೇ ತಾಯಿ ಮಕ್ಕಳ ನೈಸರ್ಗಿಕವಾದ ಕುರುಹು) **ತುಂಬುರ ಕುರುಂಬರು** ನಲಿದಾಡಿದರು. ಆ ಭೂಸುರ ದಂಪತಿಗಳಿಗೂ, **ಸೌಂದರ**ನಿಗೂ ಆದ ಆನಂದಕ್ಕೆ ಎಣೆಯೇ ಇಲ್ಲದಾಯಿತು. ಆ ಕುಮಾರನ ಉಪನಯನವನ್ನು ಮಾಡಿಸಿ ಆತನ ಮಾತಾಪಿತರಿಗೆ ಭೂರಿಧನವನ್ನು ಕೊಟ್ಟು **ಸೌಂದರನಂಬಿಯು** ಸಂತೋಷಪಟ್ಟನು.

ಅಲ್ಲಿಂದ ಹೊರಡುವಾಗ ಪರವೆನಾಚಿ ಮತ್ತು ಸಂಕಿಲೆಯರನ್ನು ಕರಿಸಿಕೊಂಡು **ಕುಡುಂಗನೂರಿಗೆ** ಹೊರಟು ಮಧ್ಯಮಾರ್ಗದಲ್ಲಿ **ತಿರುಮರುಪಿಕೊಂಡಿ** ಎಂಬ ಪುರಕ್ಕೆ ಸಪರಿವಾರವಾಗಿ ಬಂದನು. ಅಲ್ಲಿ ಶಿವಾಲಯವಿದ್ದರೂ, ಅಲ್ಲಿಗೆ ಶಿವಸುತನು ಹೋಗದಿರಲು ಮಹಾದೇವನು ಮುನಿಸುಗೊಂಡನು. **ನಂಬಿಯ** ಪರಿವಾರವು ಮುಂದಕ್ಕೆ ಸಾಗಲು ಸುರಮುಖ್ಯನು ಶಬರವೇಷವನ್ನು ಕಳೆದು ತನ್ನ ಗಣಸಮೂಹವನ್ನು ಕಿರಾತರನ್ನಾಗಿ ಮಾಡಿ **ಸೌಂದರನ** ಪರಿವಾರವನ್ನು ಸುಲಿಯಬೇಕಾಗಿ ಅಪ್ಪಣೆ ಮಾಡಿದನು. ಆಗ ಲುಬ್ಧಕರು **ಸೌಂದರನ** ಸಮೂಹವನ್ನು ಬಡಿದು ಅವರಲ್ಲಿದ್ದುದನ್ನೆಲ್ಲ ಕಸಿದುಕೊಂಡು

ಬಿಟ್ಟರು. ಆಗ ಆ ಅರಣ್ಯದಲ್ಲಿ ಆ ಪುಂಡರಿಂದ ಪೀಡಿಸಲ್ಪಟ್ಟ **ನಂಬಿಯಣ್ಣನು** ಕಂಗೆಟ್ಟು ದುಃಖದಿಂದ ಇರುವಾಗ ಮಧ್ಯಾಹ್ನವಾದುದರಿಂದ ಬಿಸಿಲು ಭಯಂಕರವಾಗಿದ್ದುದರಿಂದ ಎಲ್ಲರೂ ಬಲುಕಷ್ಟಪಟ್ಟರು. ನೀರಡಿಕೆಯಿಂದ ಬಳಲುತ್ತಿರುವಾಗ **ಸೌಂದರನ** ಬಳಿಗೆ ಮುಕ್ಕಣ್ಣನು ವಟುವೇಷವನ್ನು ತಳೆದು ಕೈಯಲ್ಲಿ ಬುತ್ತಿಯ ಗಂಟನ್ನು ಹಾಗೂ ತಣ್ಣೀರಿನ ಕಮಂಡಲವನ್ನು ಹಿಡಿದುಕೊಂಡು ಬಂದನು. ಆಗ **ನಂಬಿಯು** ನೂತನಕುಮಾರನಿಗೆ (ಅಂದರೆ ವಟುವೇಷದ ಶಂಕರನಿಗೆ) ಈ ಬುತ್ತಿಯೂ ನೀರೂ ನನಗೆ ಬೇಡಾ ನನ್ನ ಪರಿವಾರಕ್ಕೆ ಕೊಡುವದೆನಲು ಆತನು ಅದೇ ರೀತಿಯಲ್ಲಿ ಮಾಡಿದನು. (ಅಂದರೆ ಆ ಅತುಲನ ಹಸ್ತದಲ್ಲಿರುವ ಗ್ರಾಸವು ಸರ್ವಸಮೂಹಕ್ಕೆ ತೃಪ್ತಿಪಡಿಸಿತೆಂದು ಭಾವವು.) ಕೂಡಲೇ **ಸೌಂದರನಿಗೆ** ಬಹಳ ಹೊಟ್ಟೆ ಹಸಿದುದರಿಂದ ಕೌತುಕಪಡುತ್ತ ತುಂಬುರಾದಿಗಳನ್ನು ಕರೆದು ಈ ಅಡವಿಯಲ್ಲಿ ಶಿವಲಿಂಗವು ಇರುವದೋ ಹ್ಯಾಗೆ ಪರೀಕ್ಷಿಸಿರಿ ಎಂದು ಅನುಜ್ಞೆಯನ್ನು ಮಾಡಿದನು. ಆಗ ಅವರು ಬಂದು ಶಿವಾಲಯವು ಇಲ್ಲಿರುವದೆಂದು ತಿಳುಹಲು **ನಂಬಿಯಣ್ಣನು** ಅಲ್ಲಿಗೆ ಬಂದು ಈಶ್ವರ ಪೂಜೆಗೈದು ತಿರುಪಾಡುಗಳನ್ನು ಭಕ್ತಿಯಿಂದ ಪಾಡಿ ಎಲೆ ದೇವಾ ನೀನಿಂತು ನನ್ನನ್ನು ಕಾಡುವದೇ, ಚೋರರಿಗೆ ಈಡು ಮಾಡುವದೇ ಇದೆಯೋ ನಿನ್ನ ಭಕ್ತವತ್ಸಲತೆಯು ಎಂದು ಕೊಂಡಾಡಲು (?) ಪಾರ್ವತೀಪತಿಯು ಪ್ರತ್ಯಕ್ಷನಾಗಿ ಎಲೈ ಮಗನೇ ನೀನು ನನ್ನನ್ನು **ತಿರುಮುರುಪಿಕೊಂಡಿಯಲ್ಲಿ** ಉಪೇಕ್ಷೆಮಾಡಿ ಬಂದದ್ದರಿಂದ ನಿನ್ನನ್ನು ಸುಲಿಸಿದೆನು ಎಂದು ಹೇಳಿ ಆತನ ಪರಿವಾರದಿಂದ ಕಸಿದುಕೊಂಡ ಸಮಸ್ತ ವಸ್ತುಗಳನ್ನೆಲ್ಲ ಮರಳಿ ಕೊಡಿಸಿ ವಸ್ತ್ರಾಭರಣಗಳನ್ನು ಮತ್ತು ಪಡಿಹೊನ್ನುಗಳನ್ನು ಕೊಡಲು **ನಂಬಿಯು** ಉಮೆಯರಸನಿಗೆ ಪುನಃ ಪುನಃ ಮಣಿದು ಸಪರಿವಾರನಾಗಿ **ಚಾರಮನ** ಪುರಕ್ಕೆ ಅತಿ ಸಮೀಪವಾಗಿ ಹೊರಟನು.

ಆ ಊರಮುಗ್ಗಲಲ್ಲಿರುವ ಬನದ ಶೋಭೆಯನ್ನು ನೋಡಿ ಚರಿತ್ರಪುಂಗವನು ಆನಂದಪಡುತ್ತ ಬರುತ್ತಿರಲು **ಚಾರಮನ** ಚಾರರು ಓಡಿ ಬಂದು ರಾಯನಿಗೆ ನಿವೇದಿಸಿದರು. ಆಗ ಆ ನೃಪತಿಯು ಅಮಾತ್ಯರಿಗೆಲ್ಲ ಊರನ್ನೆಲ್ಲ ಬಹುವಿಧವಾಗಿ ಶೃಂಗರಿಸುವಂತೆ ಅಪ್ಪಣೆ ಮಾಡಿ ಕರಿತುರಗಾದಿ ಸಮಸ್ತವೈಭವದಿಂದ **ಸೌಂದರನಂಬಿಯನ್ನು** ಇದಿರಗೊಂಡು ಸನ್ಮಾನಿಸಿದನು. **ನಂಬಿಯಣ್ಣನು** ಗಜದಿಂದಿಳಿಯಲು ಆತನಿಗೆ **ಚಾರಮನು** ನಮಸ್ಕರಿಸಿ ಅರಮನೆಗೆ ಕರೆದುಕೊಂಡು ಬಂದು ಸಿಂಹಾಸನದಲ್ಲಿ ಕುಳ್ಳಿರಿಸಿ ಕುಶಲ ಪ್ರಶ್ನೆಗಳನ್ನು ಮಾಡಿ ಸಂತೋಷದಿಂದ ಸುಖಾಲಾಪಗಳನ್ನು ಮಾಡುತ್ತಿರಲು ಮಧ್ಯಾಹ್ನವನ್ನು ಸೂಚಿಸುವ ನಗಾರಿಯ ಧ್ವನಿಯಾಗಲು **ಸೌಂದರನಂಬಿಯ** ಘನತೆಗೆ ತಕ್ಕಂತೆ ದಿವ್ಯಸೌಧಕ್ಕೆ ಆತನನ್ನು ಕಳುಹಿಸಿ ಯಲ್ಲ ಸಂಗ್ರಹವನ್ನು ಯಥೇಚ್ಛವಾಗಿ ಅಣಿಮಾಡಿಸಿ

ಕೊಟ್ಟು ಕುಶಲರಾದ ಸಂಗೀತ ಪರಿಣತರಾದ ವಿಲಾಸಿನೀ ಸಮೂಹವನ್ನು ಅತಿಥಿ ಪುಂಗವನನ್ನು ಓಲಗಿಪುದೆಂದು ಕಳುಹಿಸಿ ತನ್ನ ಮಂದಿರಕ್ಕೆ **ಚಾರಮನು** ಬಂದು ಶಿವಧ್ಯಾನಪರನಾಗಿ ಶಿವಪ್ರಸಾದವೆಂದು ಅರ್ಪಿತವನ್ನು ಸೇವಿಸಿ ಶಿವಗೋಷ್ಠಿಯಲ್ಲಿ ವಿನೋದಪಡುತ್ತಿದ್ದನು.

**ಕುಡಂಗನೂರಿ**ನಲ್ಲಿ ಇಂದ್ರವೈಭವದಂತಿರುವ ಸರ್ವಸನ್ನಾಹದಿಂದಯುಕ್ತನಾಗಿ ವಿಲಾಸಿನಿಯರ ಸಂಗೀತದಿಂದ ಆನಂದಪಡುತ್ತ ಆ ಸುಖವನ್ನು ಶಿವಾರ್ಪಣಮಾಡುತ್ತ ಪರಿಪರಿಯ ಪಕ್ವಾನ್ನಗಳಿಂದ ತಣಿದು ಸುಖವಾಗಿರುತ್ತೊಂದು ದಿನ ಉದಯಕಾಲದಲ್ಲಿ **ನಂಬಿಯು** ಉಪವನದ ಪ್ರಸಾದವನ್ನೇರಿ ಅಲ್ಲಿರುವ **ತಿರುವಂಜಕಳೇಶ್ವರಾಲಯದ** ಭಂಗಾರದ ಕಲಶಗಳನ್ನು ನೋಡಿ ಹರ್ಷಿತನಾಗಿ ಆ ಶಿವಮಂದಿರಕ್ಕೆ ಬಹು ಉತ್ಸುಕನಾಗಿ ಹೊರಟು ಬಹು ಸಂತೋಷದಿಂದ ಮನದಣಿವಂತೆ ಪೂಜಿಸಿ ಅನೇಕ ತಿರುಪಾಡುಗಳನ್ನು ಬಹು ಮನೋಹರವಾಗಿ ಪಾಡಿ ಆನಂದಪರವಶನಾಗುತ್ತ ನಲಿದಾಡಿದನು. ಆಗ **ತಿರುವಂಜಕಳೇಶ್ವರನಿಗೆ** ತಾನು ಮೊದಲು **ನಂಬಿಗೆ** ನಂಬಿಕೆಯನ್ನು ಕೊಟ್ಟದ್ದು ನೆನಪಾಗಿ ಈತನನ್ನು ಹಾಗೂ ರುದ್ರವಧುಗಳನ್ನು ಕೈಲಾಸಕ್ಕೆ ಕರಿಸಿಕೊಳ್ಳುವೆನೆಂದು ಎಣಿಸಿ ಇಂದ್ರನಿಗೆ ಐರಾವತವನ್ನು **ನಂಬಿಯಣ್ಣ**ನಿದ್ದಲ್ಲಿಗೆ ಕಳಿಸಬೇಕೆಂದು ಅಪ್ಪಣೆಮಾಡಿದನು. ಆ ಪ್ರಕಾರ ಸುರಗಜವು ಬಂದುದನ್ನು **ನಂಬಿಯು** ಕಂಡು ಪರಮಹರ್ಷಿತನಾಗಿ ಈಶ್ವರನು ಮೊದಲು ತನಗೆ ಕೊಟ್ಟ ಭಾಷೆಯು ನೆನಪಾಗಿ ಆ ದೇವ ಚೂಡಾಮಣಿಯು ವಿವರಿಸಿದ ಕುರುಹಿನ ಠಾವು ಇದೇ ಎಂದು ಬಗೆದು ಪಕ್ಕದ ಅಶ್ವವನ್ನು **ಚಾರಮನಿ**ಗಾಗಿ ಬಿಟ್ಟು ಆ ನೃಪತಿಗೆ ತಿಳಿಸೆಂದು **ತುಂಬುರಾ**ಮಾತ್ಯನಿಗೆ ಆಜ್ಞೆಮಾಡಿ **ಪರವೆನಾಚಿ-ಸಂಕಿಲೆನಾಚಿ**ಯರೊಡನೆ ಆ ವರದಂತಿಯನ್ನೇರಲು ಅದು ಅಂಬರಕ್ಕೆ ಜಿಗಿಯಿತು. ಅದನ್ನು ಕಂಡು ಶಕ್ತಿವಂತನಾದ, ಶಿವಸೇವಾನಿಷ್ಠನಾದ **ಕುರುಂಬನು** ನಂದಿಧ್ವಜದೊಡನೆ ಆಕಾಶಕ್ಕೆ ಹಾರಿದನು. **ತುಂಬುರನು** ಅಳುತ್ತ ಬಂದು **ಚಾರಮ** ದೊರೆಗೆ ತಿಳುಹಲು ಶಿವ ಶಿವ ನನಗೆ ತಾನೇ ತಿಳಿಸದೆ ಶಿವಸುತನು ಕೈಲಾಸಕ್ಕೆ ಧಾವಿಸಿದನೇ ? ಆಗಲಿ ಅದಕೇನು ? ಆತನು ರಜತಾದ್ರಿಯನ್ನು ಮುಟ್ಟುವದರೊಳಗಾಗಿ ನಾನು ಅವನನ್ನು ಕೂಡಿಕೊಳ್ಳುವೆನೆಂದು ಹೇಳಿ ಪ್ರಮಥರನ್ನು ಸ್ಮರಿಸಿ ಶಿವನನ್ನು ನೆನೆಯುತ್ತ ತಾನು ರಚಿಸಿದ ಶಿವಪರವಾದ ಪ್ರಬಂಧವನ್ನು ಬಗಲಲ್ಲಿಟ್ಟುಕೊಂಡು ಜಯ ನಮಃ ಪಾರ್ವತೀಪತೇ ಹರ ಹರ ಮಹಾದೇವ ಎಂದು ಘಟ್ಟಿಯಾಗಿ ಮಂಗಲಮಯವಾಗಿ ಧ್ವನಿಗೊಳಿಸುತ್ತ **ತುಂಬುರಾ**ಮಾತ್ಯನನ್ನು ಕರಕೊಂಡು ಅತ್ಯಂತ ವೇಗದ ಆ ದಿವ್ಯಾಶ್ವವನ್ನಡರಿ ಗಗನಗಾಮಿಯಾಗಿ ಹೊರಟು ಮಧ್ಯಮಾರ್ಗದಲ್ಲಿ **ಸೌಂದರ-ಕುರುಂಬರನ್ನು** ಕೂಡಿಕೊಂಡು ಒಬ್ಬರಿಗೊಬ್ಬರು ವಂದಿಸುತ್ತಿರುವಾಗ **ಕಾರಿ**

**ಕಾಲಮ್ಮೆಯು** ತಲೆಯಿಂದ ಹೋಗುತ್ತಿರುವದನ್ನು ಕಂಡು ಅಚ್ಚರಿಪಡುತ್ತ ಸಾಗಿದರು.

**ಕಾರಿಕಾಲಮ್ಮೆಯು** ಅಪ್ರತಿಮ ಶಿವಭಕ್ತಿನಿಷ್ಠಳು. ಭವಿಯಾದ ಅವಳ ಗಂಡನು ತನ್ನ ಪ್ರಿಯಳಿಗೆ ಮಧುರವಾದ ಎರಡು ಆಮ್ರಫಲಗಳನ್ನು ತೆಗೆದು ಇಡುವದಾಗಿ ಕೊಟ್ಟಾಗ ಅವಳ ಪತಿ ಮನೆಯಲ್ಲಿಲ್ಲದಾಗ ಸದಾಶಿವನು ಜಂಗಮ ನಾಗಿ ಬಂದು ಆ ಹಣ್ಣನ್ನು ಬೇಡಿ ತೆಗೆದುಕೊಂಡು ಹೊರಗೆ ಹೋಗುವಾಗ ದೂರದಿಂದ ಆ ಲಲನೆಯ ಗಂಡನು ನೋಡಿ ಕೋಪಾಟೋಪದಿಂದ ಮನೆಗೆ ಬಂದು ಕೆರಳಿದ ಸಿಂಹದಂತೆ ತನ್ನ ಜಾಯೆಯ ಹತ್ತಿರ ನಿಂತು ಎಲೆಲೇ ಅವಿವೇಕಿ ನಾನು ನಿನಗೆ ಕೊಟ್ಟಿರುವ ಎರಡು ಹಣ್ಣುಗಳನ್ನು ಈಗಲೇ ನನಗೆ ಕೊಡು ಎಂದು ಗರ್ಜಿಸಿದನು. ಭಕ್ತಿನಿಧಿಯಂತಿರುವ **ಕಾರಿಕಾಲಾಂಬೆಯು** ಚಿರಂಜೀವಿಯಾದ ಶಿವನಿರುವವರೆಗೆ ನನಗೇನು ಭಯವೆಂದು ತಟ್ಟನೆ ನಿಶ್ಶಂಕತೆಯಿಂದ ಒಳಗೆ ಹೋಗಿ ಹಣ್ಣಿಟ್ಟ ಸ್ಥಳದಲ್ಲಿ ಕೈನೀಡಿ ಅವೇ ಹಣ್ಣುಗಳನ್ನು ತಂದು ಇಕೋ ಎಂದು ಕೊಟ್ಟುಬಿಟ್ಟು ಸಂಸಾರದಲ್ಲಿ ಅಸಾರತೆಯು ಆಗಲೆ ತಲೆದೋರಿ ನಿಮ್ಮ ಸೊತ್ತೆಲ್ಲ ತಕ್ಕೊಳ್ಳಿರೆಂದು ವಸ್ತ್ರಾಭರಣಗಳನ್ನೆಲ್ಲ ಬಿಸುಟಿ ಶಿವಾಲಯಕ್ಕೆ ಬಂದು ಅನನ್ಯಗತಿಕಳಾಗಿ ಭವಾನೀಪತಿಯನ್ನು ನಿಸ್ಸೀಮಭಕ್ತಿಯಿಂದ ಸ್ತುತಿಸಿ ಜಯ ಜಯ ಗಂಗಾಧರನೇ, ವಿಷಕಂಠನೇ, ನಾಗೇಂದ್ರಕುಂಡಲನೇ, ಭಕ್ತೈಕಪಕ್ಷಪಾತಿಯೇ, ಮೃಡನೆಂಬ ಸಾರ್ಥಕನಾಮವುಳ್ಳ ಶಂಭುವೇ ಎಂದು ಮೈಮರೆಯುತ್ತಿರುವಾಗ ಶಿವನೆಂಬ ಮುಖ್ಯಾಭಿಧಾನವನ್ನು ತಳೆದ ಶಂಕರನು ಆಗಲೆ ಪಾರ್ವತಿಯೊಡನೆ ಅಲ್ಲಿಗೆ ಬಂದು ಆ ಭಾಮೆಯನ್ನು ಮೈದಡವಿ ಅವ್ವಾ ತಾಯಿಯೇ ಕೈಲಾಸಕ್ಕೆ ನಡೆ ಎಂದು ಎಪ್ಪಣೆಮಾಡಿ ತಾಳವನ್ನು ಕೊಟ್ಟು ವಜ್ರದೇಹವನ್ನು ಕರುಣಿಸಿ ಅಂತರ್ಧಾನನಾದನು. ಪ್ರಮಥರು ಹೆಜ್ಜೆಯನ್ನಿಟ್ಟಲ್ಲಿ ತುಳಿಯಬಾರದೆಂದು ಬಗೆದು ತಲೆಯಿಂದಲೇ ಆಕೆಯು ಸಾಗುತ್ತಿದ್ದಳು.

**ಕೈ**ಲಾಸದ ಮಹಾದ್ವಾರಕ್ಕೆ ಬರಲು ನಂದೀಶನು **ಚಾರಮು**ನನ್ನು ನಿನಗೆ ಉಪದೇಶವಿಲ್ಲೆಂದು ತಡೆದನು. ಆಗ ಶಿವಸುತನು ತಾನು ಸಾಂಬನಲ್ಲಿಗೆ ಹೋಗಿ ಕರಿಸಿಕೊಳ್ಳುವೆನೆಂದು ತಿಳಿಸಿ **ಕುರುಂಬರೊಡನೆ** ಹೊರಟು ಮಹಾದೇವನನ್ನು ಈಕ್ಷಿಸಿ ತಾಯಿಯನ್ನು ಕಳಕೊಂಡ ಕರುವು ಹಡದವ್ವನನ್ನು ಕಂಡಂತೆ ಅತಿ ಸಂತೋಷಪಟ್ಟು ಮೈಯ್ಯಿಕ್ಕಿ ದೇವಾ **ಚಾರಮುನನ್ನು** ವೃಷಭನು ಇಲ್ಲಿಗೆ ಬಿಡಲೊಲ್ಲನೆಂದು ನಿವೇದಿಸಿದನು. ಆಗ ಆ ಮಹಾನಂದಿಯನ್ನು ಕರೆದು ನೀನು **ಚಾರಮುನಿಗೆ** ಉಪದೇಶವಿತ್ತು ಇಲ್ಲಿಗೆ ಕಳಿಸೆಂದು ವೃಷಭಧ್ವಜನು ಆಜ್ಞಾಪಿಸಲು ಆತನು ಹಾಗೆ ಮಾಡಲು **ಚಾರಮುನು** ಬಂದು ಮಹಾಪಾದಕ್ಕೆ ಪೊಡಮಟ್ಟನು.

**ಕಾರಿಕಾಲಮ್ಮೆಯು** ತಮ್ಮಿಂದ ಮುಂಚಿತವಾಗಿ ಶಿವಸನ್ನಿಧಿಯಲ್ಲಿರುವದನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಸದಾಶಿವನು ಸ್ತುತಿಸುತ್ತಿರುವ ಎಲ್ಲರನ್ನೂ ಅವರ ಯೋಗ್ಯತೆಯಂತೆ ಆಯಾ ಸ್ಥಾನಗಳನ್ನು ಕೃಪೆಮಾಡಿ **ಸೌಂದರ**ನಿಗೆ ಮುನ್ನಿನ ಪುಷ್ಪದತ್ತ ಗಣೇಶತ್ವವನ್ನು ಆ ಪರವೆನಾಚಿ ಸಂಕಿಲೆಯರಿಗೆ ಪೂರ್ವದ ರುದ್ರಕನ್ಯಾಧಿಪತ್ಯವನ್ನು ಕೊಟ್ಟು ಸಲಹಿದನು.

**ಶಿ**ವಪ್ರಬಂಧಗಳನ್ನು ಅವಲೋಕಿಸುವ ಹಂಬಲವನ್ನು ಪಾಠಕಮಹಾಶಯರಲ್ಲಿ ಹೆಚ್ಚಿಸಿ ಆಸ್ತಿಕ್ಯವನ್ನು ವರ್ಧಿಸುವಂತೆ ಕಾರುಣ್ಯಮೂರ್ತಿಯಾದ ಶ್ರೀಮತ್ಪರಮೇಶ್ವರನನ್ನು ಅಲ್ಪನಾದ ಲೇಖಕನು ಅನನ್ಯನಾಗಿ ಪ್ರಾರ್ಥಿಸುವನು.



ಈ ವಿಧದೊಳರವತ್ತು ಮೂವರ ಚರಿತ್ರವನು । ಮಾವರನ ಕರು
ಣಶರಧಿ ಮಿಗೆ ಮಾರುತಿರ । ಲೋವಿ ಕೇಳ್ದವನೆ ಕೃತಕೃತ್ಯ ॥೧॥
ಅಂದಿಂದು ಮುಂದೆ ಪಲವಂದ ದಾಚರಣೆಯಿಂ । ದಿಂದು ಶೇಖರನ
ನೊಲಿಸಿದ ಗಣಾವಳಿಯ । ನೆಂದೆಂದೂ ಪೊಗಳಿದನೆ ಮುಕ್ತಾ ॥೨॥
ಶರಣರರವತ್ತು ಮೂವರ ಮಹಿಮೆಗಳ ನಿಂತು । ಬರೆದೋದಿ ಕೇಳಿ
ಪೇಳ್ದರ್ಗೆ ನಿಜಸುಖಂ । ದೊರೆವುದಿಹ ಪರದೊಳಿದು ಸಿದ್ಧಾ ॥ ೩ ॥
ವರಚಿಂತಾಮಣಿಯೆನಿಪ ಪರಿಪರಿಯ ಶರಣರೆ । ಲ್ಲರ ಮನೋರಥವ
ನೊಲಿದಿತ್ತ ಶಂಭು ನೀ । ನಿರಿಸೆನ್ನ ನವರ ಸಭೆಯಲ್ಲಿ ॥೪॥ ಇಂತು
ನಿಜಗುಣಯೋಗಿ ಸಂತಸದೊಳೊರೆದು ದನ । ನಂತ ಮಹಿಮಾಂ
ಬು ನಿಧಿ ಶಂಭುತಾನೊಪ್ಪಿ । ಸಂತರಿಂ ಪಾಡಿಸುತಮಿರ್ಕೆ ॥೫॥

[ಶ್ರೀ ನಿಜಗುಣರು].



ಓಂ.

# ಪರಿಶಿಷ್ಟ

**ಸಮಕಾಲದ ಪುರಾತನರು:—ಪ್ರಖ್ಯಾತನಾದ** ವಿಕ್ರಮಚೋಳನ (ಪುಟ ೫೬-೫೭, ೫೯-೬೦) ಮಗ ಪಗಲ್ಚೋಳನ (ಪುಟ ೫೯-೬೫) ಕಾಲದಲ್ಲಿ ವಿರಾಜಿಸಿದವರು—

(I) ೧ ಇರಿಭಕ್ತರು (ಪುಟ ೧೦೬-೧೦೮) ೫ ಏಣಾಧಿನಾಥನು (ಪುಟ ೯೧-೯೪)
೨ ಪೂಸಲೆಯಾಂಡರು ೧೦೦-೧೦೧) ೬ **ಕಂಗುಲಿಯಕಲಿಯಾಂಡರು** (೧೦೧-೧೦೩
೩ ವೊನೆಯಾಂಡರು (೪೯-೫೨) ೭ [**ಕೂನ**] ಪಾಂಡ್ಯ (ನಂತರ ಸೌಂದರ
೪ ಮಾನಕಂಜರನು (೫೫-೫೯) ಪಾಂಡ್ಯನಾದನು)[ಪುಟ ೫೧, ೧೭೦-೧೭೭]

(II) ಮೇಲೆ ವಿವರಿಸಿದ ಪಗಲ್ಚೋಳನು ಶಿವಸನ್ನಿಧಿಯನ್ನು ಹೊಂದಿದ ಕೆಲವು ವರ್ಷಗಳಲ್ಲಿಯೇ ಪ್ರಕಾಶಿಸಿದವರು:—

೧ ಸೌಂದರಪಾಂಡ್ಯ } (೧೬೯-೧೭೬) ೩ ತಿರುಜ್ಞಾನಸಂಬಂಧಿಗಳು (೧೪೯-೧೬೨)
೨ ಮಂಗಾಯುಕ್ಕರಸಿ } ೪ ಕುಲಚ್ಚಿಯರ್ (೧೬೩-೧೬೮)

(III) ನರಸಿಂಗಮೊಸೆಯರೆಂಬ ಉಪನಾಮವುಳ್ಳ ಉತ್ತುಂಗಚೋಳನ ಸಮಕಾಲದವರು

೧ ಜಡೆಯನಯನಾರು } ೨೪೬-೨೫೪ ೬ **ಕಲಿಕಾಮದೇವರು** (೬೬-೬೯)
೨ ಯಿಸ್ಯಜ್ಞಾನಿದೇವಿ }
೩ ಸೌಂದರನಂಬೆಣ್ಣ ೨೫೫-೨೯೦ ೭ ಮೆರೆಮಿಂಡದೇವರು (೨೩೨-೨೩೪)
೪ ಕುರುಂಬರು ೨೪೩-೨೪೫ ೮ ಚಾರಮನು (೨೩೫-೨೪೨)
೫ ಸೋಮಾಸಿಮಾರರು (೪೧-೪೪) ೯ ಕಾರಿಕಾಲಮ್ಮ (೨೭-೩೦, ೨೯೧-೨೯೨)

(IV) ಪುರಾತನ ಭಕ್ತವಿಲಾಸದಲ್ಲಿ "ಅಪ್ಪರ" ಎಂಬ ಹೆಸರುಳ್ಳ **ವಾಗೀಶರು ತಿರುಜ್ಞಾನ**ಸಂಬಂಧಿಗಳ ಸಂದರ್ಶನವನ್ನು ಪಡೆದ ಹಾಗೆ ಹೇಳಿದೆ ಆದರೆ ನಮ್ಮ **ಸುರಂಗ** ಕವಿಗಳ ಕೃತಿಯಲ್ಲಿ ಇದು ದೊರೆಯುವದಿಲ್ಲವು ಆದುದರಿಂದ ಇದು ಇತಿಹಾಸ ಸಂಶೋಧನದಿಂದ ನಿರ್ಧರಿಸಬೇಕಾದ ವಿಷಯವಾಗಿದೆ.

(V) ಪೀಠಿಕೆಯಲ್ಲಿ ಸೂಚಿಸಿದಂತೆ **ಚಿರುತೊಂಡನ (ಸಿರಿಯಾಳನ)** ತಂದೆಯಾದ ಶಿರುತ್ತೊಂಡನಾಯನಾರರು (ಇವರಿಗೆ ಸುರಂಗ ಕವಿಗಳು ಸತ್ಯಾಳನೆಂದು ಕರೆದಿರುವರು) ಪರಾಕ್ರಮಶಾಲಿಯಾದ ಸೇನಾನಿಯಾಗಿದ್ದರೆಂದು ತಿಳಿದುಬರುತ್ತದೆ; ಅದೇ ಪರಂಪರೆಯಿಂದ ಚಿರುತೊಂಡನು ಸಹಾ ದಳಪತಿಯಾಗಿದ್ದನೆಂದು ಎಣಿಸುವದು ತಪ್ಪಾಗಲಿಕ್ಕಿಲ್ಲವೆಂದು ತೋರುವದು.

(VI) **ಕಲಿಕಂಭನು** (ಪುಟ ೧೨೩-೧೨೫) ತನ್ನ ಪತ್ನಿಯ ಕೈಗಳನ್ನು ಕತ್ತರಿಸಿದುದು ಸರಿಯಷ್ಟೆ; **ಗುರುರಾಜ** ಕವಿಗಳು ಮುಂದಿನ ಸಂಗತಿಯನ್ನು ವಿವರಿಸುವದೇನಂದರೆ:—ಪಿಳ್ಳೈನಾಯನಾರರು ಆ ವಿಶೇಷ ಸಂಗತಿಯನ್ನು ಭಕ್ತಸಮೂಹದಿಂದ ತಿಳಿದು ಆಕೆಯ ಹಸ್ತಗಳನ್ನು ಮೊದಲಿನಂತೆ ಅಂಟಿಸಿ ವಿಭೂತಿಯನ್ನು ಪೂಸಿ ಎಲೌ ತಾಯೇ ನಿನ್ನ ಕೈಗಳೆರಡನ್ನು ಎತ್ತಿ ಭಕ್ತರಿಗೆ ವಂದಿಸೆಂದು—ಆಜ್ಞಾಪಿಸಿದರು ಆಗ ಅವು (ಅಂದರೆ ಆಕೆಯ ಕರಗಳು) ಪೂರ್ವದಂತೆ ನೇರವಾದವು.

**ಜಗನ್ನಿಯಂತನ ಕೃಪೆಯಿಂದ ಅಖಿಲರಿಗೂ ಮಂಗಲವಾಗಲಿ.**

ಓಂ

# ಸೂಚಿ ಪತ್ರಿಕೆ.

[ವಾಚಕರ ಸೌಕರ್ಯಕ್ಕಾಗಿ ಸವಿಸ್ತಾರವಾಗಿ ವಿಷಯಗಳ ಟಿಪ್ಪಣಿ ಜೋಡಿಸಿರುತ್ತದೆ.]

ಹಿತಾಪೇಕ್ಷಿಗಳಾದ ತಜ್ಞರು ಈ ಪುಟ್ಟ ಗ್ರಂಥದಲ್ಲಿಯ ತಪ್ಪುಗಳನ್ನು ತಿಳಿಯಪಡಿಸಿದರೆ ಮುಂದಿನ ಆವೃತ್ತಿಯಲ್ಲಿ ಸರಿಪಡಿಸಲಿಕ್ಕೆ ಸುಗಮವಾಗುವದು. ಶ್ರೇಯಃಕಾಂಕ್ಷಿಗಳಾದ ಗುಣಾಢ್ಯರಿಗೆ ಬೇರೆ ವಿಜ್ಞಾಪಿಸಬೇಕೇ ?

ಸುಜನ ವಿಧೇಯ,

**ಲೇಖಕ.**

*

# ಒಪ್ಪೋಲೆ

| ಪುಟ | ಪಙ್ತ್ತಿ | ತಪ್ಪು | ಒಪ್ಪು |
|---|---|---|---|
| | ಕಮಲಾಯಿ:— | | |
| ೧ | ೧೪ | ಸರ್ವಶೃತವು | ಸರ್ವಶ್ರುತವು |
| ೨ | ೧೭ | ಲಿಂಗಪಾಣಿಯೊಪ | ಲಿಂಗಪ್ರಾಣಿಯಾದ |
| ,, | ೨೬ | ಸೂರುಪವುಳ್ಳವನಾಗಿ | ಸುರೂಪವುಳ್ಳವನಾಗಿ |
| ೩ | ೧೪ | ನೀರ | ನೀರು |
| ೪ | ೪ | ಅರಣೋದಯವಾಗಿ | ಅರುಣೋದಯವಾಗಿ |
| ,, | ೫ | ಕೂಡಾ | ಕೂಡ |
| ೫ | ೩೦ | ಅಂತರ್ರ್ಾತದಲ್ಲಿ | ಅಂತರಾತ್ಮದಲ್ಲಿ |
| ೬ | ೧೦ | ಮುಷ್ಕನಿಗ್ರಹವೇ | ಮುಷ್ಟನಿಗ್ರಹವೇ |
| ,, | ೨೭ | ಜ್ಞಾನದೃಷ್ಟಿಯಿಂಪ | ಜ್ಞಾನದೃಷ್ಟಿಯಿಂದ |
| ೮ | ೧೫ | ಶೃತಿ.... | ಶ್ರುತಿ. |
| | ಪುರಾತನರು — | | |
| ೨ | ೨ | ಧಿಕ್ಕರಿಸಿ | ಧಿಃಕರಿಸಿ |
| ,, | ೨೫ | ವಧುವರರನ್ನು | ವಧೂವರರನ್ನು |
| ೩ | ೮ | ಲಭಿಸಿದ್ದುದು | ಲಭಿಸಿದುದು |
| ,, | ೨೦ | ಭ ತ್ತಿಯು | ಭಕ್ತಿಯು |
| ,, | ೩೩ | ಊರ್ಧ್ವಮುಖವನ್ನಾಗಿ | ಊರ್ಧ್ವಮುಖ |
| ೪ | ೬ | ಸಂತನ | ಸಂತೋಷ |
| ೬ | ೮ | ಈ್ವರ | ಈಶ್ವರ |
| ,, | ೧೨ | ಊರ್ಜಿತರಾಗು್ತದ್ದರು | ಊರ್ಜಿತರಾಗುತ್ತಿದ್ದರು |
| ೬ | ೨೧ | ನಿಷ್ಟೆಗೆ | ನಿಷ್ಠೆಗೆ |
| ೮ | ೧೦ | ಸಮಸರ | ಸಮರಸ |
| ,, | ೨೭ | ಸಂಜ್ಞೆಯನು | ಸಂಜ್ಞೆಯನ್ನು |
| ,, | ೩೦ | ನಿಜವೇ | ನಿಜವನ್ನೇ |
| ೯ | ೨೬ | ಕತ್ತಲೆಯಂದೂ | ಕತ್ತಲೆಯೆಂದೂ |
| ೧೦ | ೧೦ | ಶಿ. ಪರವಾದ | ಶಿವಪರವಾದ |
| ೧೧ | ೧೯ | ಶೃತ್ಯಾಗಮುಗಳು | ಶ್ರುತ್ಯಾಗಮುಗಳು |

| ಪುಟ | ಪಂಙ್ಕ್ತಿ | ತಪ್ಪು | ಒಪ್ಪು |
|---|---|---|---|
| ೧೧ | ೨೪ | ಧೃಡವಾಗಿ | ದೃಢವಾಗಿ |
| ೧೩ | ೨ | ತಿರುವಲೆ-ಯೂವರಲ್ಲಿ | ತಿರುವಲೆಯೂರಲ್ಲಿ |
| ,, | ೧೩ | ಶಿವರಕ್ಷಣರ್ಥವಾಗಿ | ಶಿವರಕ್ಷಣಾರ್ಥವಾಗಿ |
| ,, | ೧೫ | ಕಳೆದು | ತಳೆದು |
| ,, | ೩೧ | ಆಘ್ರಾಣಿಸಿ | ಆಘ್ರಾಣಿಸಿ |
| ೧೫ | ೧೫ | ಅಸಮಾನವಾಯತು | ಅಸಮಾನವಾಯಿತು |
| ೧೭ | ೧೩ | ತಡವಾಗುವುದು | ತಡವಾಗುವದು |
| ,, | ೧೧ | ಮಧ್ಯಾನ್ಹ | ಮಧ್ಯಾಹ್ನ |
| ೧೮ | ೧೮ | ನಾಯನಾರು | ನಯನಾರು |
| ೨೦ | ೧೯ | ಸರ್ವಶೃತವಾದ | ಸರ್ವಪ್ರುತವಾದ |
| ೨೧ | ೧೭ | ವಡನಾಡಿಗಳ | ಒಡನಾಡಿಗಳ |
| ೨೩ | ೮ | ಅಬಿದಾನ | ಅಭಿಧಾನ |
| ೨೪ | ೧೫ | ವೀಧಿಯನ್ನು | ವೀಥಿಯನ್ನು |
| ,, | ೧೭ | ಮುಚ್ಜಂದೆಯು | ಮುಚ್ಚಂದಿಯು |
| ,, | ೧೭ | ಮೇಲಮುಹಡೆದಿಂದ | ಮೇಲಮುಹಡಿಯಿಂದ |
| ೨೫ | ೨೦ | ವಿಧ್ಯಕ್ತವಾಗಿ | ವಿಧ್ಯುಕ್ತವಾಗಿ |
| ೨೬ | ೬ | ಭಕಾನುಗ್ರಹ | ಭಕ್ತಾನುಗ್ರಹ |
| ೩೧ | ೨೫ | ಪ್ರಪುಲ್ಲಿತವಾಗಿತ್ತು | ಪ್ರಫುಲ್ಲಿತವಾಗಿತ್ತು |
| ,, | ೨೭ | ವಿನಿಯೋಗಕ್ಕ | ವಿನಿಯೋಗಕ್ಕೆ |
| ೩೨ | ೮ | ಪುಣ | ಪುಣ್ಯ |
| ೨೯ | ೨೫ | ವೈಯ್ದಡಪಿ | ಮೃದಡಪಿ |
| ೩೨ | ೨೬ | ತಿಳಿದುಬರುದಷ್ಟೆ | ತಿಳಿದುಬರುವದಷ್ಟೆ |
| ೩೫ | ೧೭ | ಗಾನದಿಂದುರುಗ | ಗಾನದಿಂದುರಗ |
| ,, | ೧೮ | ನೆಲಿನೆಲೆನ್ನ | ನೆಲಿಸಲೆನ್ನ |
| ೩೬ | ೩ | ಒಪ್ಪುತ್ತಿದಪು | ಒಪ್ಪುತ್ತಿದ್ದವು |
| ,, | ೧೭ | ಅರ್ಥ,ಗಾಂಭೀರ್ಯವು | ಅರ್ಥ—ಗಾಂಭೀರ್ಯವು |
| ,, | ೧೮ | ಅತ್ಯದ್ಬುತ | ಅತ್ಯದ್ಭುತ |
| ,, | ೧೯ | ಅಂತಃಕರುಣದಲ್ಲ | ಅಂತಃಕರಣದಲ್ಲಿ |
| ,, | ೨೦ | ಸ್ಪುರ್ತಿಯುತವಾದ | ಸ್ಫೂರ್ತಿಯುತವಾದ |
| ,, | ೨೧ | ತುಳಕುವ | ತುಳುಕುವ |
| ೩೭ | ೧೧ | ಪಶವಾಗುವದರಿಂದಲೆ | ವಶವಾಗುವದರಿಂದಲೆ |
| ,, | ೩೧ | ವಿರುಪಾಕ್ಷನನ್ನು | ವಿರೂಪಾಕ್ಷನನ್ನು |
| ೩೮ | ೩ | ರೀತಿಯಾಗೆ | ರೀತಿಯಾಗಿ |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧೮೬ | ೯ | ವಿಶಾರದನಾಗಿದನು | ವಿಶಾರದನಾಗಿದ್ದನು |
| ೧೯೩ | ೧೩ | ಕೊಯು | ಕೊಯ್ದು |
| ೨೧೦ | ೭ | ಭೈರವ | ಭೈರವ |
| ,, | ೨೦ | ಭೈರವ | ಭೈರವ |
| ,, | ೨೭ | ನಮ್ಯ | ನಮ್ಮ |
| ೨೧೨ | ೧೪ | ಭೈರವ | ಭೈರವ |
| ೨೧೪ | ೨೨ | ಗುಣವಂತ | ಗುಣವಂತಪ್ರಜಾ |
| ೨೧೬ | ೧೭ | ರಕ್ಪಾ | ರಕ್ಷಾ |
| ೨೧೮ | ೨ | ಆಹದು | ಆಹುದು |
| ,, | ೧೫ | ಹೊತ್ತಿನೆಂದ | ಹೊತ್ತಿನಿಂದ |
| ,, | ೨೩ | ಭಸ್ಮರುದಾಕ್ಷಗಳನ್ನು | ಭಸ್ಮರುದ್ರಾಕ್ಷಗಳನ್ನು |
| ೨೨೦ | ೬ | ಗಡೆ | ಗದ್ದೆ |
| ,, | ೨೬ | ಶಿವಭಕ್ತರೆ | ಶಿವ ಭಕ್ತರ |
| ೨೨೯ | ೧೦ | ಫ್ರೀತಿಯಿಂದ | ಪ್ರೀತಿಯಿಂದ |
| ೨೩೧ | ೨೧ | ಮುಖ್ಯವಾದ | ಮುಖ್ಯನಾದ |
| ೨೩೨ | ೨೪ | ತಿಂಕಿಣಿ | ತಿಂತಿಣಿ |
| ೨೩೯ | ೩ | ಉಚಿತ | ಉಚಿತ |
| ,, | ೨೬ | ನೋಡುವಷ್ಡರಲ್ಲಿಯೆ | ನೋಡುವಷ್ಟರಲ್ಲಿಯೆ |
| ೨೪೦ | ೨ | ಹಮ್ಯವನ್ನು | ಹರ್ಮ್ಯವನ್ನು |
| ೨೪೩ | ೬ | ಕುರುಂಬರೆಂ | ಕುರುಂಬರಂ |
| ೨೪೫ | ೬ | ಕೈಕರ್ಯವನ್ನು | ಕೈಂಕರ್ಯವನ್ನು |
| ೨೪೮ | ೧೦ | ಈಸ್ಥಾನವು ಸ್ಥಾನವು | ಈಸ್ಥಾನವು |
| ೨೫೪ | ೧೨ | ಶೃವಾಗಮದ | ಶೈವಾಗಮದ |
| ೨೫೬ | ೨೬ | ಅಂಟಿದಪು | ಅಂಟಿದವು |
| ೨೫೭ | ೪ | ಕೆವಶವಾಗುವದೆಂದು | ಕೈವಶವಾಗುವದೆಂದು |
| ೨೬೨ | ೧ | ಪಾರಾಂತರಪು | ಪಾರಾಂತರವು |
| [illegible]೪ | ೨೫ | ಮಹಾರ್ಘಪಾದ | ಮಹಾರ್ಘವಾದ |
| | ೨೩ | ಸಧೃಡ | ಸದೃಢ |
| | | ನಂಭಿಯು | ನಂಬಿ[illegible] |
| | | [illegible]ಯನ್ನು | ಕೈ[illegible]ನ್ನು |
| | | [illegible] | [illegible]ಳಿದು |
| | | | [illegible]ಂಗೊಂಡೆ |